ಶ್ರೀಮಜ್ಜಗನ್ನಾಥಯತಿ ವಿರಚಿತ

## ಭಾಷ್ಯದೀಪಿಕಾ ಸಹಿತ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತಂ

# ಶ್ರೀಮದ್ ಬ್ರಹ್ಮಸೂತ್ರಭಾಷ್ಯಮ್

ಪ್ರಥಮಾಧ್ಯಾಯ ಪ್ರಥಮಾಪಾದದ ಅಂತಃಸ್ಥತ್ವಾಧಿಕರಣದಿಂದ
ದ್ವಿತೀಯಪಾದದ ವೈಶ್ವಾನರಾಧಿಕರಣದವರೆಗೆ

ಸಂಪುಟ-೨



ಶ್ರೀಶೇಷಾಚಂದ್ರಿಕಾಚಾರ್ಯರು    ಶ್ರೀವ್ಯಾಸರಾಜರು    ಶ್ರೀಮಜ್ಜಗನ್ನಾಥತೀರ್ಥರು

ಕನ್ನಡಾನುವಾದ :

ಶ್ರೀ ಶ್ರೀವಿದ್ಯಾಶ್ರೀಶತೀರ್ಥ ಶ್ರೀಪಾದಂಗಳವರು, ಶ್ರೀವ್ಯಾಸರಾಜ ಮಠ (ಸೋಸಲೆ)

ಪ್ರಕಾಶಕರು :

ಶ್ರೀಗುರುರಾಜ ಅಸೋಸಿಯೇಷನ್ (ರಿ.)

ಬಸವನಗುಡಿ, ಬೆಂಗಳೂರು 560 004.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

# ಬ್ರಹ್ಮಸೂತ್ರಭಾಷ್ಯಮ್

ಶ್ರೀಜಗನ್ನಾಥತೀರ್ಥವಿರಚಿತ

# ಭಾಷ್ಯದೀಪಿಕಾಸಹಿತಮ್

ಸಂಪುಟ -೨ .

ಪ್ರಥಮಾಧ್ಯಾಯ ಪ್ರಥಮಾಪಾದದ ಅಂತಃಸ್ಥತ್ವಾಧಿಕರಣದಿಂದ
ದ್ವಿತೀಯಪಾದದ ವೈಶ್ವಾನರಾಧಿಕರಣದವರೆಗೆ

ಕನ್ನಡಾನುವಾದ
ಶ್ರೀ ಶ್ರೀ ವಿದ್ಯಾಶ್ರೀಶತೀರ್ಥಶ್ರೀಪಾದರು
ಸೋಸಲೆ ವ್ಯಾಸರಾಜಮಠ

(ಮಹಾಮಹೋಪಾಧ್ಯಾಯ ಪ್ರೊ . ಡಿ. ಪ್ರಹ್ಲಾದಾಚಾರ್ಯರು)

***

ಪ್ರಕಾಶಕರು

ಶ್ರೀ ಗುರುರಾಜ ಅಸೋಸಿಯೇಷನ್

ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು.

H.H. SRI VISHVESHATIRTHA SWAMIJI
PARYAYA PEJAVARA ADHOKSHAJA MATHA
JAGADGURU MADHWACHARYA MAHA SAMSTHANA
UDUPI-576 101, Karnataka
0820-2524198,2526598



**श्री श्री विश्वेशतीर्थश्रीपादाः**
पर्याय श्रीपेजावरअधोक्षजमठः
जगद्गुरु श्रीमध्वाचार्यमहासंस्थानम्
उडुपि-५७६१०१

ಭಗವಂತನು ಶ್ರೀವೇದವ್ಯಾಸರೂಪದಿಂದ ಅವತರಿಸಿ ಸಕಲವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿ ಸಜ್ಜನರಿಗೆ ಮಹಾನುಗ್ರಹವನ್ನು ಮಾಡಿದ್ದಾನೆ. ಯಾವುದೇ ಅಪಾರ್ಥಕ್ಕೆ ಅವಕಾಶವಾಗದೇ ಬ್ರಹ್ಮಸೂತ್ರಕ್ಕೆ ವಿಶಾಲವಾದ ಅರ್ಥವ್ಯಾಪ್ತಿಯುಳ್ಳ ಅದ್ಭುತಭಾಷ್ಯವನ್ನು ರಚಿಸಿ-ದರು. ಶ್ರೀಮಜ್ಜಯತೀರ್ಥರು ತತ್ವಪ್ರಕಾಶಿಕಾ ಗ್ರಂಥಮೂಲಕವಾಗಿ ಇದರ ವಿವರಣೆಯನ್ನು ನೀಡಿ ಸಜ್ಜನರಿಗೆ ಮಹೋಪಕಾರವನ್ನು ಮಾಡಿದರು. ಶ್ರೀವ್ಯಾಸರಾಜಮಠದ ಜಗನ್ನಾಥಯತಿಗಳು ಈ ತತ್ವಪ್ರಕಾಶಿಕಾಗ್ರಂಥಕ್ಕೆ ಪೂರಕವಾಗಿ ಅದರ ಸಾರಾಂಶವನ್ನು ವಿವರಿಸುವ ಅಪೂರ್ವವಾದ ಸೂತ್ರಭಾಷ್ಯದೀಪಿಕೆಯನ್ನು ರಚಿಸಿದರು. ಸೂತ್ರ ಹಾಗೂ ಭಾಷ್ಯಗಳ ಪ್ರತಿಪದಾರ್ಥಗಳನ್ನೂ ಮತ್ತು ಆಚಾರ್ಯರು ಉದಾಹರಿಸಿದ ವೇದ, ಉಪನಿಷತ್, ಪುರಾಣಗಳನ್ನು ಅರ್ಥಮಾಡಿಕೊಳ್ಳಲು ಈ ದೀಪಿಕಾಗ್ರಂಥವು ನಮಗೆ ಅತ್ಯಂತ ಸಹಾಯಕವಾಗಿದೆ. ಇಂತಹ ಬಹು ದೊಡ್ಡ ಉಪಕಾರವನ್ನು ಜಗನ್ನಾಥತೀರ್ಥರು ಸಜ್ಜನ ಜಗತ್ತಿಗೆ ಮಾಡಿರುವರು. ಬೆಂಗಳೂರಿನ ಬಸವನಗುಡಿಯ ಗುರುರಾಜ ಅಸೋಸಿಯೇಷನ್ ಸಂಸ್ಥೆಯು ನಡೆಸುತ್ತಿರುವ ಶ್ರೀರಾಘವೇಂದ್ರಸ್ವಾಮಿಗಳ ಮಠದ ಮೂಲಕ ಆರಾಧನೆ, ಉತ್ಸವ, ಅನ್ನದಾನಾದಿಗಳು ಮಾತ್ರವಲ್ಲದೇ ವಿಶೇಷವಾದ ಜ್ಞಾನಾರಾಧನೆಯೂ ನಡೆ-ಯುತ್ತಿದೆ. ಇದೀಗ ಶ್ರೀವ್ಯಾಸರಾಜಮಠದ ಶ್ರೀ ಶ್ರೀ ವಿದ್ಯಾಶ್ರೀಶತೀರ್ಥಶ್ರೀಪಾದಂಗಳವರಿಂದ ಕನ್ನಡದಲ್ಲಿ ಅನುವಾದಿಸಲ್ಪಟ್ಟಿರುವ ಸೂತ್ರಭಾಷ್ಯದೀಪಿಕೆಯ ಎರಡನೆಯ ಸಂಪುಟವು ಪ್ರಕಟ-ವಾಗುತ್ತಿರುವುದು ಅತ್ಯಂತ ಸಂತಸದ ಸಂಗತಿಯಾಗಿದೆ. ವ್ಯಾಸತ್ರಯಸುಧಾಗ್ರಂಥಗಳ ಅಧ್ಯಯನ, ಅಧ್ಯಾಪನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀವಿದ್ಯಾಶ್ರೀಶತೀರ್ಥಶ್ರೀಪಾದರಿಂದ ಇಂತಹ ಶಾಸ್ತ್ರಸೇವೆ ನಿರಂತರ ನಡೆಯಲೆಂದು ನಮ್ಮ ಆರಾಧ್ಯಮೂರ್ತಿ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತೇವೆ. ಇದಕ್ಕಾಗಿ ಗುರುರಾಜ ಅಸೋಸಿಯೇಷನ್ ಪದಾಧಿಕಾರಿಗಳನ್ನು ಅಭಿನಂದಿಸುತ್ತಾ, ಸಜ್ಜನರು ಇದರ ಲಾಭವನ್ನು ಪಡೆಯಲೆಂದು ಆಶಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳೊಂದಿಗೆ

ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದರು,
ಪರ್ಯಾಯ ಶ್ರೀಪೇಜಾವರ ಅಧೋಕ್ಷಜಮಠ,
ಶ್ರೀಕೃಷ್ಣಮಠ, ಉಡುಪಿ.

# ಪ್ರಕಾಶಕರ ನುಡಿ

ಶ್ರೀಗುರುರಾಘವೇಂದ್ರಸ್ವಾಮಿಗಳ ಅನುಗ್ರಹ ವಿಶೇಷ ಬಲದಿಂದ ಮಾಡೆಲ್ ಹೌಸ್‌ನ ಶ್ರೀ ಗುರುರಾಜ ಅಸೋಸಿಯೇಷನ್ (ರಿ.) ಸಂಸ್ಥೆಯ ಎಲ್ಲ ಪದಾಧಿಕಾರಿಗಳು ಹಾಗೂ ಸದಸ್ಯರ ದೃಢ ಸಂಕಲ್ಪದ ಪರಿಣಾಮವಾಗಿ ಕೈಗೆತ್ತಿಕೊಂಡಿದ್ದ ಶ್ರೀಜಗನ್ನಾಥತೀರ್ಥರ ಭಾಷ್ಯದೀಪಿಕಾಗ್ರಂಥದ ಕನ್ನಡಾನುವಾದದ ಪ್ರಕಾಶನ ಕಾರ್ಯದಲ್ಲಿ ಮತ್ತೊಂದು ಹೆಜ್ಜೆ ಮುಂದುವರೆದು ಎರಡನೆಯ ಸಂಪುಟವು ಶ್ರೀರಾಯರ ೩೪೬ನೇ ಆರಾಧನೆಯ ಅಂಗ-ವಾಗಿ ಅಸೋಸಿಯೇಷನ್ ಹಮ್ಮಿಕೊಂಡಿರುವ ಜ್ಞಾನಕಾರ್ಯದ ಭಾಗವಾಗಿ ಪ್ರಕಟವಾಗು-ತ್ತಿರುವುದು ಸಂತಸದ ಸಂಗತಿಯಾಗಿದೆ.

ಪ್ರಕೃತ ಸಂಪುಟದಲ್ಲಿ ಬ್ರಹ್ಮಸೂತ್ರ ಪ್ರಥಮಾಧ್ಯಾಯದ ಪ್ರಥಮಪಾದದ ಅಂತಃಸ್ಥತ್ವಾಧಿಕರಣದಿಂದ ದ್ವಿತೀಯಪಾದದವರೆಗಿನ ಅನುವಾದವು ಅಂದರೆ ವೈಶ್ವಾನರಾಧಿ -ಕರಣದವರೆಗೆ ಪ್ರಕಟಿತವಾಗುತ್ತಿದೆ.

ಈ ಅನುವಾದ ಕಾರ್ಯವನ್ನು ವಿದ್ವಾನ್ ಮಹಾಮಹೋಪಾಧ್ಯಾಯ ಶ್ರೀ ಡಿ.ಪ್ರಹ್ಲಾ-ದಾಚಾರ್ಯರು ನಡೆಸಿಕೊಟ್ಟಿದ್ದು, ಗ್ರಂಥವು ಬಿಡುಗಡೆಯಾಗುವ ವೇಳೆಗೆ ಪೂಜ್ಯರು ಸೋಸಲೆ ಶ್ರೀವ್ಯಾಸರಾಜಮಠದ ಪೀಠವನ್ನು ಶ್ರೀಶ್ರೀವಿದ್ಯಾಶ್ರೀಶತೀರ್ಥರು ಎಂಬ ಅಭಿ-ಧಾನದಿಂದ ಅಲಂಕರಿಸಿ ಕರ್ನಾಟಕವಿದ್ಯಾಸಿಂಹಾಸನಾಧೀಶ್ವರರಾಗಿರುತ್ತಾರೆ. ಪೂಜ್ಯ-ಶ್ರೀಪಾದಂಗಳವರು ಈ ಪ್ರಕಟನೆಗೆ ಅನುವುಮಾಡಿಕೊಟ್ಟು ನಮ್ಮನ್ನು ಆಶೀರ್ವದಿಸಿರುವು-ದಕ್ಕಾಗಿ ಅವರಿಗೆ ಅನಂತಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇವೆ.

ಈ ಸಂಪುಟದ ವೈಶಿಷ್ಟ್ಯಗಳು ಶ್ರೀಶ್ರೀಪಾದರೇ ತಿಳಿಸಿದಂತೆ ಕೆಳಗೆ ಕಂಡಂತಿವೆ.

(೧) ಗುಹಾಧಿಕರಣದಲ್ಲಿ (ಪುಟ.೨೪೭) ಭಾಷ್ಯದೀಪಿಕೆಯ ಮುದ್ರಿತಪಾಠವು ದೋಷಯುಕ್ತವಾಗಿದ್ದು ಸರಿಯಾದ ಪಾಠವನ್ನು ಊಹಿಸಿ, ಅದರಂತೆ ಅನುವಾದವನ್ನು ಕೊಡಲಾಗಿದೆ.

(೨) ಇದೇ ಸಂದರ್ಭದಲ್ಲಿಯೇ (ಪು.೨೫೩) ಭಾಷ್ಯದೀಪಿಕೆಯಲ್ಲಿ ಚರ್ಚಿತವಾದ ವಿಷಯದ ಸ್ಪಷ್ಟೀಕರಣಕ್ಕಾಗಿ ವಿವರವಾದ ಸಾರಾಂಶವನ್ನು ಕೊಡಲಾಗಿದೆ.

(೩) ಭಾಷ್ಯದೀಪಿಕೆಯ ಪಾಠವು ಒಂದೆರಡು ಕಡೆ ಸಂದಿಗ್ಧವಾಗಿದ್ದು ಆ ಸಂದರ್ಭ-ಗಳಲ್ಲಿ ಮುದ್ರಿತಪಾಠವನ್ನೇ ಉಳಿಸಿಕೊಂಡು, ಊಹಿಸಿದ ಪಾಠಕ್ಕನುಸಾರಿಯಾಗಿ ಅನುವಾದ ಮಾಡಲಾಗಿದೆ. ಇದನ್ನು ಓದುಗರು ಗಮನಿಸಬೇಕು.

(೪) ಇದಲ್ಲದೇ ಹಿಂದಿನ ಸಂಪುಟದಂತೆಯೇ ಈ ಸಂಪುಟದಲ್ಲೂ ವ್ಯಾಕರಣ ವಿಶೇಷಗಳು, ಪಾರಿಭಾಷಿಕ ಪದಗಳ ವಿವರಣೆ, ಚರ್ಚಿತವಿಷಯಗಳ ಸ್ಪಷ್ಟೀಕರಣಕ್ಕೆ ಪೂರಕವಾದ ಅಡಿಟಿಪ್ಪಣಿಗಳು ಎಲ್ಲಿ ಅತ್ಯಾವಶ್ಯಕವಾಗಿವೆಯೋ ಅಲ್ಲಿ ಕೊಡಲ್ಪಟ್ಟಿದೆ.

ಭಾಷ್ಯದೀಪಿಕೆಯು ಬಹು ಕಡೆ ಆಕರಗ್ರಂಥಗಳ ಉಲ್ಲೇಖ ಮಾಡುವುದರಿಂದ ಈ ಅಡಿಟಿಪ್ಪಣಿಗಳು ಇನ್ನೂ ಹಲವು ಕಡೆ ಕೊಡಲ್ಪಡಬೇಕೆಂದು ಅನ್ನಿಸಿದರೂ ಕೂಡ ಗ್ರಂಥವು ಬಹಳ ಬೆಳೆಯುತ್ತದೆಂಬ ಕಾರಣದಿಂದ ಉಲ್ಲೇಖಿಸಲ್ಪಟ್ಟಿಲ್ಲ. ಹಾಗೂ ಜಿಜ್ಞಾಸು ಅಧ್ಯೇತೃಗಳು ಸಾಮಾನ್ಯವಾದ ಶಾಸ್ತ್ರಜ್ಞಾನವುಳ್ಳವರಾಗಿರುವುದರಿಂದಲೂ, ಹಾಗೂ ಇತರ ಗ್ರಂಥಗಳಲ್ಲಿ ಅಧ್ಯಯನಶೀಲರಾಗಿರುವುದರಿಂದಲೂ ಆಯಾ ಗ್ರಂಥಗಳ ವಿಮರ್ಶೆ ಮಾಡಿ ಪ್ರಮೇಯವನ್ನು ಅರಿಯಬಹುದಾಗಿದೆ. ಆ ದಿಶೆಯಲ್ಲಿ ಇಲ್ಲಿ ಕೊಡಲ್ಪಟ್ಟ ಟಿಪ್ಪಣಿಗಳು ದಿಕ್ಸೂಚಿಯಾಗಿ ಮಾರ್ಗದರ್ಶನ ನೀಡುತ್ತವೆಂಬ ಆಶಯವಿದೆ.

ಈ ವೈಶಿಷ್ಟ್ಯಗಳನ್ನೊಳಗೊಂಡ ಅನುವಾದ ಕಾರ್ಯವನ್ನು ಸಮರ್ಪಕವಾಗಿ ನಡೆಸಿಕೊಟ್ಟು, ಕಾಲಕ್ಕೆ ಸರಿಯಾಗಿ ಪ್ರಕಟನೆಗೊಳ್ಳುವಂತೆ ಮಾಡಿದ ಪೂಜ್ಯರಿಗೆ ಮತ್ತೊಮ್ಮೆ ಮಂಡಳಿಯು ಪ್ರಣಾಮಗಳನ್ನು ಸಲ್ಲಿಸುತ್ತದೆ.

ಈ ಗ್ರಂಥಕ್ಕೆ ಆಶೀರ್ವಚನ ದಯಪಾಲಿಸಿದ ಪರ್ಯಾಯ ಶ್ರೀಪೇಜಾವರ ಅಧೋಕ್ಷಜ ಮಠಾಧೀಶರಾದ ಪರಮ ಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರ ಪಾದಾರವಿಂದಗಳಿಗೆ ಶಿರ ಸಾಷ್ಟಾಂಗ ದಂಡಪ್ರಣಾಮಗಳನ್ನು ಅರ್ಪಿಸುತ್ತೇವೆ.

ಈ ಗ್ರಂಥದ ಅಕ್ಷರ ಜೋಡಣೆಯಲ್ಲಿ ನಮ್ಮೊಂದಿಗೆ ಕೈಜೋಡಿಸಿ ಸಹಕರಿಸಿದ ಸುಬ್ಬಣ್ಣ ಇವರಿಗೂ ಸಂಸ್ಥೆಯು ಆಭಾರಿಯಾಗಿದೆ.

ಅದರಂತೆ ಈ ಗ್ರಂಥದ ಮುಖಪುಟದ ಸುಂದರ ವಿನ್ಯಾಸವನ್ನು ರಚಿಸಿ ಸಹಕರಿಸಿದ ಸುಪ್ರಜಾ ವಿನ್ಯಾಸ ಇವರಿಗೆ ಸಂಸ್ಥೆಯು ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಸಮಗ್ರ ಸಂಪುಟದ ಮುದ್ರಣ ಕಾರ್ಯದಲ್ಲಿ ಎಂದಿನಂತೆ ಸಹಕರಿಸಿದ ವಾಗರ್ಥದ ಎಲ್ಲಾ ಬಂಧುಗಳಿಗೂ ಸಂಸ್ಥೆಯು ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಈ ಪ್ರಕಟನೆಯನ್ನು ಮಾಧ್ವಜಿಜ್ಞಾಸುಬಂಧುಗಳು ಹೃತ್ಪೂರ್ವಕವಾಗಿ ಸ್ವೀಕರಿಸಿ ಸದುಪಯೋಗಮಾಡಿಕೊಳ್ಳಬೇಕೆಂದು ಮಂಡಳಿಯು ಆಶಿಸುತ್ತದೆ.

# ವಿಷಯಾನುಕ್ರಮಣಿಕೆ

ಪ್ರಥಮಪಾದ



ದ್ವಿತೀಯಪಾದ



* * * *

## ಭಾಷ್ಯ ಮತ್ತು ಭಾಷ್ಯದೀಪಿಕಾ
## ಮಂಗಳಾಚರಣಶ್ಲೋಕಗಳು

### (ಭಾಷ್ಯ)

**ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।**
**ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥**

ಅಥ ಶ್ರೀಜಗನ್ನಾಥತೀರ್ಥವಿರಚಿತಭಾಷ್ಯದೀಪಿಕಾ

ಜಿಜ್ಞಾಸ್ಯಂ ಜನ್ಮರಕ್ಷಾಲಯನಿಯತಿಮತಿಪ್ರತ್ಯಗಜ್ಞಾನಬಂಧ-
ಶ್ರೇಯೋದಂ ಶಾಸ್ತ್ರಗಮ್ಯಂ ಶ್ರುತಿಗತವಚನೈರ್ಮುಖ್ಯವೃತ್ತ್ಯಾಽಭಿಧೇಯಮ್ ।
ಭೈಷ್ಮೀಸತ್ಯಾಸಮೇತಂ ಬಹುಗುಣವಪುಷಂ ಭೀತಿಪೂರ್ವಾರದೂರಂ
ಭಕ್ತಿಶ್ರುತ್ಯಾದಿಚಿಂತ್ಯಂ ಭಜನಪರಗತಿಂ ಭಾವಯೇ ವೇಣುಕೃಷ್ಣಮ್ ॥೧॥

ಆಮ್ರಸ್ತಂಭಾತ್ ಸಮಾಗತ್ಯ ತಾಮ್ರತುಂಡಾನ್ ನಿಹತ್ಯ ಯಃ ।
ನಮ್ರಂ ನೌಮಿ ಜಗನ್ನಾಥಂ ಕ್ರಮೋಪಾತ್ತಂ ನೃಕೇಸರೀ ॥೨॥

ಅನಧೀತ್ಯ ಮಹಾಭಾಷ್ಯಂ ಯಸ್ಯ ವ್ಯಾಕೃಷ್ಯನುಗ್ರಹಾತ್ ।
ತಮುಪಾಸೇ ನೃಸಿಂಹಾರ್ಕಂ ಪ್ರತ್ಯೂಹತಿಮಿರಾಪಹಮ್ ॥೩॥

ಪೂರ್ಣಬೋಧಗುರೂನ್ ವಂದೇ ಜಯಾರ್ಯಾನ್ ವ್ಯಾಸದೇಶಿಕಾನ್ ।
ರಾಮಚಂದ್ರಗುರೂನಾರ್ಯಾನ್ ಲಕ್ಷ್ಮೀಕಾಂತಗುರೂನಪಿ ॥೪॥

ಯೇನಾಯಂ ನಿರಣಾಯಿ ಮಧ್ವಗುರುಸದ್ಭಾಷ್ಯಪ್ರಕಾಶಾಶಯಃ
ಪ್ರಾಖಂಡಿ ಪ್ರತಿವಾದಿದರ್ಶನಗಣಃ ಪ್ರಾಬಂಧಿ ಗುರ್ವರ್ಣವಃ ।
ಶಿಷ್ಯೇಭ್ಯಃ ಸಮದಾಯಿ ವಿತ್ತಮುಭಯಂ ಪ್ರಾಲಂಭಿ ವಿದ್ಯಾಸನಂ
ಸೋಽಯಂ ಶ್ರೀರಘುನಾಥತೀರ್ಥಗುರುರಾಟ್ ಶುದ್ಧಿಂ ವಿದಧ್ಯಾನ್ಮತೇಃ ॥೫॥

ಜಯಾರ್ಯರಚಿತಾಂ ಟೀಕಾಮನುಸೃತ್ಯ ಯಥಾಮತಿ ।
ಜಗನ್ನಾಥಾಖ್ಯಯತಿನಾ ಕ್ರಿಯತೇ ಭಾಷ್ಯದೀಪಿಕಾ ॥೬॥

ಕ್ವಚಿದ್ ಭಾಷ್ಯವಿವೃತ್ಯೈವ ಟೀಕಾರ್ಥೋಽಪಿ ವಿವಿಚ್ಯತೇ ।
ತತ್ತ್ವಪ್ರದೀಪ-ತಾತ್ಪರ್ಯಚಂದ್ರಿಕಾದ್ಯುಕ್ತಮಾರ್ಗತಃ ॥೭॥

* * * *

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

# ಶ್ರೀಬ್ರಹ್ಮಸೂತ್ರಭಾಷ್ಯಮ್

## ಅಥ ಪ್ರಥಮಾಧ್ಯಾಯಸ್ಯ ಪ್ರಥಮಪಾದೇ

## ೭. ಅಂತಃಸ್ಥತ್ವಾಧಿಕರಣಮ್

ಭಾ– 'ಅದೃಶ್ಯೇऽನಾತ್ಮ್ಯೇ' ಇತ್ಯುಕ್ತಮ್ । ತಚ್ಚ ಅದೃಶ್ಯತ್ವಮ್ 'ಅಂತಃ ಪ್ರವಿಷ್ಟಂ ಕರ್ತಾರಮೇತಮಂತಶ್ಚಂದ್ರಮಸಿ ಮನಸಾ ಚರಂತಮ್ । ಸಹೈವ ಸಂತಂ ನ ವಿಜಾನಂತಿ ದೇವಾಃ' (ತೈ.ಆ.೩-೧೧) ಇತ್ಯಂತಃಸ್ಥಸ್ಯ ಕಸ್ಯಚಿದುಚ್ಯತೇ।

'ಅದೃಶ್ಯೇ ಅನಾತ್ಮ್ಯೇ' ಎಂಬ ವಾಕ್ಯದಲ್ಲಿ (ಆನಂದಮಯನಿಗೆ) ಅದೃಶ್ಯತ್ವವನ್ನು ಹೇಳಲಾಗಿದೆ. ಆ ಅದೃಶ್ಯತ್ವವೇ 'ಅಂತಃಪ್ರವಿಷ್ಟಂ ಕರ್ತಾರಮೇತಂ ಅಂತಶ್ಚಂದ್ರಮಸಿ ಮನಸಾ ಚರಂತಂ । ಸಹೈವ ಸಂತಂ ನ ವಿಜಾನಂತಿ ದೇವಾಃ' ಎಂಬುದಾಗಿ ಅಂತಃಸ್ಥನಾದ ಒಬ್ಬನಿಗೆ ಹೇಳಲ್ಪಟ್ಟಿದೆ.

### ಭಾಷ್ಯದೀಪಿಕಾ

(ಭಾ.ದೀ.) ಅತ್ರ ಅಧಿಕರಣೇ 'ಅಧಿದೈವಗತ-ಅನ್ಯತ್ರಪ್ರಸಿದ್ಧೇಂದ್ರಾದಿನಾಮ-ಸಮನ್ವಯಸಿದ್ಧ್ಯರ್ಥಂ ದೇಹಾಂತಃಸ್ಥತ್ವರೂಪಲಿಂಗಸಮನ್ವಯಃ ಕ್ರಿಯತೇ' ಇತಿ ಶಾಸ್ತ್ರಾಧ್ಯಾಯಪಾದಸಂಗತಯಃ ಸಿದ್ಧಾಃ ಇತ್ಯಾಶಯೇನ ಪೂರ್ವಾಧಿಕರಣತದ್ವಿಷಯ-ವಾಕ್ಯಸಂಗತೀ ದರ್ಶಯತಿ – **ಅದೃಶ್ಯ ಇತಿ** ॥ ಪೂರ್ವಾಧಿಕರಣೋದಾಹೃತೇ **'ಅದೃಶ್ಯೇ ಅನಾತ್ಮ್ಯೇ'** ಇತಿ ವಾಕ್ಯೇ ಆನಂದಮಯಸ್ಯ ಕಾರ್ತ್ಸ್ನ್ಯೇನ ಅಜ್ಞೇಯತ್ವ-ರೂಪಮ್ ಅದೃಶ್ಯತ್ವಮುಕ್ತಮ್ ಇತ್ಯರ್ಥಃ। ತತಃ ಕಿಮ್? ಇತ್ಯತ ಆಹ – **ತಚ್ಚೇತಿ** ॥ **ಚಶಬ್ದಃ** ಏವಾರ್ಥೇ । ತಥಾಚ – ಯತ್ಪೂರ್ವೋಕ್ತಮ್ ಅದೃಶ್ಯತ್ವಂ ತದೇವ

**'ಅಂತಃಪ್ರವಿಷ್ಟಮ್'** ಇತಿ ವಾಕ್ಯೇ **'ನ ವಿಜಾನಂತಿ'** ಇತ್ಯನೇನ ಕಸ್ಯಚಿತ್ ಅಂತಃಸ್ಥಸ್ಯ ಉಚ್ಯತೇ । ದೇವಾಜ್ಞೇಯತ್ವಾತ್ ಕೈಮುತ್ಯೇನ ಪ್ರತಿಪಾದ್ಯತೇ – ಇತ್ಯರ್ಥಃ । ಅನೇನ ಅಂತಃಸ್ಥತ್ವಮುಖೇನ ಅದೃಶ್ಯತ್ವಾನಂದಮಯತ್ವಯೋಃ ಅನ್ಯನಿಷ್ಠತ್ವಾಕ್ಷೇಪಾತ್ ಪೂರ್ವಾಧಿಕರಣೇನ ಅಸ್ಯ ಆಕ್ಷೇಪಿಕೀ ಸಂಗತಿರುಕ್ತಾ ಭವತಿ ।

ಹೃದಯಗುಹಾಂತಃಪ್ರವಿಷ್ಟಂ ಜಗತ್ಕರ್ತಾರಂ ಚಂದ್ರಮಸಿ ಅಂತರ್ಮನಸಾ ಸ್ವೇಚ್ಛಯಾ ಚರಂತಂ ಸಹೈವ ಸ್ಥಿತಮ್ ಏತಂ ದೇವಾಃ ತತ್ತ್ವಾಭಿಮಾನಿನಃ ಕಾರ್ತ್ಸ್ನ್ಯೇನ ನ ವಿಜಾನಂತಿ ಇತಿ ಶ್ರುತ್ಯರ್ಥಃ। ಪೂರ್ವಪಕ್ಷೇ ತು ಇಯಮ್ ಅನ್ಯಪರಾ ॥

ಈ ಅಧಿಕರಣದಲ್ಲಿ ದೇವತೆಗಳನ್ನು ಹೇಳುವ ಅನ್ಯತ್ರಪ್ರಸಿದ್ಧವಾದ ಇಂದ್ರ ಮೊದಲಾದ ನಾಮಾತ್ಮಕಶಬ್ದಗಳ ಸಮನ್ವಯದ ಸಿದ್ಧಿಗಾಗಿ ದೇಹಾಂತಃಸ್ಥತ್ವ ಎಂಬ ಲಿಂಗದ ಸಮನ್ವಯವನ್ನು ಮಾಡಲಾಗುವುದು. ಆದ್ದರಿಂದ, ಶಾಸ್ತ್ರಸಂಗತಿ ಪ್ರಥಮಾಧ್ಯಾಯಸಂಗತಿ, ಮತ್ತು ಪ್ರಥಮಪಾದದ ಸಂಗತಿಗಳು ಈ ಅಧಿಕರಣಕ್ಕೆ ಸಿದ್ಧವಾಗುವವು ಎಂಬ ಆಶಯದಿಂದ ಹಿಂದಿನ ಅಧಿಕರಣದ ಮತ್ತು ಅದರ ವಿಷಯವಾಕ್ಯದ ಸಂಗತಿಗಳನ್ನು 'ಅದೃಶ್ಯೇ ಅನಾತ್ಮ್ಯೇ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ ಉದಾಹರಿಸಲಾಗಿರುವ 'ಅದೃಶ್ಯೇ ಅನಾತ್ಮ್ಯೇ' ಎಂಬ ವಾಕ್ಯದಲ್ಲಿ ಆನಂದಮಯನಿಗೆ 'ಸಂಪೂರ್ಣವಾಗಿ ಜ್ಞಾನವಿಷಯವಾಗದಿರುವಿಕೆ' ಎಂಬ ಅದೃಶ್ಯತ್ವವು ಹೇಳಲ್ಪಟ್ಟಿದೆ ಎಂದು ಅರ್ಥ. ಅನಂತರ ಮುಂದೇನು? ಎಂಬ ಶಂಕೆಗೆ ಉತ್ತರವಾಗಿ 'ತಚ್ಚ' ಎಂದು ಹೇಳಲಾಗಿದೆ. ಇಲ್ಲಿ ಚಶಬ್ದವು ಏವ ಎಂಬ ಅರ್ಥವನ್ನು ಹೇಳುವುದು. ತಥಾಚ ಹಿಂದೆ ಯಾವ ಅದೃಶ್ಯತ್ವವು ಹೇಳಲ್ಪಟ್ಟಿದೆಯೋ ಅದೇ ಅಂತಃಪ್ರವಿಷ್ಟಂ ಎಂಬ ವಾಕ್ಯದಲ್ಲಿ 'ನ ವಿಜಾನಂತಿ' ಎಂಬ ಪದಗಳಿಂದ ಒಬ್ಬ ಅಂತಃಸ್ಥನಿಗೆ ಹೇಳಲ್ಪಟ್ಟಿದೆ. ದೇವತೆಗಳಿಗೆ ಅಜ್ಞೇಯನಾಗಿದ್ದಾನೆ ಎಂದು ಹೇಳಿರುವುದರಿಂದ ಕೈಮುತ್ಯನ್ಯಾಯದಿಂದ ಪ್ರತಿಪಾದಿತವಾಗಿದೆ(೧) ಎಂದು ಅರ್ಥ. ಇದರಿಂದ ಅಂತಃಸ್ಥತ್ವದ ಮೂಲಕ ಅದೃಶ್ಯತ್ವ ಮತ್ತು ಆನಂದಮಯತ್ವಗಳು ಇನ್ನೊಬ್ಬರಲ್ಲಿವೆ ಎಂದು ಆಕ್ಷೇಪಿಸುವ ಕಾರಣ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯನ್ನು ಹೇಳಿದಂತಾಗುವುದು.

ಅಂತಃಪ್ರವಿಷ್ಟಂ = ಹೃದಯಗುಹೆಯ ಒಳಗೆ ಪ್ರವೇಶಿಸಿರುವ, ಕರ್ತಾರಂ = ಜಗತ್ಕರ್ತೃವಾದ, ಚಂದ್ರಮಸಿ ಅಂತಃ = ಚಂದ್ರನೊಳಗೆ, ಮನಸಾ = ಸ್ವೇಚ್ಛಾನುಸಾರ, ಚರಂತಂ = ಸಂಚರಿಸುವ, ಸಹೈವ ಸಂತಂ = ಜೊತೆಗೇ ಇರುವ, ಏತಂ = ಇವನನ್ನು, ದೇವಾಃ = ತತ್ತ್ವಾಭಿಮಾನಿ ದೇವತೆಗಳು, ನ ವಿಜಾನಂತಿ = ಸಂಪೂರ್ಣವಾಗಿ ತಿಳಿದಿರುವುದಿಲ್ಲ ಎಂದು ಶ್ರುತ್ಯರ್ಥ.

ಪೂರ್ವಪಕ್ಷದಲ್ಲಿ ಈ ಶ್ರುತಿಯು ಬ್ರಹ್ಮನನ್ನು ಬಿಟ್ಟು ಅನ್ಯರನ್ನು ಹೇಳುವ ತಾತ್ಪರ್ಯವುಳ್ಳದ್ದು.

(೧) 'ನ ವಿಜಾನಂತಿ ದೇವಾಃ'– 'ದೇವತೆಗಳು ತಿಳಿಯುವುದಿಲ್ಲ' ಎಂದು ಶ್ರುತಿಯು ಅಂತಃಸ್ಥನಿಗೆ ದೇವಾಜ್ಞೇಯತ್ವವನ್ನು ಹೇಳುತ್ತಿದೆ. ದೇವತೆಗಳೇ ಅರಿಯಲಾರರೆಂದ ಮೇಲೆ ಇತರ ಜೀವರಿಗೆ ಅಜ್ಞೇಯನೆಂದು ಹೇಳುವುದೇನು ಎಂದು ಕೈಮುತ್ಯನ್ಯಾಯದಿಂದ ಕಾರ್ತ್ಸ್ನ್ಯೇನ ಅಜ್ಞೇಯತ್ವರೂಪವಾದ ಅದೃಶ್ಯತ್ವವು ಅಂತಃಸ್ಥನಿಗೆ ಹೇಳಲ್ಪಟ್ಟಿದೆ ಎಂದು ಭಾವ.

ಭಾ– ಸ ಚ 'ಇಂದ್ರೋ ರಾಜಾ' (ತೈ.ಆ.೩-೧೧-೬) 'ಸಪ್ತ ಯುಂಜಂತಿ' (ತೈ.ಆ. ೩-೧೧-೮)ಇತ್ಯಾದಿಭಿರನ್ಯಃ ಪ್ರತೀಯತೇ ।

ಆ ಅಂತಃಸ್ಥನಾದರೋ 'ಇಂದ್ರೋ ರಾಜಾ' (ತೈ.ಆ.೩-೧೧-೬) 'ಸಪ್ತ ಯುಂಜಂತಿ' (ತೈ.ಆ. ೩-೧೧-೮)ಮೊದಲಾದ ವಾಕ್ಯಗಳಿಂದ ವಿಷ್ಣುವಿಗಿಂತ ಬೇರೆಯಾದವನು ಎಂದು ತೋರುವನು.

(ಭಾ.ದೀ.) ತತ್ರ ಸಯುಕ್ತಿಕಂ ಪೂರ್ವಪಕ್ಷಮಾಹ – **ಸ ಚ ಇತಿ** ॥ 'ಚ'ಶಬ್ದೋಽವಧಾರಣೇ । 'ಅನ್ಯಃ' ಇತ್ಯಾವರ್ತತೇ । ತಥಾಚ ಸೋಽಂತಃಸ್ಥೋ ವಿಷ್ಣೋಃ '**ಅನ್ಯಃ**' ಅನ್ಯ ಏವ ಭವೇತ್, ಕುತಃ? 'ಇಂದ್ರೋ ರಾಜಾ' ಇತ್ಯಾದಿವಾಕ್ಯೈಃ ಯತಃ ಅನ್ಯಃ ಅಂತಃಸ್ಥತಯಾ ಪ್ರತೀಯತೇ, ಅತಃ – ಇತಿ ಯೋಜನಾ । 'ಆದಿ'ಶಬ್ದೇನ –

'ಅಪಾಂ ನೇತಾರಂ ಭುವನಸ್ಯ ಗೋಪಾಮ್ ।
ತ್ವಷ್ಟಾರಂ ರೂಪಾಣಿ ವಿಕುರ್ವಂತಂ ವಿಪಶ್ಚಿತಮ್ ॥'

'ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಮ್ ।
ಚಕ್ಷುರ್ಹೋತಾರಂ ಪ್ರದಿಶೋಽನುಕ್ಲೃಪ್ತಂ ವಾಚೋ ವೀರ್ಯಂ
ತಪಸಾಽನ್ವವಿಂದನ್ ॥

ಇತ್ಯಾದಿವರುಣ-ತ್ವಷ್ಟ್ರಗ್ನ್ಯಾದಿಪ್ರಾಪಕತತ್ತತ್ಶ್ರುತಿಲಿಂಗಾದಿಘಟಿತತೈತ್ತಿರೀಯ-ವಾಕ್ಯಾನಿ ಗೃಹ್ಯಂತೇ ।

ಸಯುಕ್ತಿಕವಾದ ಪೂರ್ವಪಕ್ಷವನ್ನು ''ಸ ಚ'' ಎಂಬ ವಾಕ್ಯದಿಂದ ಹೇಳಲಾಗಿದೆ. ಚಶಬ್ದವು ಏವ ಎಂಬ ಅರ್ಥವನ್ನು ಹೇಳುವುದು. ಅನ್ಯ ಎಂಬ ಶಬ್ದವು ಆವೃತ್ತಿಯನ್ನು ಪಡೆಯುವುದು. ತಥಾಚ - ಸಃ = ಆ ಅಂತಃಸ್ಥನು, ವಿಷ್ಣುವಿಗಿಂತ ಅನ್ಯಃ = ಬೇರೆಯೇ ಆಗಿರಬೇಕು; ಏಕೆಂದರೆ? ಯಾವ ಕಾರಣದಿಂದ 'ಇಂದ್ರೋ ರಾಜಾ' ಇತ್ಯಾದಿ ವಾಕ್ಯಗಳಿಂದ ಮತ್ತೊಬ್ಬನೇ ಅಂತಃಸ್ಥನೆಂದು ತಿಳಿದು ಬರುವನೋ ಆದ್ದರಿಂದ ಎಂದು ಯೋಜನೆ. ಆದಿಶಬ್ದದಿಂದ

'ಅಪಾಂ ನೇತಾರಂ ಭುವನಸ್ಯ ಗೋಪಾಮ್ ।
ತ್ವಷ್ಟಾರಂ ರೂಪಾಣಿ ವಿಕುರ್ವಂತಂ ವಿಪಶ್ಚಿತಮ್ ॥

'ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ
ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಮ್ ।
ಚಕ್ಷುರ್ಹೋತಾರಂ ಪ್ರದಿಶೋಽನುಕ್ಲಪ್ತಂ
ವಾಚೋ ವೀರ್ಯಂ ತಪಸಾಽನ್ವವಿಂದನ್॥'

ಇತ್ಯಾದಿಯಾಗಿ ವರುಣ, ತ್ವಷ್ಟೃ, ಅಗ್ನಿ, ಮೊದಲಾದವರನ್ನು ತಿಳಿಸುವ ಅವರಿಗೆ ಸಂಬಂಧಿಸಿದ ಶ್ರುತಿ ಮತ್ತು ಲಿಂಗಗಳಿಂದ ಕೂಡಿರುವ ತೈತ್ತಿರೀಯವಾಕ್ಯಗಳು ಗ್ರಹಿಸ-ಲ್ಪಡುತ್ತವೆ.

ಭಾ– ತಸ್ಮಾತ್ ಸ ಏವಾನಂದಮಯಃ

ಆದ್ದರಿಂದ ಅವನೇ (ಇಂದ್ರ ಮೊದಲಾದವರೇ) ಆನಂದಮಯನು.

(ಭಾ.ದೀ.) **ಪೂರ್ವಪಕ್ಷಫಲಮಾಹ – ತಸ್ಮಾದಿತಿ ॥** ಇದಂ ಚಾಽವರ್ತತೇ । 'ಪ್ರಸಜ್ಯತೇ' ಇತಿ ಶೇಷಃ । ತಥಾ ಚ – **ತಸ್ಮಾತ್** = ಅಂತಃಸ್ಥಸ್ಯ ವಿಷ್ಣ್ವನ್ಯತ್ವಾತ್, **ಸಃ** ಅದೃಶ್ಯಃ, ಅನ್ಯ ಏವ ಪ್ರಸಜ್ಯತೇ । ತಸ್ಮಾತ್ ಅನ್ಯಸ್ಯ ಅದೃಶ್ಯತ್ವಾತ್, ಸೋಽನ್ಯಃ ಏವ ಇಂದ್ರಾದ್ಯನ್ಯತಮ ಆನಂದಮಯಃ ಪ್ರಸಜ್ಯತೇ, ನ ವಿಷ್ಣುಃ – ಇತಿ ಯೋಜನಾ ।

[೧]ಈ ವಾಕ್ಯವು ಆವೃತ್ತಿಯನ್ನು ಪಡೆಯುತ್ತದೆ. ಪ್ರಸಜ್ಯತೇ ಎಂಬ ಪದವು ಇಲ್ಲಿ ಶೇಷವಾಗಿ ಸೇರಿಕೊಳ್ಳುವುದು. ತಥಾಚ– ತಸ್ಮಾತ್ = ಅಂತಃಸ್ಥನು ವಿಷ್ಣುವಿಗಿಂತ ಅನ್ಯನೇ ಆಗಿರುವುದರಿಂದ, ಸಃ = ಅದೃಶ್ಯನಾದವನೂ ವಿಷ್ಣುವಿಗಿಂತ ಭಿನ್ನನೇ ಆಗಿರುವನು ಎಂದಾಗುವುದು. ತಸ್ಮಾತ್ – ವಿಷ್ಣುವಿಗಿಂತ ಭಿನ್ನನು ಅದೃಶ್ಯತ್ವವನ್ನು ಪಡೆದಿರುವುದರಿಂದ, ಸ ಏವ ಆನಂದಮಯಃ = ಆ ವಿಷ್ಣುಭಿನ್ನನಾದ, ಇಂದ್ರಾದಿಗಳಲ್ಲಿ ಒಬ್ಬನಾಗಿರುವವನೇ ಆನಂದಮಯನೆಂದಾಗುವುದು. ವಿಷ್ಣುವು ಆನಂದಮಯನಲ್ಲ ಎಂದು ಯೋಜನೆ.

(೧) 'ತಸ್ಮಾತ್ ಸ ಏವ' ಎಂಬ ವಾಕ್ಯವು.

(ಭಾ.ದೀ.) 'ರಾಜಾ ಯ ಇಂದ್ರೋ ಜಗತಃ ಈಶೇ ಈಷ್ಟೇ, ಜಗದೀಶ್ವರತ್ವೇನ ವರ್ತತೇ' ಇತ್ಯರ್ಥಃ । 'ಯಸ್ಮಾತ್ ಈಷ್ಟೇ ತಸ್ಮಾತ್ ಜಗತಃ ರಾಜಾ' ಇತಿ ವಾ । ಏತದುತ್ತರಸ್ಯ 'ಸಪ್ತಹೋತಾ' ಇತಿ ಪದಸ್ಯ ಸಪ್ತ ಬುದ್ಧೀಂದ್ರಿಯಾಣಿ ವಿಷಯೇಷು, ಜೀವೇನ ಜುಹೋತಿ ಇತಿ ಸಪ್ತಹೋತಾ । 'ವಿಷಯಾನ್ ಇಂದ್ರಿಯೈಃ ಜೀವೇನ ವಾ' ಇತ್ಯರ್ಥಃ।

'ಸಪ್ತ ಯುಂಜಂತಿ' ಇತಿ ವಾಕ್ಯೇ ಆದ್ಯಾರ್ಧಸ್ಯ ಸಪ್ತ ಛಂದಾಂಸಿ ಗಾಯತ್ರ್ಯಾದೀನಿ ಅಶ್ವರೂಪಾಣಿ, ಏಕಚಕ್ರಂ ಸೂರ್ಯರಥಂ, ಪ್ರತಿ ಸ್ವಾತ್ಮಾನಂ ಯುಂಜಂತಿ, ರಥೇ ಯುಕ್ತಾನಿ ಭವಂತಿ - ಇತ್ಯರ್ಥಃ । ಸಪ್ತಚ್ಛಂದೋಽಭಿಮಾನಿನಾ ಪೃಥಗ್‌ದೇವತಾಭಿಮಾನೀ ಸಪ್ತಛಂದೋನಾಮಾ ಏಕಃ ಪ್ರಧಾನಃ ಅಶ್ವೋಽಸ್ತಿ । 'ಛಂದೋಽಭಿಮಾನಿನಾ ಪೃಥಗ್ ವೇದಾಭಿಮಾನೀ ಸಪ್ತಚ್ಛಂದೋನಾಮಾ ಸಪ್ತಸು ಏಕೋಽಸ್ತಿ' ಇತಿ **ತತ್ತ್ವಪ್ರದೀಪೋಕ್ತೇಃ** । ಅತ ಏವ 'ಸಪ್ತ ಯುಂಜಂತಿ ಹಿ ಏಕೋ ಅಶ್ವೋ ವಹತಿ

ಸಪ್ತನಾಮಾ' ಇತ್ಯನಯೋರ್ನ ವಿರೋಧಃ । ಸೂರ್ಯರಥಚಕ್ರಸ್ಯ ಸ್ಥಿತಿಮಾಹ – **ತ್ರಿನಾಭೀತಿ** ॥ ತ್ರಿರಾವೃತ್ತಮಾಸಚತುಷ್ಟಯಾತ್ಮಕನಾಭಿತ್ರಯೋಪೇತಮ್, 'ಅಜರಂ' ಸದಾ ದೃಢಮ್, ಅರ್ವಶಬ್ದಿತೇಭ್ಯೋ ವಾಜಿಭ್ಯೋ ದೂರಸ್ಥತ್ವಾದನರ್ವಂ ಚಕ್ರಂ ಸೂರ್ಯರಥಸ್ಯ ಅಸ್ತೀತ್ಯರ್ಥಃ । ಚಕ್ರಸ್ಯ ಮಾನಸೋತ್ತರಗಿರಿಶಿಖರವಲಯಪರಿವರ್ತಿತ್ವಾದ್ ಅರ್ವತಾಂ ಮೇರುಮಾನಸೋತ್ತರಮಧ್ಯಾಕಾಶಗಾಮಿತ್ವಾದ್ ದೂರಸ್ಥತ್ವಂ ಯುಕ್ತಮ್ । ಯೇನ **ಯತ್ರ** ಚಕ್ರೇ **ಇಮಾ** ಇಮಾನಿ ವಿಶ್ವಾನಿ ಸರ್ವಾಣಿ ಭುವನಾನಿ '**ತಸ್ಥುಃ**' ಸ್ಥಿತಾ - ಇತ್ಯುತ್ತರಾರ್ಧಸ್ಯ ಅರ್ಥಃ । ಜಗತಃ **ಪ್ರತಿಷ್ಠಾಂ** ಆಶ್ರಯಂ, **ಚತುರ್ಹೋತಾರಂ** ಅಂತಃಕರಣಚತುಷ್ಟಯೇ ವಿಷಯಾಣಾಂ ಹೋತಾರಂ, **ಪ್ರದಿಶಃ** ಪ್ರತಿದಿಶಮ್ **ಅನುಕ್ಲೃಪ್ತಂ** ವ್ಯವಸ್ಥಿತಂ **ವಾಚಃ** ವೇದಸ್ಯ **ವೀರ್ಯಂ** ಸಾರಂ ಮುಖ್ಯಾರ್ಥಮ್ **ಇಂದ್ರಮ್ ಅಗ್ನಿಂ ದಿವೋ** - ದೇವ್ಯಾಃ **ಆತ್ಮಾನಂ** ಸ್ವಾಮಿನಂ ವಾಯುಂ **ಸವಿತಾರಂ ಬೃಹಸ್ಪತಿಂ ಬ್ರಹ್ಮಾ** ಹಿರಣ್ಯಗರ್ಭಃ ತಪಸಾ **ಅನ್ವವಿಂದತ್** ಲಬ್ಧವಾನ್ ಇತ್ಯರ್ಥಃ ।

(೧) ಇಂದ್ರೋ ರಾಜಾ ಜಗತೋ ಯ ಈಶೇ– ರಾಜನಾದ ಯಾವ ಇಂದ್ರನು ಜಗತ್ತಿಗೆ ಈಶೇ = ಈಷ್ಟೇ ಅಂದರೆ ಜಗದೀಶ್ವರನಾಗಿ ಇರುವನೋ ಎಂದು ಅರ್ಥ. ಅಥವಾ, ಯಾವ ಕಾರಣದಿಂದಾಗಿ ಈಶೇ = ಈಷ್ಟೇ ಅಂದರೆ ಜಗತ್ತಿಗೆ ನಿಯಾಮಕನಾಗಿರುವನೋ ಆದ್ದರಿಂದ ಜಗತ್ತಿಗೆ ರಾಜನು ಎಂದು ಅರ್ಥ. ಇದರ ಮುಂದಿರುವ ಸಪ್ತಹೋತಾ ಎಂಬ ಪದಕ್ಕೆ ಯಾರು ಏಳು ಜ್ಞಾನೇಂದ್ರಿಯಗಳನ್ನು ವಿಷಯಪದಾರ್ಥಗಳಲ್ಲಿ ಜೀವನ ಮೂಲಕವಾಗಿ ಹೋಮ ಮಾಡುವನೋ ಅವನು ಸಪ್ತಹೋತಾ ಎಂದು ಅರ್ಥ. ಅಥವಾ ವಿಷಯ-ಪದಾರ್ಥಗಳನ್ನು ಇಂದ್ರಿಯಗಳ ಮೂಲಕವಾಗಿ ಜೀವನಲ್ಲಿ ಹೋಮಿಸುವವನು ಎಂದು ಅರ್ಥ.

(೧) 'ಇಂದ್ರೋ ರಾಜಾ ಜಗತೋ ಯ ಈಶೇ ಸಪ್ತಹೋತಾ ಸಪ್ತಧಾ ವಿಕ್ಲೃಪ್ತಃ' – ಈ ತೈತ್ತಿರೀಯ ಆರಣ್ಯಕದ ಮಂತ್ರಕ್ಕೆ ಭಾಷ್ಯದೀಪಿಕಾದಲ್ಲಿ ಮಾಡಿರುವ ವ್ಯಾಖ್ಯಾನದ ಭಾವ ಹೀಗಿದೆ – ದೇವತೆಗಳ ರಾಜನಾದ ಇಂದ್ರನು ಮನಸ್ಸು ಮತ್ತು ಬುದ್ಧಿಗಳಿಂದ ಸಹಿತವಾದ ಒಟ್ಟು ಏಳು ಜ್ಞಾನೇಂದ್ರಿಯಗಳನ್ನು

ಜೀವನ ದ್ವಾರಾ ವಿಷಯಪದಾರ್ಥಗಳಲ್ಲಿ ಹೋಮಮಾಡುವುದರಿಂದ 'ಸಪ್ತ-ಹೋತಾ' ಎಂದೆನಿಸುವವನು. ಅಥವಾ ಏಳು ವಿಧವಾದ ವಿಷಯಗಳನ್ನು ಇಂದ್ರಿಯಗಳ ದ್ವಾರಾ ಜೀವನಲ್ಲಿ ಹೋಮಿಸುವವನು ಎಂದು ಅರ್ಥ. ಹೀಗೆ ಹೋಮ ಮಾಡುವ ಸಲುವಾಗಿ ಇಂದ್ರನು ಸಪ್ತಧಾ ವಿಕ್ಲಪ್ತಃ ಎಂದರೆ ಏಳು ಇಂದ್ರಿಯಗಳಲ್ಲಿ ಸ್ವೇಚ್ಛಾನುಸಾರವಾಗಿ ಏಳು ರೂಪದಿಂದ ಇರುವವನು.

ಸಪ್ತ ಯುಂಜಂತಿ (ರಥಮೇಕಚಕ್ರಂ)(೧) ಎಂಬ ವಾಕ್ಯದಲ್ಲಿ ಮೊದಲನೆಯ ಅರ್ಧಭಾಗಕ್ಕೆ – ಸಪ್ತ ಅಂದರೆ ಗಾಯತ್ರೀ ಮೊದಲಾದ ಛಂದಸ್ಸುಗಳು ಅಶ್ವರೂಪ-ವಾಗಿ, ಏಕಚಕ್ರಂ = ಸೂರ್ಯರಥವನ್ನು ಕುರಿತು ತಮ್ಮನ್ನು, ಯುಂಜಂತಿ = ಯೋಜಿಸಿ ಕೊಂಡಿವೆ ಎಂದು ಅರ್ಥ. ರಥದಲ್ಲಿ ಯೋಜಿಸಲ್ಪಟ್ಟಿವೆ ಎಂದು ಅರ್ಥ. ಏಳು ಛಂದಸ್ಸುಗಳಿಗೆ ಅಭಿಮಾನಿಗಳಾದ ದೇವತೆಗಳಿಂದ ಭಿನ್ನನಾದ ವೇದಾಭಿಮಾನಿಯಾದ ಸಪ್ತಚ್ಛಂದ ಎಂಬ ಹೆಸರುಳ್ಳ ಒಂದು ಪ್ರಧಾನವಾದ ಅಶ್ವವಿದೆ. ತತ್ತ್ವಪ್ರದೀಪದಲ್ಲಿ 'ಛಂದೋಭಿಮಾನಿನಾ ಪೃಥಗ್ವೇದಾಭಿಮಾನೀ ಸಪ್ತಚ್ಛಂದೋ ನಾಮಾ ಸಪ್ತಸ್ವೇ-ಕೋऽಸ್ತಿ' ಅಂದರೆ ಛಂದೋಭಿಮಾನಿಗಿಂತಲೂ ಭಿನ್ನನಾದ ವೇದಾಭಿಮಾನಿಯಾದ ಸಪ್ತಚ್ಛಂದ ಎಂಬ ಹೆಸರುಳ್ಳ ಅಶ್ವವು ಏಳರಲ್ಲಿ ಒಂದು ಇದೆ ಎಂದು ಹೇಳಿದೆ. ಆದ್ದ-ರಿಂದಲೇ 'ಸಪ್ತ ಯುಂಜಂತಿ' 'ಸಪ್ತ ಅಶ್ವಗಳು ಸೂರ್ಯನ ರಥಕ್ಕೆ ಯೋಜಿಸಲ್ಪಟ್ಟಿವೆ', 'ಏಕೋ ಅಶ್ವೋ ವಹತಿ ಸಪ್ತನಾಮಾ' 'ಸಪ್ತನಾಮಕವಾದ ಒಂದು ಅಶ್ವವು ಸೂರ್ಯ-ರಥವನ್ನು ಎಳೆಯುತ್ತಿದೆ' ಎಂಬ ವಾಕ್ಯಗಳಿಗೆ ಪರಸ್ಪರವಿರೋಧವಿಲ್ಲ.

ಸೂರ್ಯರಥಚಕ್ರವು ಇರುವ ರೀತಿಯನ್ನು ತ್ರಿನಾಭಿ ಇತ್ಯಾದಿಯಾಗಿ ವರ್ಣಿಸ-ಲಾಗಿದೆ. ಮೂರು ಬಾರಿ ಆವೃತ್ತಿಯನ್ನು ಹೊಂದಿರುವ ನಾಲ್ಕು ಮಾಸಗಳೆಂಬ ಮೂರು ನಾಭಿಗಳನ್ನು ಹೊಂದಿರತಕ್ಕದ್ದು ಎಂದು ಅರ್ಥ. ಅಜರಂ ಎಂದರೆ ಯಾವಾಗಲೂ ದೃಢವಾಗಿರುವುದು; ಅನರ್ವಂ ಚಕ್ರಂ – ಅರ್ವಶಬ್ದವಾಚ್ಯವಾದ ಅಶ್ವಗಳಿಂದ ದೂರ-ವಿರುವುದರಿಂದ ಅನರ್ವ ಎಂದೆನಿಸುವ ಚಕ್ರವು ಸೂರ್ಯರಥಕ್ಕಿರುವುದು ಎಂದು ಅರ್ಥ. ಸೂರ್ಯರಥದ ಚಕ್ರವು ಮಾನಸಸರೋವರದ ಉತ್ತರದಿಕ್ಕಿನಲ್ಲಿರುವ ಪರ್ವತದ ಶಿಖರಗಳ ಮಂಡಲದಲ್ಲಿ ಚಲಿಸುತ್ತಿರುವುದು. ಅಶ್ವಗಳು ಮೇರು ಪರ್ವತ ಮತ್ತು ಮಾನಸಸರೋವರದ ಉತ್ತರದಲ್ಲಿರುವ ಗಿರಿಶಿಖರಗಳ ಮಧ್ಯೆ ಇರುವ ಆಕಾಶ-

ದಲ್ಲಿ ಸಂಚರಿಸುತ್ತಿರುವುದು. ಆದ್ದರಿಂದ ಚಕ್ರವು ಅಶ್ವಗಳಿಂದ ದೂರದಲ್ಲಿದೆ ಎಂದು ಹೇಳುವುದು ಯುಕ್ತವಾಗಿದೆ.

ಯೇನ ಅಂದರೆ ಯತ್ರ - ಯಾವ ಚಕ್ರದಲ್ಲಿ, ಇಮಾ ವಿಶ್ವಾ ಭುವನಾನಿ - ಈ ಎಲ್ಲ ಭುವನಗಳು, ತಸ್ಥುಃ - ನೆಲೆಸಿವೆ ಎಂದು ಉತ್ತರಾರ್ಧದ ಅರ್ಥ.

ಜಗತಃ ಪ್ರತಿಷ್ಠಾಂ - ಜಗತ್ತಿಗೆ ಆಶ್ರಯನಾದ; ಚತುರ್ಹೋತಾರಂ - ನಾಲ್ಕು ವಿಧವಾದ ಅಂತಃಕರಣಗಳಲ್ಲಿ ವಿಷಯಪದಾರ್ಥಗಳನ್ನು ಹೋಮಮಾಡುವ; ಪ್ರದಿಶಃ - ಪ್ರತಿಯೊಂದು ದಿಕ್ಕಿನಲ್ಲೂ; ಅನುಕ್ಲೃಪ್ತಂ - ವ್ಯವಸ್ಥಿತವಾಗಿರುವ; ವಾಚಃ = ವೇದದ; ವೀರ್ಯಂ - ಸಾರ ಎಂದರೆ ಮುಖ್ಯಾರ್ಥನಾದ; ಇಂದ್ರಮ್ ಅಗ್ನಿಮ್ - ಇಂದ್ರನನ್ನು ಅಗ್ನಿಯನ್ನು; ದಿವಃ - ದ್ಯುಲೋಕಾಭಿಮಾನಿ ದೇವತೆಗೆ; ಆತ್ಮಾನಂ - ಸ್ವಾಮಿಯಾದ ವಾಯುವನ್ನು, ಸವಿತಾರಂ - ಸೂರ್ಯನನ್ನು, ಬೃಹಸ್ಪತಿಂ - ಬೃಹಸ್ಪತಿಯನ್ನು; ಬ್ರಹ್ಮಾ - ಚತುರ್ಮುಖಬ್ರಹ್ಮನು, ತಪಸಾ ಅನ್ವವಿಂದತ್ - ತಪಸ್ಸಿನಿಂದ ಪಡೆದನು ಎಂದು ಅರ್ಥ.

(೧) 'ಸಪ್ತ ಯುಂಜಂತಿ ರಥಮೇಕ ಚಕ್ರಂ ಏಕೋ ಅಶ್ವೋ ವಹತಿ ಸಪ್ತನಾಮಾ। ತ್ರಿನಾಭಿ ಚಕ್ರಂ ಅಜರಮನರ್ವಂ ಯೇನೇಮಾ ವಿಶ್ವಾ ಭುವನಾನಿ ತಸ್ಥುಃ ॥' ಎಂದು ಶ್ರುತಿ.

'ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ' ಇತ್ಯಾದಿಯಾದ ತಾವು ಉದಾಹರಿಸಿದ ತೈತ್ತಿರೀಯ ಶ್ರುತಿಗೆ ಭಾಷ್ಯದೀಪಿಕಾಕಾರರು ಇಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

(ಭಾ.ದೀ.) ಸಿದ್ಧಾಂತಯತಿ – ಇತೀತಿ ॥

ಇತಿ ಎಂದು ಆರಂಭಿಸಿ ಭಾಷ್ಯಕಾರರು ಸಿದ್ಧಾಂತವನ್ನು ಹೇಳುತ್ತಿದ್ದಾರೆ.

ಸೂ– ॥ ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ॥ ೨೦ ॥

ಅಂತಃಸ್ಥನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಅವನ ಧರ್ಮಗಳನ್ನು ಇಲ್ಲಿ ಉಪದೇಶಿಸಲಾಗಿದೆ.

**ಭಾ– ಇತಿ ನ ಮಂತವ್ಯಮ್ । ಅಂತಃ ಶ್ರೂಯಮಾಣೋ ವಿಷ್ಣುರೇವ । 'ಅಂತಸ್ಸಮುದ್ರೇ ಮನಸಾ ಚರಂತಮ್ । ಬ್ರಹ್ಮಾನ್ವವಿಂದದ್ ದಶ-ಹೋತಾರಮರ್ಣೇ'। (ತೈ.ಆ. ೩-೧೧-೧) 'ಸಮುದ್ರೇಽಂತಃ ಕವಯೋ ವಿಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ' (ತೈ.ಆ.೩-೧೧-೧೧) ಯಸ್ಯಾಂಡಕೋಶಂ ಶುಷ್ಮಮಾಹುಃ' (ತೈ.ಆ. ೩-೧೧-೪) ಇತ್ಯಾದಿ-ತದ್ಧರ್ಮೋಪದೇಶಾತ್।**

ಹೀಗೆ ತಿಳಿಯತಕ್ಕದ್ದಲ್ಲ. ಅಂತಃಸ್ಥನೆಂದು ಇಲ್ಲಿ ಕೇಳಿಬರುವವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ

ಅಂತಸ್ಸಮುದ್ರೇ ಮನಸಾ ಚರಂತಮ್ । ಬ್ರಹ್ಮಾನ್ವವಿಂದದ್ ದಶ-ಹೋತಾರಮರ್ಣೇ । (ತೈ.ಆ. ೩-೧೧-೧); ಸಮುದ್ರೇಽಂತಃ ಕವಯೋ ವಿಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ (ತೈ.ಆ. ೩-೧೧-೧೧); ಯಸ್ಯಾಂಡಕೋಶಂ ಶುಷ್ಮಮಾಹುಃ (ತೈ.ಆ. ೩-೧೧-೪) ಇತ್ಯಾದಿಯಾಗಿ ವಿಷ್ಣುವಿನ ಧರ್ಮಗಳನ್ನು ಇಲ್ಲಿ ಉಪ-ದೇಶಿಸಲಾಗಿದೆ.

(ಭಾ.ದೀ.) ಕುತೋ ನ ಮಂತವ್ಯಮ್? ಇತ್ಯತಃ ತತ್ರ ಹೇತುತ್ವೇನ ಸೂತ್ರ-ಮುಪನ್ಯಸ್ಯ, ವ್ಯಾಚಷ್ಟೇ – **ಅಂತರಿತಿ** ॥ ಸೂತ್ರೇ 'ಅಂತಃ' ಇತ್ಯುದ್ದೇಶ್ಯಭಾಗೇ ಅಪೇಕ್ಷಿತಂ ಪದಮಧ್ಯಾಹೃತ್ಯ ದರ್ಶಯತಿ – **ಶ್ರೂಯಮಾಣ ಇತಿ** ॥ 'ಅಂತಃಸ್ಥತ್ವೇನ ಶ್ರುತ್ಯಾ ಉಚ್ಯಮಾನಃ' ಇತ್ಯರ್ಥಃ । ವಿಧೇಯಸಮರ್ಪಕಸ್ಯ ಅನುವೃತ್ತಸ್ಯ ತತ್ತು ಇತ್ಯಸ್ಯ ಅರ್ಥಮಾಹ – **ವಿಷ್ಣುರೇವ ಇತಿ** ॥ ತೈತ್ತಿರೀಯೋಪನಿಷದ್ಗತಭಿನ್ನಭಿನ್ನವಾಕ್ಯೋ-ದಾಹರಣಪೂರ್ವಕಂ ಹೇತ್ವಂಶಂ ವ್ಯಾಚಷ್ಟೇ – **ಅಂತರಿತಿ** ॥ **ಇತ್ಯಾದೀತಿ** ॥ ತಸ್ಯ ಧರ್ಮಾಃ ತದ್ಧರ್ಮಾಃ, ತೇಷಾಮ್ । ಉಪದೇಶೋ ವಚನಮ್ । ಇತ್ಯಾದಿ-ರೂಪಶ್ಚಾಸೌ ತದ್ಧರ್ಮೋಪದೇಶ್ಚ ಇತ್ಯಾದಿ ತದ್ಧರ್ಮೋಪದೇಶಃ ತಸ್ಮಾತ್ ಇತ್ಯರ್ಥಃ ।

**ಯದ್ವಾ - ಲುಪ್ತವಿಭಕ್ತಿಕೋಽಯಂ ನಿರ್ದೇಶಃ । ತಥಾಚ – 'ಇತ್ಯಾದೇರುಪದೇಶಾತ್' ಇತ್ಯರ್ಥಃ । ಸಮುದಾಯ್ಯೆಕವಚನಮೇತತ್ ।**

ಯಾವ ಕಾರಣದಿಂದಾಗಿ ಹಾಗೆ ತಿಳಿಯತಕ್ಕದ್ದಲ್ಲ ಎಂಬ ಶಂಕೆಗೆ ಉತ್ತರವಾಗಿ ಆ ವಿಷಯದಲ್ಲಿ ಹೇತುವಾಗಿ ಭಾಷ್ಯಕಾರರು ಸೂತ್ರವನ್ನು ಉಲ್ಲೇಖಿಸಿ ಅಂತಃ ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಸೂತ್ರದಲ್ಲಿ ಅಂತಃ ಎಂಬ ಉದ್ದೇಶ್ಯ-ಭಾಗದಲ್ಲಿ ಅಪೇಕ್ಷಿತವಾಗಿರುವ ಶ್ರೂಯಮಾಣಃ ಎಂಬ ಪದವನ್ನು ಅಧ್ಯಾಹಾರ-ಮಾಡಿಕೊಂಡು ತೋರಿಸುತ್ತಿದ್ದಾರೆ. ಅಂತಃಸ್ಥನೆಂದು ಶ್ರುತಿಯಿಂದ ಹೇಳಲ್ಪಟ್ಟಿರುವವನು ಎಂದು ಅರ್ಥ. ಈ ಸೂತ್ರದಲ್ಲಿ ವಿಧೇಯಭಾಗವನ್ನು ತಿಳಿಸಿಕೊಡುವ ಅನುವೃತ್ತಿಯನ್ನು ಪಡೆದಿರುವ(೧) ತತ್ತು ಎಂಬ ಪದಗಳ ಅರ್ಥವನ್ನು ವಿಷ್ಣುರೇವ ಎಂದು ಹೇಳಲಾಗಿದೆ. ತೈತ್ತಿರೀಯೋಪನಿಷತ್ತಿನಲ್ಲಿ ಇರುವ ಬೇರೆ ಬೇರೆ ವಾಕ್ಯಗಳನ್ನು ಉದಾಹರಿಸುವ ಮೂಲಕ ಹೇತುಭಾಗವನ್ನು ಅಂತಃ ಎಂದು ಹಾಗೂ ಇತ್ಯಾದಿ ಎಂದು ವ್ಯಾಖ್ಯಾನ ಮಾಡಿದ್ದಾರೆ. ತದ್ಧರ್ಮೋಪದೇಶಾತ್ ಅಂದರೆ ತಸ್ಯ ಧರ್ಮಾಃ ತದ್ಧರ್ಮಾಃ; ತೇಷಾಮುಪದೇಶಃ ವಚನಮ್ - ಆ ವಿಷ್ಣುವಿನ ಧರ್ಮಗಳು ತದ್ಧರ್ಮಗಳು; ಅವುಗಳ ಉಪದೇಶ ಎಂದರೆ ವಚನ; ಇತ್ಯಾದಿತದ್ಧರ್ಮೋಪದೇಶಾತ್ ಅಂದರೆ ಇವೇ ಮೊದಲಾದ ವಿಷ್ಣುವಿನ ಧರ್ಮವನ್ನು ತಿಳಿಸುವ ವಾಕ್ಯಗಳು; ಅವುಗಳಿಂದಾಗಿ ಎಂದು ಅರ್ಥ. ಅಥವಾ ಇತ್ಯಾದಿ(೨) ಎಂಬ ಪದವು ವಿಭಕ್ತಿಲೋಪವನ್ನು ಪಡೆದಿರುವ ಪದ-ವಾಗಿದೆ. ತಥಾಚ ಇತ್ಯಾದೇಃ ಉಪದೇಶಾತ್ - ಅಂದರೆ ಇವೇ ಮೊದಲಾದ ವಾಕ್ಯದ ಉಪದೇಶವಿರುವುದರಿಂದ ಎಂದು ಅರ್ಥ. ಇಲ್ಲಿ ಏಕವಚನವು ಸಮುದಾಯಾಭಿ-ಪ್ರಾಯವನ್ನು ಹೊಂದಿರುವುದು.

(೧) 'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ ಅನುವೃತ್ತಿಯನ್ನು ಪಡೆದಿರುವ.

(೨) 'ಇತ್ಯಾದೇಃ' ಎಂಬ ಷಷ್ಠೀವಿಭಕ್ತ್ಯಂತವಾದ ಪದದ ಷಷ್ಠೀವಿಭಕ್ತಿಯು ಲೋಪವಾಗಿ 'ಇತ್ಯಾದಿ' ಎಂದು ಪ್ರಯೋಗಿಸಲಾಗಿದೆ ಎಂದು ಅರ್ಥ.

(ಭಾ.ದೀ.) ಅನೇನ – **'ಅಂತಃಪ್ರವಿಷ್ಟಮ್'** ಇತಿ ವಾಕ್ಯೇ **'ಅಂತಃ ಶ್ರೂಯ-ಮಾಣಃ'** - 'ಹೃದಯಾಂತಸ್ಥತ್ವೇನ ಶ್ರುತ್ಯುಕ್ತಃ ವಿಷ್ಣುರೇವ, ನ ತ್ವನ್ಯಃ' । ಕುತಃ? ತಸ್ಯ

ವಿಷ್ಣೋರ್ಧರ್ಮಾಣಾಂ ಕ್ಷೀರಪ್ರಲಯಾಬ್ಧಿಸ್ಥತ್ವ-ಬ್ರಹ್ಮಜ್ಞೇಯತ್ವ-ಬ್ರಹ್ಮತಪೋಲಭ್ಯತ್ವ-ಬ್ರಹ್ಮಾಂಡವೀರ್ಯತ್ವಾದಿರೂಪಾಣಾಂ **ತಸ್ಮಿನ್** ಅಂತಃ ಶ್ರುತೇ **ತೇನ** ಅಂತರಿತ್ಯಾದಿನಾ **ಉಪದೇಶಾತ್** ಉಕ್ತತ್ವಾತ್'' ಇತಿ ಸೂತ್ರಾರ್ಥ ಉಕ್ತೋ ಭವತಿ।

'ಉಪದೇಶಾತ್' ಇತ್ಯಂತಸ್ಯ ಸೂತ್ರಸ್ಯ 'ತಸ್ಮಾದನ್ಯ ಏವ ಇತಿ ನ ಮಂತವ್ಯಮ್' ಇತ್ಯನೇನಾನ್ವಯಃ।

ಇದರಿಂದ - ಅಂತಃಪ್ರವಿಷ್ಟಮ್ ಎಂಬ ವಾಕ್ಯದಲ್ಲಿ ಅಂತಃ ಶ್ರೂಯಮಾಣಃ - ಹೃದಯದ ಒಳಗೆ ಇರುವವನೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುವವನು ವಿಷ್ಣುವೇ ಆಗಿದ್ದಾನೆ. ಅನ್ಯನಲ್ಲ. ಏಕೆಂದರೆ, (೧)ತಸ್ಯ - ಆ ವಿಷ್ಣುವಿನ, ಧರ್ಮಾಣಾಂ - ಕ್ಷೀರಾಬ್ಧಿಸ್ಥತ್ವ, ಪ್ರಲಯಾಬ್ಧಿಸ್ಥತ್ವ, ಬ್ರಹ್ಮಜ್ಞೇಯತ್ವ, ಬ್ರಹ್ಮತಪೋಲಭ್ಯತ್ವ, ಬ್ರಹ್ಮಾಂಡವೀರ್ಯತ್ವ ಮೊದಲಾದ ಧರ್ಮಗಳು, ತಸ್ಮಿನ್ - ಆ ಹೃದಯದ ಒಳಗೆ ಇರುವವನೆಂದು ಶ್ರುತನಾಗಿರುವವನಲ್ಲಿ, ತೇನ - ಅಂತಃಸಮುದ್ರೇ ಇತ್ಯಾದಿ ವಾಕ್ಯದಿಂದ, ಉಪದೇಶಾತ್ - ಹೇಳಲ್ಪಟ್ಟಿರುವುದರಿಂದ ಎಂಬುದಾಗಿ ಸೂತ್ರಾರ್ಥವು ಉಕ್ತವಾಗುವುದು.

(೧) ತದ್ಧರ್ಮೋಪದೇಶಾತ್ ಎಂಬ ಪದದಲ್ಲಿರುವ ತಚ್ಛಬ್ದವನ್ನು ಆವೃತ್ತಿ ಮಾಡಿಕೊಂಡು ತಸ್ಯ, ತಸ್ಮಿನ್, ತೇನ ಎಂದು ಬೇರೆ ಬೇರೆ ವಿಭಕ್ತಿಗಳನ್ನು ಯೋಜಿಸಿ ವ್ಯಾಖ್ಯಾನ ಮಾಡಲಾಗಿದೆ.

ಉಪದೇಶಾತ್ ಎಂದು ಕೊನೆಗೊಳ್ಳುವ ಸೂತ್ರಕ್ಕೆ (೧)ತಸ್ಮಾತ್ ಅನ್ಯ ಏವ ಇತಿ ನ ಮಂತವ್ಯಮ್ - ಆದ್ದರಿಂದ ಅಂತಃಸ್ಥನು ವಿಷ್ಣುವಿಗಿಂತ ಭಿನ್ನನೇ ಆಗಿದ್ದಾನೆ ಎಂದು ತಿಳಿಯತಕ್ಕದ್ದಲ್ಲ - ಎಂಬ ಭಾಷ್ಯವಾಕ್ಯದೊಂದಿಗೆ ಅನ್ವಯವಾಗುವುದು.

(೧) 'ತಸ್ಮಾತ್ ಸ ಏವಾನಂದಮಯ ಇತಿ ನ ಮಂತವ್ಯಮ್' ಎಂಬ ಭಾಷ್ಯವಾಕ್ಯದೊಂದಿಗೆ ಎಂದು ಭಾವ.

(ಭಾ.ದೀ.) ಬ್ರಹ್ಮಾ ವರ್ತಮಾನಚತುರ್ಮುಖಃ, **ಸಮುದ್ರೇ** = ಪ್ರಲಯಾಬ್ಧೌ ಕ್ಷೀರಾಬ್ಧೌ ಚ, **ಅಂತರರ್ಣೇ** = ಜಲೇ ಕ್ಷೀರೇ ಚ, **ಮನಸಾ** = ಸ್ವೇಚ್ಛಯಾ, ಸಂಚರಂತಂ

**ದಶಹೋತಾರಂ** = ಜ್ಞಾನಕರ್ಮಾಖ್ಯದಶೇಂದ್ರಿಯೇಷು ವಿಷಯಹೋತಾರಂ, ತತ್ತದ್ವಿಷಯಸ್ಥಾಪಕಂ, ದಶೇಂದ್ರಿಯಾಣಿ ಜೀವೇನ ವಿಷಯೇಷು ಜುಹ್ವತಂ ವಾ, ವಿಷ್ಣುಮ್, **ಅನ್ವವಿಂದತ್** - ವ್ಯಜಾನಾತ್ ।

**ಕವಯಃ** = ಜ್ಞಾನಿನಃ, **ಸಮುದ್ರೇ** = ಕ್ಷೀರಪ್ರಲಯಾಬ್ಧ್ಯೋಃ ಅಂತಃ ಸ್ಥಿತಂ ವಿಚಕ್ಷತೇ ಜಾನಂತಿ । **ವೇಧಸಃ** = ಭೂತಭವಿಷ್ಯದ್ಬ್ರಹ್ಮಾಣಃ, - 'ಮರೀಚಿರ್ಮಿತರುಕ್ತ್ವತಃ' ಇತಿ ಛಾಂದೋಗ್ಯಭಾಷ್ಯೋಕ್ತೇಃ । ಪ್ರಮಿತರುಕ್ತ್ವನಿಮಿತ್ತಾತ್ ಮರೀಚಿಪದೋಕ್ತಾನಾಂ ಜೀವಾನಾಂ **ಪದಮ್** = ಆಶ್ರಯಂ, ವಿಷ್ಣುಮ್ **ಇಚ್ಛಂತಿ** = ಪ್ರಾರ್ಥಯಂತಿ । ತತ್ತ್ವಪ್ರದೀಪರೀತ್ಯಾ – ''ಕವಯಃ ಸಂತಃ ವೇಧಸೋ ವಿಚಕ್ಷತೇ ವಿಚಕ್ಷಣಾಯ ಜ್ಞಾನಾಯ ಮರೀಚೀನಾಂ ಪದಂ ವಿಷ್ಣುಮ್ ಇಚ್ಛಂತಿ'' ಇತ್ಯೇಕಾನ್ವಯೋ ವಾ ।

ಕವಯಃ **ಅಂಡಕೋಶಂ** = ಬ್ರಹ್ಮಾಂಡಾಖ್ಯಸ್ಥಾನಂ **ಯಸ್ಯ** = ವಿಷ್ಣೋಃ , **ಶುಷ್ಮಂ** = ವೀರ್ಯಂ ತದುಪಾದಾನಕಮ್ ಆಹುಃ ಇತಿ ಶ್ರುತ್ಯರ್ಥಃ । ವಿರಿಂಚಿವಾಕ್ಯಸ್ಯಾಸ್ಯ 'ಪ್ರಾಣ ಉಲ್ಬಂ ತೇನ ಕ್ಲೃಪ್ತೋಽಮೃತೇನ ಅಹಮಸ್ಮಿ' ಇತಿ ವಾಕ್ಯಶೇಷಃ । ತಸ್ಯ ''**ಉಲ್ಬಂ** = ಜರಾಯುಃ, ಪ್ರಾಣಃ = ಅಂತಃಪ್ರಾವರಣಂ ಯೇನ ಸಹೈವ ಜಾಯತೇ ತೇನ ಅಮೃತೇನ **ಅಹಂ** ಕ್ಲೃಪ್ತೋಽಸ್ಮಿ'' ಇತಿ ಅರ್ಥಃ **ತತ್ತ್ವಪ್ರದೀಪೇ** ಅಭಿಹಿತಃ ॥

ಬ್ರಹ್ಮಾ – ವರ್ತಮಾನಕಾಲದಲ್ಲಿರುವ ಚತುರ್ಮುಖಬ್ರಹ್ಮನು, ಸಮುದ್ರೇ - ಪ್ರಲಯ ಸಮುದ್ರದಲ್ಲಿ, ಮತ್ತು ಕ್ಷೀರಸಮುದ್ರದಲ್ಲಿ ಅಂತರರ್ಣೇ - ಜಲದಲ್ಲಿ ಮತ್ತು ಕ್ಷೀರದಲ್ಲಿ, ಮನಸಾ ಚರಂತಂ - ಸ್ವೇಚ್ಛೆಯಿಂದ ಸಂಚರಿಸುವ, ದಶಹೋತಾರಂ - ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳೆಂಬ ಒಟ್ಟು ಹತ್ತು ಇಂದ್ರಿಯಗಳಲ್ಲಿ ವಿಷಯಪದಾರ್ಥಗಳನ್ನು ಹೋಮ ಮಾಡುವ ಅಂದರೆ, ಆಯಾಯಾ ವಿಷಯಸಂಬಂಧವನ್ನು ಕಲ್ಪಿಸುವ ಅಥವಾ ದಶೇಂದ್ರಿಯಗಳನ್ನು ಜೀವನ ದ್ವಾರಾ ವಿಷಯಪದಾರ್ಥಗಳಲ್ಲಿ ಹೋಮಿಸುವ ವಿಷ್ಣುವನ್ನು, ಅನ್ವವಿಂದತ್ = ತಿಳಿದನು.

**ಕವಯಃ** - ಜ್ಞಾನಿಗಳು, **ಸಮುದ್ರೇ** - ಕ್ಷೀರಾಬ್ಧಿ ಪ್ರಲಯಾಬ್ಧಿಗಳ ಒಳಗಿರುವವನನ್ನು, **ವಿಚಕ್ಷತೇ** - ತಿಳಿಯುವರು. **ವೇಧಸಃ** - ಹಿಂದೆ ಇದ್ದ, ಮುಂದೆ ಬರುವ ಬ್ರಹ್ಮರು, **ಮರೀಚೀನಾಂ** – 'ಮರೀಚಿಃ ಮಿತರುಕ್ತ್ವತಃ' ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿರುವಂತೆ ಪ್ರಮಾಣಸಿದ್ಧವಾದ ಪ್ರಕಾಶವನ್ನು ಪಡೆದಿರುವ ನಿಮಿತ್ತದಿಂದ ಮರೀಚಿ ಎಂಬ ಪದದಿಂದ ವಾಚ್ಯರಾದ ಜೀವರಿಗೆ, **ಪದಂ** - ಆಶ್ರಯನಾದ ವಿಷ್ಣುವನ್ನು, **ಇಚ್ಛಂತಿ** - ಪ್ರಾರ್ಥಿಸುವರು. ಅಥವಾ, ತತ್ವಪ್ರದೀಪಕ್ಕನುಸಾರವಾಗಿ, **ಕವಯಃ ಸಂತಃ ವೇಧಸಃ** - ಜ್ಞಾನಿಗಳಾದ ಬ್ರಹ್ಮರು, **ವಿಚಕ್ಷತೇ** = ವಿಚಕ್ಷಣಾಯ ಅಂದರೆ ವಿಶೇಷಜ್ಞಾನಕ್ಕೋಸ್ಕರವಾಗಿ, ಜೀವರಿಗೆ ಆಶ್ರಯನಾದ ವಿಷ್ಣುವನ್ನು ಪ್ರಾರ್ಥಿಸುವರು ಎಂದು ಒಂದೇ ವಾಕ್ಯವಾಗಿ ಅನ್ವಯವಾಗುವುದು.

**ಕವಯಃ** – ಜ್ಞಾನಿಗಳು, **ಅಂಡಕೋಶಂ** - ಬ್ರಹ್ಮಾಂಡವೆಂಬ ಸ್ಥಾನವನ್ನು, **ಯಸ್ಯ** - ಯಾವ ವಿಷ್ಣುವಿನ, **ಶುಷ್ಮಂ** - ವೀರ್ಯವೆಂದು, ಅಂದರೆ ಅದೇ ಉಪಾದಾನಕಾರಣವಾಗಿ ಉಳ್ಳದ್ದೆಂದು ಹೇಳುವರೋ ಎಂದು ಶ್ರುತಿಯ ಅರ್ಥ. ಬ್ರಹ್ಮದೇವರು ಹೇಳುವ ಈ ಶ್ರುತಿವಾಕ್ಯಕ್ಕೆ 'ಪ್ರಾಣ ಉಲ್ಬಂ ತೇನ ಕ್ಲೃಪ್ತೋಽಮೃತೇನಾಹಮಸ್ಮಿ' ಎಂಬ ಶ್ರುತಿಯು ಶೇಷವಾಗಿ ಅನ್ವಯವನ್ನು ಪಡೆದಿದೆ. [೧]ಆ ಬ್ರಹ್ಮಾಂಡಕೋಶಕ್ಕೆ **ಉಲ್ಬಂ** = ಜರಾಯು ಎಂದರೆ ಗರ್ಭದ ಹೊದಿಕೆಯ ಸ್ಥಾನದಲ್ಲಿರತಕ್ಕದ್ದು, **ಪ್ರಾಣಃ** - ಪ್ರಾಣತತ್ವವಾಗಿದೆ. ಪ್ರಾಣವು ಒಳಗಿನ ಆವರಣವಾಗಿದ್ದು, ಅದರೊಂದಿಗೆ ಬ್ರಹ್ಮಾಂಡಕೋಶವು ಹುಟ್ಟುವುದು. **ತೇನ ಅಮೃತೇನ** - ಆ ಅಮೃತನೆಂದೆನಿಸುವ ವಿಷ್ಣುವಿನಿಂದ, **ಅಹಂ ಕ್ಲೃಪ್ತೋಽಸ್ಮಿ** - ನಾನು ಸೃಷ್ಟಿಸಲ್ಪಟ್ಟಿದ್ದೇನೆ ಎಂಬ ಅರ್ಥವು ತತ್ವಪ್ರದೀಪದಲ್ಲಿ ಹೇಳಲ್ಪಟ್ಟಿದೆ.

[೧] "ಯಸ್ಯಾಂಡಕೋಶಂ ಶುಷ್ಮಮಾಹುಃ ಪ್ರಾಣಮುಲ್ಬಂ ತೇನ ಕ್ಲೃಪ್ತೋ ಅಮೃತೇನಾಹಮಸ್ಮಿ ಇತಿ ವಿರಿಂಚಿವಾಕ್ಯಮ್ । ಶುಷ್ಮಂ ವೀರ್ಯಂ; ಉಲ್ಬಂ – ಜರಾಯೋಃ ಅಂತಃಪ್ರಾವರಣಮ್, ಯೇನ ಸಹೈವ ಜಾಯತೇ" ಎಂದು ತತ್ವಪ್ರದೀಪದ ವಾಕ್ಯಗಳು. ಅದಕ್ಕನುಸಾರವಾಗಿ ಭಾಷ್ಯದೀಪಿಕೆಯಲ್ಲಿ ಮುದ್ರಿತ-ವಾದ ವಾಕ್ಯವನ್ನು ಅರ್ಥೈಸಬೇಕಾಗುವುದೆಂದು ತೋರುತ್ತದೆ.

**ದಶಹೋತಾರಂ** = ಜ್ಞಾನಕರ್ಮಾಖ್ಯದಶೇಂದ್ರಿಯೇಷು ವಿಷಯಹೋತಾರಂ, ತತ್ತದ್ವಿ-ಷಯಸ್ಥಾಪಕಂ, ದಶೇಂದ್ರಿಯಾಣಿ ಜೀವೇನ ವಿಷಯೇಷು ಜುಹ್ವತಂ ವಾ, ವಿಷ್ಣುಮ್, **ಅನ್ವವಿಂದತ್** - ವ್ಯಜಾನಾತ್ ।

**ಕವಯಃ** = ಜ್ಞಾನಿನಃ, **ಸಮುದ್ರೇ** = ಕ್ಷೀರಪ್ರಲಯಾಬ್ಧ್ಯೋಃ ಅಂತಃ ಸ್ಥಿತಂ ವಿಚಕ್ಷತೇ ಜಾನಂತಿ । **ವೇಧಸಃ** = ಭೂತಭವಿಷ್ಯದ್ಬ್ರಹ್ಮಾಣಃ, - 'ಮರೀಚಿರ್ಮಿತ-ರುಕ್ತ್ವತಃ' ಇತಿ ಛಾಂದೋಗ್ಯಭಾಷ್ಯೋಕ್ತೇಃ । ಪ್ರಮಿತರುಕ್ತ್ವನಿಮಿತ್ತಾತ್ ಮರೀಚಿ-ಪದೋಕ್ತಾನಾಂ ಜೀವಾನಾಂ **ಪದಮ್** = ಆಶ್ರಯಂ, ವಿಷ್ಣುಮ್ **ಇಚ್ಛಂತಿ** = ಪ್ರಾರ್ಥಯಂತಿ । ತತ್ತ್ವಪ್ರದೀಪರೀತ್ಯಾ – ''ಕವಯಃ ಸಂತಃ ವೇಧಸೋ ವಿಚಕ್ಷತೇ ವಿಚಕ್ಷಣಾಯ ಜ್ಞಾನಾಯ ಮರೀಚೀನಾಂ ಪದಂ ವಿಷ್ಣುಮ್ ಇಚ್ಛಂತಿ'' ಇತ್ಯೇಕಾ-ನ್ವಯೋ ವಾ ।

ಕವಯಃ **ಅಂಡಕೋಶಂ** = ಬ್ರಹ್ಮಾಂಡಾಖ್ಯಸ್ಥಾನಂ **ಯಸ್ಯ** = ವಿಷ್ಣೋಃ , **ಶುಷ್ಮಂ** = ವೀರ್ಯಂ ತದುಪಾದಾನಕಮ್ ಆಹುಃ ಇತಿ ಶ್ರುತ್ಯರ್ಥಃ । ವಿರಿಂಚಿವಾಕ್ಯಸ್ಯಾಸ್ಯ 'ಪ್ರಾಣ ಉಲ್ಬಂ ತೇನ ಕ್ಲೃಪ್ತೋಽಮೃತೇನ ಅಹಮಸ್ಮಿ' ಇತಿ ವಾಕ್ಯಶೇಷಃ । ತಸ್ಯ ''**ಉಲ್ಬಂ** = ಜರಾಯುಃ, **ಪ್ರಾಣಃ** = ಅಂತಃಪ್ರಾವರಣಂ ಯೇನ ಸಹೈವ ಜಾಯತೇ **ತೇನ ಅಮೃತೇನ ಅಹಂ ಕ್ಲೃಪ್ತೋಽಸ್ಮಿ**'' ಇತಿ ಅರ್ಥಃ **ತತ್ತ್ವಪ್ರದೀಪೇ** ಅಭಿಹಿತಃ ॥

ಬ್ರಹ್ಮಾ – ವರ್ತಮಾನಕಾಲದಲ್ಲಿರುವ ಚತುರ್ಮುಖಬ್ರಹ್ಮನು, ಸಮುದ್ರೇ - ಪ್ರಲಯ ಸಮುದ್ರದಲ್ಲಿ, ಮತ್ತು ಕ್ಷೀರಸಮುದ್ರದಲ್ಲಿ ಅಂತರರ್ಣೇ - ಜಲದಲ್ಲಿ ಮತ್ತು ಕ್ಷೀರದಲ್ಲಿ, ಮನಸಾ ಚರಂತಂ - ಸ್ವೇಚ್ಛೆಯಿಂದ ಸಂಚರಿಸುವ, ದಶಹೋತಾರಂ - ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳೆಂಬ ಒಟ್ಟು ಹತ್ತು ಇಂದ್ರಿಯಗಳಲ್ಲಿ ವಿಷಯ-ಪದಾರ್ಥಗಳನ್ನು ಹೋಮ ಮಾಡುವ ಅಂದರೆ, ಆಯಾಯಾ ವಿಷಯಸಂಬಂಧವನ್ನು ಕಲ್ಪಿಸುವ ಅಥವಾ ದಶೇಂದ್ರಿಯಗಳನ್ನು ಜೀವನ ದ್ವಾರಾ ವಿಷಯಪದಾರ್ಥಗಳಲ್ಲಿ ಹೋಮಿಸುವ ವಿಷ್ಣುವನ್ನು, ಅನ್ವವಿಂದತ್ = ತಿಳಿದನು.

**ಕವಯಃ** - ಜ್ಞಾನಿಗಳು, **ಸಮುದ್ರೇ** - ಕ್ಷೀರಾಬ್ಧಿ ಪ್ರಲಯಾಬ್ಧಿಗಳ ಒಳಗಿರುವ-ವನನ್ನು, **ವಿಚಕ್ಷತೇ** - ತಿಳಿಯುವರು. **ವೇಧಸಃ** - ಹಿಂದೆ ಇದ್ದ, ಮುಂದೆ ಬರುವ ಬ್ರಹ್ಮರು, **ಮರೀಚೀನಾಂ** – 'ಮರೀಚಿಃ ಮಿತರುಕ್ತ್ವತಃ' ಎಂದು ಛಾಂದೋಗ್ಯಭಾಷ್ಯ-ದಲ್ಲಿ ಹೇಳಿರುವಂತೆ ಪ್ರಮಾಣಸಿದ್ಧವಾದ ಪ್ರಕಾಶವನ್ನು ಪಡೆದಿರುವ ನಿಮಿತ್ತದಿಂದ ಮರೀಚಿ ಎಂಬ ಪದದಿಂದ ವಾಚ್ಯರಾದ ಜೀವರಿಗೆ, **ಪದಂ** - ಆಶ್ರಯನಾದ ವಿಷ್ಣು-ವನ್ನು, **ಇಚ್ಛಂತಿ** - ಪ್ರಾರ್ಥಿಸುವರು. ಅಥವಾ, ತತ್ವಪ್ರದೀಪಕ್ಕನುಸಾರವಾಗಿ, **ಕವಯಃ ಸಂತಃ ವೇಧಸಃ** - ಜ್ಞಾನಿಗಳಾದ ಬ್ರಹ್ಮರು, **ವಿಚಕ್ಷತೇ** = ವಿಚಕ್ಷಣಾಯ ಅಂದರೆ ವಿಶೇಷಜ್ಞಾನಕ್ಕೋಸ್ಕರವಾಗಿ, ಜೀವರಿಗೆ ಆಶ್ರಯನಾದ ವಿಷ್ಣುವನ್ನು ಪ್ರಾರ್ಥಿಸುವರು ಎಂದು ಒಂದೇ ವಾಕ್ಯವಾಗಿ ಅನ್ವಯವಾಗುವುದು.

**ಕವಯಃ** – ಜ್ಞಾನಿಗಳು, **ಅಂಡಕೋಶಂ** - ಬ್ರಹ್ಮಾಂಡವೆಂಬ ಸ್ಥಾನವನ್ನು, **ಯಸ್ಯ** - ಯಾವ ವಿಷ್ಣುವಿನ, **ಶುಷ್ಮಂ** - ವೀರ್ಯವೆಂದು, ಅಂದರೆ ಅದೇ ಉಪಾದಾನ-ಕಾರಣವಾಗಿ ಉಳ್ಳದ್ದೆಂದು ಹೇಳುವರೋ ಎಂದು ಶ್ರುತಿಯ ಅರ್ಥ. ಬ್ರಹ್ಮದೇವರು ಹೇಳುವ ಈ ಶ್ರುತಿವಾಕ್ಯಕ್ಕೆ 'ಪ್ರಾಣ ಉಲ್ಬಂ ತೇನ ಕ್ಲೃಪ್ತೋಽಮೃತೇನಾಹಮಸ್ಮಿ' ಎಂಬ ಶ್ರುತಿಯು ಶೇಷವಾಗಿ ಅನ್ವಯವನ್ನು ಪಡೆದಿದೆ. (೧)ಆ ಬ್ರಹ್ಮಾಂಡಕೋಶಕ್ಕೆ **ಉಲ್ಬಂ** = ಜರಾಯು ಎಂದರೆ ಗರ್ಭದ ಹೊದಿಕೆಯ ಸ್ಥಾನದಲ್ಲಿರತಕ್ಕದ್ದು, **ಪ್ರಾಣಃ** - ಪ್ರಾಣತತ್ವವಾಗಿದೆ. ಪ್ರಾಣವು ಒಳಗಿನ ಆವರಣವಾಗಿದ್ದು, ಅದರೊಂದಿಗೆ ಬ್ರಹ್ಮಾಂಡ-ಕೋಶವು ಹುಟ್ಟುವುದು. **ತೇನ ಅಮೃತೇನ** - ಆ ಅಮೃತನೆಂದೆನಿಸುವ ವಿಷ್ಣುವಿನಿಂದ, **ಅಹಂ ಕ್ಲೃಪ್ತೋಽಸ್ಮಿ** - ನಾನು ಸೃಷ್ಟಿಸಲ್ಪಟ್ಟದ್ದೇನೆ ಎಂಬ ಅರ್ಥವು ತತ್ವಪ್ರದೀಪದಲ್ಲಿ ಹೇಳಲ್ಪಟ್ಟಿದೆ.

(೧) "ಯಸ್ಯಾಂಡಕೋಶಂ ಶುಷ್ಮಮಾಹುಃ ಪ್ರಾಣಮುಲ್ಬಂ ತೇನ ಕ್ಲೃಪ್ತೋ ಅಮೃತೇನಾಹಮಸ್ಮಿ ಇತಿ ವಿರಿಂಚಿವಾಕ್ಯಮ್ । ಶುಷ್ಮಂ ವೀರ್ಯಂ; ಉಲ್ಬಂ – ಜರಾಯೋಃ ಅಂತಃಪ್ರಾವರಣಮ್, ಯೇನ ಸಹೈವ ಜಾಯತೇ" ಎಂದು ತತ್ವಪ್ರದೀಪದ ವಾಕ್ಯಗಳು. ಅದಕ್ಕನುಸಾರವಾಗಿ ಭಾಷ್ಯದೀಪಿಕೆಯಲ್ಲಿ ಮುದ್ರಿತ-ವಾದ ವಾಕ್ಯವನ್ನು ಅರ್ಥೈಸಬೇಕಾಗುವುದೆಂದು ತೋರುತ್ತದೆ.

**ಭಾ– ಸ ಹಿ ಕ್ಷೀರಸಮುದ್ರಶಾಯೀ। ತಸ್ಯ ಚ ವೀರ್ಯಮಂಡಕೋಶಃ।**

ಆ ವಿಷ್ಣುವೇ ಕ್ಷೀರಸಮುದ್ರಶಾಯಿ ಎಂದು ಪ್ರಸಿದ್ಧನಾಗಿದ್ದಾನೆ. ಬ್ರಹ್ಮಾಂಡವು ವಿಷ್ಣುವಿನ ವೀರ್ಯವೇ ಆಗಿದೆ.

(ಭಾ.ದೀ.) ಕ್ಷೀರಸಮುದ್ರಸ್ಥತ್ವಸ್ಯ ವಿಷ್ಣುಲಿಂಗತ್ವಂ ಕುತಃ? ಇತ್ಯತ ಆಹ – **ಸ ಹಿ ಇತಿ ॥ ಸಃ** ವಿಷ್ಣುಃ। ಹಿಶಬ್ದೇನ ಲೋಕಪ್ರಸಿದ್ಧತ್ವಾತ್ ಇತಿ ಹೇತುಃ ಸೂಚಿತಃ। ಅಸ್ತು ವಿಷ್ಣೋಃ ಕ್ಷೀರಾಬ್ಧಿಸ್ಥತ್ವಂ ಲಿಂಗಮ್, ಪ್ರಸಿದ್ಧತ್ವಾತ್, ತಥಾಽಪಿ ಪ್ರಲಯಾರ್ಣವಸ್ಥತ್ವಸ್ಯ ಬ್ರಹ್ಮಾಂಡವೀರ್ಯತ್ವಸ್ಯ ಚ ಕುತೋ ವಿಷ್ಣುಧರ್ಮತ್ವಮ್? ಇತ್ಯತಃ, ತಯೋಃ ವಿಷ್ಣುಧರ್ಮತ್ವೇ ಪ್ರಮಾಣಂ ವಕ್ತುಂ ಪ್ರತಿಜಾನೀತೇ – **ತಸ್ಯೇತಿ ॥ 'ಅಂಡಕೋಶಃ** ಬ್ರಹ್ಮಾಂಡಾಖ್ಯಸ್ಥಾನಂ **ತಸ್ಯ** ವಿಷ್ಣೋಃ ವೀರ್ಯಮ್' ಇತ್ಯರ್ಥಃ। '**ಚ**'ಶಬ್ದಾತ್ 'ಸಃ ಪ್ರಲಯಸಮುದ್ರಶಾಯೀ' ಇತಿ ಪ್ರತಿಜ್ಞಾ ಸೂಚ್ಯತೇ। 'ತಸ್ಯೈವ' ಇತ್ಯವಧಾರಣೇ ವಾ '**ಚ**'ಶಬ್ದಃ। ತಥಾತ್ವೇ ಪ್ರತಿಜ್ಞಾಂತರಮುಪಲಕ್ಷಣೀಯಮ್। ಅತ ಏವ ಪ್ರಲಯಾಬ್ಧಿಶಾಯಿತ್ವೇ 'ಆಪೋ ನಾರಾಃ' ಇತಿ ಪಶ್ಚಾತ್ ಪ್ರಮಾಣೋಪನ್ಯಾಸಃ; ಶ್ರುತೌ ಅಂಡಕೋಶಶಬ್ದಶ್ರವಣೇಽಪಿ ಪ್ರತ್ಯಯಸ್ಯ ಸ್ವಾರ್ಥಿಕತ್ವಾದ್, ತತ್ತ್ಯಾಗೇನಾಂಡಕೋಶ ಇತ್ಯೇವಾನೂದಿತಮ್। ಶ್ರುತಾವಪಿ ತಥೈವ ಛೇದೋ ವಾ।

ಕ್ಷೀರಸಮುದ್ರದಲ್ಲಿರುವಿಕೆಯು ವಿಷ್ಣುವಿನ ಧರ್ಮವಾಗಿದೆ ಎಂಬ ವಿಷಯದಲ್ಲಿ ಆಧಾರವೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ಸ ಹಿ' ಎಂದು ಹೇಳಲಾಗಿದೆ. ಸಃ - ಅಂದರೆ ವಿಷ್ಣು ಎಂದರ್ಥ. ಹಿ ಶಬ್ದದಿಂದ ಲೋಕಪ್ರಸಿದ್ಧಿ ಎಂಬ ಹೇತುವು ಸೂಚಿತವಾಗಿದೆ(1). ಕ್ಷೀರಸಮುದ್ರದಲ್ಲಿರುವಿಕೆಯು ಹಾಗೆ ಲೋಕಪ್ರಸಿದ್ಧಿ ಇರುವುದರಿಂದ ವಿಷ್ಣುವಿನ ಅಸಾಧಾರಣಧರ್ಮವಾಗಿರಬಹುದು, ಆದರೆ ಪ್ರಲಯ ಸಮುದ್ರದಲ್ಲಿರುವಿಕೆ ಮತ್ತು ಬ್ರಹ್ಮಾಂಡದ ವೀರ್ಯವನ್ನು ಹೊಂದಿರುವಿಕೆ ಇವುಗಳು ವಿಷ್ಣುವಿನ ಧರ್ಮವಾಗಿವೆ ಎಂಬ ವಿಷಯದಲ್ಲಿ ಪ್ರಮಾಣವೇನು? ಎಂಬ ಶಂಕೆಗೆ ಉತ್ತರವಾಗಿ ಅವುಗಳು ವಿಷ್ಣುಧರ್ಮವಾಗಿವೆ ಎಂಬ ವಿಷಯದಲ್ಲಿ ಪ್ರಮಾಣವನ್ನು ಹೇಳಲು ತಸ್ಯ ಎಂದು ಪ್ರತಿಜ್ಞೆ ಮಾಡುತ್ತಿದ್ದಾರೆ. ಅಂಡಕೋಶಃ – ಬ್ರಹ್ಮಾಂಡವೆಂಬ ಸ್ಥಾನವು, ತಸ್ಯ – ಆ ವಿಷ್ಣುವಿನ ವೀರ್ಯವಾಗಿದೆ ಎಂದು ಅರ್ಥ. ಚಶಬ್ದದಿಂದ ಆ ವಿಷ್ಣುವು ಪ್ರಲಯ-

ಸಮುದ್ರಶಾಯಿಯೂ ಆಗಿದ್ದಾನೆ ಎಂಬ ಪ್ರತಿಜ್ಞೆಯು ಸೂಚಿತವಾಗುವುದು. ಅಥವಾ [೨]ಚಶಬ್ದವು ತಸ್ಯೈವ- ವಿಷ್ಣುವಿನದ್ದೇ ಎಂಬುದಾಗಿ ಅವಧಾರಣವನ್ನು ಹೇಳುವುದು. ಹಾಗೆ ವ್ಯಾಖ್ಯಾನ ಮಾಡಿದ ಪಕ್ಷದಲ್ಲಿ ಮತ್ತೊಂದು ಪ್ರತಿಜ್ಞೆ ಇಲ್ಲಿ ಉಪಲಕ್ಷಣವಾಗಿದೆ ಎಂದು ಭಾವಿಸಬೇಕು. ಆದ್ದರಿಂದಲೇ ವಿಷ್ಣುವು ಪ್ರಲಯಾಬ್ಧಿಶಾಯಿಯಾಗಿರುವನು[೩] ಎಂಬ ವಿಷಯದಲ್ಲಿ 'ಆಪೋ ನಾರಾಃ' ಎಂಬ ಪ್ರಮಾಣವನ್ನು ಅನಂತರ ಉದಾಹರಿಸ-ಲಾಗಿದೆ. ಶ್ರುತಿಯಲ್ಲಿ ಆಂಡಕೋಶ ಎಂಬ ಶಬ್ದವು ಶ್ರುತವಾಗಿದ್ದರೂ ಅಲ್ಲಿರುವ ಪ್ರತ್ಯಯವು[೪] ಪ್ರಕೃತಿಯ ಅರ್ಥವನ್ನೇ ಹೇಳುವುದರಿಂದ ಭಾಷ್ಯದಲ್ಲಿ ಆ ಶಬ್ದವನ್ನು ಬಿಟ್ಟು, ಅಂಡಕೋಶ ಎಂಬುದಾಗಿಯೇ ಅನುವಾದ ಮಾಡಲಾಗಿದೆ. ಅಥವಾ ಶ್ರುತಿ-ಯಲ್ಲೂ ಹಾಗೆಯೇ (ಯಸ್ಯ ಅಂಡಕೋಶಂ) ಎಂಬುದಾಗಿಯೇ ಪದಚ್ಛೇದವಿದೆ.

(೧) ಕ್ಷೀರಸಮುದ್ರಸ್ಥತ್ವವು ವಿಷ್ಣುವಿನ ಅಸಾಧಾರಣಧರ್ಮ ಎನ್ನುವುದರಲ್ಲಿ ಲೋಕಪ್ರಸಿದ್ಧಿಯೇ ಹೇತುವೆಂದು ಭಾವ.

(೨) ಚಶಬ್ದವು ಸಮುಚ್ಚಯಾರ್ಥವೆಂದು ಹೇಳಿದ ಪಕ್ಷದಲ್ಲಿ 'ಬ್ರಹ್ಮಾಂಡವು ವಿಷ್ಣುವಿನ ವೀರ್ಯವಾಗಿದೆ' ಎಂಬ ಪ್ರತಿಜ್ಞೆಯಂತೆ 'ವಿಷ್ಣುವು ಪ್ರಲಯ–ಸಮುದ್ರಶಾಯೀ' ಎಂಬ ಪ್ರತಿಜ್ಞೆಯೂ ಚಶಬ್ದದಿಂದ ಲಬ್ಧವಾಗುವುದು. ಚಶಬ್ದವು ಅವಧಾರಣಾರ್ಥವೆಂದು ಹೇಳಿದ ಪಕ್ಷದಲ್ಲಿ ಆ ಪ್ರತಿಜ್ಞೆಯು ಚಶಬ್ದ–ದಿಂದ ಲಬ್ಧವಾಗದಿರುವುದರಿಂದ ಉಪಲಕ್ಷಣಯಾ ಲಭಿಸುವುದೆಂದು ಭಾವ.

(೩) ವಿಷ್ಣುವು ಪ್ರಲಯಸಮುದ್ರಶಾಯಿಯಾಗಿರುವನು ಎಂಬ ಪ್ರತಿಜ್ಞೆಯೂ ಇಲ್ಲಿ ವಿವಕ್ಷಿತವಾಗಿರುವುದರಿಂದಲೇ ಎಂದು ಭಾವ.

(೪) 'ಆಂಡಕೋಶಂ' ಎಂಬ ಪದಕ್ಕೆ 'ಅಂಡಕೋಶಸ್ಯ ಇದಮ್' ಎಂದು ವಿಗ್ರಹ. 'ಅಂಡಕೋಶಕ್ಕೆ ಸಂಬಂಧಿಸಿರುವುದು' ಎಂದು ವಿಗ್ರಹವಾಕ್ಯದ ಅರ್ಥ. ಈ ಅರ್ಥದಲ್ಲಿ, ಅಂಡಕೋಶಶಬ್ದಕ್ಕೆ 'ಅಣ್'ಪ್ರತ್ಯಯವು ಸೇರಿದಾಗ ಆಂಡಕೋಶಂ ಎಂದು ರೂಪವಾಗುವುದು. ವಿಷ್ಣುವಿನ ವೀರ್ಯವೇ ಅಂಡಕೋಶವಾಗಿರು–ವುದರಿಂದ ಅಂಡಕೋಶಕ್ಕೆ ಸಂಬಂಧಿಸಿರುವುದು ವಿಷ್ಣುವಿನ ವೀರ್ಯ ಎಂದು ಹೇಳಲಾಗದು. ಆದ್ದರಿಂದ ಇಲ್ಲಿರುವ ಅಣ್‌ಪ್ರತ್ಯಯವು ಸಂಬಂಧಿ ಎಂಬ ಅರ್ಥವುಳ್ಳದ್ದು ಎಂದು ಹೇಳದೇ ಪ್ರಕೃತ್ಯರ್ಥಕ್ಕಿಂತ ಭಿನ್ನವಾದ ಅರ್ಥವುಳ್ಳದ್ದಲ್ಲ ಎಂದು ಭಾವಿಸಬೇಕೆಂದು ಭಾವ.

**ಭಾ– ಸ ಹಿ ಕ್ಷೀರಸಮುದ್ರಶಾಯೀ । ತಸ್ಯ ಚ ವೀರ್ಯಮಂಡಕೋಶಃ ।**

ಆ ವಿಷ್ಣುವೇ ಕ್ಷೀರಸಮುದ್ರಶಾಯಿ ಎಂದು ಪ್ರಸಿದ್ಧನಾಗಿದ್ದಾನೆ. ಬ್ರಹ್ಮಾಂಡವು ವಿಷ್ಣುವಿನ ವೀರ್ಯವೇ ಆಗಿದೆ.

**(ಭಾ.ದೀ.)** ಕ್ಷೀರಸಮುದ್ರಸ್ಥತ್ವಸ್ಯ ವಿಷ್ಣುಲಿಂಗತ್ವಂ ಕುತಃ? ಇತ್ಯತ ಆಹ – **ಸ ಹಿ ಇತಿ ॥ ಸಃ** ವಿಷ್ಣುಃ । ಹಿಶಬ್ದೇನ ಲೋಕಪ್ರಸಿದ್ಧತ್ವಾತ್ ಇತಿ ಹೇತುಃ ಸೂಚಿತಃ । ಅಸ್ತು ವಿಷ್ಣೋಃ ಕ್ಷೀರಾಬ್ಧಿಸ್ಥತ್ವಂ ಲಿಂಗಮ್, ಪ್ರಸಿದ್ಧತ್ವಾತ್, ತಥಾಽಪಿ ಪ್ರಲಯಾರ್ಣವಸ್ಥತ್ವಸ್ಯ ಬ್ರಹ್ಮಾಂಡವೀರ್ಯತ್ವಸ್ಯ ಚ ಕುತೋ ವಿಷ್ಣುಧರ್ಮತ್ವಮ್? ಇತ್ಯತಃ, ತಯೋಃ ವಿಷ್ಣುಧರ್ಮತ್ವೇ ಪ್ರಮಾಣಂ ವಕ್ತುಂ ಪ್ರತಿಜಾನೀತೇ – **ತಸ್ಯೇತಿ ॥ 'ಅಂಡಕೋಶಃ** ಬ್ರಹ್ಮಾಂಡಾಖ್ಯಸ್ಥಾನಂ **ತಸ್ಯ** ವಿಷ್ಣೋಃ ವೀರ್ಯಮ್' ಇತ್ಯರ್ಥಃ । '**ಚ**'ಶಬ್ದಾತ್ 'ಸಃ ಪ್ರಲಯಸಮುದ್ರಶಾಯೀ' ಇತಿ ಪ್ರತಿಜ್ಞಾ ಸೂಚ್ಯತೇ । 'ತಸ್ಯೈವ' ಇತ್ಯವಧಾರಣೇ ವಾ '**ಚ**'ಶಬ್ದಃ । ತಥಾತ್ವೇ ಪ್ರತಿಜ್ಞಾಂತರಮುಪಲಕ್ಷಣೀಯಮ್ । ಅತ ಏವ ಪ್ರಲಯಾಬ್ಧಿಶಾಯಿತ್ವೇ 'ಆಪೋ ನಾರಾಃ' ಇತಿ ಪಶ್ಚಾತ್ ಪ್ರಮಾಣೋಪನ್ಯಾಸಃ; ಶ್ರುತೌ ಅಂಡಕೋಶಶಬ್ದಶ್ರವಣೇಽಪಿ ಪ್ರತ್ಯಯಸ್ಯ ಸ್ವಾರ್ಥಿಕತ್ವಾದ್, ತತ್ತ್ಯಾಗೇನಾಂಡಕೋಶ ಇತ್ಯೇವಾನೂದಿತಮ್ । ಶ್ರುತಾವಪಿ ತಥೈವ ಭೇದೋ ವಾ ।

ಕ್ಷೀರಸಮುದ್ರದಲ್ಲಿರುವಿಕೆಯು ವಿಷ್ಣುವಿನ ಧರ್ಮವಾಗಿದೆ ಎಂಬ ವಿಷಯದಲ್ಲಿ ಆಧಾರವೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ಸ ಹಿ' ಎಂದು ಹೇಳಲಾಗಿದೆ. ಸಃ - ಅಂದರೆ ವಿಷ್ಣು ಎಂದರ್ಥ. ಹಿ ಶಬ್ದದಿಂದ ಲೋಕಪ್ರಸಿದ್ಧಿ ಎಂಬ ಹೇತುವು ಸೂಚಿತವಾಗಿದೆ[1]. ಕ್ಷೀರಸಮುದ್ರದಲ್ಲಿರುವಿಕೆಯು ಹಾಗೆ ಲೋಕಪ್ರಸಿದ್ಧಿ ಇರುವುದರಿಂದ ವಿಷ್ಣುವಿನ ಅಸಾಧಾರಣಧರ್ಮವಾಗಿರಬಹುದು, ಆದರೆ ಪ್ರಲಯ ಸಮುದ್ರದಲ್ಲಿರುವಿಕೆ ಮತ್ತು ಬ್ರಹ್ಮಾಂಡದ ವೀರ್ಯವನ್ನು ಹೊಂದಿರುವಿಕೆ ಇವುಗಳು ವಿಷ್ಣುವಿನ ಧರ್ಮವಾಗಿವೆ ಎಂಬ ವಿಷಯದಲ್ಲಿ ಪ್ರಮಾಣವೇನು? ಎಂಬ ಶಂಕೆಗೆ ಉತ್ತರವಾಗಿ ಅವುಗಳು ವಿಷ್ಣುಧರ್ಮವಾಗಿವೆ ಎಂಬ ವಿಷಯದಲ್ಲಿ ಪ್ರಮಾಣವನ್ನು ಹೇಳಲು ತಸ್ಯ ಎಂದು ಪ್ರತಿಜ್ಞೆ ಮಾಡುತ್ತಿದ್ದಾರೆ. ಅಂಡಕೋಶಃ – ಬ್ರಹ್ಮಾಂಡವೆಂಬ ಸ್ಥಾನವು, ತಸ್ಯ – ಆ ವಿಷ್ಣುವಿನ ವೀರ್ಯವಾಗಿದೆ ಎಂದು ಅರ್ಥ. ಚಶಬ್ದದಿಂದ ಆ ವಿಷ್ಣುವು ಪ್ರಲಯ-

ಸಮುದ್ರಶಾಯಿಯೂ ಆಗಿದ್ದಾನೆ ಎಂಬ ಪ್ರತಿಜ್ಞೆಯು ಸೂಚಿತವಾಗುವುದು. ಅಥವಾ [೨]ಚಶಬ್ದವು ತಸ್ಯೈವ- ವಿಷ್ಣುವಿನದ್ದೇ ಎಂಬುದಾಗಿ ಅವಧಾರಣವನ್ನು ಹೇಳುವುದು. ಹಾಗೆ ವ್ಯಾಖ್ಯಾನ ಮಾಡಿದ ಪಕ್ಷದಲ್ಲಿ ಮತ್ತೊಂದು ಪ್ರತಿಜ್ಞೆ ಇಲ್ಲಿ ಉಪಲಕ್ಷಣವಾಗಿದೆ ಎಂದು ಭಾವಿಸಬೇಕು. ಆದ್ದರಿಂದಲೇ ವಿಷ್ಣುವು ಪ್ರಲಯಾಬ್ಧಿಶಾಯಿಯಾಗಿರುವನು[೩] ಎಂಬ ವಿಷಯದಲ್ಲಿ 'ಆಪೋ ನಾರಾಃ' ಎಂಬ ಪ್ರಮಾಣವನ್ನು ಅನಂತರ ಉದಾಹರಿಸ-ಲಾಗಿದೆ. ಶ್ರುತಿಯಲ್ಲಿ ಆಂಡಕೋಶ ಎಂಬ ಶಬ್ದವು ಶ್ರುತವಾಗಿದ್ದರೂ ಅಲ್ಲಿರುವ ಪ್ರತ್ಯಯವು[೪] ಪ್ರಕೃತಿಯ ಅರ್ಥವನ್ನೇ ಹೇಳುವುದರಿಂದ ಭಾಷ್ಯದಲ್ಲಿ ಆ ಶಬ್ದವನ್ನು ಬಿಟ್ಟು, ಅಂಡಕೋಶ ಎಂಬುದಾಗಿಯೇ ಅನುವಾದ ಮಾಡಲಾಗಿದೆ. ಅಥವಾ ಶ್ರುತಿ-ಯಲ್ಲೂ ಹಾಗೆಯೇ (ಯಸ್ಯ ಅಂಡಕೋಶಂ) ಎಂಬುದಾಗಿಯೇ ಪದಚ್ಛೇದವಿದೆ.

(೧) ಕ್ಷೀರಸಮುದ್ರಸ್ಥತ್ವವು ವಿಷ್ಣುವಿನ ಅಸಾಧಾರಣಧರ್ಮ ಎನ್ನುವುದರಲ್ಲಿ ಲೋಕಪ್ರಸಿದ್ಧಿಯೇ ಹೇತುವೆಂದು ಭಾವ.

(೨) ಚಶಬ್ದವು ಸಮುಚ್ಚಯಾರ್ಥವೆಂದು ಹೇಳಿದ ಪಕ್ಷದಲ್ಲಿ 'ಬ್ರಹ್ಮಾಂಡವು ವಿಷ್ಣುವಿನ ವೀರ್ಯವಾಗಿದೆ' ಎಂಬ ಪ್ರತಿಜ್ಞೆಯಂತೆ 'ವಿಷ್ಣುವು ಪ್ರಲಯ-ಸಮುದ್ರಶಾಯೀ' ಎಂಬ ಪ್ರತಿಜ್ಞೆಯೂ ಚಶಬ್ದದಿಂದ ಲಬ್ಧವಾಗುವುದು. ಚಶಬ್ದವು ಅವಧಾರಣಾರ್ಥವೆಂದು ಹೇಳಿದ ಪಕ್ಷದಲ್ಲಿ ಆ ಪ್ರತಿಜ್ಞೆಯು ಚಶಬ್ದ-ದಿಂದ ಲಬ್ಧವಾಗದಿರುವುದರಿಂದ ಉಪಲಕ್ಷಣಯಾ ಲಭಿಸುವುದೆಂದು ಭಾವ.

(೩) ವಿಷ್ಣುವು ಪ್ರಲಯಸಮುದ್ರಶಾಯಿಯಾಗಿರುವನು ಎಂಬ ಪ್ರತಿಜ್ಞೆಯೂ ಇಲ್ಲಿ ವಿವಕ್ಷಿತವಾಗಿರುವುದರಿಂದಲೇ ಎಂದು ಭಾವ.

(೪) 'ಆಂಡಕೋಶಂ' ಎಂಬ ಪದಕ್ಕೆ 'ಅಂಡಕೋಶಸ್ಯ ಇದಮ್' ಎಂದು ವಿಗ್ರಹ. 'ಅಂಡಕೋಶಕ್ಕೆ ಸಂಬಂಧಿಸಿರುವುದು' ಎಂದು ವಿಗ್ರಹವಾಕ್ಯದ ಅರ್ಥ. ಈ ಅರ್ಥದಲ್ಲಿ, ಅಂಡಕೋಶಶಬ್ದಕ್ಕೆ 'ಅಣ್'ಪ್ರತ್ಯಯವು ಸೇರಿದಾಗ ಆಂಡಕೋಶಂ ಎಂದು ರೂಪವಾಗುವುದು. ವಿಷ್ಣುವಿನ ವೀರ್ಯವೇ ಅಂಡಕೋಶವಾಗಿರು-ವುದರಿಂದ ಅಂಡಕೋಶಕ್ಕೆ ಸಂಬಂಧಿಸಿರುವುದು ವಿಷ್ಣುವಿನ ವೀರ್ಯ ಎಂದು ಹೇಳಲಾಗದು. ಆದ್ದರಿಂದ ಇಲ್ಲಿರುವ ಅಣ್‌ಪ್ರತ್ಯಯವು ಸಂಬಂಧಿ ಎಂಬ ಅರ್ಥವುಳ್ಳದ್ದು ಎಂದು ಹೇಳದೇ ಪ್ರಕೃತ್ಯರ್ಥಕ್ಕಿಂತ ಭಿನ್ನವಾದ ಅರ್ಥವುಳ್ಳದ್ದಲ್ಲ ಎಂದು ಭಾವಿಸಬೇಕೆಂದು ಭಾವ.

ಭಾ– 'ಸೋಽಭಿಧ್ಯಾಯ ಶರೀರಾತ್ ಸ್ವಾತ್ ಸಿಸೃಕ್ಷುರ್ವಿವಿಧಾಃ ಪ್ರಜಾಃ।
ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ॥
ತದಂಡಮಭವದ್ಧೈಮಂ ಸಹಸ್ರಾಂಶುಸಮಪ್ರಭಮ್ ।
ಯಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ॥
ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ।
ಆಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ'
ಇತಿ ವ್ಯಾಸಸ್ಮೃತೇಃ।

ಆ ವಿಷ್ಣುವು ತನ್ನ ಶರೀರದಿಂದ ವಿವಿಧಪ್ರಜೆಗಳನ್ನು ಸೃಷ್ಟಿಸಲು ಇಚ್ಛಿಸಿ ವಿಚಾರ ಮಾಡಿ, ಬ್ರಹ್ಮಾಂಡಸೃಷ್ಟಿಗೆ ಮುಂಚೆಯೇ ಬ್ರಹ್ಮಾಂಡದ ಆವರಣವಾದ ಜಲವನ್ನು ಸೃಷ್ಟಿಸಿದನು. ಆ ಜಲದಲ್ಲಿ ತನ್ನ ವೀರ್ಯ-ವನ್ನು ಇಟ್ಟನು. ಸುವರ್ಣಮಯವಾದ ಸೂರ್ಯಸದೃಶವಾದ ಪ್ರಕಾಶ -ವುಳ್ಳ ಆ ವೀರ್ಯವು ಬ್ರಹ್ಮಾಂಡವೆಂದೆನಿಸಿತು. ಆ ಬ್ರಹ್ಮಾಂಡದಲ್ಲಿ ಸಮಸ್ತಲೋಕಕ್ಕೆ ಪಿತಾಮಹನೆನಿಸಿದ ಚತುರ್ಮುಖನು ಸ್ವತಂತ್ರನಾದ ಶ್ರೀಹರಿಯಿಂದ ಹುಟ್ಟಿದನು. ಯಾವ ಕಾರಣದಿಂದ ಜಲವು ನರ-ನೆಂದೆನಿಸುವ ವಿಷ್ಣುವಿನಿಂದ ಜನಿಸಿತೋ ಆದ್ದರಿಂದ ಜಲವು ನಾರ ಎಂದೆನಿಸಿತು. 'ವಿಷ್ಣುರ್ನರೋ ನಾಶಾತ್ ಪರೋ ಯತಃ' - ನಾಶಕ್ಕೆ ಅತೀತನಾದ ಕಾರಣದಿಂದಾಗಿ ವಿಷ್ಣುವು ನರನೆಂದೆನಿಸುವನು ಎಂದು ಭಾಗವತತಾತ್ಪರ್ಯದಲ್ಲಿ ವಿಷ್ಣುವು ನರಶಬ್ದವಾಚ್ಯನೆಂಬ ವಿಷಯದಲ್ಲಿ ಪ್ರಮಾಣವನ್ನು ಹೇಳಲಾಗಿದೆ. ಯಾವ ಕಾರಣದಿಂದ ಪ್ರಲಯದಲ್ಲಿ ಆ ಜಲವು ಆ ವಿಷ್ಣುವಿಗೆ ಶಯನಸ್ಥಾನವಾಗಿತ್ತೋ ಆ ಕಾರಣದಿಂದ ವಿಷ್ಣುವು ನಾರಾಯಣಶಬ್ದವಾಚ್ಯನೆಂದು ಸ್ಮೃತಿಗಳಲ್ಲಿ ಹೇಳಲಾಗಿದೆ. – ಹೀಗೆ ವ್ಯಾಸಸ್ಮೃತಿಯಲ್ಲಿ ಹೇಳಿದೆ.

**(ಭಾ.ದೀ.) ಸಃ** ವಾಸುದೇವಾದ್ ಜಾತೋ ವಿಷ್ಣುಃ **ಸ್ವಾತ್** ಸ್ವಕೀಯಾತ್ ಶರೀರಾತ್ ವಿವಿಧಾಃ ಪ್ರಜಾಃ **ಸಿಸೃಕ್ಷುಃ** ಸ್ರಷ್ಟುಮಿಚ್ಛುಃ **ಅಭಿಧ್ಯಾಯ** ವಿಚಿಂತ್ಯ, **ಆದೌ** ಅಂಡಸೃಷ್ಟೇಃ ಪೂರ್ವಮೇವ **ಅಪಃ** ತದಾವರಣರೂಪಾಃ ಸಸರ್ಜ । ತಾಸು ಅಪ್ಸು ವೀರ್ಯಮ್ **ಅವಾಸೃಜತ್** ನ್ಯಧಾತ್; 'ಮಾಯಾದ್ವಾರಾ' ಇತಿ ಶೇಷಃ । **ಹೈಮಂ** ಹಿರಣ್ಮಯಾತ್ಮಕಂ, **ಸಹಸ್ರಾಂಶುಸಮಪ್ರಭಮ್** ಸೂರ್ಯಸಮಪ್ರಕಾಶಂ **ತದ್** ವೀರ್ಯಂ ಬ್ರಹ್ಮಾಂಡಾಖ್ಯಮ್ ಅಭವತ್ । **ಯಸ್ಮಿನ್** ಅಂಡೇ **ಸರ್ವಲೋಕಪಿತಾಮಹಃ** ಬ್ರಹ್ಮಾ ಚತುರ್ಮುಖಃ **ಸ್ವಯಂ** ಸ್ವತಂತ್ರಾದ್ ಹರೇಃ ಸಾಕ್ಷಾತ್ ಜಜ್ಞೇ - ಇತ್ಯರ್ಥಃ । **ಯತಃ** ಆಪಃ **ನರಸೂನವಃ** ನರಸ್ಯ ವಿಷ್ಣೋಃ ಸೂನವಃ, 'ವಿಷ್ಣುರ್ನರೋ ನಾಶಾತ್ ಪರೋ ಯತಃ' ಇತಿ ಭಾಗವತತಾತ್ಪರ್ಯೋಕ್ತೇಃ, **ಅತೋ** ನಾರಾಃ **ಪ್ರೋಕ್ತಾಃ** ಯೇನ ಕಾರಣೇನ **ಪೂರ್ವಂ** ಪ್ರಲಯೇ **ತಾಃ** ಆಪಃ ತಸ್ಯ ವಿಷ್ಣೋರಯನಂ **ತೇನ ಸಃ ನಾರಾಯಣಃ ಸ್ಮೃತಃ** ತಚ್ಛಬ್ದವಾಚ್ಯತ್ವೇನ ಸ್ಮೃತ್ಯುಕ್ತ ಇತ್ಯರ್ಥಃ।

ಯದ್ಯಪಿ –

ಪುರುಷೋऽಂಡಂ ವಿನಿರ್ಭಿದ್ಯ ಯದಾದೌ ಸ ವಿನಿರ್ಗತಃ।
ಆತ್ಮನೋऽಯನಮನ್ವಿಚ್ಛನ್ ಅಪೋऽಸ್ರಾಕ್ಷೀಚ್ಛುಚಿಃ ಶುಚೀಃ ॥

ಇತಿ ಭಾಗವತೇ,

'ಅಂಡಂ ಪ್ರವಿಷ್ಟೋ ಯೋ ವಿಷ್ಣುಃ ಸೋऽಂಡಂ ಭಿತ್ವಾ ಪ್ರಕಾಶಿತಃ।
ಸೋऽಪೋऽಸೃಜತ್ ತತೋ ನಾರಾಃ ............'

ಇತಿ ಭಾಗವತತಾತ್ಪರ್ಯೇ ಚ ಅಂಡಸೃಷ್ಟ್ಯನಂತರಮ್ ಅಪ್‌ಸೃಷ್ಟಿರುಚ್ಯತೇ । ತಥಾऽಪಿ ಸಾ ಬಹಿಃಸೃಷ್ಟೇರನ್ಯಾ ಆಂತರಾ ಇತಿ ನ ವಿರೋಧಃ। 'ಇತಿ' ಇತ್ಯಸ್ಯ 'ತಸ್ಯ ಚ ವೀರ್ಯಮ್ ಅಂಡಕೋಶಃ, ಸ ಹಿ ಪ್ರಲಯಸಮುದ್ರಶಾಯೀ ಯತಃ' ಇತಿ ಪೂರ್ವೇಣಾನ್ವಯಃ।

**ಸಃ** = ವಾಸುದೇವನಿಂದ ಪ್ರಕಟನಾದ ವಿಷ್ಣುವು, **ಸ್ವಾತ್ ಶರೀರಾತ್** - ತನ್ನ ಶರೀರದಿಂದ, **ವಿವಿಧಾಃ ಪ್ರಜಾಃ** - ನಾನಾವಿಧರಾದ ಪ್ರಜೆಗಳನ್ನು, **ಸಿಸೃಕ್ಷುಃ** = ಸೃಷ್ಟಿ-ಸಲು ಇಚ್ಛಿಸುವವನಾಗಿ, **ಅಭಿಧ್ಯಾಯ** - ಆಲೋಚಿಸಿ, **ಆದೌ** = ಬ್ರಹ್ಮಾಂಡದ ಸೃಷ್ಟಿಗೆ ಮುಂಚೆಯೇ, **ಅಪಃ** = ಬ್ರಹ್ಮಾಂಡದ ಆವರಣವಾಗಿರುವ, ಜಲವನ್ನು, **ಸಸರ್ಜ** - ಸೃಷ್ಟಿಸಿದನು, **ತಾಸು** - ಆ ಜಲದಲ್ಲಿ, **ವೀರ್ಯಂ ಅವಾಸೃಜತ್** - ತನ್ನ ವೀರ್ಯ-ವನ್ನು ಇಟ್ಟನು. **ಮಾಯಾ ದ್ವಾರಾ** – 'ಮಾಯಾನಾಮಕಳಾದ ಲಕ್ಷ್ಮಿಯ ದ್ವಾರಾ' ಎಂಬ ಪದಗಳು ಇಲ್ಲಿ ಶೇಷವಾಗಿವೆ. **ಹೈಮಂ** - ಸುವರ್ಣಮಯವಾದ, **ಸಹಸ್ರಾಂ-ಶುಸಮಪ್ರಭಂ** - ಸೂರ್ಯನಿಗೆ ಸಮವಾದ ಪ್ರಕಾಶವುಳ್ಳ, **ತತ್** - ಆ ವೀರ್ಯವು, **ಅಂಡಂ ಅಭವತ್** - ಬ್ರಹ್ಮಾಂಡವೆಂದೆನಿಸಿತು. **ಯಸ್ಮಿನ್** - ಯಾವ ಬ್ರಹ್ಮಾಂಡದಲ್ಲಿ, **ಸರ್ವಲೋಕಪಿತಾಮಹಃ** - ಸಮಸ್ತಲೋಕಗಳಿಗೆ ಪಿತಾಮಹನೆನಿಸಿದ, ಚತು-ರ್ಮುಖಬ್ರಹ್ಮನು, **ಸ್ವಯಂ ಜಜ್ಞೇ** - ಸ್ವತಂತ್ರನಾದ ಶ್ರೀಹರಿಯಿಂದ ಸಾಕ್ಷಾತ್ತಾಗಿ ಜನಿಸಿದನೋ ಎಂದು ಅರ್ಥ. ಯಾವ ಕಾರಣದಿಂದಾಗಿ, **ಆಪಃ ನರಸೂನವಃ** = ಜಲವು ನರನಾಮಕನಾದ ವಿಷ್ಣುವಿನಿಂದ ಜನಿತವಾಗಿದೆಯೋ – **'ವಿಷ್ಣುರ್ನರೋ ನಾಶಾತ್ ಪರೋ ಯತಃ'** ನಾಶಾತೀತನಾದ ಕಾರಣ ವಿಷ್ಣುವು ನರನೆಂದೆನಿಸುವನು ಎಂದು ಭಾಗವತತಾತ್ಪರ್ಯದಲ್ಲಿ ಹೇಳಿರುವ ಪ್ರಮಾಣಕ್ಕನುಸಾರವಾಗಿ ವಿಷ್ಣುವು ನರನೆಂದೆನಿಸುವನು – ಆದ್ದರಿಂದ ಜಲವು ನಾರವೆಂದೆನಿಸುವುದು. ಯಾವ ಕಾರಣ-ದಿಂದಾಗಿ **ಪೂರ್ವಂ** - ಪ್ರಲಯದಲ್ಲಿ, **ತಾಃ** - ಆ ಜಲವು, **ತಸ್ಯ ಅಯನಂ** - ಆ ವಿಷ್ಣುವಿನ ಶಯನಸ್ಥಾನವಾಗಿತ್ತೋ **ತೇನ ಸಃ ನಾರಾಯಣಃ ಸ್ಮೃತಃ** – ಆ ಕಾರಣ-ದಿಂದ ಆ ವಿಷ್ಣುವು ನಾರಾಯಣಶಬ್ದವಾಚ್ಯನೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದ್ದಾನೆ ಎಂದು ಅರ್ಥ. ಯದ್ಯಪಿ –

ಪುರುಷೋಽಂಡಂ ವಿನಿರ್ಭಿದ್ಯ ಯದಾದೌ ಸ ವಿನಿರ್ಗತಃ ।
ಆತ್ಮನೋಽಯನಮನ್ವಿಚ್ಛನ್ ಅಪೋಽಸ್ರಾಕ್ಷೀಚ್ಛುಚಿಃ ಶುಚೀಃ ॥

ಎಂದು ಭಾಗವತದಲ್ಲಿ ಮತ್ತು

ಅಂಡಂ ಪ್ರವಿಷ್ಟೋ ಯೋ ವಿಷ್ಣುಃ ಸೋಽಂಡಂ ಭಿತ್ತ್ವಾ ಪ್ರಕಾಶಿತಃ ।
ಸೋಽಪೋಽಸೃಜತ್ ತತೋ ನಾರಾಃ .............

ಎಂದು ಭಾಗವತತಾತ್ಪರ್ಯದಲ್ಲಿ ಬ್ರಹ್ಮಾಂಡದ ಸೃಷ್ಟಿಯ ಅನಂತರ ಜಲದ ಸೃಷ್ಟಿಯನ್ನು ಹೇಳಲಾಗಿದೆ. ಆದರೂ ಆ ಸೃಷ್ಟಿಯು ಬ್ರಹ್ಮಾಂಡದ ಹೊರಗೆ ಮಾಡಿದ ಸೃಷ್ಟಿಗಿಂತ ಭಿನ್ನವಾದ ಬ್ರಹ್ಮಾಂಡದ ಒಳಗೆ ಮಾಡಿದ ಸೃಷ್ಟಿಯಾಗಿರುವುದರಿಂದ ವಿರೋಧವಿಲ್ಲ. ''ಇತಿ'' ಎಂಬ ಪದಕ್ಕೆ 'ತಸ್ಯ ಚ ವೀರ್ಯಮಂಡಕೋಶಃ, ಸ ಹಿ ಪ್ರಲಯಸಮುದ್ರಶಾಯೀ ಯತಃ' ಎಂಬ ಹಿಂದಿನ ವಾಕ್ಯದಿಂದ ಅನ್ವಯವಿರುವುದು.

**ಭಾ– 'ಅಹಂ ತತ್ತೇಜೋ ರಶ್ಮೀನ್ನಾರಾಯಣಂ ಪುರುಷಂ ಜಾತಮಗ್ರತಃ।**
**ಪುರುಷಾತ್ಪ್ರಕೃತಿರ್ಜಗದಂಡಮ್'**

**– ಇತಿ ಚತುರ್ವೇದಶಿಖಾಯಾಮ್ ॥ ೨೦॥**

ಯಾರಿಂದಲೂ ತ್ಯಜಿಸಲು ಸಾಧ್ಯವಿಲ್ಲದ, ಸರ್ವವ್ಯಾಪ್ತನಾದ ಜೀವ-ಪ್ರೇರಕನಾದ, ಜಗತ್ಪ್ರಕಾಶಕನಾದ, ಪೂರ್ಣಷಡ್ಗುಣನಾದುದರಿಂದ ಪುರುಷನೆಂದೆನಿಸುವ ನಾರಾಯಣನು ಪ್ರಲಯಕಾಲದಲ್ಲಿ ಇದ್ದನು. ಆ ನಾರಾಯಣಶಬ್ದವಾಚ್ಯನಾದ ಪುರುಷನಿಂದ ಮೊದಲು ಚೇತನ-ಪ್ರಕೃತಿಯೂ ಜೀವಸಮುದಾಯವೂ ಅನಂತರ ಬ್ರಹ್ಮಾಂಡವೂ ಹುಟ್ಟಿತು ಎಂದು ಚತುರ್ವೇದಶಿಖಾಸ್ಮೃತಿಯಲ್ಲಿ ಹೇಳಲಾಗಿದೆ.

(ಭಾ.ದೀ.) ಇತಶ್ಚ ಬ್ರಹ್ಮಾಂಡಜನಕವೀರ್ಯತ್ವಂ ಪ್ರಲಯಸ್ಥತ್ವಂ ಚ ತಸ್ಯೈವ ಜ್ಞಾಯತೇ ಇತ್ಯಾಹ – **ಅಹಮಿತಿ ॥** 'ತ್ರಿಪುರುಷಂ ಮಾಯಾಬೀಜಮಜಾಯತ' ಇತಿ ವಾಕ್ಯಶೇಷಃ। 'ತತ್' ಇತಿ ವ್ಯಾಪ್ತಿವಚನೋಽಸರ್ವನಾಮಶಬ್ದಃ। ಅಥವಾ ಸರ್ವ-ನಾಮಶಬ್ದಃ, ಅತ ಏವ ಟೀಕಾಯಾಂ 'ತದಹೇಯಮ್' ಇತಿ ವ್ಯುತ್ಕ್ರಮಃ ಕೃತಃ। ತಥಾ ಚ – ತತ್ಪ್ರಸಿದ್ಧಂ ವ್ಯಾಪ್ತಂ ವಾ, **ಅಹಮ್** ಅಹೇಯಂ, ರತಿಃ ಶಂ ಚ ಮಿತಮಸ್ಯೇತಿ ರಶ್ಮಿರ್ಜೀವಃ ತಮ್, ಇಂದಯತಿ – ಪ್ರೇರಯತೀತಿ ರಶ್ಮೀದ್ ಜೀವಪ್ರೇರಕಂ, 'ಇಂದ ಪ್ರೇರಣೇ' ಇತಿ ಧಾತೋರಯಂ ದಕಾರಾಂತಃ ಶಬ್ದಃ। ಅನುಕೃತ್ಯಧಿಕರಣೇ ತು – 'ಇಂಧೀ ದೀಪ್ತೌ' ಇತಿ ಧಾತುವ್ಯಾಖ್ಯಾನಾದ್ ರಶ್ಮೀದ್ ಭಗವದಪೇಕ್ಷಯಾ ರಶ್ಮಿರೂಪಾಣಾಮ್ ಅಲ್ಪಾನಾಂ ಸೂರ್ಯಾದಿತೇಜಸಾಂ ಪ್ರಕಾಶಕಮ್– ಇತಿ

ವ್ಯಾಖ್ಯಾತಮ್; ತತ್ರ ಧಕಾರಾಂತಃ ಅಗ್ನೀಚ್ಛಬ್ದವತ್ ಅಯಂ ಶಬ್ದಃ ಜ್ಞಾತವ್ಯಃ । **ತೇಜಃ** ಜಗತ್ಪ್ರಕಾಶಕಂ, **ಪುರುಷಂ** ಪೂರ್ಣಷಡ್ಗುಣಂ ನಾರಾಯಣಮ್ । ತದಾಖ್ಯಂ ಬ್ರಹ್ಮ ತೇಜ ಇತಿ ವಾ । **ಅಗ್ರತಃ** ಪ್ರಲಯೇ **ಜಾತಂ** ಸ್ಥಿತಮ್ । ತಸ್ಮಾತ್ ನಾರಾಯಣಾಖ್ಯ-ಪುರುಷಾತ್ **ಅಗ್ರತಃ** ಪ್ರಥಮಂ **ಪ್ರಕೃತಿಃ** ಚೇತನಾ, ಜಾಯತೇ ಗಚ್ಛತೀತಿ ಜಗದ್ ಜೀವಸಮುದಾಯಃ । 'ಜಾತಮ್' ಇತ್ಯಸ್ಯೋಭಯತ್ರ ಯಥಾಯೋಗ್ಯಂ ಸಂಬಂಧಃ । ಜನಿಶ್ಚ ಯಥಾಯೋಗ್ಯಾ ಗ್ರಾಹ್ಯಾ । ಪಶ್ಚಾತ್ **'ಅಂಡಂ ಚ'** **'ತ್ರಿಪುರುಷಂ'** ಬ್ರಹ್ಮ-ವಾಯುರುದ್ರಾಖ್ಯಪುರುಷತ್ರಯಯುಕ್ತಂ **ಮಾಯಾಬೀಜಂ** ಪ್ರಕೃತ್ಯುಪಾದಾನಕಮ್ ಅಜಾಯತ ಇತಿ ತತ್ತ್ವಪ್ರದೀಪದಿಶಾ ಶ್ರುತ್ಯರ್ಥಃ । 'ಚತುರ್ವೇದಶಿಖಾಯಾಮ್' ಇತ್ಯಸ್ಯ 'ವಚನಾತ್' ಇತ್ಯಧ್ಯಾಹಾರೇಣ 'ತಸ್ಯ' ಇತ್ಯನೇನಾನ್ವಯಃ ॥

ಈ ಮುಂದೆ ಉದಾಹರಿಸುವ ಪ್ರಮಾಣದಿಂದಲೂ ಬ್ರಹ್ಮಾಂಡಕ್ಕೆ ಕಾರಣವಾದ ವೀರ್ಯವನ್ನು ಹೊಂದಿರುವುದು, ಮತ್ತು ಪ್ರಲಯದಲ್ಲಿ ಇರುವುದು ವಿಷ್ಣುವಿನ ಧರ್ಮಗಳೇ ಆಗಿವೆ ಎಂದು ತಿಳಿದುಬರುತ್ತಿವೆ ಎಂದು ಅಹಂ ಇತ್ಯಾದಿ ಶ್ರುತಿಯಿಂದ ಹೇಳುತ್ತಿದ್ದಾರೆ.

**'ತ್ರಿಪುರುಷಂ ಮಾಯಾಬೀಜಮ್ ಅಜಾಯತ'** ಎನ್ನುವುದು ಈ ವಾಕ್ಯದ ಉಳಿದ ಭಾಗವಾಗಿದೆ. ತತ್ ಎಂಬ ಪದವು ವ್ಯಾಪ್ತಿಯನ್ನು ಹೇಳುವ ಸರ್ವನಾಮಶಬ್ದವಲ್ಲದ ಪದವಾಗಿದೆ. ಅಥವಾ ಈ ಶಬ್ದವು ಸರ್ವನಾಮಶಬ್ದವೆಂದೇ ಗ್ರಹಿಸಬಹುದು. ಆದ್ದ-ರಿಂದಲೇ ತತ್ವಪ್ರಕಾಶಿಕೆಯಲ್ಲಿ **ತತ್ ಅಹೇಯಮ್** ಎಂಬುದಾಗಿ ಕ್ರಮವ್ಯತ್ಯಾಸವನ್ನು ಮಾಡಲಾಗಿದೆ. ತಥಾ ಚ - **ತತ್** - ಆ ಪ್ರಸಿದ್ಧವಾದ ಅಥವಾ ವ್ಯಾಪ್ತವಾದ, **ಅಹಂ** - ಯಾರಿಂದಲೂ ತ್ಯಜಿಸಲು ಸಾಧ್ಯನಾಗದ, **ರಶ್ಮೀತ್** - ರ - ಅಂದರೆ ರತಿಯು (ಕ್ರೀಡೆಯು) ಮತ್ತು ಶ - ಅಂದರೆ ಸುಖವು ಮಿತವಾಗಿರುವ ಕಾರಣದಿಂದ ಜೀವನು ರಶ್ಮಿ ಎಂದೆನಿಸುವನು. ಅಂತಹ ಜೀವನನ್ನು ಇಂಧಯತಿ - ಅಂದರೆ ಪ್ರೇರಿಸುವ-ವನಾದ್ದರಿಂದ ರಶ್ಮೀದ್ ಅಂದರೆ ಜೀವಪ್ರೇರಕನು ಎಂದು ಅರ್ಥ. ಇಂಧ ಪ್ರೇರಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಧಕಾರಾಂತ ಶಬ್ದವಾಗಿದೆ. ಅನುಕೃತ್ಯ-ಧಿಕರಣದಲ್ಲಾದರೋ ಇಂಧೀ ದೀಪ್ತೌ ಎಂಬ ಧಾತ್ವರ್ಥದ ವಿವರಣೆಯನ್ನು ಅನು-

ಸರಿಸಿ, ರಶ್ಮೀಧ್ ಎಂದರೆ ಭಗವಂತನ ದೃಷ್ಟಿಯಿಂದ ರಶ್ಮಿಯಂತಿರುವ ಅಲ್ಪವಾದ ಸೂರ್ಯನೇ ಮೊದಲಾದ ತೇಜಸ್ಸುಗಳಿಗೆ ಪ್ರಕಾಶಕನು ಎಂದು ವ್ಯಾಖ್ಯಾನ-ಮಾಡಲಾಗಿದೆ. ಅಲ್ಲಿ ಅಗ್ನೀಧ್ ಶಬ್ದದಂತೆ ಈ ಶಬ್ದವೂ ಧಕಾರಾಂತವಾದ ಶಬ್ದವಾಗಿದೆ ಎಂದು ತಿಳಿಯಬೇಕು. ತೇಜಃ - ಜಗತ್ಪ್ರಕಾಶಕನಾದ, ಪುರುಷಂ - ಪೂರ್ಣ-ಷಡ್ಗುಣನಾದ, ನಾರಾಯಣಂ - ನಾರಾಯಣ ಎಂಬ ಹೆಸರಿನ ಬ್ರಹ್ಮವು ಅಥವಾ ತೇಜಸ್ಸು, ಅಗ್ರತಃ - ಪ್ರಲಯಕಾಲದಲ್ಲಿ, ಜಾತಂ - ಇದ್ದಿತು. ಪುರುಷಾತ್ - ಆ ನಾರಾಯಣನೆಂಬ ಪುರುಷನ ದೆಸೆಯಿಂದ, ಅಗ್ರತಃ - ಮೊದಲು, ಪ್ರಕೃತಿಃ - ಚೇತನಪ್ರಕೃತಿಯು (ಲಕ್ಷ್ಮಿಯು), ಜಗದ್ - ಜಾಯತೇ ಗಚ್ಛತೀತಿ ಜಗತ್ ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ ಉತ್ಪತ್ತಿಯನ್ನು ಹಾಗೂ ಜ್ಞಾನವನ್ನು ಹೊಂದಿರುವ ಜೀವ-ಸಮುದಾಯವು, ಜಾತಂ - ಹುಟ್ಟಿತು. ಜಾತಂ ಎಂಬ ಪದಕ್ಕೆ ಎರಡೂ ಕಡೆಯಲ್ಲಿ ಯೋಗ್ಯತೆಯನ್ನು ಅನುಸರಿಸಿ ಸಂಬಂಧವಿರುವುದು. ಯೋಗ್ಯತಾನುಸಾರವಾದ ಉತ್ಪತ್ತಿ -ಯನ್ನು ಇಲ್ಲಿ ಗ್ರಹಿಸಬೇಕು[೧].

ಅನಂತರ, ಅಂಡಂ ಚ ಬ್ರಹ್ಮಾಂಡವೂ, ತ್ರಿಪುರುಷಂ ಬ್ರಹ್ಮ, ವಾಯು, ರುದ್ರ ಎಂಬ ಮೂರು ಪುರುಷರಿಂದ ಕೂಡಿದುದಾಗಿ, ಮಾಯಾಬೀಜಂ - ಜಡಪ್ರಕೃತಿ-ಯನ್ನು ಉಪಾದಾನಕಾರಣವಾಗಿ ಹೊಂದಿ, ಅಜಾಯತ - ಹುಟ್ಟಿತು ಎಂಬುದಾಗಿ ತತ್ವಪ್ರದೀಪದ ಪ್ರಕಾರ ಈ ಶ್ರುತಿಯ ಅರ್ಥವಿರುವುದು. ಚತುರ್ವೇದಶಿಖಾಯಾಮ್ ಎಂಬ ಪದಕ್ಕೆ ವಚನಾತ್ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಸೇರಿಸಿ ತಸ್ಯ ಚ ವೀರ್ಯಮಂಡಕೋಶಃ ಎಂಬ ಭಾಷ್ಯವಾಕ್ಯದೊಂದಿಗೆ ಅನ್ವಯವನ್ನು ಮಾಡ-ಬೇಕು.

(೧) ಚೇತನಪ್ರಕೃತಿ ಮತ್ತು ಜೀವಸಮುದಾಯ ಇವೆರಡಕ್ಕೂ ಪುರುಷನಿಂದ ಜನಿ ಎಂದರೆ ಉತ್ಪತ್ತಿಯು ಉಂಟಾಯಿತು ಎಂದು ಎರಡೂ ಕಡೆ ಜಾತಶಬ್ದದ ಸಂಬಂಧವಿದೆ. ಲಕ್ಷ್ಮೀದೇವಿಗೆ ಉತ್ಪತ್ತಿ ಎಂದರೆ, ಭಗವಂತನ ಇಚ್ಛೆಗೆ ಅನುಗುಣ-ವಾಗಿ ಸೃಷ್ಟಿಕಾಲ ಬಂದಾಗ ಸೃಷ್ಟಿಮಾಡುವ ಇಚ್ಛೆ. ಜೀವಸಮುದಾಯಕ್ಕೆ ಉತ್ಪತ್ತಿ ಎಂದರೆ ಸ್ಥೂಲದೇಹಸಂಬಂಧ. ಹೀಗೆ ಲಕ್ಷ್ಮೀ ಮತ್ತು ಇತರ ಚೇತನರಿಗೆ ಉತ್ಪತ್ತಿಯು ಯೋಗ್ಯತಾನುಗುಣವಾಗಿ ಭಿನ್ನವಾಗಿದೆ ಎಂದು ಭಾವ.

ಸೂ– ॥ ಓಂ ಭೇದವ್ಯಪದೇಶಾಚ್ಚಾನ್ಯಃ ಓಂ ॥ ೨೧ ॥

ಇಂದ್ರಾದಿಗಳಿಂದ ಅಂತಃಸ್ಥನಿಗೆ ಭೇದವನ್ನು ಹೇಳಿರುವುದರಿಂದ ತೈತ್ತಿ-ರೀಯಶ್ರುತಿಯಲ್ಲಿ. ಅಂತಃಸ್ಥನೆಂದು ಶ್ರುತನಾಗಿರುವವನು ಇಂದ್ರ ಮೊದಲಾದ ದೇವತೆಗಳಿಂದ ಭಿನ್ನನೂ ಆಗಿದ್ದಾನೆ.

ಭಾ– 'ಇಂದ್ರಸ್ಯಾತ್ಮಾ ನಿಹಿತಃ ಪಂಚ ಹೋತಾ'

'ವಾಯೋರಾತ್ಮಾನಂ ಕವಯೋ ನಿಚಿಕ್ಯುಃ'

'ಅಂತರಾದಿತ್ಯೇ ಮನಸಾ ಚರಂತಮ್', 'ದೇವಾನಾಂ ಹೃದಯಂ ಬ್ರಹ್ಮಾಽನ್ವವಿಂದತ್' (ತೈ.ಆ. ೩-೧೧) ಇತ್ಯಾದಿಭೇದವ್ಯಪದೇಶಾತ್ ॥ ೨೧ ॥

'ಐದು ಜ್ಞಾನೇಂದ್ರಿಯಗಳಲ್ಲಿ ವಿಷಯಗಳನ್ನು ಹೋಮಿಸುವ, ಇಂದ್ರನ ಅಂತರ್ಯಾಮಿಯಾಗಿರುವವನು ಎಲ್ಲರ ಹೃದಯದಲ್ಲಿ ಸನ್ನಿಹಿತನಾಗಿದ್ದಾನೆ'.

'ಜ್ಞಾನಿಗಳು ವಾಯುವಿನ ಅಂತರ್ಯಾಮಿಯನ್ನು ನೋಡಿದರು'.

'ಆದಿತ್ಯನ ಒಳಗೆ ಸ್ವೇಚ್ಛೆಯಿಂದ ಸಂಚರಿಸುವ ವಿಷ್ಣುವನ್ನು ಜ್ಞಾನಿಗಳು ತಿಳಿದರು'. 'ದೇವತೆಗಳ ಹೃದಯದಲ್ಲಿ ಇರುವ ಕಾರಣ ಹೃದಯ-ನೆಂದೆನಿಸುವ ವಿಷ್ಣುವನ್ನು ಚತುರ್ಮುಖಬ್ರಹ್ಮನು ನೋಡಿದನು' ಇತ್ಯಾದಿಯಾಗಿ ಭೇದವನ್ನು ಹೇಳಿರುವುದರಿಂದ ಅಂತಃಸ್ಥನು ಇಂದ್ರಾ-ದಿದೇವತೆಗಳಿಂದ ಭಿನ್ನನಾಗಿದ್ದಾನೆ.

(ಭಾ.ದೀ.) ಯದ್ಯೇವಂ ಸಮುದ್ರಸ್ಥತ್ವಾದಿಲಿಂಗಾದಂತಃಸ್ಥೋ ವಿಷ್ಣುಃ, ತರ್ಹಿ ತೇನ ಅಂತಃಸ್ಥೇನ ವಿಷ್ಣುನಾ ಇಂದ್ರಾದೀನಾಮ್ ಅಭೇದಃ ಅತ್ರ ವಿವಕ್ಷಿತೋಽಸ್ತು । ಇಂದ್ರಾದಿಪ್ರಾಪಕಶ್ರುತ್ಯಾದೇರಪಿ ಸದ್ಭಾವಾತ್ । ಶ್ರುತ್ಯಾದೇಶ್ಚ ಸ್ವಭಾವತೋ, ಲಿಂಗಸ್ಯ ನಿರವಕಾಶತಯಾ ಬಲವತ್ತ್ವೇನ ಅನ್ಯತರಬಾಧೇನ ಅನ್ಯತರಪಕ್ಷನಿರ್ಣಯಾ-

**ಯೋಗಾತ್** । ಏವಂ ಚ ಪೂರ್ವೋತ್ತರಪಕ್ಷದ್ವಯೇ ಅನ್ಯೋನ್ಯಂ ಬಾಧ್ಯಬಾಧಕ-ಭಾವಶೂನ್ಯೇ ಸತಿ ತದನ್ಯಥಾನುಪಪತ್ತ್ಯಾ ಅಂತಃಸ್ಥೇನ ವಿಷ್ಣುನಾ ಇಂದ್ರಾದೀನಾಮ್ ಅಭೇದಃ ಪ್ರಾಪ್ತಃ – ಇತ್ಯಾಶಂಕಾಂ ಪರಿಹರತ್ ಸೂತ್ರಂ ಪಠಿತ್ವಾ ವ್ಯಾಚಷ್ಟೇ – **ಭೇದೇತಿ** ॥ ತೈತ್ತಿರೀಯೇ 'ಇಂದ್ರಸ್ಯ' ಇತ್ಯೇಕೋ ಭೇದವ್ಯಪದೇಶಃ । **'ವಾಯೋಃ'** ಇತ್ಯನ್ಯಃ । **'ಅಂತಃ'** ಇತ್ಯಪರಃ । **'ದೇವಾನಾಮ್'** ಇತಿ ಚ ಇತರಃ । ಆದಿಶಬ್ದೇನ 'ಅಮೃತಂ ದೇವಾನಾಮಾಯುಃ ಪ್ರಜಾನಾಮಿಂದ್ರಂ ರಾಜಾನಂ ಸವಿತಾರಮ್' ಇತ್ಯಾದಿಕಂ ಗೃಹ್ಯತೇ । 'ವ್ಯಪದೇಶಾತ್' ಇತ್ಯಸ್ಯ 'ಅನ್ಯಃ' ಇತಿ ಸೌತ್ರಪ್ರತಿಜ್ಞಯಾ ಅನ್ವಯಃ ।

ಈ ರೀತಿಯಾಗಿ ಸಮುದ್ರಸ್ಥತ್ವ ಮೊದಲಾದ ಲಿಂಗಗಳಿಂದ ಅಂತಃಸ್ಥನು ವಿಷ್ಣುವಾಗಿದ್ದಲ್ಲಿ, ಆ ಅಂತಃಸ್ಥನಾದ ವಿಷ್ಣುವಿನಿಂದ ಇಂದ್ರಾದಿಗಳಿಗೆ ಅಭೇದವು ಇಲ್ಲಿ ವಿವಕ್ಷಿತವಾಗಿದೆ ಎಂದಾಗಲಿ. ಏಕೆಂದರೆ ಇಂದ್ರಾದಿಗಳನ್ನು ತಿಳಿಸುವ ಶ್ರುತಿ ಮೊದಲಾ-ದವುಗಳು ಇಲ್ಲಿವೆ. ಶ್ರುತಿ ಮೊದಲಾದವುಗಳು ಸ್ವಾಭಾವಿಕವಾಗಿ ಪ್ರಬಲವಾಗಿವೆ. ಲಿಂಗವೂ ನಿರವಕಾಶವಾದ ಪ್ರಯುಕ್ತ ಪ್ರಬಲವಾಗಿದೆಯಾದ್ದರಿಂದ ಒಂದನ್ನು ಬಾಧಿಸಿ ಮತ್ತೊಂದು ಪಕ್ಷದ ನಿರ್ಣಯವನ್ನು ಇಲ್ಲಿ ಮಾಡಲಾಗುವುದಿಲ್ಲ. ಹೀಗೆ ಪೂರ್ವಪಕ್ಷ ಮತ್ತು ಸಿದ್ಧಾಂತಪಕ್ಷ ಎಂಬ ಎರಡು ಪಕ್ಷಗಳು ಪರಸ್ಪರವಾಗಿ ಬಾಧ್ಯಬಾಧಕಭಾವ-ವನ್ನು ಹೊಂದದೇ ಇರುವಾಗ ಅದನ್ನು ಬೇರೆ ರೀತಿಯಿಂದ ನಿರ್ವಹಿಸಲು ಸಾಧ್ಯ-ವಿಲ್ಲದಿರುವುದರಿಂದ, ಅಂತಃಸ್ಥನಾದ ವಿಷ್ಣುವಿನಿಂದ ಇಂದ್ರಾದಿಗಳಿಗೆ ಅಭೇದವು ಪ್ರಾಪ್ತ-ವಾಗುವುದು ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು (ಭಾಷ್ಯಕಾರರು) ಪಠಿಸಿ, ವ್ಯಾಖ್ಯಾನ ಮಾಡುತ್ತಿದ್ದಾರೆ.

ತೈತ್ತಿರೀಯದಲ್ಲಿ 'ಇಂದ್ರಸ್ಯ' ಇತ್ಯಾದಿ ಶ್ರುತಿಯು ಒಂದು ಭೇದವ್ಯವಹಾರ. 'ವಾಯೋಃ' ಇತ್ಯಾದಿ ಶ್ರುತಿಯು ಇನ್ನೊಂದು ಭೇದವ್ಯವಹಾರವಾಗಿದೆ. 'ಅಂತಃ' ಎಂದು ಮತ್ತೊಂದು ಭೇದವ್ಯವಹಾರವಿದೆ. 'ದೇವಾನಾಂ' ಎಂಬ ಶ್ರುತಿಯು ಇನ್ನೊಂದು ಭೇದವ್ಯಪದೇಶವಾಗಿದೆ. 'ಇತ್ಯಾದಿ ಭೇದವ್ಯಪದೇಶಾತ್' ಎಂಬಲ್ಲಿರುವ ಆದಿ ಶಬ್ದದಿಂದ, 'ಅಮೃತಂ ದೇವಾನಾಮಾಯುಃ', 'ಪ್ರಜಾನಾಮಿಂದ್ರಂ ರಾಜಾನಂ

ಸವಿತಾರಮ್' ಇತ್ಯಾದಿ ಶ್ರುತಿಗಳು ಗ್ರಹಿಸಲ್ಪಡುತ್ತವೆ. ವ್ಯಪದೇಶಾತ್ - ಎಂಬ ಪದಕ್ಕೆ ಸೂತ್ರದಲ್ಲಿರುವ 'ಅನ್ಯಃ' ಎಂಬ ಪ್ರತಿಜ್ಞೆಯೊಂದಿಗೆ ಅನ್ವಯವಾಗುವುದು.

(ಭಾ.ದೀ.) ಅನೇನ ಸೂತ್ರೇ ವಿಧೇಯಸಮುಚ್ಚಯಾರ್ಥಕಚಶಬ್ದಸ್ಯ(೧) ಭಿನ್ನ-ಕ್ರಮೇಣಾನ್ವಯೇನ ನ ಕೇವಲಮ್ ಅಂತಃ ಶ್ರೂಯಮಾಣೋ ವಿಷ್ಣುಃ, ಕಿಂತು ಇಂದ್ರಾದಿಭ್ಯೋಽನ್ಯಶ್ಚ । ಕುತಃ? ತಸ್ಯ ಇಂದ್ರಾದ್ಯಂತರ್ಯಾಮಿತ್ವ-ತದಂತಃಸ್ಥತ್ವ-ಕಥನೇನ ತೇಭ್ಯೋ ಭೇದೋಕ್ತೇಃ ಇತಿ ಸೂತ್ರಾರ್ಥ ಉಕ್ತೋ ಭವತಿ ।

ಇದರಿಂದ ಸೂತ್ರದಲ್ಲಿ ವಿಧೇಯದ ಸಮುಚ್ಚಯವನ್ನು ಹೇಳುವ ಚಶಬ್ದಕ್ಕೆ (ತೋರುವ ಕ್ರಮಕ್ಕಿಂತ) ಭಿನ್ನವಾದ ಕ್ರಮದಿಂದ ಅನ್ವಯವನ್ನು ಮಾಡುವುದರಿಂದ ಅಂತಃಸ್ಥನೆಂದು ಕೇಳಿಬರುವವನು ವಿಷ್ಣುವಾಗಿದ್ದಾನೆ ಎಂದಷ್ಟೇ ಅಲ್ಲ ಮತ್ತೇನೆಂದರೆ ಅವನು ಇಂದ್ರಾದಿಗಳಿಗಿಂತ ಭಿನ್ನನೂ ಆಗಿದ್ದಾನೆ.

ಏಕೆಂದರೆ, ಆ ಅಂತಃಸ್ಥನಿಗೆ ಇಂದ್ರಾದ್ಯಂತರ್ಯಾಮಿತ್ವ - ಮತ್ತು ತದಂತಃಸ್ಥತ್ವ-ಗಳನ್ನು ಹೇಳುವ ಮೂಲಕ ಇಂದ್ರಾದಿಗಳಿಂದ ಭೇದವನ್ನು ಹೇಳಲಾಗಿದೆಯಾದ್ದರಿಂದ ಎಂದು ಸೂತ್ರದ ಅರ್ಥವು ಉಕ್ತವಾಗುವುದು.

(೧) ಹಿಂದಿನ ಸೂತ್ರದಲ್ಲಿ ಅಂತಃಸ್ಥನನ್ನು ಉದ್ದೇಶಿಸಿ ಅವನು ವಿಷ್ಣುವಾಗಿದ್ದಾನೆ ಎಂದು ವಿಧೇಯವನ್ನು ಹೇಳಲಾಗಿದೆ. ವಿಷ್ಣುವಾಗಿದ್ದಾನೆ ಎಂಬ ಆ ವಿಧೇಯದ ಸಮುಚ್ಚಯವನ್ನು ಈ ಸೂತ್ರದಲ್ಲಿ ಹೇಳಿರುವ ಭೇದಕ್ಕೆ ಹೇಳಲಾಗಿದೆ. ಭೇದವ್ಯಪದೇಶಾಚ್ಚ ಎಂಬಲ್ಲಿ ಕೇಳಿಬರುವ ಚಶಬ್ದವನ್ನು ಅಲ್ಲಿಯೇ ಅನ್ವಯಿಸದೆ ಅನ್ಯಶ್ಚ - ಎಂಬುದಾಗಿ ಅನ್ವಯಿಸಿದರೆ ಅಂತಃಸ್ಥನೆಂದು ಶ್ರುತನಾದವನು ವಿಷ್ಣು-ವಾಗಿದ್ದಾನೆ ಎಂದಷ್ಟೇ ಅಲ್ಲ ಅವನು ಇಂದ್ರಾದಿಗಳಿಂದ ಭಿನ್ನನೂ ಆಗಿದ್ದಾನೆ ಎಂದು ಸೂತ್ರಾರ್ಥವು ಲಭಿಸುವುದೆಂದು ಭಾವ.

(ಭಾ.ದೀ.) ಅತ್ರ ಶ್ರುತೌ ಇಂದ್ರಶಬ್ದೋಽನ್ಯಪರಃ, ಷಷ್ಠೀಶ್ರವಣಾತ್ । 'ಇಂದ್ರೋ ರಾಜಾ' ಇತ್ಯಾದೌ ತು ಇಂದ್ರಾದಿಶಬ್ದಾಃ ಪರಮಮುಖ್ಯವೃತ್ತ್ಯಾ ವಿಷ್ಣುಪರಾ ಏವ, ಬಾಧಕಾಭಾವಾತ್ ।

ತಥಾ ಚ – ಮನೋ ವಿಹಾಯ ಪಂಚಸು ಜ್ಞಾನೇಂದ್ರಿಯೇಷು ಶಬ್ದಾದಿ-ವಿಷಯಹೋತಾ ತೈರ್ವಿಷಯಾನುಭಾವಕಃ । ಇಂದ್ರಸ್ಯ ಆತ್ಮಾ ಅಂತರ್ಯಾಮೀ ಆದಾನಾದಿಕರ್ತಾ ವಾ । ಸರ್ವಹೃದಯೇಷು ನಿಹಿತಃ = ಸನ್ನಿಹಿತಃ, **ಕವಯಃ** ಜ್ಞಾನಿನಃ **ವಾಯೋರಾತ್ಮಾನಂ ನಿಚಿಕ್ಯುಃ** ದದೃಶುಃ, ಆದಿತ್ಯೇ ಅಂತಃ **ಮನಸಾ** ಸ್ವೇಚ್ಛಯಾ ಸಂಚರಂತಂ ವಿಷ್ಣುಂ ಕವಯೋ ಅನ್ವವಿಂದನ್ । ಬ್ರಹ್ಮಾ ಚತುರ್ಮುಖಃ ದೇವಾನಾಂ ಹೃದ್ಯಯನಾತ್ ಸ್ಥಿತೇಃ ಪ್ರವರ್ತನಾದ್ವಾ ಹೃದಯಂ ವಿಷ್ಣುಂ **ಅನ್ವವಿಂದತ್** ಅಪಶ್ಯತ್ ಇತಿ ಶ್ರುತ್ಯರ್ಥಃ ॥

ಇಲ್ಲಿ ಶ್ರುತಿಯಲ್ಲಿರುವ ಇಂದ್ರಶಬ್ದವು, ಷಷ್ಠೀವಿಭಕ್ತಿಯು ಶ್ರುತವಾಗಿರುವುದ-ರಿಂದ, ವಿಷ್ಣುಭಿನ್ನನಾದ ಇಂದ್ರನನ್ನೇ ಹೇಳುವ ತಾತ್ಪರ್ಯವನ್ನು ಪಡೆದಿದೆ.

'ಇಂದ್ರೋ ರಾಜಾ' ಮೊದಲಾದ ಶ್ರುತಿಗಳಲ್ಲಾದರೋ ಯಾವುದೇ ಬಾಧಕ-ವಿಲ್ಲದ್ದರಿಂದ ಇಂದ್ರ ಮೊದಲಾದ ಶಬ್ದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನೇ ಹೇಳುವ ತಾತ್ಪರ್ಯವನ್ನು ಪಡೆದಿವೆ. ತಥಾಚ (ಪಂಚ ಹೋತಾ ಎಂದರೆ) ಮನಸ್ಸನ್ನು ಬಿಟ್ಟರೆ ಪಂಚಸಂಖ್ಯಾಕವಾಗಿರುವ ಜ್ಞಾನೇಂದ್ರಿಯಗಳಲ್ಲಿ ಶಬ್ದ ಮೊದಲಾದ ವಿಷಯ-ಗಳನ್ನು ಹೋಮಿಸುವವನು ಅಂದರೆ, ಆ ಇಂದ್ರಿಯಗಳಿಂದ ಆ ವಿಷಯಗಳ ಅನುಭವ-ವನ್ನು ಕೊಡುವವನು ಎಂದರ್ಥ.

'ಇಂದ್ರಸ್ಯ ಆತ್ಮಾ' ಎಂದರೆ ಇಂದ್ರನ ಆತ್ಮಾ ಅಂತರ್ಯಾಮಿಯು ಅಥವಾ ಇಂದ್ರನ ಸ್ವಾಮಿಯು ಎಲ್ಲರ ಹೃದಯಗಳಲ್ಲಿ, ನಿಹಿತಃ - ಸನ್ನಿಹಿತನಾಗಿದ್ದಾನೆ.

ಕವಯಃ - ಜ್ಞಾನಿಗಳು, ವಾಯೋಃ ಆತ್ಮಾನಂ - ವಾಯುವಿನ ಅಂತರ್ಯಾಮಿ-ಯನ್ನು ಅಥವಾ ಸ್ವಾಮಿಯನ್ನು ನಿಚಿಕ್ಯುಃ - ನೋಡಿದರು.

ಆದಿತ್ಯೇ ಅಂತಃ - ಆದಿತ್ಯನೊಳಗೆ, ಮನಸಾ - ಸ್ವೇಚ್ಛೆಯಿಂದ, ಚರಂತಂ - ಸಂಚರಿಸುವ ವಿಷ್ಣುವನ್ನು, ಕವಯಃ ಅನ್ವವಿಂದನ್ ಜ್ಞಾನಿಗಳು ನೋಡಿದರು.

ಬ್ರಹ್ಮಾ - ಚತುರ್ಮುಖನು, ದೇವಾನಾಂ - ದೇವತೆಗಳ, ಹೃದಯಂ - ಹೃದಯದಲ್ಲಿ ಇರುವ ಕಾರಣದಿಂದ ಅಥವಾ ಅವರ ಮನಸ್ಸುಗಳಿಗೆ ಪ್ರವರ್ತಕನಾದು-

ದರಿಂದ ಹೃದಯನೆಂದೆನಿಸುವ ವಿಷ್ಣುವನ್ನು ಅನ್ವಿಂದತ್ - ನೋಡಿದನು ಎಂದು ಶ್ರುತ್ಯರ್ಥ.

॥ ಇತಿ ಅಂತಃಸ್ಥತ್ವಾಧಿಕರಣಮ್ ॥

*****

## ೮. ಅಥ ಆಕಾಶಾಧಿಕರಣಮ್

**ಭಾ– 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾದ್ ಯದೇಷ ಆಕಾಶ ಆನಂದೋ ನ ಸ್ಯಾತ್' (ತೈ. ೨-೭) ಇತ್ಯಾಕಾಶಸ್ಯಾನಂದಮಯತ್ವೇ ಹೇತುರುಕ್ತಃ, ನ ತು ವಿಷ್ಣೋಃ,**

ಪೂರ್ವಪಕ್ಷ – ಈ ಆಕಾಶನು ಆನಂದಸ್ವರೂಪನಾಗದಿದ್ದಲ್ಲಿ ಯಾರು ತಾನೇ ಜಗಚ್ಚೇಷ್ಟಕನಾಗಬಹುದು? ಜಗತ್ತಿಗೆ ವಿಶೇಷರೀತಿಯ ಚೇಷ್ಟಾಪ್ರದನಾಗಬಹುದು ಎಂದು ಭೂತಾಕಾಶವು ಆನಂದಮಯವಾಗಿರುವ ವಿಷಯದಲ್ಲಿ ಹೇತುವನ್ನು ಹೇಳಲಾಗಿದೆ ಹೊರತು ವಿಷ್ಣುವಿಗೆ ಆನಂದಮಯಶಬ್ದವಾಚ್ಯತ್ವದಲ್ಲಿ ಹೇತುವನ್ನು ಹೇಳಲಾಗಿಲ್ಲ.

(ಭಾ.ದೀ.) ಅತ್ರ ಅಧಿಕರಣೇ ಭಗವತಿ ಲೋಕತೋಽನ್ಯತ್ರಪ್ರಸಿದ್ಧ-ಆಕಾಶ-ಪದೋಪಲಕ್ಷಿತ-ಆಧಿಭೌತಿಕಾಶೇಷಶಬ್ದಸಮನ್ವಯಃ ಕ್ರಿಯತೇ । ಫಲಕಥನೇನ ಪೂರ್ವಪಕ್ಷಃ ಸೂಚಿತೋ ಭವತಿ ಇತ್ಯಾಶಯೇನ ಪೂರ್ವಪಕ್ಷಫಲಮಾಹ – **ಕೋ ಹಿ ಇತಿ ॥ ಇತೀತಿ ॥** ಇತಿ ಆನಂದಮಯಾಧಿಕರಣೋದಾಹೃತವಾಕ್ಯೇನ ಇತ್ಯರ್ಥಃ । 'ತು'ಶಬ್ದಸ್ಯ 'ಆಕಾಶಸ್ಯ ತು' ಇತಿ ಸಂಬಂಧಃ । ತಥಾ ಚ – 'ಛಂದೋಗಶ್ರುತ್ಯುಕ್ತಾಕಾಶಸ್ಯೈವ' ಇತ್ಯರ್ಥಃ । ಆನಂದಮಯತ್ವೇ ಪೂರ್ಣಾನಂದತ್ವೇನ ನಿಮಿತ್ತೇನ ಆನಂದಮಯಶಬ್ದವಾಚ್ಯತ್ವೇ **ಹೇತುಃ** - ಲೋಕಚೇಷ್ಟಕತ್ವರೂಪಃ । ತುಶಬ್ದಾರ್ಥೈವಕಾರವ್ಯಾವರ್ತ್ಯಮಾಹ – **ನೇತಿ ॥** ಅನೇನ ವಿಷ್ಣುಭಿನ್ನಭೂತಾಕಾಶಸ್ಯೈವ ಛಂದೋಗ-

ಶ್ರುತ್ಯುಕ್ತಾಕಾಶಶಬ್ದವಾಚ್ಯತ್ವಮ್ ಇತಿ ಪೂರ್ವಪಕ್ಷೇ 'ಕೋ ಹಿ' ಇತಿ ತೈತ್ತಿರೀಯಶ್ರುತ್ಯುಕ್ತೋಽಪಿ ಸ ಏವ ಇತಿ ತದುಕ್ತಹೇತುನಾ ತಸ್ಯೈವ ಆನಂದಮಯತ್ವಂ ಸಿದ್ಧ್ಯತಿ, ನ ವಿಷ್ಣೋರಿತಿ ಫಲಮುಕ್ತಂ ಭವತಿ।

ಪೂರ್ವಸಂಗತಿಸ್ತು ಅಧಿಕಾಶಂಕಾಂ ಕೃತ್ವಾ ಅತ್ರ ಪೂರ್ವನ್ಯಾಯ ಏವ ಅತಿದಿಶ್ಯತೇ ಇತಿ ಆತಿದೇಶಿಕೀ ದ್ರಷ್ಟವ್ಯಾ ॥

ಈ ಅಧಿಕರಣದಲ್ಲಿ ಲೋಕದ ದೃಷ್ಟಿಯಿಂದ ಅನ್ಯತ್ರ ಪ್ರಸಿದ್ಧವಾದ ಆಕಾಶಪದದಿಂದ ಉಪಲಕ್ಷಿತವಾಗುವ ಸಕಲ ಭೂತವಾಚಕಶಬ್ದಗಳ ಸಮನ್ವಯವನ್ನು ಭಗವಂತನಲ್ಲಿ ಮಾಡಲಾಗುವುದು. ಪೂರ್ವಪಕ್ಷದ ಫಲವನ್ನು ಹೇಳುವುದರಿಂದಲೇ ಪೂರ್ವಪಕ್ಷವು ಸೂಚಿತವಾಗುವುದು ಎಂಬ ಅಭಿಪ್ರಾಯದಿಂದ 'ಕೋ ಹಿ' ಎಂಬ ವಾಕ್ಯದಿಂದ ಭಾಷ್ಯಕಾರರು ಪೂರ್ವಪಕ್ಷದ ಫಲವನ್ನು ಹೇಳುತ್ತಿದ್ದಾರೆ. 'ಇತಿ' ಎಂದರೆ ಹೀಗೆ ಆನಂದಮಯಾಧಿಕರಣದಲ್ಲಿ ಉದಾಹರಿಸಲ್ಪಟ್ಟಿರುವ ವಾಕ್ಯದಿಂದ ಎಂದು ಅರ್ಥ. ತುಶಬ್ದಕ್ಕೆ 'ಆಕಾಶಸ್ಯ ತು' ಎಂದು ಆಕಾಶಸ್ಯ ಎಂಬ ಪದದೊಂದಿಗೆ ಸಂಬಂಧವಿದೆ. ತಥಾಚ ಛಂದೋಗಶ್ರುತಿಯಲ್ಲಿ ಹೇಳಲಾಗಿರುವ ಆಕಾಶಕ್ಕೇ ಎಂದು ಅರ್ಥ. 'ಆನಂದಮಯತ್ವೇ' ಪೂರ್ಣಾನಂದನಾಗಿರುವ ನಿಮಿತ್ತದಿಂದ ಆನಂದಮಯಶಬ್ದವಾಚ್ಯನಾಗಿದ್ದಾನೆ ಎಂಬ ವಿಷಯದಲ್ಲಿ, ಹೇತುಃ - ಲೋಕಚೇಷ್ಟಕತ್ವವೆಂಬ ಹೇತುವು ಎಂದು ಅರ್ಥ. ತುಶಬ್ದದ ಅರ್ಥವಾದ ಏವಕಾರದಿಂದ ವ್ಯಾವೃತ್ತವಾದ ವಿಷಯವನ್ನು 'ನ' ಎಂದು ಹೇಳಲಾಗಿದೆ. ಇದರಿಂದ ವಿಷ್ಣುಭಿನ್ನವಾದ ಭೂತಾಕಾಶಕ್ಕೆ ಛಂದೋಗಶ್ರುತಿಯಲ್ಲಿ ಉಕ್ತವಾಗಿರುವ ಆಕಾಶಶಬ್ದದ ವಾಚ್ಯತ್ವವಿದೆ ಎಂದು ಪೂರ್ವಪಕ್ಷವನ್ನು ಮಾಡಿದಾಗ 'ಕೋ ಹಿ' ಎಂಬ ತೈತ್ತಿರೀಯಶ್ರುತಿಯಲ್ಲಿ ಹೇಳಲಾದ ಆಕಾಶವೂ ಆ ಭೂತಾಕಾಶವೇ ಆಗಿದೆಯಾದ್ದರಿಂದ ಆ ತೈತ್ತಿರೀಯಶ್ರುತಿಯಲ್ಲಿ ಹೇಳಿರುವ ಹೇತುವಿನಿಂದ ಭೂತಾಕಾಶಕ್ಕೇ ಆನಂದಮಯತ್ವವು ಸಿದ್ಧಿಸುತ್ತದೆ ಹೊರತು ವಿಷ್ಣುವಿಗೆ ಆನಂದಮಯತ್ವವು ಸಿದ್ಧಿಸಲಾರದು ಎಂದು ಫಲವು ಹೇಳಲ್ಪಟ್ಟಿದೆ.

ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಸಂಗತಿಯಾದರೋ- ಅಧಿಕಾ-

ಶಂಕೆಯನ್ನು ಮಾಡಿ ಅದನ್ನು ನಿವಾರಿಸಲು ಪೂರ್ವಾಧಿಕರಣದಲ್ಲಿ ಹೇಳಿದ ನ್ಯಾಯವನ್ನೇ ಇಲ್ಲೂ ಅನ್ವಯಿಸುವ ಕಾರಣ ಆತಿದೇಶಿಕೀ ಸಂಗತಿಯೆಂದು ತಿಳಿಯಬೇಕು.

**ಭಾ– ಇತಿ ನ ಮಂತವ್ಯಮ್ । ಯತಃ-**

**ಸೂ – ॥ ಓಂ ಆಕಾಶಸ್ತಲ್ಲಿಂಗಾತ್ ಓಂ ॥ ೨೨ ॥**

**'ಅಸ್ಯ ಲೋಕಸ್ಯ ಕಾ ಗತಿರಿತಿ, ಆಕಾಶ ಇತಿ ಹೋವಾಚ' (ಛಾಂ.ಉ. ೧-೯) ಇತ್ಯತ್ರ ಭೂತಾಕಾಶಸ್ಯ ಪ್ರಾಪ್ತಿಃ। ನ ಚಾಸೌ ಯುಜ್ಯತೇ, ಕಿಂತು ವಿಷ್ಣು-ರೇವ। 'ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ' (ಛಾಂ. ಉ. ೧-೯) ಇತ್ಯಾದಿ ತಲ್ಲಿಂಗಾತ್ ।**

ಹೀಗೆ ತಿಳಿಯತಕ್ಕದ್ದಲ್ಲ. ಏಕೆಂದರೆ –

ಆಕಾಶಸ್ತಲ್ಲಿಂಗಾತ್ - ಆಕಾಶಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ. ವಿಷ್ಣುವಿನ ಅಸಾಧಾರಣಧರ್ಮಗಳೇ ಶ್ರುತವಾಗಿರುವುದರಿಂದ.

'ಅಸ್ಯಲೋಕಸ್ಯ ಕಾ ಗತಿಃ? ಇತಿ ಆಕಾಶ ಇತಿ ಹೋವಾಚ' ಎಂಬ ವಾಕ್ಯದಲ್ಲಿ ಭೂತಾಕಾಶವೇ ಪ್ರತಿಪಾದಿತವಾಗಿದೆ ಎಂದು ಶಂಕಿಸ-ಲಾಗಿದೆ. ಆದರೆ ಅದು ಯುಕ್ತವಲ್ಲ. ಆದರ ಬದಲು ವಿಷ್ಣುವೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ,

'ಸ ಏಷ ಪರೋವರೀಯಾನ್ ಉದ್ಗೀಥಃ ಸ ಏಷೋಽನಂತಃ' ಇತ್ಯಾದಿ ವಾಕ್ಯದಲ್ಲಿ ವಿಷ್ಣುವಿನ ಅಸಾಧಾರಣಧರ್ಮಗಳೇ ಹೇಳ-ಲ್ಪಟ್ಟಿವೆ.

(ಭಾ.ದೀ.) ಸಿದ್ಧಾಂತಯತಿ – ಇತೀತಿ ॥ 'ಕುತೋ ನ ಮಂತವ್ಯಮ್?' ಇತ್ಯಾ-ಶಂಕಾಯಾಂ ತತ್ರ ಹೇತುತಯಾ ಸೂತ್ರಮುಪಾದತ್ತೇ – ಯತ ಇತಿ ॥ ಇದಂ ಚಾಽವರ್ತತೇ । ತತ್ರ ಆದ್ಯಸ್ಯ 'ಯತಶ್ಚೋದೇತಿ' ಇತಿವತ್ ಕುತಃ? ಇತ್ಯರ್ಥಃ ।

'ಯಚ್ಛಬ್ದಸ್ತು ಪರಾಮರ್ಶೇ ಪ್ರಶ್ನಾರ್ಥೇಽಪಿ ಚ ಭಣ್ಯತೇ' ಇತಿ ಭಾಗವತತಾತ್ಪ-ರ್ಯೋಕ್ತೇಃ । ದ್ವಿತೀಯಸ್ತು 'ನ ಮಂತವ್ಯಮ್' ಇತಿ ಪ್ರತಿಜ್ಞಾಯಾಂ ಸೂತ್ರಾರ್ಥಸ್ಯ ಹೇತುತ್ವದ್ಯೋತಕಃ ।

ವಿಷಯಾದೇಃ ಪೂರ್ವಪಕ್ಷಫಲಕಥನೇನ ಸೂಚನೇಽಪಿ ಮುಖತೋಽನುಕ್ತೇಃ ತದನುವಾದಪೂರ್ವಕಂ ಸೂತ್ರಂ ವ್ಯಾಚಷ್ಟೇ – **ಅಸ್ಯೇತಿ** ॥ ಇತ್ಯತ್ರ 'ವಾಕ್ಯೇ ಪ್ರತಿಪಾದ್ಯತ್ವಸ್ಯ' ಇತಿ ಶೇಷಃ । ಚೋಽಪ್ಯರ್ಥಃ । ಯದ್ಯಪಿ ತಥಾಪಿ ಇತ್ಯರ್ಥೇ । **ಅಸೌ** 'ಆಕಾಶಃ ಅತ್ರ ವಾಚ್ಯಃ' ಇತಿ ಶೇಷಃ । ಸೂತ್ರೇಽನುವೃತ್ತಸ್ಯ 'ತತ್ತು' ಇತ್ಯಸ್ಯಾರ್ಥಃ 'ವಿಷ್ಣುರೇವ' ಇತಿ । **ಇತ್ಯಾದೀತಿ** ॥ ಲುಪ್ತವಿಭಕ್ತಿಕೋ ನಿರ್ದೇಶಃ । ಆದಿಶಬ್ದಾತ್ 'ಸರ್ವಾಣಿ ಭೂತಾನಿ' ಇತ್ಯಾದಿಜಗತ್ಕಾರಣತ್ವಪ್ರತಿಪಾದಕಂ ವಾಕ್ಯಂ ಗೃಹ್ಯತೇ । ಯಥೋಕ್ತಂ **ತತ್ತ್ವಪ್ರದೀಪೇ** – 'ಸರ್ವಾಣಿ ಭೂತಾನಿ ಇತ್ಯಾದಿನಾ ಉದೀರ್ಯ-ಮಾಣಂ ಜಗದುತ್ಪಾದಕತ್ವಾದಿಕಮ್ ಆದಿಶಬ್ದಾತ್ ಉಪಾದದೀತ' ಇತಿ । ಲಿಂಗಪದಂ ಶ್ರುತ್ಯುಪಲಕ್ಷಕಮ್ ।

ಇತಿ ಎಂಬ ವಾಕ್ಯದಿಂದ ಸಿದ್ಧಾಂತವನ್ನು ಹೇಳುತ್ತಿದ್ದಾರೆ. ಪೂರ್ವಪಕ್ಷಿಯು ಶಂಕಿಸಿ-ದಂತೆ ಏಕೆ ತಿಳಿಯತಕ್ಕದ್ದಲ್ಲ? ಎಂದು ಶಂಕಿಸಿದಾಗ, ಆ ವಿಷಯದಲ್ಲಿ ಹೇತುವಾಗಿ ಸೂತ್ರವನ್ನೇ ಯತಃ ಎಂಬ ಶಬ್ದದಿಂದ ಗ್ರಹಿಸುತ್ತಿದ್ದಾರೆ. ಯತಃ ಎಂಬ ಪದವು ಆವೃತ್ತಿಯನ್ನು ಪಡೆಯುತ್ತದೆ. ಅವುಗಳಲ್ಲಿ ಮೊದಲನೆಯ ಯತಃ ಎಂಬ ಶಬ್ದಕ್ಕೆ 'ಯತಶ್ಚೋದೇತಿ' ಎಂಬ ವಾಕ್ಯದಲ್ಲಿರುವ ಯತಃ ಎಂಬ ಶಬ್ದಕ್ಕೆ ಹೇಗೋ ಹಾಗೆ ಕುತಃ – ಏಕೆಂದರೆ ಎಂದು ಅರ್ಥ. ಭಾಗವತತಾತ್ಪರ್ಯದಲ್ಲಿ 'ಯಚ್ಛಬ್ದಸ್ತು ಪರಾಮರ್ಶೇ ಪ್ರಶ್ನಾರ್ಥೇಽಪಿ ಚ ಭಣ್ಯತೇ' – ಯಚ್ಛಬ್ದವು ಪರಾಮರ್ಶವನ್ನು ಸೂಚಿಸುವುದು ಹಾಗೆಯೇ ಪ್ರಶ್ನೆ ಎಂಬ ಅರ್ಥದಲ್ಲೂ ಪ್ರಯೋಗಿಸಲ್ಪಡುವುದು - ಎಂದು ಕೋಶವನ್ನು ಉದಾಹರಿಸಲಾಗಿದೆ. ಎರಡನೆಯ ಯತಃಶಬ್ದವು ನ ಮಂತವ್ಯಮ್ - ಹಾಗೆ ತಿಳಿಯತಕ್ಕದ್ದಲ್ಲ ಎಂಬ ಪ್ರತಿಜ್ಞೆಗೆ ಸೂತ್ರಾರ್ಥವೇ ಹೇತುವಾಗಿದೆ ಎಂದು ಸೂಚಿಸು-ವುದು.

ಪೂರ್ವಪಕ್ಷದ ಫಲವನ್ನು ಹೇಳಿದ್ದರಿಂದ ಈ ಅಧಿಕರಣದ ವಿಷಯ ಮೊದಲಾದವುಗಳು ಸೂಚಿತವಾಗಿದ್ದರೂ ಕಂಠತಃ ಹೇಳದಿರುವುದರಿಂದ ಆ ವಿಷಯಾದಿಗಳನ್ನು ಅನುವಾದ ಮಾಡಿ, 'ಅಸ್ಯ' ಇತ್ಯಾದಿ ವಾಕ್ಯದಿಂದ ಭಾಷ್ಯಕಾರರು ಸೂತ್ರವನ್ನು ವ್ಯಾಖ್ಯಾನಿಸುತ್ತಿದ್ದಾರೆ. 'ಇತ್ಯತ್ರ' ಎಂದರೆ ಈ ವಾಕ್ಯದಲ್ಲಿ ಎಂದು ಅರ್ಥ. 'ಪ್ರತಿಪಾದ್ಯತ್ವಸ್ಯ' - ಎಂಬ ಪದವು ಇಲ್ಲಿ ಶೇಷವಾಗಿದೆ. ನ ಚಾಸೌ ಎಂಬಲ್ಲಿರುವ ಚಶಬ್ದವು ಅಪಿ ಎಂಬ ಅರ್ಥವುಳ್ಳದ್ದಾಗಿ 'ಯದ್ಯಪಿ ತಥಾಪಿ' ಎಂಬ ಅರ್ಥವನ್ನು ಸೂಚಿಸುವುದು. **ಅಸೌ** - ಅಂದರೆ ಆಕಾಶವು; 'ಅತ್ರ ವಾಚ್ಯಃ' ಎಂಬ ಪದಗಳು ಇಲ್ಲಿ ಶೇಷವಾಗಿವೆ. ಸೂತ್ರದಲ್ಲಿ (ತತ್ತು ಸಮನ್ವಯಾತ್ ಎಂಬ ಸೂತ್ರದಿಂದ) ಅನುವೃತ್ತಿಯನ್ನು ಪಡೆದಿರುವ 'ತತ್ ತು' ಎಂಬ ಪದಗಳ ಅರ್ಥವನ್ನು 'ವಿಷ್ಣುರೇವ' ಎಂದು ಹೇಳಲಾಗಿದೆ. 'ಇತ್ಯಾದಿ ತಲ್ಲಿಂಗಾತ್'[೧] ಎಂಬಲ್ಲಿರುವ ಇತ್ಯಾದಿಶಬ್ದವು ವಿಭಕ್ತಿಲೋಪವನ್ನು ಪಡೆದಿರುವ ಶಬ್ದವಾಗಿದೆ. ಆದಿ ಶಬ್ದದಿಂದ 'ಸರ್ವಾಣಿ ಭೂತಾನಿ'(ಆಕಾಶಾದೇವ ಸಮುತ್ಪದ್ಯಂತೇ) ಇತ್ಯಾದಿ ಜಗತ್ಕಾರಣತ್ವವನ್ನು ಪ್ರತಿಪಾದಿಸುವ ವಾಕ್ಯವು ಗ್ರಹಿಸಲ್ಪಡುವುದು. ತತ್ವಪ್ರದೀಪದಲ್ಲಿ– 'ಸರ್ವಾಣಿ ಭೂತಾನಿ ಇತ್ಯಾದಿ ವಾಕ್ಯದಿಂದ ಹೇಳಲಾಗಿರುವ ಜಗದುತ್ಪಾದಕತ್ವವೇ ಮೊದಲಾದವುಗಳನ್ನು ಆದಿಶಬ್ದದಿಂದ ಸ್ವೀಕರಿಸಬೇಕು' ಎಂದು ಹೀಗೆಯೇ ಹೇಳಲಾಗಿದೆ. ತಲ್ಲಿಂಗಾತ್ ಎಂಬಲ್ಲಿರುವ ಲಿಂಗಪದವು ಶ್ರುತಿಯನ್ನೂ ಲಕ್ಷಣಾ ಮೂಲಕವಾಗಿ ಹೇಳುವುದು.

(೧) 'ಇತ್ಯಾದಿ ತಲ್ಲಿಂಗಾತ್' ಎಂಬಲ್ಲಿ ಇತ್ಯಾದಿ ಎಂದರೆ 'ಇತ್ಯಾದಿ ವಾಕ್ಯದಲ್ಲಿ' ಎಂದರ್ಥ. ಆದ್ದರಿಂದ ಇತ್ಯಾದೌ ಎಂದು ಸಪ್ತಮೀವಿಭಕ್ತಿ ಇರಬೇಕಾಗಿತ್ತು. ಆ ವಿಭಕ್ತಿಯು ಇಲ್ಲಿ ಲೋಪವನ್ನು ಹೊಂದಿದೆ ಎಂದು ಭಾವ.

(ಭಾ.ದೀ.) ತಥಾ ಚ ಇತ್ಥಂ ಯೋಜನಾ –

ಯದ್ಯಪಿ 'ಅಸ್ಯ ಲೋಕಸ್ಯ' ಇತಿ ಛಂದೋಗವಾಕ್ಯೇ ಭೂತಾಕಾಶಸ್ಯ ಶ್ರುತ್ಯಾದಿಬಲಾದಸ್ತಿ ಪ್ರತಿಪಾದ್ಯತ್ವಸ್ಯ ಪ್ರಾಪ್ತಿಃ । ತಥಾಪಿ, ನ ಅಸೌ ಅತ್ರ ವಾಕ್ಯೇ ಆಕಾಶಪದೇನ ವಾಚ್ಯೋ ಯುಜ್ಯತೇ, ಕಿಂತು ವಿಷ್ಣುರೇವ । ಕುತಃ? **ಸ ಏಷಃ** ಇತ್ಯಾದಿ ವಾಕ್ಯೇ **ತಲ್ಲಿಂಗಾತ್** – ತಸ್ಯ ವಿಷ್ಣೋರ್ಲಿಂಗಮ್ ಅಸಾಧಾರಣಧರ್ಮಃ ಪರೋವರೀಯ-

ಸ್ತ್ವಾದಿಃ । ತಸ್ಯ ತಸ್ಮಿನ್ ಆಕಾಶೇ ಶ್ರವಣಾತ್ ಉಕ್ತತ್ವಾತ್ । ಯತ ಏವಂ ತಲ್ಲಿಂಗಾತ್ ಅಸೌ ಛಂದೋಗಶ್ರುತ್ಯುಕ್ತಾಕಾಶೋ ವಿಷ್ಣುರೇವ ತತ ಏವ '**ಕೋ ಹಿ**' ಇತಿ ತೈತ್ತಿರೀಯವಾಕ್ಯೇಽಪಿ ಅಸಾವೇವ ಪ್ರತಿಪಾದ್ಯತೇ ಇತಿ ತಸ್ಯೈವ ಆನಂದಮಯತ್ವೇ ಹೇತುರುಕ್ತಃ, ನ ತು ಭೂತಸ್ಯ; ಅತಃ 'ಭೂತಾಕಾಶಸ್ಯ ಆನಂದಮಯತ್ವೇ ಹೇತುರುಕ್ತಃ, ನ ತು ವಿಷ್ಣೋರಿತಿ ನ ಮಂತವ್ಯಮ್ – ಇತಿ ॥

ಅನೇನ ಸೂತ್ರಯೋಜನಾ ದರ್ಶಿತಾ ।

ತಥಾಚ - ಭಾಷ್ಯವಾಕ್ಯಗಳ ಯೋಜನೆ ಹೀಗಿದೆ –

ಯದ್ಯಪಿ 'ಅಸ್ಯ ಲೋಕಸ್ಯ' ಎಂಬ ಛಂದೋಗವಾಕ್ಯದಲ್ಲಿ ಶ್ರುತಿ ಮೊದಲಾದ-ವುಗಳ ಆಧಾರದಿಂದ ಭೂತಾಕಾಶವೇ ಪ್ರತಿಪಾದಿತವಾಗಿದೆ ಎಂದು ಪ್ರಾಪ್ತವಾಗುವುದು. ಆದರೂ ಆ ಭೂತಕಾಶವು ಈ ವಾಕ್ಯದಲ್ಲಿ ಆಕಾಶಪದದಿಂದ ವಾಚ್ಯವಾಗಿದೆ ಎಂಬುದು ಯುಕ್ತವಲ್ಲ; ಅದರ ಬದಲು ವಿಷ್ಣುವೇ ಇಲ್ಲಿ ಆಕಾಶಪದದಿಂದ ವಾಚ್ಯನೆನ್ನುವುದು ಯುಕ್ತವಾಗಿದೆ. ಏಕೆಂದರೆ, ಸ ಏಷಃ ಇತ್ಯಾದಿ ವಾಕ್ಯದಲ್ಲಿ, ತಲ್ಲಿಂಗಾತ್ – ತಸ್ಯ - ಆ ವಿಷ್ಣುವಿನ, ಲಿಂಗಂ- ಪರೋವರೀಯಸ್ತ್ವ ಮೊದಲಾದ ಅಸಾಧಾರಣತ್ವ ಧರ್ಮಗಳು ; ತಸ್ಮಿನ್ ಶ್ರವಣಾತ್ - (ಆ ಆಕಾಶನಲ್ಲಿ) ಉಕ್ತವಾಗಿರುವುದರಿಂದ. ಯಾವ ಕಾರಣದಿಂದ ಹೀಗೆ ವಿಷ್ಣುವಿನ ಅಸಾಧಾರಣಧರ್ಮಗಳಿಂದಾಗಿ ಛಂದೋಗಶ್ರುತಿಯಲ್ಲಿ ಉಕ್ತವಾಗಿರುವ ಆಕಾಶವು ವಿಷ್ಣುವೇ ಆಗಿದ್ದಾನೋ, ಆದ್ದರಿಂದಲೇ 'ಕೋ ಹಿ' ಇತ್ಯಾದಿ ತೈತ್ತಿರೀಯವಾಕ್ಯದಲ್ಲೂ ಈ ವಿಷ್ಣುವೇ ಪ್ರತಿಪಾದಿತನಾಗಿದ್ದಾನೆ. ಆದುದರಿಂದ ವಿಷ್ಣುವಿಗೆ ಆನಂದಮಯತ್ವವಿದೆ ಎಂಬ ವಿಷಯದಲ್ಲಿ (ಕೋ ಹ್ಯೇವಾನ್ಯಾತ್ ಇತ್ಯಾದಿ ವಾಕ್ಯ-ಗಳಿಂದ) ಹೇತುವನ್ನು ಹೇಳಲಾಗಿದೆ ಹೊರತು ಭೂತಾಕಾಶವು ಆನಂದಮಯ ಎಂಬ ವಿಷಯದಲ್ಲಿ ಹೇತುವನ್ನು ಹೇಳಲಾಗಿಲ್ಲ. ಆದ್ದರಿಂದ ಭೂತಾಕಾಶಕ್ಕೆ ಆನಂದಮಯತ್ವ-ವನ್ನು ಸಾಧಿಸಲು ಹೇತುವನ್ನು ಹೇಳಲಾಗಿದೆ ಹೊರತು ವಿಷ್ಣುವಿಗೆ ಆನಂದಮಯತ್ವ-ವನ್ನು ಸೂಚಿಸಲು ಹೇತುವನ್ನು ಹೇಳಲಾಗಿಲ್ಲ ಎಂದು ತಿಳಿಯತಕ್ಕದ್ದಲ್ಲ – ಎಂದು ಈ ಭಾಷ್ಯದಿಂದ ಸೂತ್ರಗಳ ಪದಗಳ ಯೋಜನೆಯು ಸೂಚಿತವಾಗಿದೆ.

(ಭಾ.ದೀ.) '**ಅಸ್ಯ**' ಇತ್ಯಾದೇರಯಮರ್ಥಃ – **ಅಸ್ಯ** ಪ್ರತ್ಯಕ್ಷಸಿದ್ಧಸ್ಯ ಪೃಥಿವೀಲೋಕಸ್ಯ ತದಭಿಮಾನಿನಃ ಚತುರ್ಮುಖಸ್ಯ, **ಕಾ ಗತಿಃ** ಆಶ್ರಯಃ ಇತಿ ಶಿಲಕೇನ ಪೃಷ್ಟಃ ಪ್ರವಾಹಣೋ ರಾಜಾ 'ಆದೀಪ್ತತ್ವಾದ್ ಆಕಾಶನಾಮಕೋ ವಿಷ್ಣುಃ' ಇತಿ ಪ್ರತ್ಯುವಾಚ । ಕಥಮ್? ಇತ್ಯಾಕಾಂಕ್ಷಾಯಾಂ ತದುಪಪಾದನಾಯ ತಸ್ಯ ಆಕಾಶಸ್ಯ ಮಹಿಮಾನಮಾಹ – 'ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ, ಆಕಾಶಂ ಪ್ರತ್ಯಸ್ತಂ ಯಂತಿ ಆಕಾಶೋ ಹ್ಯೇವ ಏಭ್ಯೋ ಜ್ಯಾಯಾನಾಕಾಶಃ ಪರಾಯಣಂ ಸ ಏಷ ಪರೋವರೀಯಾನ್ ಉದ್ಗೀಥಃ ಸ ಏಷೋಽನಂತಃ' ಇತಿ । ಅತ್ರ ವೈಶಬ್ದಸ್ಯ ಪ್ರಸಿದ್ಧಿದ್ಯೋತಕಸ್ಯ ಸನ್ನಿಹಿತಸರ್ವಭೂತಾನ್ವಯೋ ವಾ, 'ಸ್ಯುರೇವಂ ತು ಪುನರ್ವೈವ ಇತ್ಯವಧಾರಣವಾಚಕಾಃ' ಇತ್ಯಭಿಧಾನಾದ್ ಅವಧಾರಣಾರ್ಥತ್ವಂ ವಾ ದ್ರಷ್ಟವ್ಯಮ್ । ಭೂತಶಬ್ದೋ ಭೂತಾಕಾಶ ಏವಾತ್ರೋಚ್ಯತೇ ಇತಿ ಪೂರ್ವಪಕ್ಷೇ ಆಕಾಶವ್ಯತಿರಿಕ್ತಭೂತಪರಃ । ಸಿದ್ಧಾಂತೇ ತು ಸರ್ವಭೂತಪರಃ । ಬ್ರಹ್ಮಾದಿಸರ್ವಜಗತ್ಪರೋ ವಾ । ತಥಾ ಚ '**ಸರ್ವಾಣಿ ಇಮಾನಿ**' ಪ್ರಮಿತಾನಿ ಆಕಾಶಾದಿಭೂತಾನಿ ಬ್ರಹ್ಮಾದಿ ಜಗದ್ ವಾ **ಆಕಾಶಾದೇವ ಸಮುತ್ಪದ್ಯಂತೇ** । '**ಹ ವೈ**' ಪ್ರಸಿದ್ಧಂ ಹಿ । ಆಕಾಶಂ '**ಪ್ರತ್ಯಸ್ತಮ್**' ಅದರ್ಶನಂ **ಯಂತಿ** ತತ್ರೈವ ಪ್ರಲಯೇ ಮುಕ್ತೌ ಚ ಲೀನಾಃ ಭವಂತಿ । ಕುತಃ? ಹಿ = ಯಸ್ಮಾತ್, ಆಕಾಶ ಏವ ಏಭ್ಯಃ ಬ್ರಹ್ಮಾದಿಭ್ಯೋ **ಜ್ಯಾಯಾನ್** ಅಧಿಕೋತ್ತಮಃ। ಕುತ ಏತತ್? ಯತಃ ಆಕಾಶಃ **ಪರಾಯಣಮ್** ಉತ್ತಮಾಶ್ರಯಃ, ನ ಏತಸ್ಮಾತ್ ಉತ್ತಮಂ ವಸ್ತು ಆಶಂಕ್ಯಮಿತಿ ಭಾವೇನಾಽಹ – **ಸ ಇತಿ** ॥ **ಸ ಏಷಃ** ಆಕಾಶನಾಮಾ ಭಗವಾನ್ **ಪರೋವರೀಯಾನ್** ಅತ್ರ-

ಪರಸ್ಮಾದುತ್ತಮಂ ಪ್ರೋಕ್ತಂ ಪರೋ ಇತಿ ತತಃ ಪರಮ್ ।
ಪರೋವರಂ ಪರಂ ತಸ್ಮಾತ್ ಪ್ರೋಕ್ತಂ ಪಾರೋವರೀಯಕಮ್ ॥

ಇತಿ ಸಾಮಸಂಹಿತಾವಚನಾನುಸಾರೇಣ ಆದೌ ಪರ ಇತಿ ಶಬ್ದಾಂತರಸ್ಯ , ಮಧ್ಯೇ ವರಶಬ್ದಾಂತರಸ್ಯ ಚಾಽವಾಪೇನ ವೃತ್ತಿವಾಕ್ಯೇ ಸುಬಾದೇಶಸ್ಯ ಸೋರುಲೋಪೇನ ರುತ್ವೋತ್ವಗುಣೇಷು ಸಮಾನೇ ಪರೇ ಆವಾಪಿತಶಬ್ದದ್ವಯಸ್ಯ ಲೋಪೇ ಚೋತ್ತಮೋ-

**ತ್ತಮೋತ್ತಮ ಇತ್ಯರ್ಥೋ ಜ್ಞಾತವ್ಯಃ । ಉದ್ಗೀಥಃ ಉಚ್ಚತ್ವೇನ ಗೀತಃ ಉಕ್ತೋ ವೇದೇನ । ತಕಾರಸ್ಯ ಥಕಾರೋ ವ್ಯತ್ಯಯಾತ್ । ಸ ಏಷಃ ಆಕಾಶಃ ಅನಂತಃ ದೇಶ-ಕಾಲಗುಣೈರಪರಿಚ್ಛಿನ್ನ ಇತಿ । ಛಾಂದೋಗ್ಯಭಾಷ್ಯೇ ತು 'ಉಚ್ಚತ್ವಾತ್ ಗೀತತ್ವಾತ್ ಸರ್ವಸ್ಥಾನಸ್ಥತ್ವಾತ್ ಉದ್ಗೀಥೋ ಭಗವಾನ್' ಇತಿ ವ್ಯಾಖ್ಯಾತಮ್ ।**

'ಅಸ್ಯ' ಇತ್ಯಾದಿ ಶ್ರುತಿಯ ಅರ್ಥವು ಹೀಗಿದೆ –

ಅಸ್ಯ - ಪ್ರತ್ಯಕ್ಷಸಿದ್ಧವಾದ ಪೃಥಿವೀ ಲೋಕಕ್ಕೆ ಹಾಗೂ ಅದರ ಅಭಿಮಾನಿಯಾದ ಚತುರ್ಮುಖನಿಗೆ, ಕಾ ಗತಿಃ? - ಯಾರು ಆಶ್ರಯನಾಗಿದ್ದಾನೆ? ಎಂದು ಶಿಲಕನಿಂದ ಪ್ರಶ್ನಿಸಲ್ಪಟ್ಟ ಪ್ರವಾಹಣರಾಜನು 'ಅತ್ಯಂತ ಪ್ರಕಾಶಮಾನನಾಗಿರುವ ಕಾರಣ ಆಕಾಶ-ಶಬ್ದದಿಂದ ವಾಚ್ಯನಾದ ವಿಷ್ಣುವು ಆಶ್ರಯನು' ಎಂದು ಉತ್ತರಿಸಿದನು. ಇದು ಹೇಗೆ? ಎಂಬ ಜಿಜ್ಞಾಸೆಗೆ ಉತ್ತರವಾಗಿ ತಾನು ಹೇಳಿದುದನ್ನು ಸಮರ್ಥಿಸಲು ಆ ಆಕಾಶದ ಮಹಿಮೆಯನ್ನು 'ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪ-ದ್ಯಂತೇ, ಆಕಾಶಂ ಪ್ರತ್ಯಸ್ತಂ ಯಂತಿ ಆಕಾಶೋ ಹ್ಯೇವ ಏಭ್ಯೋ ಜ್ಯಾಯಾನಾಕಾಶಃ ಪರಾಯಣಂ ಸ ಏಷ ಪರೋವರೀಯಾನ್ ಉದ್ಗೀಥಃ ಸ ಏಷೋಽನಂತಃ' ಎಂದು ಹೇಳುವನು. ಇಲ್ಲಿ ಪ್ರಸಿದ್ಧಿಯನ್ನು ಸೂಚಿಸುವ ವೈಶಬ್ದಕ್ಕೆ ಸಮೀಪದಲ್ಲಿರುವ ಸರ್ವ-ಭೂತಶಬ್ದದೊಂದಿಗೆ ಅನ್ವಯವನ್ನು ಹೇಳಬೇಕು. ಅಥವಾ, 'ಸ್ಮರೇವಂ ತು ಪುನರ್ವೈ-ವೇತ್ಯವಧಾರಣವಾಚಕಾಃ' ಎಂಬ ಕೋಶವನ್ನನುಸರಿಸಿ ವೈಶಬ್ದವು ಅವಧಾರಣಾ-ರ್ಥಕವಾಗಿದೆ ಎಂದಾದರೂ ತಿಳಿಯತಕ್ಕದ್ದು. ಇಲ್ಲಿ ಭೂತಶಬ್ದವು, ಭೂತಾಕಾಶವೇ ಈ ಶ್ರುತಿಯಲ್ಲಿ ಹೇಳಲ್ಪಟ್ಟಿದೆ ಎಂಬ ಪೂರ್ವಪಕ್ಷದ ರೀತ್ಯಾ ಭೂತಾಕಾಶವ್ಯತಿರಿಕ್ತವಾದ ಭೂತಗಳನ್ನು ಹೇಳುವುದು. ಸಿದ್ಧಾಂತರೀತ್ಯಾ ಭೂತಾಕಾಶವನ್ನೂ ಒಳಗೊಂಡಂತೆ ಎಲ್ಲ ಭೂತಗಳನ್ನೂ ಹೇಳುವುದು. ಅಥವಾ, ಬ್ರಹ್ಮ ಮೊದಲಾದ ಸಕಲ ಜಗತ್ತನ್ನು ಹೇಳುವುದು. ತಥಾಚ – 'ಸರ್ವಾಣಿ ಇಮಾನಿ' ಪ್ರಮಾಣಸಿದ್ಧವಾಗಿರುವ ಈ ಎಲ್ಲ ಆಕಾಶವೇ ಮೊದಲಾದ ಭೂತಗಳು ಅಥವಾ ಬ್ರಹ್ಮಾದಿ ಜಗತ್ತು ಆಕಾಶದಿಂದಲೇ ಹುಟ್ಟುತ್ತವೆ. ಹ ವೈ - ಇದು ಪ್ರಸಿದ್ಧವಾದ ವಿಷಯವಾಗಿದೆ. ಆಕಾಶಂ ಪ್ರತಿ ಅಸ್ತಂ ಯಂತಿ – ಆ ಭೂತಗಳು ಆಕಾಶದಲ್ಲಿ ಅದರ್ಶನವನ್ನು ಅಂದರೆ ಅಲ್ಲಿಯೇ ಪ್ರಲಯ-

ಕಾಲದಲ್ಲಿ ಮತ್ತು ಮುಕ್ತಿಯಲ್ಲಿ ಲೀನವಾಗುತ್ತವೆ. ಹಿ – ಏಕೆಂದರೆ, ಆಕಾಶ ಏವ - ಆಕಾಶವೇ, ಏಭ್ಯಃ- ಬ್ರಹ್ಮಾದಿಗಳಿಗಿಂತ, ಜ್ಯಾಯಾನ್ - ಅತ್ಯಧಿಕವಾಗಿ ಉತ್ತಮನಾಗಿ-ದ್ದಾನೆ. ಇದು ಹೇಗೆ ಎಂದರೆ, ಆಕಾಶಃ ಪರಾಯಣಮ್ - ಆಕಾಶನು ಅವುಗಳಿಗೆ ಉತ್ತಮನಾದ ಆಶ್ರಯನಾಗಿದ್ದಾನೆ. ಈ ಆಕಾಶಕ್ಕಿಂತ ಉತ್ತಮವಾದ ವಸ್ತು ಮತ್ತೊಂದು ಇರುವುದೆಂದು ಶಂಕಿಸಲಾಗದು ಎಂಬ ಭಾವದಿಂದ 'ಸ ಏಷ' ಇತ್ಯಾದಿಯಾಗಿ ಹೇಳ-ಲಾಗಿದೆ. ಸ ಏಷಃ - ಈ ಆಕಾಶನಾಮಕನಾದ ಭಗವಂತನು, ಪರೋವರೀಯಾನ್ ಎಂದೆನಿಸಿದ್ದಾನೆ. ಇಲ್ಲಿ –

ಪರಸ್ಮಾದುತ್ತಮಂ ಪ್ರೋಕ್ತಂ ಪರೋ ಇತಿ ತತಃ ಪರಮ್ ।
ಪರೋವರಂ ಪರಂ ತಸ್ಮಾತ್ ಪ್ರೋಕ್ತಂ ಪಾರೋವರೀಯಕಮ್ ॥

ಎಂಬ ಸಾಮಸಂಹಿತಾವಚನವನ್ನು ಅನುಸರಿಸಿ, (೧)ಆದಿಯಲ್ಲಿ ಪರ ಎಂಬ ಇನ್ನೊಂದು ಶಬ್ದ, ಮಧ್ಯದಲ್ಲಿ ಇನ್ನೊಂದು ಪರ ಎಂಬ ಶಬ್ದದ ಸೇರಿಸುವಿಕೆಯಿಂದ ಲಭಿಸುವ ವಿಗ್ರಹವಾಕ್ಯದಲ್ಲಿ ಸುಪ್ ಪ್ರತ್ಯಯಕ್ಕೆ ಆದೇಶವಾಗಿ ಬಂದಿರುವ ಸು-ಶಬ್ದದಲ್ಲಿ ಉಕಾರಕ್ಕೆ ಲೋಪವಾಗಿ ಉಳಿದ ಸಕಾರಕ್ಕೆ ರುತ್ವ ಉತ್ವ ಮತ್ತು ಗುಣಗಳು ಬಂದಾಗ, ಸದೃಶಪದವು ಮುಂದಿದ್ದಾಗ ಒಂದು ಸದೃಶಪದವು ಲೋಪವನ್ನು ಹೊಂದುವುದರಿಂದ ಸೇರಿಸಿದ ಎರಡು ಶಬ್ದಗಳು ಲೋಪವಾಗಿ ಪರೋವರೀಯಾನ್ ಎಂದರೆ ಉತ್ತಮೋ-ತ್ತಮೋತ್ತಮ ಎಂಬ ಅರ್ಥವು ಲಭಿಸುವುದು. ಉದ್ಗೀಥಃ ಎಂದರೆ ವೇದದಿಂದ ಉಚ್ಚ-ನೆಂದು ಗೀತಃ - ಹೇಳಲ್ಪಟ್ಟವನು ಎಂದರ್ಥ. ತಕಾರದ ಸ್ಥಾನದಲ್ಲಿ ಥಕಾರವು ವ್ಯತ್ಯಾಸ-ವಾಗಿ ಬಂದಿದೆ. ಸ ಏಷಃ - ಈ ಆಕಾಶನು ಅನಂತಃ - ದೇಶ, ಕಾಲ ಗುಣಗಳಿಂದ ಅಪರಿಚ್ಛಿನ್ನನಾಗಿದ್ದಾನೆ ಎಂದು ಅರ್ಥ. ಛಾಂದೋಗ್ಯಭಾಷ್ಯದಲ್ಲಾದರೋ 'ಉಚ್ಚತ್ವಾದ್ ಗೀತತ್ವಾತ್ ಸರ್ವಸ್ಥಾನಸ್ಥತ್ವಾತ್ ಉದ್ಗೀಥೋ ಭಗವಾನ್' - ಉಚ್ಚನಾದುದರಿಂದ ಹಾಗೆ ವೇದಗಳಲ್ಲಿ ಪ್ರತಿಪಾದ್ಯನಾಗಿರುವುದರಿಂದ ಸರ್ವಸ್ಥಾನಗಳಲ್ಲೂ ಇರುವ ಕಾರಣ ಭಗವಂತನು ಉದ್ಗೀಥನೆಂದೆನಿಸುವನು ಎಂದು (ಉದ್,ಗೀ,ಥ ಎಂಬ ಮೂರು ಪದ-ಗಳ ವ್ಯಾಖ್ಯಾನವನ್ನು) ವ್ಯಾಖ್ಯಾನಮಾಡಲಾಗಿದೆ.

(೧) ಈ ವಾಕ್ಯಗಳ ಭಾವ ಹೀಗಿದೆ –

ಸಮಾಸಪದದಲ್ಲಿರುವ ಪರಶಬ್ದಕ್ಕೂ ಮೊದಲು ಇನ್ನೊಂದು ಪರಶಬ್ದವನ್ನು ಸೇರಿಸಬೇಕು. ಪರಾತ್ ಪರಃ ಎಂಬ ವಿಗ್ರಹವಾಕ್ಯವಿದ್ದು ಪರಪರಃ ಎಂದು ಸಮಾಸವಾಗುವುದು. ಈ ಪರಪರಶಬ್ದಕ್ಕೂ ವರೀಯಾನ್ ಎಂದು ಮುಂದಿರುವ ಶಬ್ದಕ್ಕೂ ಮಧ್ಯೆ ವರಃ ಎಂಬ ಮತ್ತೊಂದು ಶಬ್ದವನ್ನು ಸೇರಿಸಬೇಕು. ಪರಪರಾತ್ ವರಃ ಎಂಬ ವಿಗ್ರಹವಾಕ್ಯವಿದ್ದು ಪರಪರಾದ್ವರಃ ಎಂದು ಸಮಾಸವಾಗುವುದು. ಛಾಂದಸವಾದ್ದರಿಂದ ಪಂಚಮೀವಿಭಕ್ತಿಗೆ ಲೋಪವಾಗದೇ ಹಾಗೆಯೇ ಇರು–ವುದು. 'ಪರಪರಾದ್ವರಾತ್ ವರತರಃ' ಎಂಬ ವಿಗ್ರಹವಾಕ್ಯವನ್ನನುಸರಿಸಿ 'ಪರಪರಾ–ದ್ವರವರೀಯಾನ್' ಎಂದು ಸಮಾಸಪದವಾಗುವುದು. 'ಸಮಾನೇ ಲೋಪಃ' ಎಂಬ ವ್ಯಾಕರಣಶಾಸ್ತ್ರದ ವಚನದ ಪ್ರಕಾರ ಸಮಾನಶಬ್ದಗಳು ಮುಂದಿರುವ ಕಾರಣ ಆವಾಪ ಮಾಡಿಕೊಂಡ ಪರ ಮತ್ತು ವರ ಎಂಬ ಎರಡು ಪದಗಳು ಲೋಪವನ್ನು ಹೊಂದುವವು. ಪರಾದ್ವರೀಯಾನ್ ಎಂಬ ಉಳಿದ ಪದದಲ್ಲಿ ಪಂಚಮೀವಿಭಕ್ತಿಗೆ 'ಸುಪಾಂ ಸುಲುಕ್' ಇತ್ಯಾದಿ ಸೂತ್ರದಿಂದ 'ಸು' ಆದೇಶವಾಗಿ ಬರುವುದು ಮತ್ತು ಅಲ್ಲಿರುವ ಉಕಾರಕ್ಕೆ ಲೋಪವಾಗಿ ಪರಸ್ ವರೀಯಾನ್ ಎಂದಾಗುವುದು. 'ಪರಸ್' ಎಂಬಲ್ಲಿರುವ ಸಕಾರಕ್ಕೆ 'ಸಸಜುಷೋ ರುಃ' ಎಂಬ ಸೂತ್ರದಿಂದ 'ರು' ಎಂಬ ಶಬ್ದವು ಆದೇಶವಾಗಿ ಬರುವುದು. ಆ 'ರು'ಶಬ್ದಕ್ಕೆ 'ಅತೋ ರೋರಪ್ಲುತಾದಪ್ಲುತೇ' ಎಂಬ ಸೂತ್ರದಿಂದ 'ಉ'ಕಾರವು ಆದೇಶವಾಗಿ ಬರುವುದು. 'ಪರ ಉ' ಎಂದಿರುವಾಗ 'ಆದ್ಗುಣಃ' ಎಂಬ ಸೂತ್ರದಿಂದ ಅಕಾರ–ಉಕಾರಗಳ ಸ್ಥಾನದಲ್ಲಿ ಓಕಾರವು ಬಂದು ಪರೋವರೀಯಾನ್ ಎಂದು ರೂಪಸಿದ್ಧಿಯಾಗುವುದು. ಇತರ ಜೀವರಿಗಿಂತ ಉತ್ತಮಳಾದ ಭಾರತೀದೇವಿಗೂ ಉತ್ತಮನಾದ ವಾಯು ಪರಪರ. ಅವನಿಗಿಂತಲೂ ಉತ್ತಮಳಾದ ಲಕ್ಷ್ಮೀ ಪರ–ಪರಾದ್ ವರಳೆನಿಸುವಳು. ಅವಳಿಗಿಂತಲೂ ಅತ್ಯಂತ ಶ್ರೇಷ್ಠನಾದ ನಾರಾಯಣ ಪರಪರಾದ್ವರವರೀಯಾನ್ ಉತ್ತಮೋತ್ತಮೋತ್ತಮ ಎಂಬ ಅರ್ಥವನ್ನು ಪರೋವರೀಯಾನ್ ಎಂಬ ಪದವು ಹೇಳವುದೆಂದು ಸಾರಾಂಶ.

ಭಾ– 'ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ।' (ಋ. ೧-೧೫೪-೧)

**'ಪರೋ ಮಾತ್ರಯಾ ತನ್ವಾ ವೃಧಾನ'(ಋ.೭-೯೯-೧) ಇತ್ಯಾದಿನಾ ತಸ್ಯೈವ ಹಿ (ತಸ್ಯ ಹಿ) ತಲ್ಲಿಂಗಮ್ ।**

'ವಿಷ್ಣುವಿನ ಮಹಿಮೆಗಳನ್ನು ಯಾರು ತಾನೇ ಸಂಪೂರ್ಣವಾಗಿ ಹೇಳಬಲ್ಲನು?' ಸರ್ವಜ್ಞನಾದ ಯಾವ ಚತುರ್ಮುಖನು ಪಾರ್ಥಿವ ಪರಮಾಣುಗಳನ್ನು ಎಣಿಸಬಲ್ಲನೋ ಅವನೂ ಕೂಡ ಹೇಳ-ಲಾರನು!'

'ಎಲೈ ವಿಷ್ಣುವೇ! ಸ್ವರೂಪದಿಂದಲೇ ಅಪರಿಚ್ಛಿನ್ನನಾದ ನೀನು ಅಪರಿ-ಮಿತನಾಗಿದ್ದಿ'.

ಇತ್ಯಾದಿ ಶ್ರುತಿಗಳಿಂದ ಸರ್ವೋತ್ತಮತ್ವ ಮತ್ತು ಅನಂತತ್ವಗಳು ಪರ-ಬ್ರಹ್ಮನ ಅಸಾಧಾರಣಧರ್ಮಗಳೇ ಆಗಿವೆ.

(ಭಾ.ದೀ.) 'ಸ ಏಷೋಽನಂತಃ' ಇತ್ಯುಕ್ತಾನಂತತ್ವಸ್ಯ ಅಪರಿಮಿತತ್ವಸ್ಯ ವಿಷ್ಣು-ನಿಷ್ಠತ್ವಂ ಕುತೋ ಜ್ಞಾಯತೇ? ಇತ್ಯತ ಆಹ – **ವಿಷ್ಣೋರಿತಿ ॥** ವಿಷ್ಣೋರ್ವೀರ್ಯಾಣಿ **ಕಂ ಕೋ ನು ಕೋ ವಾ ಪ್ರವೋಚಮ್** ಪ್ರಾವೋಚತ್ ಸಾಕಲ್ಯೇನ ಪ್ರವಕ್ತಿ, ನ **ಕೋಽಪಿ । ಯಃ** ಕಃ ಕವಿರ್ಬ್ರಹ್ಮಾ **ಪಾರ್ಥಿವಾನಿ ರಜಾಂಸಿ** ಪಾರ್ಥಿವಪರಮಾಣೂನ್ **ವಿಮಮೇ** = ಗಣಯತಿ ಸೋಽಪಿ ನ ಪ್ರವಕ್ತಿ ಇತಿ ಶ್ರುತ್ಯರ್ಥಃ।

'ಪರೋವರೀಯಾನ್' ಇತ್ಯುಕ್ತಸರ್ವೋತ್ತಮತ್ವಸ್ಯ ವಿಷ್ಣುಧರ್ಮತ್ವಂ ಕುತ ಇತ್ಯತ ಆಹ – **ಪರ ಇತಿ ॥** ಅತ್ರ 'ನ ತೇ ಮಹಿತ್ವಮನ್ವಶ್ನುವಂತಿ' ಇತಿ ಉತ್ತರವಾಕ್ಯಾದ್ ಉಕ್ತಾರ್ಥೋ ಜ್ಞಾಯತೇ । ಅತ ಏವ 'ಆದಿ'ಶಬ್ದಃ ಉಭಯಾನ್ವಯೀ । ತತ್ರ ಆದ್ಯೋ 'ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ ಯಃ ಪಾರ್ಥಿವಾನ್ಯಪಿ ಕವಿ-ರ್ವಿಮಮೇ ರಜಾಂಸಿ' ಇತಿ ಸ್ಮೃತಿಗ್ರಾಹೀ। ವ್ಯಾಖ್ಯಾತಾ ಇಯಂ ಶ್ರುತಿಃ ಜನ್ಮನಯೇ। 'ಇತ್ಯಾದಿನಾ ವಾಕ್ಯೇನ' ಇತಿ ಶೇಷಃ। ಯದ್ಯಪಿ ಶ್ರುತ್ಯನುಸಾರಾತ್ ಸರ್ವೋತ್ತಮತ್ವೇ ಪ್ರಥಮಂ ಪ್ರಮಾಣಂ ವಕ್ತವ್ಯಂ ನ ತು ಅನಂತತ್ವೇ। ಅತ ಏವ **ಟೀಕಾಯಾಮ್** ಆದೌ

ಸರ್ವೋತ್ತಮತ್ವಂ ಗೃಹೀತಮ್ । ತಥಾಽಪಿ ಅನಂತತ್ವಸ್ಯ ಸಾವಕಾಶತ್ವಶಂಕಾ-ವಿಷಯತ್ವಾತ್ ಪ್ರಥಮಂ ತತ್ರ ಪ್ರಮಾಣೋಪನ್ಯಾಸಃ । ಅತ ಏವ ತತ್ರೈವೋತ್ತರತ್ರ ಸ್ಮೃತ್ಯಾ ಸಾವಕಾಶತ್ವಶಂಕಾಪರಿಹಾರಃ। **ತಸ್ಯ** ವಿಷ್ಣೋಃ। ಹಿಶಬ್ದೋ ಯತ ಇತ್ಯರ್ಥೇ । **ತತ್** ಅನಂತತ್ವಾದಿ ಲಿಂಗಂ ಧರ್ಮ ಇತ್ಯವಗತಮ್ । ಅತೋ 'ನ ಹೇತುವಿಶೇಷಣಾ-ಸಿದ್ಧಿಃ' ಇತಿ ವಾಕ್ಯಶೇಷಃ। ಏವಕಾರಪಾಠೇ 'ನ ಅನೈಕಾಂತ್ಯಮ್' ಇತಿ ಶೇಷಃ। ಉತ್ತರತ್ರ ಅನ್ವಯೋ ವಾ । ಯದ್ಯಪಿ 'ಅನಂತಃ' ಇತಿ ಶ್ರುತಿಃ, ವಾಚಕಶಬ್ದತ್ವಾತ್ । ತಥಾಽಪಿ ತತ್ಪದಪ್ರವೃತ್ತಿನಿಮಿತ್ತಸ್ಯ ಲಿಂಗತ್ವಮಪಿ ಅವಿರುದ್ಧಮ್ ॥

ಸ ಏಷೋಽನಂತಃ ಎಂಬ ಶ್ರುತಿಯಲ್ಲಿ ಹೇಳಲಾಗಿರುವ ಅನಂತತ್ವವು ಅಂದರೆ ಅಪರಿಮಿತತ್ವವು ವಿಷ್ಣುವಿನಲ್ಲೇ ಇರುವುದು ಎಂದು ಯಾವ ಪ್ರಮಾಣದಿಂದ ತಿಳಿದುಬರುವುದು? ಎಂಬ ಶಂಕೆಗೆ ಉತ್ತರವಾಗಿ ''ವಿಷ್ಣೋಃ'' ಎಂದು ಹೇಳಲಾಗಿದೆ. ವಿಷ್ಣೋಃ - ವಿಷ್ಣುವಿನ, ವೀರ್ಯಾಣಿ - ಮಹಿಮೆಗಳನ್ನು, ಕಂ ನು - ಯಾರು ತಾನೇ, ಪ್ರವೋಚಂ- ಹೇಳಿದ್ದಾನೆ? ಸಂಪೂರ್ಣವಾಗಿ ಹೇಳಬಲ್ಲನು? ಯಾರೂ ಹೇಳಲಾರರು. ಯಃ - ಕಃ - ಯಾವ ಸರ್ವಜ್ಞನಾದ ಚತುರ್ಮುಖಬ್ರಹ್ಮನು ಪಾರ್ಥಿವಾನಿ ರಜಾಂಸಿ - ಪಾರ್ಥಿವ ಪರಮಾಣುಗಳನ್ನು, ವಿಮಮೇ - ಎಣಿಸ-ಬಲ್ಲನೋ! ಅವನೂ ಹೇಳಲಾರನು ಎಂದು ಶ್ರುತಿಯ ಅರ್ಥವಾಗಿದೆ.

'ಪರೋವರೀಯಾನ್' ಎಂದು ಶ್ರುತಿಯಲ್ಲಿ ಹೇಳಲಾದ ಸರ್ವೋತ್ತಮತ್ವವು ವಿಷ್ಣುವಿನ ಧರ್ಮವಾಗಿದೆ ಎಂಬ ವಿಷಯದಲ್ಲಿ ಆಧಾರವೇನು? ಎಂಬ ಶಂಕೆಗೆ ಉತ್ತರವಾಗಿ ''ಪರ'' ಎಂದು ಹೇಳಲಾಗಿದೆ. ಇಲ್ಲಿ 'ನ ತೇ ಮಹಿತ್ವಮನ್ವಶ್ನುವಂತಿ' ಎಂಬ ಮುಂದಿನ ವಾಕ್ಯದಿಂದ ಹೇಳಿದ(ಈ) ವಿಷಯವು ತಿಳಿದುಬರುವುದು. ಆದ್ದ-ರಿಂದಲೇ 'ಇತ್ಯಾದಿನಾ' ಎಂಬಲ್ಲಿರುವ ಆದಿಶಬ್ದವು ಎರಡು ಕಡೆಗೂ ಅನ್ವಯವನ್ನು ಪಡೆಯುವುದು. ಅವುಗಳಲ್ಲಿ ಮೊದಲನೆಯ ಆದಿಶಬ್ದವು 'ವಿಷ್ಣೋರ್ನು ವೀರ್ಯ-ಗಣನಾಂ ಕತಮೋಽರ್ಹತೀಹ ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ' ಎಂಬ ಸ್ಮೃತಿಯನ್ನು ಹೇಳುವುದು. ಈ ಶ್ರುತಿಯು ಜನ್ಮಾಧಿಕರಣದಲ್ಲಿ ವ್ಯಾಖ್ಯಾನಿಸ-ಲ್ಪಟ್ಟಿದೆ. 'ಇತ್ಯಾದಿನಾ' ಎಂಬ ಪದದ ನಂತರ 'ವಾಕ್ಯೇನ' ಎಂಬ ಪದವು ಇಲ್ಲಿ

ಶೇಷವಾಗಿ ಇರುವುದು. ಯದ್ಯಪಿ (ಸ ಏಷ ಪರೋವರೀಯಾನ್ ಎಂಬ) ಶ್ರುತಿಯನ್ನು ಅನುಸರಿಸಿ ಮೊದಲು ಸರ್ವೋತ್ತಮತ್ವವಿಷಯದಲ್ಲಿ ಪ್ರಮಾಣವನ್ನು ಹೇಳಬೇಕೇ ಹೊರತು ಅನಂತತ್ವವಿಷಯದಲ್ಲಲ್ಲ. ಆದ್ದರಿಂದಲೇ ತತ್ವಪ್ರಕಾಶಿಕೆಯಲ್ಲಿ ಮೊದಲು ಸರ್ವೋತ್ತಮತ್ವವು ಗ್ರಹಿಸಲ್ಪಟ್ಟಿದೆ. ಆದರೂ ಅನಂತತ್ವಧರ್ಮವು ಸಾವಕಾಶವಾಗಿದೆ ಎಂಬ ಶಂಕೆ ಬರಲು ಸಾಧ್ಯವಿರುವುದರಿಂದ ಮೊದಲು ಆ ವಿಷಯದಲ್ಲೇ ಪ್ರಮಾಣ-ವನ್ನು ಉದಾಹರಿಸಲಾಗಿದೆ. ಆದ್ದರಿಂದಲೇ ಅಲ್ಲೇ ಮುಂದೆ ಸ್ಮೃತಿಯಿಂದ ಅನಂತತ್ವ-ಧರ್ಮವು ಸಾವಕಾಶವಾಗಿದೆ ಎಂಬ ಶಂಕೆಯನ್ನು ಪರಿಹರಿಸಲಾಗಿದೆ. 'ತಸ್ಯ ಹಿ' ಎಂಬಲ್ಲಿರುವ ತಸ್ಯ ಎಂಬ ಶಬ್ದಕ್ಕೆ ವಿಷ್ಣುವಿನ ಎಂದು ಅರ್ಥ. ಹಿಶಬ್ದವು ಯತಃ ಅಂದರೆ ಯಾವ ಕಾರಣದಿಂದ ಎಂಬ ಅರ್ಥವನ್ನು ಹೇಳುವುದು. ತತ್ - ಅನಂತತ್ವ ಮೊದಲಾದವು; ಲಿಂಗಂ - ಧರ್ಮವಾಗಿದೆ ಎಂದು ತಿಳಿದುಬರುವುದೋ ಆದ್ದರಿಂದ ಹೇತುವಿಶೇಷಣಕ್ಕೆ ಅಸಿದ್ಧಿದೋಷವಿಲ್ಲ ಎಂದು ವಾಕ್ಯದ ಶೇಷವಾಗಿದೆ. ತಸ್ಯೈವ ಎಂದು ಏವಕಾರವಿರುವ ಪಾಠವಿದ್ದಲ್ಲಿ ಅನ್ಯೈಕಾಂತ್ಯವಿಲ್ಲ ಎಂದು ಸೇರಿಸಬೇಕು. ಅಥವಾ ಏವಶಬ್ದಕ್ಕೆ ತಲ್ಲಿಂಗಂ ಎಂಬ ಮುಂದಿನ ಪದದೊಂದಿಗೆ ಅನ್ವಯವಾಗುವುದು. ಯದ್ಯಪಿ 'ಅನಂತಃ' ಎಂಬ ಪದವು ವಾಚಕಶಬ್ದವಾದುದರಿಂದ ಆಕಾಶಶಬ್ದದ ಅರ್ಥ ವಿಷ್ಣುವೇ ಆಗಿರುವನೆಂಬ ವಿಷಯದಲ್ಲಿ ಶ್ರುತಿಪ್ರಮಾಣವಾಗುವುದು(೧). ಆದರೂ ಅನಂತಶಬ್ದದ ಪ್ರವೃತ್ತಿನಿಮಿತ್ತವಾದ ಅನಂತತ್ವವು ಲಿಂಗರೂಪಪ್ರಮಾಣವಾಗುವುದು ಎಂಬ ವಿಷಯ-ದಲ್ಲಿ ಯಾವ ವಿರೋಧವೂ ಇಲ್ಲ.

(೧) ಒಂದು ವಾಕ್ಯದ ಪ್ರತಿಪಾದ್ಯವಿಷಯ ಯಾವುದೆಂದು ನಿರ್ಧರಿಸಲು ಸಹಾಯಕವಾಗುವ 'ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ' ಎಂಬ ಆರು ಪ್ರಮಾಣಗಳಲ್ಲಿ ಶ್ರುತಿ ಎಂದರೆ ವಾಚಕಶಬ್ದ. ಪ್ರಕೃತ 'ಅಸ್ಯ ಲೋಕಸ್ಯ ಕಾ ಗತಿಃ? ಆಕಾಶ ಇತಿ ಹೋವಾಚ' ಎಂಬ ಛಾಂದೋಗ್ಯವಾಕ್ಯದಲ್ಲಿ ಮುಂದೆ ಇರುವ 'ಅನಂತಃ' ಎಂಬ ಪದವು ವಿಷ್ಣುವಾಚಕಶಬ್ದವಾಗಿರುವುದರಿಂದ ಆ ವಾಕ್ಯದಲ್ಲಿರುವ ಆಕಾಶಶಬ್ದವು ವಿಷ್ಣುವನ್ನೇ ಹೇಳುವುದೆಂದು ನಿರ್ಧರಿಸಲು ಶ್ರುತಿರೂಪಪ್ರಮಾಣವಾಗುವುದು. ಆದರೂ 'ಅನಂತ'ಶಬ್ದವು ಹೇಳುವ ಅನಂತತ್ವ ಎಂಬ ಧರ್ಮವು ವಿಷ್ಣುವಿನ ಅಸಾಧಾರಣಧರ್ಮವಾಗಿರುವುದರಿಂದ ಆಕಾಶಶಬ್ದವಾಚ್ಯನು ವಿಷ್ಣುವೆಂದು ನಿರ್ಧರಿಸಲು ಅನಂತಶಬ್ದವು ಲಿಂಗ-

ಪ್ರಮಾಣವನ್ನು ಸೂಚಿಸುವ ಪದವೆಂದು ಹೇಳಿದರೂ ಯಾವ ವಿರೋಧವೂ ಇಲ್ಲವೆಂದು ಭಾವ.

**ಭಾ– 'ಅನಂತೋ ಭಗವಾನ್ ಬ್ರಹ್ಮ ಆನಂದೇತ್ಯಾದಿಭಿಃ ಪದೈಃ ।**
**ಪ್ರೋಚ್ಯತೇ ವಿಷ್ಣುರೇವೈಕಃ ಪರೇಷಾಮುಪಚಾರತಃ ॥'**

**ಇತಿ ಬ್ರಾಹ್ಮೇ ।**

ಅನಂತ, ಭಗವಾನ್, ಬ್ರಹ್ಮ, ಆನಂದ ಮೊದಲಾದ ಪದಗಳಿಂದ ವಿಷ್ಣುವೊಬ್ಬನೇ ಮುಖ್ಯವಾಗಿ ಹೇಳಲ್ಪಡುವನು. ಇತರರು ಔಪಚಾರಿಕವಾಗಿ ಈ ಪದಗಳಿಂದ ಹೇಳಲ್ಪಡುವರು ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.

(ಭಾ.ದೀ.) ನನು ಅನಂತತ್ವಮ್ 'ಅನಂತಾಕಾಶವತ್ ಪಶ್ಯನ್' ಇತಿ ಆಕಾಶಸ್ಯಾಪಿ ಸ್ಮರ್ಯತೇ, ಅತಃ ಸಾವಕಾಶತ್ವಾತ್ ಕಥಂ ವಿಷ್ಣೋರೇವ ತಲ್ಲಿಂಗಮ್? ಇತ್ಯತಃ ಸ್ಮೃತಿಮಾಹ – **ಅನಂತ ಇತಿ ॥** 'ಆನಂದ' ಇತಿ ಲುಪ್ತವಿಭಕ್ತಿಕೋ ನಿರ್ದೇಶಃ । 'ವಿಷ್ಣುರೇವ ಏಕೋ ಮುಖ್ಯತಯಾ ಪ್ರೋಚ್ಯತೇ' ಇತಿ ಸಂಬಂಧಃ । **ಪರೇಷಾಂ** ವಿಷ್ಣೋರನ್ಯೇಷಾಮ್ । **ಉಪಚಾರತಃ** 'ಸ್ವಸ್ವಸಮೀಪಗತಪರಮಾತ್ಮಸಂಬಂಧಾದೇವ ವಾಚ್ಯತಾ' ಇತಿ ಶೇಷಃ । 'ಇತಿ ಬ್ರಾಹ್ಮೇ' ಇತ್ಯಸ್ಯ 'ತಸ್ಯೈವ ತಲ್ಲಿಂಗಮ್ ಇತ್ಯುಕ್ತಮ್' ಇತಿ ಪೂರ್ವೇಣಾನ್ವಯಃ । ಅನೇನ ಏವಕಾರೋ ಲಿಂಗಸ್ಯ ನಿರವಕಾಶತ್ವಜ್ಞಾಪಕಃ ಇತಿ ಸೂಚಿತಮ್ ।

ಅನಂತತ್ವವು 'ಅನಂತಾಕಾಶವತ್ ಪಶ್ಯನ್' ಇತ್ಯಾದಿ ವಾಕ್ಯಗಳಲ್ಲಿ ಆಕಾಶದ ಧರ್ಮವಾಗಿಯೂ ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಆ ಧರ್ಮವು ಸಾವಕಾಶವಾಗಿರುವುದರಿಂದ ಕೇವಲ ವಿಷ್ಣುವಿನ ಅಸಾಧಾರಣಧರ್ಮವೆಂದು ಹೇಳಲು ಹೇಗೆ ಸಾಧ್ಯ ? ಎಂಬ ಶಂಕೆಗೆ ಉತ್ತರವಾಗಿ ಅನಂತ ಎಂಬ ಸ್ಮೃತಿಯನ್ನು ಭಾಷ್ಯಕಾರರು ಉದಾಹರಿಸಿದ್ದಾರೆ. 'ಆನಂದೇತ್ಯಾದಿಭಿಃ'[೧] ಎಂಬಲ್ಲಿ ಆನಂದ ಎಂದು ವಿಭಕ್ತಿಲೋಪವನ್ನು ಪಡೆದ ಪದದ ನಿರ್ದೇಶವಾಗಿದೆ. ವಿಷ್ಣುರೇವ ಏಕಃ ಪ್ರೋಚ್ಯತೇ - ವಿಷ್ಣುವೇ ಮುಖ್ಯವಾಗಿ (ಆ ಪದಗಳಿಂದ) ಹೇಳಲ್ಪಡುವನು ಎಂದು ಪದಗಳ ಅನ್ವಯವಿರು-

ವುದು. ಪರೇಷಾಂ - ವಿಷ್ಣುಭಿನ್ನರಿಗೆ, ಉಪಚಾರತಃ - ತಮ್ಮ ತಮ್ಮ ಸಮೀಪದಲ್ಲಿರುವ ಪರಮಾತ್ಮನ ಸಂಬಂಧವಿರುವುದರಿಂದ ಇಲ್ಲಿ ಆಯಾ ಪದವಾಚ್ಯತ್ವ ಇರುವುದು ಎಂಬ ಪದಗಳು ವಾಕ್ಯಶೇಷವಾಗಿವೆ. 'ಇತಿ ಬ್ರಾಹ್ಮೇ' ಎಂಬ ಪದಗಳಿಗೆ 'ತಸ್ಯೈವ ತಲ್ಲಿಂಗಮ್ ಇತ್ಯುಕ್ತಮ್' 'ಆ ವಿಷ್ಣುವಿಗೇ ಅನಂತತ್ವವು ಲಿಂಗವಾಗಿದೆ ಎಂದು ಹೇಳಲ್ಪಟ್ಟಿದೆ' ಎಂಬುದಾಗಿ ಹಿಂದಿನ ವಾಕ್ಯದೊಂದಿಗೆ ಅನ್ವಯ. ಇದರಿಂದ ವಿಷ್ಣುರೇವ ಎಂಬಲ್ಲಿರುವ ಏವಕಾರವು ಅನಂತತ್ವಲಿಂಗವು ನಿರವಕಾಶವಾಗಿದೆ ಎಂದು ತಿಳಿಸುವುದೆಂದು ಸೂಚಿತವಾಗುವುದು.

(೧) ಬ್ರಾಹ್ಮವಾಕ್ಯದಲ್ಲಿ 'ಆನಂದಃ ಇತ್ಯಾದಿಭಿಃ ಪದೈಃ' ಎಂಬಲ್ಲಿ ಸಂಧಿಯಾದಾಗ 'ಆನಂದಃ' ಎಂಬಲ್ಲಿರುವ ವಿಸರ್ಗವು ಲೋಪವಾಗಿ 'ಆನಂದ ಇತ್ಯಾದಿಭಿಃ ಪದೈಃ' ಎಂದಿರಬೇಕಾಗಿತ್ತು. ಆದರೆ 'ಆನಂದಃ' ಎಂಬಲ್ಲಿರುವ ವಿಭಕ್ತಿಯು ಲೋಪವನ್ನು ಪಡೆದು 'ಆನಂದ' ಎಂದು ಪ್ರಯೋಗ ಮಾಡಿರುವುದರಿಂದ ಗುಣಸಂಧಿಯಾಗಿ 'ಆನಂದೇತ್ಯಾದಿಭಿಃ ಪದೈಃ' ಎಂಬ ಪ್ರಯೋಗವು ಸಾಧುವಾಗಿದೆ ಎಂದು ಭಾವ.

**ಭಾ– 'ನಾಮಾನಿ ಸರ್ವಾಣಿ ಯಮಾವಿಶಂತಿ'** (ಭಾಲ್ಲವೇಯ ಶ್ರುತಿಃ)
**ಇತಿ ಚೋಕ್ತಮ್ ॥ ೨೨ ॥**

**॥ ಇತಿ ಆಕಾಶಾಧಿಕರಣಮ್ ॥ 8 ॥**

'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಲ್ಲಿ ಸರ್ವಶಬ್ದವಾಚ್ಯತ್ವವನ್ನು ವಿಷ್ಣುವಿಗೆ ಹೇಳಲಾಗಿದೆ.

(ಭಾ.ದೀ.) 'ನನು ಶ್ರುತ್ಯಾ ಪೂರ್ವಪಕ್ಷಿತೇ ಕಥಂ ಲಿಂಗೇನ ನಿರ್ಣಯಃ? ಲಿಂಗಸ್ಯ ಶ್ರುತಿತೋ ದುರ್ಬಲತ್ವಾತ್' ಇತ್ಯತಃ 'ಆಕಾಶಶ್ರುತಿರ್ವಿಷ್ಣೌ ಸಾವಕಾಶಾ' ಇತಿ ಶ್ರುತ್ಯಾ ದರ್ಶಯತಿ – **ನಾಮಾನೀತಿ ॥ ಚ** = ಯತಃ, **ನಾಮಾನಿ ಸರ್ವಾಣಿ** ಇತಿ ವಾಕ್ಯೇನ ವಿಷ್ಣೋರಾಕಾಶಾದಿಸರ್ವಶಬ್ದವಾಚ್ಯತ್ವಮ್ ಉಕ್ತಮ್ ಅತೋ ಲಿಂಗೇನ ಶ್ರುತೇರ್ಬಾಧಯಾ ನಿರ್ಣಯೋ ಯುಕ್ತಃ ಇತಿ ಯೋಜನಾ ।

ಶ್ರುತಿಪ್ರಮಾಣದ ಆಧಾರದಿಂದ ಪೂರ್ವಪಕ್ಷವನ್ನು ಮಾಡಿದಾಗ ಲಿಂಗಪ್ರಮಾಣದ ಆಧಾರದಿಂದ ನಿರ್ಣಯ ಮಾಡುವುದು ಹೇಗೆ ಯುಕ್ತವಾಗುವುದು. ಲಿಂಗವು ಶ್ರುತಿ-ಗಿಂತ ದುರ್ಬಲವಾದ ಪ್ರಮಾಣವಾಗಿದೆಯಷ್ಟೇ ಎಂಬ ಶಂಕೆಯನ್ನು ಪರಿಹರಿಸಲು 'ಆಕಾಶಶಬ್ದ'ವೆಂಬ ಶ್ರುತಿಪ್ರಮಾಣವು ವಿಷ್ಣುವಿನಲ್ಲಿ ಸಾವಕಾಶವಾಗಿದೆ ಎಂದು ನಾಮಾನಿ ಎಂಬ ಶ್ರುತಿಯಿಂದ ಭಾಷ್ಯಕಾರರು ತಿಳಿಸುತ್ತಿದ್ದಾರೆ. ಚ - ಯಾವ ಕಾರಣದಿಂದ, ನಾಮಾನಿ ಸರ್ವಾಣಿ ಎಂಬ ವಾಕ್ಯದಿಂದ ವಿಷ್ಣುವಿಗೆ ಆಕಾಶಾದಿ ಸರ್ವಶಬ್ದವಾಚ್ಯತ್ವವು ಹೇಳಲ್ಪಟ್ಟಿದೆಯೋ ಆದ್ದರಿಂದ ಲಿಂಗದಿಂದ ಶ್ರುತಿಯನ್ನು ಬಾಧಿಸಿ ನಿರ್ಣಯಿಸುವುದು ಯುಕ್ತವಾಗಿದೆ ಎಂದು ಭಾಷ್ಯವಾಕ್ಯದ ಯೋಜನೆ.

* * * * *

## ೯. ಅಥ ಪ್ರಾಣಾಧಿಕರಣಮ್

**ಭಾ– ॥ ಓಂ ಅತ ಏವ ಪ್ರಾಣಃ ಓಂ ॥ ೨೩ ॥**

ಆದ್ದರಿಂದಲೇ ಪ್ರಾಣಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ.

**'ತದ್ವೈ ತ್ವಂ ಪ್ರಾಣೋ ಅಭವಃ ಮಹಾನ್ ಭೋಗಃ ಪ್ರಜಾಪತೇಃ ।**
**ಭುಜಃ ಕರಿಷ್ಯಮಾಣಃ ಯದ್ ದೇವಾನ್ ಪ್ರಾಣಯೋ ನವ ॥**

**ಇತಿ ಮಹಾಭೋಗಶಬ್ದೇನ ಪರಮಾನಂದತ್ವಂ ಪ್ರಾಣಸ್ಯೋಕ್ತಮ್ ।**

'ಎಲೈ ಪ್ರಾಣನೇ! ಹಿರಣ್ಯಗರ್ಭ ಮೊದಲಾದ ಸಕಲಜೀವರಿಗೂ ಆನಂದವನ್ನು ನೀಡುವ ನೀನು ಪೂರ್ಣಾನಂದನಾಗಿದ್ದೀಯೆ. ನವ-ಸಂಖ್ಯಾಕರಾದ ಇಂದ್ರಿಯಾಭಿಮಾನಿ ದೇವತೆಗಳೆಲ್ಲರೂ ಕ್ರಿಯಾಶೀಲ-ರಾಗುವಂತೆ ಮಾಡುವ ನೀನು ಪ್ರಾಣಶಬ್ದವಾಚ್ಯನಾಗಿದ್ದೀಯೆ'

ಎಂದು 'ತದ್ವೈ ತ್ವಂ' ಇತ್ಯಾದಿ ಶ್ರುತಿಯಲ್ಲಿ ಮಹಾಭೋಗಶಬ್ದದಿಂದ ಪೂರ್ಣಾನಂದತ್ವವನ್ನು ಮುಖ್ಯಪ್ರಾಣನಿಗೆ ಹೇಳಲಾಗಿದೆ.

(ಭಾ.ದೀ.) ಅತ್ರಾಧಿಕರಣೇ ಲೋಕತೋಽನ್ಯತ್ರ ಪ್ರಸಿದ್ಧಾಧ್ಯಾತ್ಮಿಕಾಶೇಷ-ಶಬ್ದೋಪಲಕ್ಷಕಪ್ರಾಣಶಬ್ದಸ್ಯ ಬ್ರಹ್ಮಣಿ ಸಮನ್ವಯಃ ಕ್ರಿಯತೇ । ಸರ್ವತ್ರ ಆದೌ ಸೂತ್ರಮ್ ಪಾಠ್ಯಮ್ । ಪಶ್ಚಾತ್ ಸಂಗತ್ಯಾದಿಕಂ ವಕ್ತವ್ಯಮ್ ಇತಿ ಸೂಚಯಿತುಮ್ ಅತ್ರ ಸೂತ್ರಮ್ ಆದಾವೇವ ಪಠತಿ – **ಅತ ಏವೇತಿ ॥**

ವಿಷಯವಾಕ್ಯೋದಾಹರಣಪೂರ್ವಕಂ ಪೂರ್ವಾಧಿಕರಣೇನ ಸಂಗತಿಂ ವಿಷಯ-ಸಂಶಯೌ ಚ ಸೂಚಯತಿ – **ತದಿತಿ ॥** ಅತ್ರ ಯತ್ತದೋರಾವೃತ್ತಿಃ । 'ಭುಜ್ಯತೇ' ಇತಿ ಭೋಗಃ, ಆನಂದಃ । ತೇನ ತದ್ವಾನುಪಲಕ್ಷ್ಯತೇ । ಧರ್ಮಧರ್ಮಿಣೋರಭೇದ-ವಿವಕ್ಷಾ ವಾ । ತಥಾ ಚ –

''ಹೇ ವಿಷ್ಣೋ! **ಯತ್** ಯಸ್ಮಾತ್ **ಪ್ರಜಾಪತೇಃ** ಹಿರಣ್ಯಗರ್ಭಸ್ಯ ತದು-ಪಲಕ್ಷಿತಾನಾಂ ಸಕಲಜೀವಾನಾಂ **ಭುಜಃ** ಭೋಗಾನ್ ಯೋಗ್ಯಾನಂದಾನ್ **ಕರಿಷ್ಯ-ಮಾಣಃ** ಉಪಲಕ್ಷಣಮೇತತ್, ಕುರ್ವಾಣೋಽಕಾರ್ಷೀಶ್ಚ, **ತಸ್ಮಾತ್ ತ್ವಂ ಮಹಾನ್ ಭೋಗಃ** ಪೂರ್ಣಾನಂದವಾನ್ **ಅಭವಃ** । ಸ್ವಸ್ಯ ಮಹಾಭೋಗಾಭಾವೇ ಪರಸ್ಮೈ ತದ್ದಾನಾನುಪಪತ್ತೇಃ । ಯಸ್ಮಾಚ್ಚ ಪಾಯುಗುಹ್ಯೈಕ್ಯೇನ ನವೇಂದ್ರಿಯಾಭಿಮಾನಿನೋ ದೇವಾನ್ **ತ್ವಂ ಪ್ರಾಣಯಃ** = ಅಚೇಷ್ಟಯಃ, ಇದಮಪ್ಯುಪಲಕ್ಷಣಮ್, ಚೇಷ್ಟಯಸಿ ಚೇಷ್ಟಯಿಷ್ಯಸಿ ಚ, ತಸ್ಮಾತ್ **ತ್ವಂ ಪ್ರಾಣಃ** ಪ್ರಾಣಶಬ್ದವಾಚ್ಯಃ ಅಭವಃ ಇತಿ ಸಿದ್ಧಾಂತ-ರೀತ್ಯಾ ಶ್ರುತ್ಯರ್ಥಃ। ಪೂರ್ವಪಕ್ಷೇ ತು ಏತತ್ ಸರ್ವಂ ಮುಖ್ಯಪ್ರಾಣೇ ಯೋಜ್ಯಮ್ ।

**ಇತೀತಿ ॥** ಇತಿ ತೈತ್ತಿರೀಯಶಾಖಾಗತವಾಕ್ಯೇ 'ಪರಮಾನಂದತ್ವಂ' ಪೂರ್ಣಾ-ನಂದತ್ವಮ್, ಉಕ್ತಮ್ ಇತ್ಯಾವರ್ತತೇ । ತಥಾಚ – ಯದ್ ಆನಂದಮಯತ್ವಂ ವಿಷ್ಣೋರುಕ್ತಂ ತತ್ ಪರಮಾನಂದತ್ವಪರ್ಯವಸಿತಂ **'ತದ್ವೈ ತ್ವಮ್'** ಇತಿ ವಾಕ್ಯೇ **'ಮಹಾಭೋಗಶಬ್ದೇನ' 'ಮಹಾನ್ ಭೋಗಃ'** ಇತಿ ಪದದ್ವಯಾತ್ಮಕವಾಕ್ಯೇನ ಪ್ರಾಣಸ್ಯೋಕ್ತಮ್ – ಇತಿ ಯೋಜನಾ ।

ಅನೇನ ಪ್ರಾಣಾಖ್ಯೋ ವಿಷಯಃ । ತಸ್ಯ ವಿಷ್ಣ್ವನ್ಯತ್ವಾಕ್ಷೇಪಮುಖೇನ ಆನಂದ-

ಮಯತ್ವಸ್ಯಾಪಿ ಅನ್ಯನಿಷ್ಠತ್ವಾಕ್ಷೇಪಾದ್ ಆನಂದಮಯಾಧಿಕರಣೇನ ಅಸ್ಯ ಆಕ್ಷೇಪಿಕೀ ಸಂಗತಿಃ, ಸಃ ವಾಯುರುತ ವಿಷ್ಣುಃ ಇತಿ ಸಂಶಯಶ್ಚ ಸೂಚಿತೋ ಭವತಿ।

ಈ ಅಧಿಕರಣದಲ್ಲಿ ಲೋಕದೃಷ್ಟಿಯಿಂದ ವಿಷ್ಣುಭಿನ್ನರಲ್ಲಿ ಪ್ರಸಿದ್ಧವಾಗಿರುವ ದೇಹ-ಸಂಬಂಧಿಯಾದ ವಿಷಯಗಳನ್ನು ಹೇಳುವ ಸಮಸ್ತಶಬ್ದಗಳನ್ನು ಉಪಲಕ್ಷಣಯಾ ಸೂಚಿಸುವ ಪ್ರಾಣಶಬ್ದಕ್ಕೆ ಬ್ರಹ್ಮನಲ್ಲಿ ಸಮನ್ವಯವನ್ನು ಮಾಡಲಾಗಿದೆ. ಎಲ್ಲ ಅಧಿ-ಕರಣಗಳಲ್ಲೂ ಮೊದಲು ಸೂತ್ರವನ್ನು ಪಠಿಸಬೇಕು. ಅನಂತರ ಸಂಗತಿ ಮೊದಲಾದ-ವುಗಳನ್ನು ಹೇಳಬೇಕು ಎಂದು ಸೂಚಿಸಲು, ಇಲ್ಲಿ ಭಾಷ್ಯಕಾರರು 'ಅತ ಏವ' ಎಂಬುದಾಗಿ ಸೂತ್ರವನ್ನು ಆರಂಭದಲ್ಲೇ ಪಠಿಸಿದ್ದಾರೆ.

ವಿಷಯವಾಕ್ಯವನ್ನು ಉದಾಹರಿಸಿ, ಹಿಂದಿನ ಅಧಿಕರಣದಿಂದ ಸಂಗತಿಯನ್ನು, ಮತ್ತು ಈ ಅಧಿಕರಣದ ವಿಷಯ ಸಂಶಯಗಳನ್ನು 'ತತ್' ಎಂಬ ವಾಕ್ಯದಿಂದ ಸೂಚಿಸುತ್ತಿದ್ದಾರೆ. ತದ್ವೈ ಎಂಬ ಶ್ರುತಿಯಲ್ಲಿ 'ಯದ್ ಮತ್ತು ತದ್' ಎಂಬ ಪದಗಳು ಆವೃತ್ತಿಯನ್ನು ಹೊಂದುತ್ತವೆ. 'ಭುಜ್ಯತೇ' ಅಂದರೆ ಅನುಭವಿಸಲ್ಪಡುವುದು ಎಂಬ ಅರ್ಥದಲ್ಲಿ ಭೋಗಶಬ್ದವು ಆನಂದವಾಚಕವಾಗಿದೆ. ಆ ಶಬ್ದದಿಂದ ಲಕ್ಷಣಾಮೂಲಕ ಆನಂದವುಳ್ಳವನು ಹೇಳಲ್ಪಡುತ್ತಾನೆ. ಅಥವಾ ಆನಂದವೆಂಬ ಧರ್ಮ ಮತ್ತು ಅದರ ಧರ್ಮಿ ಇವುಗಳಿಗೆ ಇಲ್ಲಿ ಅಭೇದದ ವಿವಕ್ಷೆ ಇದೆ. ತಥಾಚ - ಎಲೈ ವಿಷ್ಣುವೇ 'ಯತ್' - ಯಾವ ಕಾರಣದಿಂದ, 'ಪ್ರಜಾಪತೇಃ' ಹಿರಣ್ಯಗರ್ಭನಿಗೆ, ಮತ್ತು ಅವನಿಂದ ಉಪಲಕ್ಷಿತರಾದ ಸಕಲಜೀವರಿಗೆ, 'ಭುಜಃ' ಭೋಗಗಳನ್ನು ಅಂದರೆ ಅವರವರಿಗೆ ಯೋಗ್ಯವಾದ ಆನಂದಗಳನ್ನು, 'ಕರಿಷ್ಯಮಾಣಃ'- ಉಂಟುಮಾಡುವಿಯೋ – ಈ ಶಬ್ದವು ಉಪಲಕ್ಷಣವಾಗಿದೆ. ಉಂಟುಮಾಡುತ್ತಿದ್ದೀಯೋ ಮತ್ತು ಹಿಂದೆ ಉಂಟು-ಮಾಡಿದ್ದೆಯೋ, ತದ್ - ಆದ್ದರಿಂದ, ತ್ವಂ - ಮಹಾನ್ ಭೋಗಃ ಅಭವಃ - ನೀನು ಪೂರ್ಣಾನಂದವುಳ್ಳವನಾಗಿದ್ದೀಯೆ. ಏಕೆಂದರೆ ತನಗೆ ಮಹಾನಂದವಿಲ್ಲದೇ ಇದ್ದಾಗ ಇತರರಿಗೆ ಅದನ್ನು ಕೊಡುವುದು ಅನುಪಪನ್ನವಾಗುವುದು. ಮತ್ತು ಯಾವ ಕಾರಣ-ದಿಂದ ನವ ದೇವಾನ್ - ಪಾಯು ಮತ್ತು ಗುಹ್ಯೇಂದ್ರಿಯಗಳ ಐಕ್ಯದ ದೃಷ್ಟಿಯಿಂದ ಒಂಭತ್ತೆಂದು ಹೇಳಲಾಗುವ ಇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳನ್ನು, ತ್ವಂ ಪ್ರಾಣಯಃ - ನೀನು ಕ್ರಿಯಾಯುಕ್ತರಾಗುವಂತೆ ಮಾಡಿದ್ದೀಯೋ – ಇಲ್ಲಿ ಭೂತ-

ಕಾಲವನ್ನು ಹೇಳುವ ಈ ಶಬ್ದವು ಉಪಲಕ್ಷಣವಾಗಿದೆ. ಕ್ರಿಯಾಶೀಲರನ್ನಾಗಿ ಮಾಡುತ್ತಿರುವಿಯೋ, ಮತ್ತು ಭವಿಷ್ಯದಲ್ಲಿ ಕ್ರಿಯಾಶೀಲರನ್ನಾಗಿ ಮಾಡುವಿಯೋ; ಆದ್ದರಿಂದ ತ್ವಂ - ನೀನು ಪ್ರಾಣಃ ಅಭವಃ- ಪ್ರಾಣಶಬ್ದವಾಚ್ಯನಾಗಿದ್ದೀಯೆ ಎಂದು ಸಿದ್ಧಾಂತದ ಪ್ರಕಾರ ಶ್ರುತಿಯ ಅರ್ಥವಾಗಿದೆ. ಪೂರ್ವಪಕ್ಷದಲ್ಲಾದರೋ ಇದೆಲ್ಲವನ್ನೂ ಮುಖ್ಯಪ್ರಾಣನಲ್ಲಿ ಯೋಜಿಸಬೇಕು.

'ಇತಿ' - ಹೀಗೆ ತೈತ್ತಿರೀಯಶಾಖೆಯಲ್ಲಿರುವ ವಾಕ್ಯದಲ್ಲಿ, ಪರಮಾನಂದತ್ವಂ - ಪೂರ್ಣಾನಂದತ್ವವನ್ನು ಪ್ರಾಣನಿಗೆ ಹೇಳಲಾಗಿದೆ. ಇಲ್ಲಿ 'ಉಕ್ತಂ' ಎಂಬ ಪದವು ಆವೃತ್ತಿಯನ್ನು ಪಡೆಯುವುದು. ತಥಾಚ ಯಾವ ಆನಂದಮಯತ್ವವು ವಿಷ್ಣುವಿಗೆ ಹೇಳಲ್ಪಟ್ಟಿತೋ ಆ ಪರಮಾನಂದತ್ವದಲ್ಲಿ ಪರ್ಯವಸಾನ ಹೊಂದುವ ಆನಂದಮಯತ್ವವು – 'ತದ್ವೈ ತ್ವಂ' ಎಂಬ ವಾಕ್ಯದಲ್ಲಿ 'ಮಹಾಭೋಗಶಬ್ದೇನ, ಮಹಾನ್ ಭೋಗಃ' ಎಂಬ ಪದದ್ವಯಗಳನ್ನು ಹೊಂದಿರುವ ವಾಕ್ಯದಿಂದ ಪ್ರಾಣನಿಗೆ ಹೇಳಲ್ಪಟ್ಟಿದೆ ಎಂದು ಯೋಜನೆ.

ಇದರಿಂದ (ಈ ಅಧಿಕರಣದಲ್ಲಿ) ಪ್ರಾಣಶಬ್ದವಾಚ್ಯನು ವಿಷಯನಾಗಿದ್ದಾನೆ. ಅವನು ವಿಷ್ಣುಭಿನ್ನನಾಗಿದ್ದಾನೆ ಎಂದು ಆಕ್ಷೇಪಿಸುವ ಮೂಲಕ ಆನಂದಮಯತ್ವವು ವಿಷ್ಣುಭಿನ್ನನಲ್ಲಿದೆ ಎಂದು ಆಕ್ಷೇಪಿಸುವುದರಿಂದ ಈ ಅಧಿಕರಣಕ್ಕೆ ಆನಂದಮಯಾಧಿಕರಣದಿಂದ ಆಕ್ಷೇಪಿಕೀಸಂಗತಿಯು ಇರುವುದು. ಆ ಪ್ರಾಣನು ವಾಯುವೋ ಅಥವಾ ವಿಷ್ಣುವೋ? ಎಂಬ ಸಂಶಯವೂ ಇಲ್ಲಿ ಸೂಚಿತವಾಗುವುದು.

**ಭಾ– ಸ ಚ ಪ್ರಾಣಃ ಪ್ರಸಿದ್ಧೇರ್ವಾಯುರಿತ್ಯಾಪತತಿ ।**

ಆ ಪ್ರಾಣನಾದರೋ ಪ್ರಸಿದ್ಧಿಯ ಬಲದಿಂದ ವಾಯುವೆಂದೇ ಪ್ರಾಪ್ತವಾಗುವುದು.

(ಭಾ.ದೀ.) ಸಯುಕ್ತಿಕಂ ಪೂರ್ವಪಕ್ಷಂ ದರ್ಶಯತಿ – **ಸ ಚೇತಿ** ॥ ತಚ್ಛಬ್ದ ಆವರ್ತತೇ । ಚಶಬ್ದೋಽವಧಾರಣೇ, ವಾಯುಃ ಇತ್ಯನೇನ ಸಂಬಧ್ಯತೇ । ಆನಂದಮಯಶ್ಚೇತಿ ಸಮುಚ್ಚಯೇ ವಾ । ತಥಾ ಚ ಪರಮಾನಂದತ್ವಂ ಯಸ್ಯ ಪ್ರಾಣಸ್ಯೋಕ್ತಂ

ಸಃ ಪ್ರಾಣಃ ತಚ್ಛಬ್ದವಾಚ್ಯೋ ಮುಖ್ಯವಾಯುರೇವ ಇತಿ ಆಪತತಿ ಪ್ರಾಪ್ನೋತಿ । ಅತ ಏವ ಆನಂದಮಯೋಽಪಿ ಸ ಏವ ಇತ್ಯಾಪತತಿ । ಕುತಃ? ಪ್ರಸಿದ್ಧೇಃ ಪ್ರಾಣಶ್ರುತೇಃ । ತಸ್ಯಾಶ್ಚ ತಸ್ಮಿನ್ ವಾಯೌ ಪ್ರಸಿದ್ಧೇ ರೂಢತ್ವಾತ್ । ಪ್ರಾಣಪದಪ್ರವೃತ್ತಿನಿಮಿತ್ತಸ್ಯ ಜೀವನಾದಿಹೇತುತ್ವಸ್ಯ ಚ ಶರೀರೇ ಸತಿ ಮುಖ್ಯೇ ಜೀವನಾದಿಕಂ ಸಂಭವತಿ, ನಾಸತೀ-ತ್ಯನ್ವಯವ್ಯತಿರೇಕಾಭ್ಯಾಂ ಸ್ವಶರೀರಗತವಾಯುವಿಕಾರದ್ವಾರಾ ಮುಖ್ಯವಾಯಾವೇವ ಪ್ರಸಿದ್ಧೇಃ ದರ್ಶನಾತ್ ಇತಿ ಯೋಜನಾ ।

'ಸ ಚ' ಎಂಬ ವಾಕ್ಯದಿಂದ ಭಾಷ್ಯಕಾರರು ಯುಕ್ತಿಸಹಿತವಾದ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ. ಇಲ್ಲಿ 'ತತ್'ಶಬ್ದವು ಆವೃತ್ತಿಯನ್ನು ಪಡೆಯುತ್ತದೆ. ಚಶಬ್ದವು ಏವ ಎಂಬ ಅರ್ಥದಲ್ಲಿದ್ದು ವಾಯುಃ ಎಂಬ ಪದದೊಂದಿಗೆ ಸಂಬಂಧವನ್ನು ಪಡೆಯುತ್ತದೆ. ಅಥವಾ 'ಆನಂದಮಯನೂ' ಎಂಬುದಾಗಿ ಸಮುಚ್ಚಯವನ್ನು ಹೇಳುವುದು. ತಥಾಚ - ಪೂರ್ಣಾನಂದತ್ವವನ್ನು ಯಾವ ಪ್ರಾಣನಿಗೆ ಹೇಳಲಾಗಿದೆಯೋ, ಆ ಪ್ರಾಣನು ಅಂದರೆ ಆ ಪ್ರಾಣಶಬ್ದವಾಚ್ಯನು ಮುಖ್ಯವಾಯುವೇ ಎಂದು, ಆಪತತಿ - ಪ್ರಾಪ್ತ-ವಾಗುವುದು. ಆದ್ದರಿಂದಲೇ ಆನಂದಮಯನೂ ಆ ಮುಖ್ಯವಾಯುವೇ ಆಗಿರುವನು ಎಂದು ಪ್ರಾಪ್ತವಾಗುವುದು. ಏಕೆಂದರೆ, ಪ್ರಸಿದ್ಧೇಃ – ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾದ ಪ್ರಾಣಶಬ್ದವು ಶ್ರುತವಾಗಿರುವುದರಿಂದ. ಆ ಪ್ರಾಣಶ್ರುತಿಯೂ ಕೂಡ ಆ ವಾಯುವಿನಲ್ಲಿ ಪ್ರಸಿದ್ಧೇಃ - ರೂಢವಾಗಿರುವುದರಿಂದ. ಪ್ರಾಣಪದದ ಪ್ರವೃತ್ತಿನಿಮಿತ್ತವಾದ ಜೀವನಾದಿ -ಹೇತುತ್ವವೂ ಕೂಡ – ಶರೀರದಲ್ಲಿ ಮುಖ್ಯಪ್ರಾಣನಿದ್ದಾಗ ಜೀವನಾದಿಗಳು ಸಂಭವಿ-ಸುವವು; ಅವನಿಲ್ಲದಿದ್ದಾಗ ಇಲ್ಲ ಎಂಬ ಅನ್ವಯವ್ಯತಿರೇಕಗಳಿಂದ ತನ್ನ ಶರೀರದಲ್ಲಿರುವ ವಾಯುವಿಕಾರದ ಮೂಲಕ ಮುಖ್ಯವಾಯುವಿನಲ್ಲೇ ಪ್ರಸಿದ್ಧವಾಗಿರುವುದು ದೃಷ್ಟವಾಗಿ-ರುವುದರಿಂದ ಎಂದು ಯೋಜನೆ.

**ಭಾ– ನ ಚೈವಮ್ । ಯತೋ ವಿಷ್ಣುರೇವ ಪ್ರಾಣಃ । ಅತ ಏವ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ಅಹೋರಾತ್ರೇ ಪಾರ್ಶ್ವೇ' (ತೈ.ಆ. ೩-೧೩) ಇತ್ಯಾದಿ ತಲ್ಲಿಂಗಾದೇವ ॥ ೨೩ ॥**

ಇದು ಸರಿಯಲ್ಲ; ಏಕೆಂದರೆ, ಈ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಪ್ರಾಣನು ವಿಷ್ಣುವೇ ಆಗಿದ್ದಾನೆ. ಅತ ಏವ - ಆದ್ದರಿಂದಲೇ, ಅಂದರೆ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ಅಹೋರಾತ್ರೇ ಪಾರ್ಶ್ವೇ' ಇತ್ಯಾದಿ-ಶ್ರುತಿಯಲ್ಲಿ ಹೇಳಿರುವ ಆ ವಿಷ್ಣುವಿನ ಲಿಂಗದಿಂದಲೇ 'ತದ್ವೈ ತ್ವಂ' ಎಂಬ ಶ್ರುತಿಯಲ್ಲಿರುವ ಪ್ರಾಣಶಬ್ದದಿಂದ ವಾಚ್ಯನು ವಿಷ್ಣುವೇ ಆಗಿ-ದ್ದಾನೆ.

(ಭಾ.ದೀ.) ಸಿದ್ಧಾಂತಯತಿ – **ನ ಚೇತಿ** ॥ ಏವಂ ಪ್ರಾಣಸ್ಯ ವಾಯುತ್ವಮ್ ಆನಂದಮಯತ್ವಂ ಚ ನ ಯುಕ್ತಮಿತ್ಯರ್ಥಃ । ಕುತೋ ನೈವಮ್ ಇತ್ಯಾಶಂಕಾಯಾಂ ತತ್ರ ಹೇತುತಯಾ ಸೂತ್ರಂ ವ್ಯಾಚಷ್ಟೇ **ಯತ ಇತಿ** ॥ ಸೂತ್ರಾರ್ಥಸ್ಯ ಹೇತುತ್ವ-ದ್ಯೋತಕೋಽಯಂ ಯತಃಶಬ್ದಃ । ಸೂತ್ರೇ ಅನುವೃತ್ತಸ್ಯ ತತ್ತು ಇತ್ಯಸ್ಯಾರ್ಥಃ **ವಿಷ್ಣುರೇವೇತಿ** ॥ ತಥಾಚ ಯತೋಽಯಂ ಪ್ರಾಣೋ ವಿಷ್ಣುರೇವ ಅತಃ ನೈವಮ್ ಇತ್ಯನ್ವಯಃ । ಕುತಃ ಅಯಂ ಪ್ರಾಣೋ ವಿಷ್ಣುರೇವ? ಇತ್ಯತಃ ಸೌತ್ರಂ ಹೇತುಮನೂದ್ಯ ವ್ಯಾಚಷ್ಟೇ **ಅತ ಏವೇತಿ** ॥ **ಇತ್ಯಾದೀತಿ** ॥ ಇತ್ಯಾದಿನೋಕ್ತಂ ಯದ್ ವಿಷ್ಣುಲಿಂಗಂ ತಸ್ಮಾದೇವ ಇತ್ಯರ್ಥಃ । ಕಥಂ ಶ್ರುತ್ಯಾ ಪೂರ್ವಪಕ್ಷಿತೇ ಲಿಂಗೇನ ನಿರ್ಣಯಃ? ಇತ್ಯತಃ ಲಿಂಗಸ್ಯ ನಿರವಕಾಶತ್ವಜ್ಞಾಪನಾಯ ಏವಕಾರಃ । ತಥಾ ಚ ಸಾವಕಾಶಶ್ರುತೇ-ರ್ನಿರವಕಾಶಲಿಂಗೇನ ಬಾಧ ಇತಿ ಭಾವಃ । ಹೇ ವಿಷ್ಣೋ! ತೇ ತವ ಶ್ರೀಶ್ಚ ಲಕ್ಷ್ಮೀಶ್ಚೇತಿ ದ್ವೇ ಪತ್ನ್ಯೌ ಸ್ತಃ । ವಕ್ಷಸ್ಥಲಮಾಶ್ರಿತಾ ಶ್ರೀಃ, ಅಂಕಸ್ಥಿತಾ ಲಕ್ಷ್ಮೀರಿತಿ ಸಂಪ್ರದಾಯವಿದಃ । ತತ್ತ್ವಪ್ರದೀಪೇ ತು ಅಂಕಸ್ಥಿತಾ ಶ್ರೀಃ, ವಕ್ಷಸಿ ಲಕ್ಷ್ಮಭೂತಾ ಲಕ್ಷ್ಮೀರಿತ್ಯುಕ್ತಮ್ । ಅಹೋ-ರಾತ್ರೇ ತದಭಿಮಾನಿಸೂರ್ಯಚಂದ್ರೌ, ಪಾರ್ಶ್ವೇ ಪಾರ್ಶ್ವಸ್ಥಿತಾವಿತ್ಯರ್ಥಃ । ದಿವಾ-ರಾತ್ರಮೇತೇ ಪಾರ್ಶ್ವಗತೇ ಇತಿ ವಾ ।

'ನ ಚ' ಎಂಬ ವಾಕ್ಯದಿಂದ ಭಾಷ್ಯಕಾರರು ಸಿದ್ಧಾಂತವನ್ನು ಹೇಳುತ್ತಿದ್ದಾರೆ. ಏವಂ – ಹೀಗೆ ಇಲ್ಲಿ ಪ್ರಾಣಶಬ್ದವಾಚ್ಯನು ವಾಯುವೆನ್ನುವುದು ಮತ್ತು ಅವನೇ ಆನಂದ-ಮಯನೆನ್ನುವುದು ಯುಕ್ತವಲ್ಲ ಎಂದು ಅರ್ಥ. ಏಕೆ ಯುಕ್ತವಲ್ಲ? ಎಂಬ ಆಶಂಕೆಯು

ಬಂದಾಗ ಆ ವಿಷಯದಲ್ಲಿ ಹೇತುವಾಗಿ ಸೂತ್ರವನ್ನೇ 'ಯತಃ' ಎಂಬುದಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಭಾಷ್ಯದಲ್ಲಿರುವ ಈ 'ಯತಃ' ಎಂಬ ಶಬ್ದವು ಸೂತ್ರಾರ್ಥಕ್ಕೆ ಇರುವ ಹೇತುತ್ವವನ್ನು ಸೂಚಿಸುವುದು. ಸೂತ್ರದಲ್ಲಿ ಅನುವೃತ್ತಿಯನ್ನು ಪಡೆದಿರುವ 'ತತ್, ತು' ಎಂಬ ಪದಗಳ ಅರ್ಥವನ್ನು 'ವಿಷ್ಣುರೇವ' ಎಂದು (ಭಾಷ್ಯದಲ್ಲಿ) ಹೇಳಲಾಗಿದೆ. ತಥಾಚ ಯಾವ ಕಾರಣದಿಂದಾಗಿ ಈ ಪ್ರಾಣನು ವಿಷ್ಣುವೇ ಆಗಿದ್ದಾನೋ ಆದ್ದರಿಂದ ನೈವಮ್ - ಈ ಪೂರ್ವಪಕ್ಷವು ಸರಿಯಲ್ಲ ಎಂದು ಅರ್ಥ. ಈ ಪ್ರಾಣನು ವಿಷ್ಣುವೇ ಆಗಿರುವನು ಎಂಬ ವಿಷಯದಲ್ಲಿ ಪ್ರಮಾಣವೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಸೂತ್ರದಲ್ಲಿ ಹೇಳಿರುವ ಹೇತುವನ್ನು ಅನುವಾದ ಮಾಡಿ, ಭಾಷ್ಯಕಾರರು 'ಇತ್ಯಾದಿ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಇತ್ಯಾದಿವಾಕ್ಯದಲ್ಲಿ ಹೇಳಲ್ಪಟ್ಟಿರುವ ಯಾವ ವಿಷ್ಣುಲಿಂಗವಿದೆಯೋ ಅದರಿಂದಲೇ ಎಂದು ಅರ್ಥ. ಶ್ರುತಿಯ ಆಧಾರದಿಂದ ಪೂರ್ವಪಕ್ಷವನ್ನು ಮಾಡಿದಾಗ ಲಿಂಗದಿಂದ ನಿರ್ಣಯ ಮಾಡುವುದು ಹೇಗೆ ಯುಕ್ತವಾಗುವುದು? ಎಂಬ ಶಂಕೆಗೆ ಉತ್ತರವಾಗಿ ಈ ಲಿಂಗವು ನಿರವಕಾಶ-ವಾದದ್ದು ಎಂದು ಸೂಚಿಸಲೂ ಏವಕಾರವನ್ನು ಪ್ರಯೋಗಿಸಲಾಗಿದೆ. ತಥಾಚ - ಸಾವಕಾಶವಾದ ಶ್ರುತಿಗೆ ನಿರವಕಾಶವಾದ ಲಿಂಗದಿಂದ ಬಾಧಬರುವುದು ಎಂದು ಭಾವ. ಹೇ ವಿಷ್ಣೋ, ತೇ - ನಿನಗೆ, ಶ್ರೀಶ್ಚ ಲಕ್ಷ್ಮೀಶ್ಚ - ಶ್ರೀ ಮತ್ತು ಲಕ್ಷ್ಮೀ ಎಂಬುದಾಗಿ ಇಬ್ಬರು ಪತ್ನಿಯರಿದ್ದಾರೆ. ವಕ್ಷ್ಯಸ್ಥಳವನ್ನು ಆಶ್ರಯಿಸಿರುವವಳು ಶ್ರೀ, ವಿಷ್ಣುವಿನ ತೊಡೆಯಲ್ಲಿರುವವಳು ಲಕ್ಷ್ಮೀ ಎಂಬುದಾಗಿ ಸಂಪ್ರದಾಯಜ್ಞರು ಹೇಳುವರು. ತತ್ವ-ಪ್ರದೀಪದಲ್ಲಾದರೋ – ತೊಡೆಯಲ್ಲಿರುವವಳು ಶ್ರೀ, ವಕ್ಷಸ್ಥಳದಲ್ಲಿ ಲಕ್ಷ್ಮ ಎಂದರೆ ಚಿಹ್ನೆಯಾಗಿರುವವಳು ಲಕ್ಷ್ಮೀ ಎಂದು ಹೇಳಲಾಗಿದೆ. 'ಅಹೋರಾತ್ರೇ' ಹಗಲು ಮತ್ತು ರಾತ್ರಿಗಳಿಗೆ ಅಭಿಮಾನಿಗಳಾದ ಸೂರ್ಯಚಂದ್ರರು, ಪಾರ್ಶ್ವೇ - ಪಾರ್ಶ್ವದಲ್ಲಿ ಇರುವವರು ಎಂದು ಅರ್ಥ. ಅಥವಾ ಹಗಲು-ರಾತ್ರಿ ಇವರಿಬ್ಬರು ವಿಷ್ಣುವಿನ ಪಾರ್ಶ್ವದಲ್ಲಿರುವರು ಎಂದು ಅರ್ಥ.

(ಭಾ.ದೀ.) ಯದ್ಯಪೀದಮ್ ಅದ್ಭ್ಯಃ ಇತಿ ಪೂರ್ವಾನುವಾಕಗತಮ್ । 'ತದ್ ವೈ ತ್ವಂ ಪ್ರಾಣಃ' ಇತ್ಯೇತಚ್ಚ 'ಭರ್ತಾ ಸನ್ ಭ್ರಿಯಮಾಣಃ' ಇತ್ಯುತ್ತರಾನುವಾಕ-ಗತಮ್ । ತಥಾಚ ನಾನಯೋರ್ಲಿಂಗಲಿಂಗಿಭಾವೋ ಯುಜ್ಯತೇ । ತಥಾಽಪಿ ಶ್ರೀಶ್ಚ

ತೇ ಇತಿ ಯುಷ್ಮಚ್ಛಬ್ದೇನ ಪ್ರತ್ಯಭಿಜ್ಞಾನಾತ್ ತದುಪಪತ್ತಿಃ । ನಿರವಕಾಶತ್ವಾದ್ ಭಿನ್ನಾನುವಾಕಸ್ಥಸ್ಯಾಪಿ ಮುಖತೋ ಗ್ರಹಣಂ ಯುಕ್ತಮ್ । ಆದಿಶಬ್ದೇನ 'ಹರಿಂ ಹರಂತಮನುಯಂತಿ ದೇವಾಃ । ವಿಶ್ವಸ್ಯೇಶಾನಂ ವೃಷಭಂ ಮತೀನಾಮ್ ।' (ತೈ.ಆ. ೩-೧೫) ಇತಿ ತತ್ವಪ್ರದೀಪೋದಾಹೃತಮನುವಾಕಾಂತರಸ್ಥಂ ಗೃಹ್ಯತೇ । ಸರ್ವಬುದ್ಧಿನಿಯಂತಾರಂ ಜಗತ್ಪತಿಂ ಸರ್ವಸಂಹರ್ತಾರಂ ಹರಿಂ ದೇವಾ ಅನುಗಚ್ಛಂತೀತ್ಯರ್ಥಃ । **ಚಂದ್ರಿಕಾಯಾಂ** ತು 'ಭರ್ತಾ ಸನ್' ಇತ್ಯುತ್ತರವಾಕಾನುಗತಂ 'ತಮೇವ ಮೃತ್ಯುಮಮೃತಂ ತಮಾಹುಸ್ತಂ ಭರ್ತಾರಂ ತಮು ಗೋಪ್ತಾರಮಾಹುಃ' (ತೈ.ಆ. ೩-೧೪) ಇತ್ಯಾದಿಕಂ ಆದಿಪದೇನ ಗ್ರಾಹ್ಯಮಿತ್ಯುಕ್ತಮ್ ।

ಯದ್ಯಪಿ ತೈತ್ತಿರೀಯಶಾಖಾಯಾಂ ಹ್ರೀಶ್ಚ ತೇ ಇತಿ ಪಾಠಃ । ತಥಾऽಪಿ ವಾಜಸನೇಯಶಾಖಾಭಿಪ್ರಾಯೇಣ ಏವಮುದಾಹೃತಮಿತಿ ಧ್ಯೇಯಮ್ । ಸೂತ್ರಾರ್ಥಸ್ತು ಸ್ಪಷ್ಟಃ ॥

ಯದ್ಯಪಿ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ವಾಕ್ಯವು 'ಅದ್ಭ್ಯಃ' ಎಂದು ಪ್ರಾರಂಭವಾಗುವ ಹಿಂದಿನ ಅನುವಾಕದಲ್ಲಿ ಇರುವ ವಾಕ್ಯವಾಗಿದೆ. 'ತದ್ವೈ ತ್ವಂ ಪ್ರಾಣಃ' ಎಂಬ ವಾಕ್ಯವಾದರೋ 'ಭರ್ತಾ ಸನ್ ಭ್ರಿಯಮಾಣಃ' ಎಂದು ಆರಂಭವಾಗುವ ಮುಂದಿನ ಅನುವಾಕದಲ್ಲಿದೆ. ಆದ್ದರಿಂದ ಮುಂದಿನ ಅನುವಾಕದಲ್ಲಿರುವ ಪ್ರಾಣಶಬ್ದವು ವಿಷ್ಣುವಾಚಕವಾಗಿದೆ ಎಂಬ ವಿಷಯದಲ್ಲಿ ಶ್ರೀಪತಿತ್ವ ಮೊದಲಾದ ಹಿಂದಿನ ಅನುವಾಕದಲ್ಲಿ ಹೇಳಲಾಗಿರುವ ಧರ್ಮವು ಲಿಂಗವಾಗಿರುವುದು ಯುಕ್ತವಲ್ಲ. ಆದರೂ 'ಶ್ರೀಶ್ಚ ತೇ' ಎಂಬ ವಾಕ್ಯದಲ್ಲಿ 'ತೇ' ಎಂಬುದಾಗಿ ಯುಷ್ಮಚ್ಛಬ್ದದಿಂದ ಹೇಳಿರುವವನನ್ನೇ 'ತದ್ವೈ ತ್ವಂ ಪ್ರಾಣಃ ಎಂಬ ವಾಕ್ಯದಲ್ಲೂ 'ತ್ವಂ' ಎಂದು ಯುಷ್ಮಚ್ಛಬ್ದದಿಂದ ಹೇಳಿರುವುದರಿಂದ ಅವುಗಳಿಗೆ ಲಿಂಗಲಿಂಗಿಭಾವವು ಯುಕ್ತವಾಗುವುದು. ಬೇರೆ ಅನುವಾಕದಲ್ಲಿ ಹೇಳಿದ ವಿಷಯವಾಗಿದ್ದರೂ ನಿರವಕಾಶವಾದ ಪ್ರಯುಕ್ತ ಅದನ್ನು ಪ್ರಧಾನವಾಗಿ ಗ್ರಹಿಸಿರುವುದು ಯುಕ್ತವೇ ಆಗಿದೆ. 'ಇತ್ಯಾದಿತಲ್ಲಿಂಗಾದೇವ' ಎಂಬಲ್ಲಿರುವ ಆದಿಶಬ್ದದಿಂದ 'ಹರಿಂ ಹರಂತಮನುಯಂತಿ ದೇವಾಃ । ವಿಶ್ವಸ್ಯೇಶಾನಂ ವೃಷಭಂ

ಮತೀನಾಮ್ ।' ಎಂದು ತತ್ವಪ್ರದೀಪದಲ್ಲಿ ಉದಾಹರಿಸಲಾಗಿರುವ ಇನ್ನೊಂದು ಅನುವಾಕದಲ್ಲಿರುವ ಲಿಂಗವು ಗ್ರಹಿಸಲ್ಪಡುವುದು. ಮತೀನಾಂ ವೃಷಭಂ ಎಲ್ಲರ ಬುದ್ಧಿಗೆ ನಿಯಾಮಕನಾದ, ವಿಶ್ವಸ್ಯ ಈಶಾನಂ - ಜಗತ್ಪತಿಯಾದ, ಹರಂತಂ ಹರಿಂ - ಸರ್ವಸಂಹಾರಕನಾದ ಹರಿಯನ್ನು, ದೇವಾಃ ಅನುಯಂತಿ - ದೇವತೆಗಳು ಅನುಸರಿಸುವರು ಎಂದು ಆ ಶ್ರುತಿಯ ಅರ್ಥವಾಗಿದೆ. ಚಂದ್ರಿಕಾದಲ್ಲಾದರೋ 'ಭರ್ತಾಸನ್' ಎಂಬ ಮುಂದಿನ ಅನುವಾಕದಲ್ಲಿರುವ 'ತಮೇವ ಮೃತ್ಯುಂ ಅಮೃತಂ ತಮಾಹುಃ ತಂ ಭರ್ತಾರಂ ತಮು ಗೋಪ್ತಾರಮಾಹುಃ' ಇತ್ಯಾದಿ ಶ್ರುತಿಯಲ್ಲಿರುವ ಲಿಂಗಗಳು ಆದಿಪದದಿಂದ ಗ್ರಾಹ್ಯವಾಗಿವೆ ಎಂದು ಹೇಳಲಾಗಿದೆ.

ಯದ್ಯಪಿ ತೈತ್ತಿರೀಯಶಾಖೆಯಲ್ಲಿ 'ಹ್ರೀಶ್ಚ ತೇ' ಎಂದು ಪಾಠವಿದೆ. ಆದರೂ ವಾಜಸನೇಯಶಾಖೆಯ ಅಭಿಪ್ರಾಯದಿಂದ 'ಶ್ರೀಶ್ಚ ತೇ' ಎಂದು ಉದಾಹರಿಸಲಾಗಿದೆ ಎಂದು ತಿಳಿಯಬೇಕು. ಸೂತ್ರದ ಅರ್ಥವಾದರೋ ಸ್ಪಷ್ಟವಾಗಿದೆ.

॥ ಇತಿ ಪ್ರಾಣಾಧಿಕರಣಮ್ ॥ ೯ ॥

*****

## ೧೦. ಅಥ ಜ್ಯೋತಿರಧಿಕರಣಮ್

**ಭಾ– 'ಯೋ ವೇದ ನಿಹಿತಂ ಗುಹಾಯಾಮ್' ಇತ್ಯುಕ್ತಮ್ । ತಚ್ಚ ಗುಹಾನಿಹಿತಮ್ –**

**'ವಿ ಮೇ ಕರ್ಣಾ ಪತಯತೋ ವಿಚಕ್ಷುರ್ವೀ೩ದಂ ಜ್ಯೋತಿರ್ಹೃದಯ ಆಹಿತಂ ಯತ್ । ವಿ ಮೇ ಮನಶ್ಚರತಿ ದೂರಽಆಧೀಃ ಕಿಂಸ್ವಿದ್ವಕ್ಷ್ಯಾಮಿ ಕಿಮು ನೂ ಮನಿಷ್ಯೇ' (ಋ. ೬-೯-೬)ಇತಿ ಜ್ಯೋತಿರುಕ್ತಮ್ ।**

'ಯೋ ವೇದ ನಿಹಿತಂ ಗುಹಾಯಾಮ್' ಎಂದು ಹೇಳಲಾಗಿದೆ. ಆ ಗುಹಾನಿಹಿತನು 'ವಿ ಮೇ ಕರ್ಣಾ ಪತಯತೋ ವಿಚಕ್ಷುರ್ವೀ೩ದಂ ಜ್ಯೋತಿರ್ಹೃದಯ ಆಹಿತಂ ಯತ್ । ವಿ ಮೇ ಮನಶ್ಚರತಿ ದೂರ

ಆಧೀಃ ಕಿಂಸ್ವಿದ್ವಕ್ಷ್ಯಾಮಿ ಕಿಮು ನೂ ಮನಿಷ್ಯೇ' ಎಂಬ ಶ್ರುತಿಯಲ್ಲಿ ಜ್ಯೋತಿಃಶಬ್ದದಿಂದ ಹೇಳಲ್ಪಟ್ಟಿದ್ದಾನೆ.

(ಭಾ.ದೀ.) ಅತ್ರಾಧಿಕರಣೇ ತತ್ತತ್ಸೂಕ್ತಗತಾಶೇಷಶಬ್ದೋಪಲಕ್ಷಕಸ್ಯ ಲೋಕತೋ-ಽನ್ಯತ್ರಪ್ರಸಿದ್ಧಸ್ಯ ಜ್ಯೋತಿರ್ನಾಮ್ನೋ ಬ್ರಹ್ಮಣಿ ಸಮನ್ವಯಃ ಕ್ರಿಯತೇ । ಪೂರ್ವಾಧಿಕರಣತದ್ವಿಷಯಸಂಗತೀ ವಿಷಯವಾಕ್ಯೋದಾಹರಣಪೂರ್ವಕಂ ವಿಷಯಸಂಶಯೌ ಚ ದರ್ಶಯತಿ **ಯೋ ವೇದೇತಿ ॥** ತತಃ ಕಿಮ್? ಇತ್ಯತ ಆಹ **ತಚ್ಚೇತಿ ॥ ಚೋ**ವಧಾರಣೇ । ತಥಾಚ ಯತ್ ಪೂರ್ವಂ ಮಾಂತ್ರವರ್ಣಿಕಪದೋಪಾತ್ತ-ಮಂತ್ರವರ್ಣಗತೇನ 'ಯೋ ವೇದ' ಇತಿ ವಾಕ್ಯೇನ ಗುಹಾನಿಹಿತಂ ವಸೂಕ್ತಂ ತದೇವ ಆನಂದಮಯಾದ್ಯಾಖ್ಯಮ್ ಇತ್ಯುಕ್ತಮ್ । ತದೇವ 'ವಿ ಮೇ ಕರ್ಣಾ' ಇತಿ ವಾಕ್ಯೇ ಜ್ಯೋತಿರುಕ್ತಂ, ಜ್ಯೋತಿಃಶಬ್ದೇನೋಕ್ತಮಿತ್ಯರ್ಥಃ।

ಅನೇನ ವಕ್ಷ್ಯಮಾಣಪೂರ್ವಪಕ್ಷಪರ್ಯಾಲೋಚನಯಾ ಜ್ಯೋತಿಷೋ ವಿಷ್ಣ್ವ-ನ್ಯತ್ವಸಾಧನಮುಖೇನ ಆನಂದಮಯತ್ವಸ್ಯಾನ್ಯನಿಷ್ಠತ್ವಾಕ್ಷೇಪಾತ್ ಆನಂದಮಯಾಧಿ-ಕರಣೇನ ಅಸ್ಯ ಆಕ್ಷೇಪಿಕೀಸಂಗತಿಃ ಸೂಚಿತಾ ಭವತಿ । ಜ್ಯೋತಿರ್ವಿಷಯಃ; ಕಿಮಗ್ನಿರುತ ವಿಷ್ಣುರಿತಿ ಸಂದೇಹಶ್ಚ ಸೂಚಿತೋ ಭವತಿ।

ಈ ಅಧಿಕರಣದಲ್ಲಿ ಆಯಾಯಾ ಸೂಕ್ತಗಳಲ್ಲಿ ಇರುವ ಸಮಸ್ತಶಬ್ದಗಳನ್ನು ಲಕ್ಷಣಾವೃತ್ತಿಯ ಮೂಲಕ ಹೇಳುವ, ಲೋಕದ ದೃಷ್ಟಿಯಿಂದ ಅನ್ಯತ್ರಪ್ರಸಿದ್ಧವಾದ ಜ್ಯೋತಿಃಶಬ್ದಕ್ಕೆ ಬ್ರಹ್ಮನಲ್ಲಿ ಸಮನ್ವಯವನ್ನು ಮಾಡಲಾಗುವುದು. ಹಿಂದಿನ ಅಧಿಕರಣ ಮತ್ತು ಅದರ ವಿಷಯವಾಕ್ಯಗಳ ಸಂಗತಿಗಳನ್ನು ಮತ್ತು ವಿಷಯವಾಕ್ಯವನ್ನು ಉದಾ-ಹರಿಸಿ ಈ ಅಧಿಕರಣದ ವಿಷಯ, ಸಂಶಯಗಳನ್ನು 'ಯೋ ವೇದ' ಎಂದು ಭಾಷ್ಯದಲ್ಲಿ ತಿಳಿಸುತ್ತಿದ್ದಾರೆ. ಮುಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ತಚ್ಚ' ಎಂಬ ಭಾಷ್ಯ-ವಾಕ್ಯವು ಹೊರಟಿದೆ. ತಚ್ಚ ಎಂಬಲ್ಲಿರುವ ಚಶಬ್ದವು ಅವಧಾರಣಾರ್ಥಕವಾಗಿದೆ. ತಥಾಚ – ಹಿಂದೆ (ಮಾಂತ್ರವರ್ಣಿಕಮೇವ ಚ ಗೀಯತೇ ಎಂಬ ಸೂತ್ರದಲ್ಲಿ) ಮಾಂತ್ರವರ್ಣಿಕಪದದಿಂದ ಗೃಹೀತವಾಗಿರುವ ಮಂತ್ರವರ್ಣದಲ್ಲಿರುವ 'ಯೋ

ವೇದ' ಎಂಬ ವಾಕ್ಯದಿಂದ ಯಾವ ಗುಹಾನಿಹಿತವಾದ ವಸ್ತುವು ಹೇಳಲ್ಪಟ್ಟಿದೆಯೋ ಅದೇ ಆನಂದಮಯಾದಿಶಬ್ದವಾಚ್ಯವಾಗಿದೆ ಎಂದು ಹೇಳಲಾಗಿದೆ. ಅದೇ ವಸ್ತುವೇ 'ವಿ ಮೇ ಕರ್ಣಾ' ಎಂಬ ವಾಕ್ಯದಲ್ಲಿ 'ಜ್ಯೋತಿರುಕ್ತಂ' ಜ್ಯೋತಿಃಶಬ್ದದಿಂದ ಹೇಳಲ್ಪಟ್ಟಿದೆ ಎಂದು ಅರ್ಥ.

ಇದರಿಂದ ಮುಂದೆ ಹೇಳಲಾಗುವ ಪೂರ್ವಪಕ್ಷವನ್ನು ಪರ್ಯಾಲೋಚಿಸಿದಾಗ ಜ್ಯೋತಿಸ್ಸು ವಿಷ್ಣುವಿಗಿಂತ ಭಿನ್ನವಾಗಿದೆ ಎಂದು ಸಾಧಿಸುವ ಮೂಲಕ, ಆನಂದ-ಮಯತ್ವವೂ ವಿಷ್ಣುಭಿನ್ನನಲ್ಲಿರುವುದು ಎಂದು ಆಕ್ಷೇಪಿಸುವುದರಿಂದ ಆನಂದಮಯಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯು ಇರುವುದೆಂದು ಸೂಚಿತವಾ-ಗುವುದು. ಹಾಗೆಯೇ ಈ ಅಧಿಕರಣದ ವಿಷಯ ಜ್ಯೋತಿಸ್ಸು, ಅದು ಅಗ್ನಿಯೋ ಅಥವಾ ವಿಷ್ಣುವೋ? ಎಂಬ ಸಂದೇಹವಿದೆ ಎಂದೂ ಸೂಚಿತವಾಗುವುದು.

(ಭಾ.ದೀ.) 'ವಿ ಮೇ' ಇತಿ ಋಙ್ಮಂತ್ರೇ 'ವಿ'ಇತ್ಯುಪಸರ್ಗಾಣಾಂ ಕ್ರಿಯಾ-ಪದೇನಾನ್ವಯಃ । ತತ್ರ ಧಾತೋರೇವ ವಿಚರಣಾಭಿಧಾಯಕತ್ವಮ್ । ಉಪಸರ್ಗಾಸ್ತು ದ್ಯೋತಕಾಃ, ನ ವಾಚಕಾಃ । ಅತ ಏವ ಸೂತ್ರೇ ಚರಣಾಭಿಧಾನಾತ್ ಇತ್ಯೇವೋ-ಕ್ತಮ್ । ಭಾಷ್ಯೇ ತು **ವಿಚರಣಾಭಿಧಾನಾತ್** ಇತಿ ಸ್ಪಷ್ಟಾರ್ಥಮುಕ್ತಮ್ । ಅತ ಏವ **ತತ್ತ್ವಪ್ರದೀಪೇ** 'ಸ್ಪಷ್ಟತ್ವಾಯ ವಿಚರಣಾಭಿಧಾನಾದ್ ಇತ್ಯುಕ್ತಮ್' ಇತ್ಯುಕ್ತಮ್ । ಮೇ ಇತ್ಯಸ್ಮಚ್ಛಬ್ದೇನ ಮಂತ್ರದ್ರಷ್ಟಾ ಋಷಿರುಚ್ಯತೇ । 'ದೂರಽಆಧೀಃ' ಇತ್ಯಸ್ಯ ಏಕಪದತ್ವೇ-ಽಪಿ ಅವಗ್ರಹದರ್ಶನೇನ ದ್ವಿಖಂಡತ್ವಾದ್ ವಿಭಜ್ಯಾನ್ವಯಃ । ಆಙ್ ಈಶದಭಿ-ವ್ಯಾಪ್ತ್ಯುಭಯಾರ್ಥಕಃ । ವರ್ತತೇ ಇತಿ ಶೇಷಃ । ತಥಾಚ ಯತೋ ಮೇ ಕರ್ಣೌ ಜ್ಯೋತಿಷೋ ವಿರುದ್ಧಂ ಪತಯತಃ ಪತತಃ । ಸ್ವಾರ್ಥೇ ಣಿಚ್ । ಚಕ್ಷುಷ್ಚ ವಿರುದ್ಧಂ ಪತತೀತಿ ವಿಪರಿಣಾಮೇನಾನ್ವಯಃ । ಯಥಾ ಕರ್ಣಾದೇರ್ಜ್ಯೋತಿರ್ವಿದೂರತ್ವಮ್ ಏವಂ ಜ್ಯೋತಿಷೋಽಪಿ ಕರ್ಣಾದಿವಿದೂರತ್ವಮಿತ್ಯಾಹ 'ವೀಃಇದಮ್' ಇತಿ ॥ ಕಂಪೋಽತ್ಯಂತಮಿತ್ಯರ್ಥೇ । ತಥಾಚ ಯದಿದಂ ಹೃದಯೇ ಆಹಿತಮ್ ಆ ಸಮಂತಾತ್ ಸ್ಥಿತಂ ಜ್ಯೋತಿಸ್ತದತ್ಯಂತಂ ಕರ್ಣಾದಿವಿರುದ್ಧಂ ವರ್ತತೇ । ಏವಂ ಮೇ

**ಮನಃ ಜ್ಯೋತಿಷೋ ದೂರೇ ವಿಚರತಿ ಅತೀವ ತದ್ದರ್ಶನವಿರುದ್ಧಂ ವರ್ತತೇ । ಮನಶ್ಚರಣಸ್ಯ ತತ್ತ್ವನಿಷ್ಠಾವಿರೋಧಿತ್ವಂ 'ಚಂಚಲಂ ಹಿ ಮನಃ ಕೃಷ್ಣ' ಇತಿ ಗೀತಾಯಾ-ಮುಕ್ತಮ್ । ಅತಃ ಕಾರಣಾತ್ ಆಧೀಃ ಈಷದ್‌ಬುದ್ಧಿರಹಂ ವ್ಯಾಪ್ತಬುದ್ಧಿರಪೀತಿ ವಾ ಕಿಂ ಸ್ವಿತ್ ಕಿನ್ನು ವಕ್ಷ್ಯಾಮಿ । ಕಿಮು ಕಿಂ ವಾ ನು ಇದಾನೀಂ ಮನಿಷ್ಯೇ ಚಿಂತಯಾಮೀತಿ ಮಂತ್ರಾರ್ಥಃ । ತತ್ತ್ವಪ್ರದೀಪೇ ತು ಆ ಸಮಂತಾದ್ ದೂರಸ್ಥಬುದ್ಧಿರಹಮ್ ಇತ್ಯೇ-ಕಾನ್ವಯೇನ ವ್ಯಾಖ್ಯಾತಮ್ ।**

'ವಿ ಮೇ' ಎಂಬ ಋಗ್ವೇದದ ಮಂತ್ರದಲ್ಲಿ ವಿ ಎಂಬ ಉಪಸರ್ಗಗಳಿಗೆ ಕ್ರಿಯಾ-ಪದದಿಂದ ಅನ್ವಯವಿದೆ. ಆ ಕ್ರಿಯಾಪದದಲ್ಲಿ ಧಾತುವೇ ವಿಚರಣವೆಂಬ ಅರ್ಥವನ್ನು ಹೇಳುವುದು. ಉಪಸರ್ಗಗಳು ಆ ಅರ್ಥಕ್ಕೆ ದ್ಯೋತಕಗಳೇ ಹೊರತು, ವಾಚಕಗಳಲ್ಲ. ಆದ್ದರಿಂದಲೇ ಸೂತ್ರದಲ್ಲಿ **'ಚರಣಾಭಿಧಾನಾತ್'** ಎಂದೇ [೧]ಹೇಳಲಾಗಿದೆ. ಭಾಷ್ಯ-ದಲ್ಲಾದರೋ ('ಕರ್ಣಾದೀನಾಂ ವಿಚರಣಾಭಿಧಾನಾತ್' ಎಂಬ ಭಾಷ್ಯವಾಕ್ಯದಲ್ಲಿ) 'ವಿಚರಣಾಭಿಧಾನಾತ್' ಎಂದು ಹೇಳಿರುವುದು ಸ್ಪಷ್ಟತೆಗಾಗಿ. ಆದ್ದರಿಂದಲೇ ತತ್ತ್ವ-ಪ್ರದೀಪದಲ್ಲಿ 'ಸ್ಪಷ್ಟತ್ವಾಯ ವಿಚರಣಾಭಿಧಾನಾದ್ ಇತ್ಯುಕ್ತಮ್' ಎಂದು ಹೇಳಲಾಗಿದೆ. **'ಮೇ'** ಎಂಬ ಅಸ್ಮಚ್ಛಬ್ದದಿಂದ ಮಂತ್ರದ್ರಷ್ಟ್ರುವಾದ ಋಷಿಯು ಹೇಳಲ್ಪಡುವನು. **'ದೂರಽಆಧೀಃ'** ಎನ್ನುವುದು ಒಂದೇ ಪದವಾಗಿದ್ದರೂ ಅವುಗಳ ಮಧ್ಯದಲ್ಲಿ ಅವ-ಗ್ರಹಚಿಹ್ನೆಯು ಕಾಣಿಸುವುದರಿಂದ ಎರಡು ಖಂಡಗಳಾದ ಪ್ರಯುಕ್ತ, ವಿಭಾಗಮಾಡಿ ಅನ್ವಯಿಸಬೇಕು. (ಆಧೀಃ ಎಂಬಲ್ಲಿರುವ) **'ಆಙ್'** ಉಪಸರ್ಗವು ಈಷತ್ - ಅಲ್ಪ ಮತ್ತು ಅಭಿವ್ಯಾಪ್ತಿ - ಅಧಿಕ ಎಂಬ ಎರಡು ಅರ್ಥಗಳನ್ನು ಹೊಂದಿದೆ. ವರ್ತತೇ ಎಂಬ ಪದವು ಶೇಷವಾಗಿದೆ. ತಥಾಚ, ಯಾವ ಕಾರಣದಿಂದಾಗಿ **ಮೇ ಕರ್ಣೌ** - ನನ್ನ ಕರ್ಣಗಳು, **ಜ್ಯೋತಿಷೋ ವಿಪತಯತಃ** - ಪತಯತಃ ಎಂಬಲ್ಲಿ ಣಿಚ್‌ಪ್ರತ್ಯಯವು ಧಾತ್ವರ್ಥಕ್ಕಿಂತ ಭಿನ್ನವಾದ ಅರ್ಥವನ್ನು ಹೇಳುವುದಿಲ್ಲ. ಆದ್ದರಿಂದ ಪತಯತಃ ಎಂದರೆ ಪತತಃ ಎಂದು ಅರ್ಥ. ಜ್ಯೋತಿಸ್ಸಿಗೆ ವಿರುದ್ಧವಾಗಿ (ನನ್ನ ಕರ್ಣಗಳು) ಹೋಗುವವೋ ಎಂದು ಅರ್ಥ. **ಚಕ್ಷುಶ್ಚ ವಿಪತತಿ** - ನನ್ನ ಚಕ್ಷುರಿಂದ್ರಿಯವೂ ವಿರುದ್ಧವಾಗಿ ಹೋಗುವುದೋ - **ಪತಯತಃ** ಎಂಬ ಕ್ರಿಯಾಪದವನ್ನು ಪತತಿ ಎಂದು ಬದಲಾಯಿಸಿ ಇಲ್ಲಿ ಅನ್ವಯ ಮಾಡಲಾಗಿದೆ. ಹೇಗೆ ಕರ್ಣಾದಿ ಇಂದ್ರಿಯಗಳು ಜ್ಯೋತಿಸ್ಸಿಗೆ ವಿದೂರ-

ವಾಗಿವೆಯೋ, ಹಾಗೆಯೇ ಜ್ಯೋತಿಸ್ಸೂ ಕೂಡ ಕರ್ಣಾದಿಗಳಿಗೆ ವಿದೂರವಾಗಿದೆ ಎಂದು 'ವಿಇದಮ್' ಎಂದು ಹೇಳುತ್ತಿದೆ. ಇಲ್ಲಿರುವ ಕಂಪಸ್ವರವು 'ಅತ್ಯಂತವಾಗಿ' ಎಂಬ ಅರ್ಥವನ್ನು ಹೇಳುವುದು. ತಥಾಚ 'ಯತ್ ಹೃದಯೇ ಆಹಿತಂ' ಯಾವುದು ಹೃದಯದಲ್ಲಿ ಆಹಿತಂ – ಆ - ಚೆನ್ನಾಗಿ ಹಿತಂ - ಇರುವುದೋ ಆ ಜ್ಯೋತಿಯು ಕರ್ಣಾದಿಗಳಿಂದ ಅತ್ಯಂತ ವಿರುದ್ಧವಾಗಿದೆ. ಹೀಗೆಯೇ ಮೇ ಮನಃ – ನನ್ನ ಮನಸ್ಸು ವಿಚರತಿ - ಜ್ಯೋತಿಸ್ಸಿಗಿಂತ ದೂರದಲ್ಲಿ ಸಂಚರಿಸುತ್ತಿದೆ. ಅತ್ಯಂತವಾಗಿ ಅದರ ಜ್ಞಾನಕ್ಕೆ ವಿರುದ್ಧವಾಗಿದೆ. ಮನಸ್ಸಿನ ಸಂಚಾರವು ತತ್ವದಲ್ಲಿ ನಿಷ್ಠೆ ಇರುವುದಕ್ಕೆ ವಿರೋಧಿಯಾಗಿದೆ ಎಂಬ ವಿಷಯವು 'ಚಂಚಲಂ ಹಿ ಮನಃ ಕೃಷ್ಣ' ಎಂದು ಗೀತೆಯಲ್ಲಿ ಹೇಳಲ್ಪಟ್ಟಿದೆ. ಈ ಕಾರಣದಿಂದ 'ಆಧೀಃ' ಅಲ್ಪಬುದ್ಧಿಯುಳ್ಳ ನಾನು ಅಥವಾ ನಾನು ಅಧಿಕವಾದ ಬುದ್ಧಿಯುಳ್ಳವನಾದರೂ 'ಕಿಂ ಸ್ವಿತ್ ವಕ್ಷ್ಯಾಮಿ' ಏನನ್ನು ತಾನೇ ಹೇಳುವೆನು. ನು - ಈಗ, ಕಿಮು ಮನಿಷ್ಯೇ - ಏನನ್ನು ಚಿಂತಿಸುವೆನು ಎಂದು ಮಂತ್ರದ ಅರ್ಥ. ತತ್ವ-ಪ್ರದೀಪದಲ್ಲಾದರೋ - (ಆಧೀಃ) ಆ - ಅತ್ಯಂತದೂರದಲ್ಲಿರುವ ಬುದ್ಧಿಯುಳ್ಳ ನಾನು ಎಂದು ಅನ್ವಯಮಾಡಿ ವ್ಯಾಖ್ಯಾನ ಮಾಡಲಾಗಿದೆ.

(೧) ಉಪಸರ್ಗವೇ 'ವಿರುದ್ಧ'ವೆಂಬ ಅರ್ಥದ ವಾಚಕವಾಗಿದೆ. ಚರಣಶಬ್ದವು 'ವಿರುದ್ಧಚರಣ' ಎಂಬ ಅರ್ಥದ ಭಾಗವಾದ 'ಚರಣ' ಎಂಬ ಅಂಶಕ್ಕೆ ಮಾತ್ರ ವಾಚಕವಾಗಿದೆ ಎಂದಿದ್ದ ಪಕ್ಷದಲ್ಲಿ ಸೂತ್ರಕಾರರು ವಿರುದ್ಧಚರಣವೆಂಬ ಅರ್ಥ-ವನ್ನು ಹೇಳಲು 'ವಿಚರಣಾಭಿಧಾನಾತ್' ಎಂದೇ ಹೇಳಬೇಕಾಗಿದ್ದಿತು ಎಂದು ಭಾವ.

**ಭಾ– ತಚ್ಚ ಜ್ಯೋತಿರಗ್ನಿಸೂಕ್ತತ್ವಾತ್ ಪ್ರಸಿದ್ಧೇಶ್ಚ ಅಗ್ನಿರೇವೇತಿ ಪ್ರಾಪ್ತಮ್ ।**

ಆ ಜ್ಯೋತಿಯಾದರೋ ಅಗ್ನಿಸೂಕ್ತದಲ್ಲಿರುವುದರಿಂದ ಮತ್ತು ಪ್ರಸಿದ್ಧಿ ಇರುವುದರಿಂದ ಅಗ್ನಿಯೇ ಹೊರತು ವಿಷ್ಣುವಲ್ಲ ಎಂದು ಪ್ರಾಪ್ತವಾಗು -ವುದು.

(ಭಾ.ದೀ.) ಅಥ ಸಯುಕ್ತಿಕಂ ಪೂರ್ವಪಕ್ಷಯತಿ **ತಚ್ಚೇತಿ ॥ ಚಃ** ಸಮುಚ್ಚಯೇ। ತದಿತಿ ಚಾವರ್ತತೇ । ಅಗ್ನಿಶಬ್ದೋ ಭೂತ-ತದ್ದೇವತಾಪರಃ । ದ್ವಿತೀಯಚಶಬ್ದೋ

ಭಿನ್ನಕ್ರಮಃ । ತಥಾಚ ತಜ್ಜ್ಯೋತಿರ್ಗುಹಾನಿಹಿತಂ ಚಾಗ್ನಿರೇವ ಭವೇತ್ ಇತಿ ಪ್ರಾಪ್ತಮ್, ಕುತಃ? ಪ್ರಸಿದ್ಧೇಃ ಜ್ಯೋತಿಃಶ್ರುತೇಃ । ತಸ್ಯಾಶ್ಚ ತಸ್ಮಿನ್ನಗ್ನಾವೇವ ಪ್ರಸಿದ್ಧೇಃ ರೂಢತ್ವಾತ್ । ನ ಕೇವಲಂ ಶ್ರುತೇರೇವೇದಂ ಜ್ಯೋತಿರಗ್ನಿಃ, ಕಿಂತು ತಸ್ಯ ಜ್ಯೋತಿಷಃ ಅಗ್ನಿಸೂಕ್ತತ್ವಾತ್ ಅಗ್ನಿಪ್ರಕರಣಗತತ್ವಾಚ್ಚೇತಿ ಯೋಜನಾ । ಅತ ಏವ ಪೂರ್ವಪಕ್ಷೋ-ಪಸಂಹಾರಟೀಕಾಯಾಂ ಶ್ರುತಿಪ್ರಕರಣಯೋಃ ಬಲವತ್ತ್ವಾತ್ ಇತಿ ಪ್ರಸಿದ್ಧಿಪದ-ಲಕ್ಷಿತಾಯಾಃ ಶ್ರುತೇಃ ಪ್ರಥಮಮುಕ್ತಿಃ । ಅತ ಏವ **ಚಂದ್ರಿಕಾಯಾಂ** 'ಭಾಷ್ಯೇ ಅಗ್ನಿ-ಸೂಕ್ತಸ್ಥತ್ವಾಚ್ಚ ಇತಿ ಚಶಬ್ದಪ್ರಯೋಗಾತ್' ಇತ್ಯುಕ್ತಮ್ । ತಥಾ ಚ ಶ್ರುತಿಪ್ರಕರಣಾ-ಭ್ಯಾಂ ಗುಹಾನಿಹಿತತ್ವಲಿಂಗಮಾತ್ರಸ್ಯ ಬಾಧಾದ್ ಅಗ್ನಿರೇವೇದಂ ಜ್ಯೋತಿರ್ಗುಹಾ-ನಿಹಿತಂ ಚೇತಿ ಭಾವಃ ॥

ಅನಂತರ 'ತಚ್ಚ' ಎಂಬ ವಾಕ್ಯದಿಂದ ಭಾಷ್ಯದಲ್ಲಿ ಯುಕ್ತಿಸಹಿತವಾಗಿ ಪೂರ್ವಪಕ್ಷ-ವನ್ನು ಹೇಳುತ್ತಿದ್ದಾರೆ. 'ಚ'ಶಬ್ದವು ಸಮುಚ್ಚಯವನ್ನು ಹೇಳುವುದು. 'ತತ್' ಎಂಬ ಶಬ್ದವು ಆವೃತ್ತಿಯನ್ನು ಪಡೆಯುವುದು. ಅಗ್ನಿಶಬ್ದವು ಭೂತಾಗ್ನಿ ಮತ್ತು ಅದಕ್ಕೆ ಅಭಿಮಾನಿಯಾದ ದೇವತೆಯನ್ನು ಹೇಳುವ ತಾತ್ಪರ್ಯವುಳ್ಳದ್ದು. ಎರಡನೆಯ ಚ-ಶಬ್ದವು ಭಿನ್ನಸ್ಥಳದಲ್ಲಿ(೧) ಅನ್ವಯವನ್ನು ಹೊಂದುವುದು. ತಥಾಚ ಆ ಜ್ಯೋತಿ ಮತ್ತು ಗುಹಾನಿಹಿತವಾದ ವಸ್ತುವು ಅಗ್ನಿಯೇ ಆಗಿರುವುದೆಂದು ಪ್ರಾಪ್ತವಾಗುವುದು. ಏಕೆಂದರೆ? 'ಪ್ರಸಿದ್ಧೇಃ' – ಜ್ಯೋತಿಶ್ಶಬ್ದವಿರುವುದರಿಂದ; ಆ ಜ್ಯೋತಿಶ್ಶಬ್ದವಾದರೋ ಅಗ್ನಿಯಲ್ಲೇ, ಪ್ರಸಿದ್ಧೇಃ - ರೂಢವಾಗಿರುವುದರಿಂದ. ಜ್ಯೋತಿಶ್ಶಬ್ದ ಇರುವುದರಿಂದ ಮಾತ್ರವೇ ಇಲ್ಲಿ ಜ್ಯೋತಿಯು ಅಗ್ನಿಯಲ್ಲ. ಮತ್ತೇನೆಂದರೆ, ಆ ಜ್ಯೋತಿಸ್ ಶಬ್ದವು ಅಗ್ನಿಸೂಕ್ತತ್ವಾತ್ – ಅಗ್ನಿಪ್ರಕರಣದಲ್ಲಿ ಇರುವುದರಿಂದಲೂ ಕೂಡ ಎಂದು ಭಾಷ್ಯ-ವಾಕ್ಯದ ಯೋಜನೆ. ಆದ್ದರಿಂದಲೇ ಪೂರ್ವಪಕ್ಷದ ಉಪಸಂಹಾರವನ್ನು ಮಾಡುವ ತತ್ವಪ್ರಕಾಶಿಕೆಯಲ್ಲಿ 'ಶ್ರುತಿಪ್ರಕರಣಯೋಃ ಬಲವತ್ತ್ವಾತ್' - ಶ್ರುತಿ ಮತ್ತು ಪ್ರಕರಣ-ಗಳೆರಡೂ ಪ್ರಬಲವಾಗಿರುವುದರಿಂದ- ಎಂಬುದಾಗಿ ಪ್ರಸಿದ್ಧಿಪದದಿಂದ ಲಕ್ಷಣಯಾ ಹೇಳಲ್ಪಡುವ ಶ್ರುತಿಯನ್ನು ಮೊದಲು ಹೇಳಲಾಗಿದೆ. ಆದ್ದರಿಂದಲೇ ಚಂದ್ರಿಕಾದಲ್ಲಿ 'ಭಾಷ್ಯೇ 'ಅಗ್ನಿಸೂಕ್ತಸ್ಥತ್ವಾಚ್ಚ' ಇತಿ ಚಶಬ್ದಪ್ರಯೋಗಾತ್' - 'ಭಾಷ್ಯದಲ್ಲಿ ಅಗ್ನಿಸೂಕ್ತ-

ದಲ್ಲೂ ಇರುವುದರಿಂದ ಎಂದು ಚಶಬ್ದವನ್ನು ಪ್ರಯೋಗ ಮಾಡಿರುವುದರಿಂದ' ಎಂದು ಹೇಳಲಾಗಿದೆ. ತಥಾಚ - ಶ್ರುತಿ ಮತ್ತು ಪ್ರಕರಣ ಇವೆರಡರಿಂದ ಗುಹಾನಿಹಿತತ್ವವೆಂಬ ಕೇವಲ ಲಿಂಗವು ಬಾಧಿತವಾಗುವುದರಿಂದ ಈ ಸೂಕ್ತದಲ್ಲಿ ಹೇಳಲ್ಪಟ್ಟಿರುವ ಜ್ಯೋತಿಸ್ಸು ಮತ್ತು ಗುಹಾನಿಹಿತವಾದ ವಸ್ತುವು ಅಗ್ನಿಯೇ ಆಗಿದೆ ಎಂದು ಭಾವ.

(೧) 'ಪ್ರಸಿದ್ಧೇಶ್ಚ' ಎಂಬಲ್ಲಿರುವ 'ಚ'ಶಬ್ದವು ತಾನಿರುವ ಸ್ಥಳದಲ್ಲಿ ಅನ್ವಯವನ್ನು ಹೊಂದದೆ 'ಅಗ್ನಿಸೂಕ್ತತ್ವಾತ್ ಚ' ಎಂದು ಬೇರೆಡೆಯಲ್ಲಿ ಅನ್ವಯವನ್ನು ಹೊಂದುವುದೆಂದು ಭಾವ.

ಭಾ– ಅತ ಆಹ –

**॥ ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ ॥ ೨೪ ॥**

**ವಿಷ್ಣುರೇವ ಜ್ಯೋತಿಃ । ಕರ್ಣಾದೀನಾಂ ವಿಚರಣಾಭಿಧಾನಾತ್ ।**

ಆದ್ದರಿಂದ ಹೇಳುತ್ತಿದ್ದಾರೆ – ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ' ಎಂದು.

ಜ್ಯೋತಿಃಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ, ಕರ್ಣಾದಿ ಇಂದ್ರಿಯಗಳಿಗೆ ಜ್ಯೋತಿಸ್ಸನ್ನು ಕುರಿತು ವಿರುದ್ಧ ಗತಿಯನ್ನು ಹೇಳಿರುವುದರಿಂದ.

(ಭಾ.ದೀ.) ಸಿದ್ಧಾಂತಯತ್ಸೂತ್ರಮವತಾರಯತಿ – **ಅತ ಇತಿ ॥** ಯತಃ ಪೂರ್ವಪಕ್ಷಃ ಪ್ರಾಪ್ತೋಽತಃ ಉತ್ತರಂ ಸೂತ್ರಮಾಹ ಭಗವಾನ್ ಬಾದರಾಯಣಃ ಇತ್ಯರ್ಥಃ । ತದೇವ ಸೂತ್ರಂ ಪಠತಿ – **ಜ್ಯೋತಿರಿತಿ ॥** ಸೂತ್ರೇ ತತ್ತು ಇತ್ಯಸ್ಯಾನುವೃತ್ತಿಂ ವಿಪರಿಣಾಮಂ ಚ ಅಭಿಪ್ರೇತ್ಯ ಪ್ರತಿಜ್ಞಾಂಶಂ ವ್ಯಾಚಷ್ಟೇ – **ವಿಷ್ಣುರೇವೇತಿ ॥** 'ಜ್ಯೋತಿಃ ತಚ್ಛಬ್ದವಾಚ್ಯೋ ವಿಷ್ಣುರೇವ ಭವೇತ್' ಇತಿ ಯೋಜನಾ । ಕುತಃ? ಇತ್ಯತಃ ಪ್ರಾಪ್ತಂ 'ಚರಣಾಭಿಧಾನಾತ್' ಇತಿ ಹೇತ್ವಂಶಂ ಚರಣಶಬ್ದಸ್ಯ ವಿಚರಣಾರ್ಥತ್ವಂ ಕರ್ಣಾದೀನಾ -ಮಿತ್ಯಸ್ಯಾಧ್ಯಾಹಾರಂ ಚ ಅಭಿಪ್ರೇತ್ಯ ವ್ಯಾಚಷ್ಟೇ – **ಕರ್ಣಾದೀನಾಮಿತಿ ॥** ಅತ್ರ ವಾಕ್ಯೇ

**ಕರ್ಣಾದೀನಾಮ್ ಏತಜ್ಜ್ಯೋತಿಃ ಪ್ರತಿ ವಿರುದ್ಧಚರಣೋಕ್ತೇಃ ಕರ್ಣಾದಿವಿದೂರತ್ವ-ಲಿಂಗಶ್ರವಣಾತ್ ಇತ್ಯರ್ಥಃ। ಅತ್ರ ಕರ್ಣಾದಿವಿದೂರತ್ವಂ ನಾಮ ತೈಃ ಇಯತ್ ಇತಿ ಪರಿಚ್ಛೇದಾಯೋಗ್ಯವೈಭವತ್ವಂ, ನ ತು ಕರ್ಣಾದಿವಿದೂರತ್ವಮಾತ್ರಮ್। ತದ್ವಿಷಯೇ ತಸ್ಯಾಸಂಭವಾತ್। 'ಅಭಿಧಾನಪರ್ಯಂತಧಾವನಂ ಹೇತ್ವಸಿದ್ಧಿಪರಿಹಾರಾಯ ಇತಿ ದ್ರಷ್ಟವ್ಯಮ್।**

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅತಃ ಎಂದು ಅವತಾರಿಕೆಯನ್ನು ಕೊಡುತ್ತಿದ್ದಾರೆ. ಯಾವ ಕಾರಣದಿಂದ ಪೂರ್ವಪಕ್ಷವು ಪ್ರಾಪ್ತವಾಗಿದೆಯೋ ಆದ್ದರಿಂದ ಉತ್ತರರೂಪವಾಗಿ ಭಗವಾನ್ ಬಾದರಾಯಣರು ಸೂತ್ರವನ್ನು ಹೇಳುತ್ತಿದ್ದಾರೆ ಎಂದು ಅರ್ಥ. ಆ ಸೂತ್ರವನ್ನೇ ಜ್ಯೋತಿಃ ಎಂಬುದಾಗಿ ಪಠಿಸುತ್ತಿದ್ದಾರೆ. ಸೂತ್ರದಲ್ಲಿ 'ತತ್ ತು' ಎಂಬ ಪದಗಳ ಅನುವೃತ್ತಿಯಾಗುವುದು ಮತ್ತು ವಿಭಕ್ತಿಯ ವ್ಯತ್ಯಾಸವೂ ಆಗುವುದು ಎಂದು ಅಭಿಪ್ರಾಯಪಟ್ಟು, ಪ್ರತಿಜ್ಞಾಭಾಗವನ್ನು ವಿಷ್ಣುರೇವ ಎಂಬುದಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಜ್ಯೋತಿಃ - ಆ ಜ್ಯೋತಿಃಶಬ್ದವಾಚ್ಯನಾದವನು ವಿಷ್ಣುರೇವ ಭವೇತ್ - ವಿಷ್ಣುವೇ ಆಗುವನು ಎಂದು ಯೋಜನೆ. ಏಕೆ? ಎಂಬ ಪ್ರಶ್ನೆಗೆ ಉತ್ತರವಾಗಿ ಪ್ರಾಪ್ತವಾಗಿರುವ 'ಚರಣಾಭಿಧಾನಾತ್' ಎಂಬ ಹೇತುಭಾಗವನ್ನು, ಚರಣಶಬ್ದಕ್ಕೆ ವಿಚರಣ ಎಂಬ ಅರ್ಥವಿದೆಯೆಂದೂ 'ಕರ್ಣಾದೀನಾಮ್' ಎಂಬ ಪದದ ಅಧ್ಯಾಹಾರವಿದೆ ಎಂದೂ ಅಭಿಪ್ರಾಯಪಟ್ಟು, ಕರ್ಣಾದೀನಾಮ್ ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. ಈ (ವಿ ಮೇ ಕರ್ಣಾ ಪತಯತಃ ಎಂಬ) ವಾಕ್ಯದಲ್ಲಿ ಕರ್ಣಾದಿ ಇಂದ್ರಿಯಗಳಿಗೆ ಈ ಜ್ಯೋತಿಸ್ಸನ್ನು ಕುರಿತು ವಿರುದ್ಧಗತಿಯನ್ನು ಹೇಳಿರುವುದರಿಂದ, ಕರ್ಣಾದಿವಿದೂರತ್ವ ಎಂಬ ಲಿಂಗವು ಶ್ರುತವಾಗಿದೆಯಾದ್ದರಿಂದ ಎಂದು ಅರ್ಥ. ಇಲ್ಲಿ ಕರ್ಣಾದಿವಿದೂರತ್ವವೆಂದರೆ ಕರ್ಣಾದಿ ಇಂದ್ರಿಯಗಳಿಂದ ಇಷ್ಟೇ ಎಂಬುದಾಗಿ ನಿರ್ಣಯಿಸಲು ಸಾಧ್ಯವಾಗದ ವೈಭವವನ್ನು ಪಡೆದಿರುವುದು ಎಂದು ಅರ್ಥವೇ ಹೊರತು ಕೇವಲ ಕರ್ಣಾದಿಗಳಿಗೆ ದೂರವಾಗಿರುವುದು ಎಂದಿಷ್ಟೇ ಅಲ್ಲ. ಏಕೆಂದರೆ, ವಿಷ್ಣುವಿನ ವಿಷಯದಲ್ಲಿ ದೂರವಾಗಿರುವಿಕೆಯು ಅಸಂಭಾವಿತವಾದದ್ದು. (ಜ್ಯೋತಿಶ್ಚರಣಾತ್ ಎಂದು ಹೇಳದೇ) ಅಭಿಧಾನಪರ್ಯಂತವಾಗಿ ಹೇಳಿರುವುದು ಹೇತುವಿಗೆ ಅಸಿದ್ಧಿದೋಷವನ್ನು ಪರಿಹಾರಮಾಡಲು ಎಂದು ತಿಳಿಯಬೇಕು[೧].

(೧) ಜ್ಯೋತಿಶ್ಚರಣಾತ್ ಎಂದಿಷ್ಟೇ ಹೇಳಿದ್ದರೆ, ಚರಣ ಎಂದರೆ ಕರ್ಣಾದಿ-ವಿದೂರತ್ವವು ವಿಷ್ಣುವಿನಲ್ಲಿ ಇಲ್ಲ, ಆದ್ದರಿಂದ ಹೇತುವಿಗೆ ಅಸಿದ್ಧಿದೋಷ ಬರು-ವುದು ಎಂಬ ಶಂಕೆಗೆ ಅವಕಾಶವಿರುತ್ತಿತ್ತು. ಚರಣಾಭಿಧಾನಾತ್ ಎಂದು ಹೇಳಿ-ದಾಗ ಕರ್ಣಾದಿವಿದೂರತ್ವಕ್ಕೆ ಶ್ರುತ್ಯುಕ್ತವಾಗಿರುವಿಕೆಯು ಹೇತುವಾಗಿ ಲಭಿಸು-ವುದು. ಆ ಹೇತುವಿಗೆ ಅಸಿದ್ಧಿ ಇಲ್ಲ ಎಂದು ಅಸಿದ್ಧಿಪರಿಹಾರವು ಲಭಿಸುವುದೆಂದು ಭಾವ.

ಭಾ– ಸ ಹಿ 'ಪರೋ ಮಾತ್ರಯಾ ತನ್ವಾ ವೃಧಾನ' (ಋ. ೭-೯೯-೧) ಇತ್ಯಾದಿನಾ ಕರ್ಣಾದಿವಿದೂರಃ ॥ ೨೪ ॥

॥ ಇತಿ ಜ್ಯೋತಿರಧಿಕರಣಮ್ ॥ ೧೦ ॥

ಆ ವಿಷ್ಣುವು 'ಪರೋ ಮಾತ್ರಯಾ ತನ್ವಾ ವೃಧಾನ' ಇತ್ಯಾದಿ ಶ್ರುತಿ-ಗಳಿಂದ ಕರ್ಣಾದಿವಿದೂರನೆಂದು ಪ್ರಸಿದ್ಧನಾಗಿದ್ದಾನೆ.

(ಭಾ.ದೀ.) ನನ್ವಸ್ತು ಜ್ಯೋತಿಷಃ ಕರ್ಣಾದಿವಿದೂರತ್ವೋಕ್ತಿಃ, ತಾವತಾ ತಸ್ಯ ವಿಷ್ಣುತ್ವಂ ಕುತಃ? ಇತ್ಯತಃ ಕರ್ಣಾದಿವಿದೂರತ್ವಸ್ಯ ವಿಷ್ಣ್ವೇಕಲಿಂಗತ್ವೇ ಶ್ರುತಿಮುದಾ-ಹರನ್ ತತ್ ಪ್ರತಿಜಾನೀತೇ – **ಸ ಹೀತಿ ॥** 'ಏವ' ಇತ್ಯನುಷಜ್ಯತೇ । 'ಆದಿ'ಶಬ್ದೇನ 'ನ ತೇ ವಿಷ್ಣೋ' ಇತ್ಯಾದಿಕಂ ಗೃಹ್ಯತೇ । ತಥಾಚ ಹಿ ಯಸ್ಮಾತ್ ಸಃ ವಿಷ್ಣುರೇವ 'ಪರೋ ಮಾತ್ರಯಾ' ಇತ್ಯಾದಿವಾಕ್ಯೇನ ಕರ್ಣಾದಿವಿದೂರ ಇತಿ ಪ್ರಮಿತಃ ತಸ್ಮಾತ್ ನಾಪ್ರಯೋಜಕತಾ, ನ ವಾ ಹೇತುವಿಶೇಷಣಾಸಿದ್ಧಿಃ ಇತ್ಯಧ್ಯಾಹಾರೇಣ ಯೋಜನಾ ॥

ಜ್ಯೋತಿಃಶಬ್ದವಾಚ್ಯನಿಗೆ ಕರ್ಣಾದಿವಿದೂರತ್ವವನ್ನು ಹೇಳಿರಲಿ, ಆದರೆ ಅಷ್ಟು ಮಾತ್ರದಿಂದ ಅವನು ವಿಷ್ಣುವೇ ಎನ್ನುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಕರ್ಣಾದಿವಿದೂರತ್ವವು ವಿಷ್ಣುವಿನ ಅಸಾಧಾರಣಧರ್ಮವಾಗಿದೆ ಎಂಬ ವಿಷಯದಲ್ಲಿ ಶ್ರುತಿಯನ್ನು ಉದಾಹರಿಸುತ್ತಾ ವಿಷ್ಣುವೇ ಕರ್ಣಾದಿವಿದೂರನೆಂದು ಸ ಹಿ ಎಂಬ ವಾಕ್ಯದಿಂದ ಪ್ರತಿಜ್ಞೆ ಮಾಡುತ್ತಿದ್ದಾರೆ. ಏವಶಬ್ದವು ಹಿಂದಿನ ವಾಕ್ಯದಿಂದ ಅನುವೃತ್ತಿ ಹೊಂದುವುದು. 'ಇತ್ಯಾದಿನಾ' ಎಂಬಲ್ಲಿರುವ ಆದಿಶಬ್ದದಿಂದ 'ನ ತೇ ವಿಷ್ಣೋ'

ಮೊದಲಾದ ಶ್ರುತಿಗಳು ಗ್ರಹಿಸಲ್ಪಡುತ್ತವೆ. ತಥಾಚ, ಹಿ - ಯಾವ ಕಾರಣದಿಂದ, ಸ ಏವ- ಆ ವಿಷ್ಣುವೇ ಪರೋ ಮಾತ್ರಯಾ ಇತ್ಯಾದಿ ವಾಕ್ಯದಿಂದ ಕರ್ಣಾದಿವಿದೂರನೆಂದು ಪ್ರಮಿತನಾಗಿರುವನೋ ಆದ್ದರಿಂದ ಹೇತುವಿಗೆ ಅಪ್ರಯೋಜಕತ್ವದೋಷವಾಗಲೀ, ವಿಶೇಷಣಾಸಿದ್ಧಿದೋಷವಾಗಲೀ ಇಲ್ಲವೆಂದು ಅಧ್ಯಾಹಾರದ ಮೂಲಕ ಯೋಜಿಸಬೇಕು.

(ಭಾ.ದೀ.) ಅನೇನ ಜ್ಯೋತಿಃ ತಚ್ಛಬ್ದವಾಚ್ಯಂ ಬ್ರಹ್ಮೈವ । ಕುತಃ? ಅತ್ರ ಕರ್ಣಾದೀನಾಮ್ ಏತಜ್ಜ್ಯೋತಿಃ ಪ್ರತಿ ಸಾಕಲ್ಯೇನ ತದವಿಷಯೀಕರಣರೂಪವಿರುದ್ಧ- 'ಚರಣಾಭಿಧಾನಾತ್' ಕರ್ಣಾದಿವಿದೂರತ್ವಲಿಂಗಶ್ರವಣಾದ್ ಇತ್ಯಾವೃತ್ಯಧ್ಯಾಹಾರಾಭ್ಯಾಂ ಸೂತ್ರಾರ್ಥ ಉಕ್ತೋ ಭವತಿ ।

ಇದರಿಂದ – ಜ್ಯೋತಿಃ ಜ್ಯೋತಿಃಶಬ್ದವಾಚ್ಯನು ಬ್ರಹ್ಮೈವ - ಬ್ರಹ್ಮನೇ ಆಗಿದ್ದಾನೆ. ಏಕೆಂದರೆ? ಅತ್ರ - ಈ ಶ್ರುತಿಯಲ್ಲಿ, ಕರ್ಣಾದಿ ಇಂದ್ರಿಯಗಳಿಗೆ ಈ ಜ್ಯೋತಿಯನ್ನು ಕುರಿತು 'ಸಾಕಲ್ಯೇನ ಆ ಜ್ಯೋತಿಸ್ಸನ್ನು ವಿಷಯೀಕರಿಸದೇ ಇರುವಿಕೆ' ಎಂಬ ಚರಣಾಭಿಧಾನಾತ್ – 'ವಿರುದ್ಧ ಚರಣವನ್ನು ಹೇಳಿರುವುದರಿಂದ' ಅಂದರೆ ಕರ್ಣಾದಿವಿದೂರತ್ವ ಎಂಬ ಲಿಂಗವು ಶ್ರುತವಾಗಿರುವುದರಿಂದ ಎಂಬುದಾಗಿ ಆವೃತ್ತಿ ಮತ್ತು ಅಧ್ಯಾಹಾರಗಳಿಂದ ಸೂತ್ರಾರ್ಥವನ್ನು ಹೇಳಲಾಗಿದೆ.

(ಭಾ.ದೀ.) 'ಮಾಪಯತಿ ಜ್ಞಾಪಯತಿ ವಿಷಯಾನ್' ಇತಿ ವಾ, 'ಮೀಯಂತೇ ವಿಷಯಾ ಅನೇನ' ಇತಿ ವಾ ಮಾತ್ರಾ ಇಂದ್ರಿಯಗಣಃ । ತಯಾ ತತಃ, ತ್ವಂ 'ಪರೋ' ದೂರೋಽಸಿ ಇತಿ, ಹೇ ವಿಷ್ಣೋ ಅನ್ಯಮಹಿಮ್ನಃ ಪರಮ್ ಅಂತಂ ಸೀಮಾನಂ ತೇ ಮಹಿಮಾನಂ ಕೋಽಪಿ ಶ್ರೋತ್ರಾದಿನಾ ನಾಽಪ – ಇತಿ ಚ ಪ್ರಕೃತಾನುಗುಣ್ಯೇನ ಶ್ರುತಿರ್ವ್ಯಾಖ್ಯೇಯಾ ॥

'ಮಾಪಯತಿ' ಅಂದರೆ 'ವಿಷಯಪದಾರ್ಥಗಳನ್ನು ತಿಳಿಸುವುದು' ಎಂಬ ವ್ಯುತ್ಪತ್ತಿ -ಯಂತೆ ಅಥವಾ ಮೀಯಂತೇ ವಿಷಯಾಃ ಅನೇನ - ಇದರಿಂದ ವಿಷಯಗಳು ತಿಳಿಯಲ್ಪಡುತ್ತವೆ ಎಂಬ ವ್ಯುತ್ಪತ್ತಿಗನುಸಾರವಾಗಿ, ಮಾತ್ರಾ ಎಂದರೆ ಇಂದ್ರಿಯಸಮೂಹ;

ಮಾತ್ರಯಾ– ಆ ಇಂದ್ರಿಯಸಮೂಹದಿಂದ, ಹೇ ವಿಷ್ಣೋ! ಪರಃ - ನೀನು, ದೂರನಾಗಿದ್ದೀಯೆ. ಇತರರ ಮಹಿಮೆಗೆ ಪರಮ್ ಅಂತಂ – ಕೊನೆಯ ಸೀಮೆಯಾಗಿರುವ ತೇ ಮಹಿಮಾನಂ - ನಿನ್ನ ಮಹಿಮೆಯನ್ನು ಯಾರೂ ಶ್ರೋತ್ರಾದಿ ಇಂದ್ರಿಯಗಳಿಂದ, ನ ಆಪ- ಹೊಂದಲಿಲ್ಲ– ಎಂಬುದಾಗಿ ಪ್ರಕೃತವಿಷಯಕ್ಕೆ ಅನುಗುಣವಾಗುವಂತೆ ಶ್ರುತಿಯನ್ನು ವ್ಯಾಖ್ಯಾನಿಸಬೇಕು.

(ಭಾ.ದೀ.) ಅತ್ರ ತತ್ವಪ್ರದೀಪಸನ್ನ್ಯಾಯರತ್ನಾವಲೀಕಾರಯೋಃ ಜ್ಯೋತಿರಿತ್ಯಾದಿಚತುಸ್ಸೂತ್ರೀ ಏಕಮೇವಾಂತರ್ಭೇದಾಧಿಕರಣಮ್ ಇತ್ಯಭಿಪ್ರೇತಮ್ । ಅಗ್ನಿಸೂಕ್ತಛಾಂದೋಗ್ಯಗತವಿಷಯವಾಕ್ಯಭೇದಾದನಯೋರ್ಭೇದಃ । ಟೀಕಾಕೃತಸ್ತು ಜ್ಯೋತಿಃಸೂತ್ರಮೇಕಮಧಿಕರಣಂ, 'ಛಂದಃ' ಇತ್ಯಾದಿತ್ರಿಸೂತ್ರೀ ಅಧಿಕರಣಾಂತರಮಿತಿ ಜ್ಞಾತವ್ಯಮ್ ।

ಇಲ್ಲಿ ತತ್ವಪ್ರದೀಪ ಮತ್ತು ಸನ್ನ್ಯಾಯರತ್ನಾವಲೀಕಾರರಿಗೆ 'ಜ್ಯೋತಿಃ' ಎಂದು ಆರಂಭಿಸಿ ನಾಲ್ಕು ಸೂತ್ರಗಳು ಒಂದೇ ಆಂತರಿಕವಾಗಿ ಭೇದವನ್ನು ಹೊಂದಿರುವ ಅಧಿಕರಣವೆಂದು ಅಭಿಪ್ರೇತವಾಗಿದೆ. ಅಗ್ನಿಸೂಕ್ತ ಮತ್ತು ಛಾಂದೋಗ್ಯದಲ್ಲಿರುವ ವಿಷಯವಾಕ್ಯಗಳ ಭೇದವು ಆಂತರಿಕಭೇದಕ್ಕೆ ಕಾರಣವಾಗಿದೆ. ಟೀಕಾಕೃತ್ಪಾದರಿಗಾದರೋ ಜ್ಯೋತಿಸ್ಸೂತ್ರವು ಒಂದು ಅಧಿಕರಣವಾಗಿದ್ದು, ಛಂದಃ ಇತ್ಯಾದಿ ಮೂರು ಸೂತ್ರಗಳು ಮತ್ತೊಂದು ಅಧಿಕರಣವಾಗಿದೆ ಎಂದು ತಿಳಿಯಬೇಕು.

॥ಇತಿ ಜ್ಯೋತಿರಧಿಕರಣಮ್॥

* * * * *

## ೧೧. ಅಥ ಛಂದೋಭಿಧಾನಾಧಿಕರಣಮ್

॥ ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾ
ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಮ್ ಓಂ ॥ ೨೫ ॥

ಮೊದಲಾದ ಶ್ರುತಿಗಳು ಗ್ರಹಿಸಲ್ಪಡುತ್ತವೆ. ತಥಾಚ, ಹಿ - ಯಾವ ಕಾರಣದಿಂದ, ಸ ಏವ- ಆ ವಿಷ್ಣುವೇ ಪರೋ ಮಾತ್ರಯಾ ಇತ್ಯಾದಿ ವಾಕ್ಯದಿಂದ ಕರ್ಣಾದಿವಿದೂರ-ನೆಂದು ಪ್ರಮಿತನಾಗಿರುವನೋ ಆದ್ದರಿಂದ ಹೇತುವಿಗೆ ಅಪ್ರಯೋಜಕತ್ವದೋಷ-ವಾಗಲೀ, ವಿಶೇಷಣಾಸಿದ್ಧಿದೋಷವಾಗಲೀ ಇಲ್ಲವೆಂದು ಅಧ್ಯಾಹಾರದ ಮೂಲಕ ಯೋಜಿಸಬೇಕು.

(ಭಾ.ದೀ.) ಅನೇನ ಜ್ಯೋತಿಃ ತಚ್ಛಬ್ದವಾಚ್ಯಂ ಬ್ರಹ್ಮೈವ । ಕುತಃ? ಅತ್ರ ಕರ್ಣಾ-ದೀನಾಮ್ ಏತಜ್ಜ್ಯೋತಿಃ ಪ್ರತಿ ಸಾಕಲ್ಯೇನ ತದವಿಷಯೀಕರಣರೂಪವಿರುದ್ಧ-'ಚರಣಾಭಿಧಾನಾತ್' ಕರ್ಣಾದಿವಿದೂರತ್ವಲಿಂಗಶ್ರವಣಾದ್ ಇತ್ಯಾವೃತ್ತ್ಯಧ್ಯಾಹಾ-ರಾಭ್ಯಾಂ ಸೂತ್ರಾರ್ಥ ಉಕ್ತೋ ಭವತಿ ।

ಇದರಿಂದ – ಜ್ಯೋತಿಃ ಜ್ಯೋತಿಃಶಬ್ದವಾಚ್ಯನು ಬ್ರಹ್ಮೈವ - ಬ್ರಹ್ಮನೇ ಆಗಿದ್ದಾನೆ. ಏಕೆಂದರೆ? ಅತ್ರ - ಈ ಶ್ರುತಿಯಲ್ಲಿ, ಕರ್ಣಾದಿ ಇಂದ್ರಿಯಗಳಿಗೆ ಈ ಜ್ಯೋತಿಯನ್ನು ಕುರಿತು 'ಸಾಕಲ್ಯೇನ ಆ ಜ್ಯೋತಿಸ್ಸನ್ನು ವಿಷಯೀಕರಿಸದೇ ಇರುವಿಕೆ' ಎಂಬ ಚರಣಾ-ಭಿಧಾನಾತ್ – 'ವಿರುದ್ಧ ಚರಣವನ್ನು ಹೇಳಿರುವುದರಿಂದ' ಅಂದರೆ ಕರ್ಣಾದಿ-ವಿದೂರತ್ವ ಎಂಬ ಲಿಂಗವು ಶ್ರುತವಾಗಿರುವುದರಿಂದ ಎಂಬುದಾಗಿ ಆವೃತ್ತಿ ಮತ್ತು ಅಧ್ಯಾಹಾರಗಳಿಂದ ಸೂತ್ರಾರ್ಥವನ್ನು ಹೇಳಲಾಗಿದೆ.

(ಭಾ.ದೀ.) 'ಮಾಪಯತಿ ಜ್ಞಾಪಯತಿ ವಿಷಯಾನ್' ಇತಿ ವಾ, 'ಮೀಯಂತೇ ವಿಷಯಾ ಅನೇನ' ಇತಿ ವಾ ಮಾತ್ರಾ ಇಂದ್ರಿಯಗಣಃ । ತಯಾ ತತಃ, ತ್ವಂ 'ಪರೋ' ದೂರೋಽಸಿ ಇತಿ, ಹೇ ವಿಷ್ಣೋ ಅನ್ವಮಹಿಮ್ನಃ ಪರಮ್ ಅಂತಂ ಸೀಮಾನಂ ತೇ ಮಹಿಮಾನಂ ಕೋಽಪಿ ಶ್ರೋತ್ರಾದಿನಾ ನಾಽಪ – ಇತಿ ಚ ಪ್ರಕೃತಾನುಗುಣ್ಯೇನ ಶ್ರುತಿರ್ವ್ಯಾಖ್ಯೇಯಾ ॥

'ಮಾಪಯತಿ' ಅಂದರೆ 'ವಿಷಯಪದಾರ್ಥಗಳನ್ನು ತಿಳಿಸುವುದು' ಎಂಬ ವ್ಯುತ್ಪತ್ತಿ -ಯಂತೆ ಅಥವಾ ಮೀಯಂತೇ ವಿಷಯಾಃ ಅನೇನ - ಇದರಿಂದ ವಿಷಯಗಳು ತಿಳಿ-ಯಲ್ಪಡುತ್ತವೆ ಎಂಬ ವ್ಯುತ್ಪತ್ತಿಗನುಸಾರವಾಗಿ, ಮಾತ್ರಾ ಎಂದರೆ ಇಂದ್ರಿಯಸಮೂಹ;

ಮಾತ್ರಯಾ– ಆ ಇಂದ್ರಿಯಸಮೂಹದಿಂದ, ಹೇ ವಿಷ್ಣೋ! ಪರಃ - ನೀನು, ದೂರನಾಗಿದ್ದೀಯೆ. ಇತರರ ಮಹಿಮೆಗೆ ಪರಮ್ ಅಂತಂ – ಕೊನೆಯ ಸೀಮೆಯಾಗಿರುವ ತೇ ಮಹಿಮಾನಂ - ನಿನ್ನ ಮಹಿಮೆಯನ್ನು ಯಾರೂ ಶ್ರೋತ್ರಾದಿ ಇಂದ್ರಿಯಗಳಿಂದ, ನ ಆಪ- ಹೊಂದಲಿಲ್ಲ– ಎಂಬುದಾಗಿ ಪ್ರಕೃತವಿಷಯಕ್ಕೆ ಅನುಗುಣವಾಗುವಂತೆ ಶ್ರುತಿಯನ್ನು ವ್ಯಾಖ್ಯಾನಿಸಬೇಕು.

(ಭಾ.ದೀ.)ಅತ್ರ ತತ್ವಪ್ರದೀಪಸನ್ನ್ಯಾಯರತ್ನಾವಲೀಕಾರಯೋಃ ಜ್ಯೋತಿರಿತ್ಯಾದಿಚತುಸ್ಸೂತ್ರೀ ಏಕಮೇವಾಂತರ್ಭೇದಾಧಿಕರಣಮ್ ಇತ್ಯಭಿಪ್ರೇತಮ್ । ಅಗ್ನಿಸೂಕ್ತಛಾಂದೋಗ್ಯಗತವಿಷಯವಾಕ್ಯಭೇದಾದನಯೋರ್ಭೇದಃ । ಟೀಕಾಕೃತಸ್ತು ಜ್ಯೋತಿಃಸೂತ್ರಮೇಕಮಧಿಕರಣಂ, 'ಛಂದಃ' ಇತ್ಯಾದಿತ್ರಿಸೂತ್ರೀ ಅಧಿಕರಣಾಂತರಮಿತಿ ಜ್ಞಾತವ್ಯಮ್ ।

ಇಲ್ಲಿ ತತ್ವಪ್ರದೀಪ ಮತ್ತು ಸನ್ನ್ಯಾಯರತ್ನಾವಲೀಕಾರರಿಗೆ 'ಜ್ಯೋತಿಃ' ಎಂದು ಆರಂಭಿಸಿ ನಾಲ್ಕು ಸೂತ್ರಗಳು ಒಂದೇ ಆಂತರಿಕವಾಗಿ ಭೇದವನ್ನು ಹೊಂದಿರುವ ಅಧಿಕರಣವೆಂದು ಅಭಿಪ್ರೇತವಾಗಿದೆ. ಅಗ್ನಿಸೂಕ್ತ ಮತ್ತು ಛಾಂದೋಗ್ಯದಲ್ಲಿರುವ ವಿಷಯವಾಕ್ಯಗಳ ಭೇದವು ಆಂತರಿಕಭೇದಕ್ಕೆ ಕಾರಣವಾಗಿದೆ. ಟೀಕಾಕೃತ್ಪಾದರಿಗಾದರೋ ಜ್ಯೋತಿಸೂತ್ರವು ಒಂದು ಅಧಿಕರಣವಾಗಿದ್ದು, ಛಂದಃ ಇತ್ಯಾದಿ ಮೂರು ಸೂತ್ರಗಳು ಮತ್ತೊಂದು ಅಧಿಕರಣವಾಗಿದೆ ಎಂದು ತಿಳಿಯಬೇಕು.

॥ಇತಿ ಜ್ಯೋತಿರಧಿಕರಣಮ್॥

*****

## ೧೧. ಅಥ ಛಂದೋಭಿಧಾನಾಧಿಕರಣಮ್

॥ ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾ
ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಮ್ ಓಂ ॥ ೨೫ ॥

'ಗಾಯತ್ರೀ ವಾ ಇದಂ ಸರ್ವಮ್' ಎಂಬ ಶ್ರುತಿಯಲ್ಲಿರುವ ಗಾಯತ್ರೀಶಬ್ದಕ್ಕೆ ಛಂದಸ್ಸಿನಲ್ಲಿ ರೂಢಿ ಇರುವುದರಿಂದ ಗಾಯತ್ರಿಯು ಛಂದಸ್ಸೇ ಆಗಿರುವುದು ಎಂದರೆ ಅದು ಸರಿಯಲ್ಲ. ಈ ಶ್ರುತಿಯಲ್ಲಿ ಗಾಯತ್ರೀಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ. 'ಗಾನಾದಿಕರ್ತೃತ್ವ'-ವೆಂಬ ಗುಣವಿಶಿಷ್ಟನಾಗಿರುವನೆಂದು ಉಪಾಸನೆಗೋಸ್ಕರವಾಗಿ ವಿಷ್ಣು-ವನ್ನು ಗಾಯತ್ರೀಶಬ್ದವಾಚ್ಯನೆಂಬ ವಿಷಯದಲ್ಲಿ 'ಗಾಯತಿ ತ್ರಾಯತಿ ಚ' ಎಂಬ ಶ್ರುತಿಯು ಪ್ರಮಾಣವಾಗಿದೆ.

(ಭಾ.ದೀ.) ಅತ್ರಾಧಿಕರಣೇ ಅಧಿವೇದಗತಗಾಯತ್ರ್ಯಾದ್ಯಶೇಷಶಬ್ದಸಮನ್ವಯಃ ಕ್ರಿಯತೇ । ಸಂಗತ್ಯಾದಿಜಿಜ್ಞಾಸ್ಯಾಜನನಾಯ ಸೂತ್ರಮೇವ ಆದೌ ಪಠತಿ – **ಛಂದ ಇತಿ ॥** ಅತ್ರ 'ಛಂದಃ' ಇತ್ಯಾವರ್ತತೇ । ತಚ್ಚ ವ್ಯಸ್ತಂ ಸಮಸ್ತಂ ಚ । ತಥಾಚ 'ಛಂದೋಽಭಿಧಾನಾತ್' 'ಗಾಯತ್ರೀ ವಾ ಇದಮ್' ಇತಿ ವಾಕ್ಯಸ್ಥಗಾಯತ್ರೀ-ಶಬ್ದೇನ ಚತುರ್ವಿಂಶತ್ಯಕ್ಷರಮಂತ್ರವಿಶೇಷಾತ್ಮಕಛಂದಸಃ ಪ್ರತಿಪಾದನಾತ್, ತಚ್ಛಬ್ದಸ್ಯ ತತ್ರ ರೂಢತ್ವಾತ್, ಗಾಯತ್ರೀಶಬ್ದವಾಚ್ಯೋ ನ ವಿಷ್ಣುಃ, ಕಿಂತು ಛಂದ ಏವ । ಯತಃ ಗಾಯತ್ರೀ ನ ವಿಷ್ಣುಃ, ಅಪಿ ತು ಛಂದಃ, ಅತೋ ಜ್ಯೋತಿರಪಿ ನ ವಿಷ್ಣುಃ, ಕಿಂತು ಛಂದಃ । ಕುತಃ? 'ಛಂದೋಽಭಿಧಾನಾತ್' ಛಂದಸಾ ಗಾಯತ್ರ್ಯಾ ತದೈಕ್ಯಾ-ಭಿಪ್ರಾಯೇಣ ಜ್ಯೋತಿಷೋಽಭಿಧಾನಾದ್ ಉಪಕ್ರಮಾದಿತಿ ಚೇತ್; ನ ವಿಷ್ಣುರೇವ ಜ್ಯೋತಿಃ । ಕುತಃ? 'ನಿಗದಾತ್' ಗಾಯತ್ರೀಪದೇನ ವಿಷ್ಣೋರೇವಾಭಿಧಾನಾತ್ । ಗಾಯತ್ರ್ಯಾದಿಪದೈರ್ವಿಷ್ಣೋರೇವಾಭಿಧಾನಂ ಚ ನ ತದಭೇದವಿಧಾನಾರ್ಥಂ, ಕಿಂತು ತಥೋಪಾಸನಾರ್ಥಮೇವ ಇತ್ಯಾಹ – **ತಥೇತಿ ॥** ತಥಾ - ಗಾಯತ್ರ್ಯಾದಿಶಬ್ದಾ-ರ್ಥಗುಣಸ್ವರೂಪತ್ವೇನ **ಚೇತಸೋ** ಮನಸಃ **ಅರ್ಪಣಾಯ** ಬ್ರಹ್ಮಣಿ ಆರಾಧನಾಯ ಉಪಾಸನಾರ್ಥಮೇವ ವಿಷ್ಣೋರ್ನಿಗದಾತ್ ಇತ್ಯರ್ಥಃ । 'ಉಪಾಸನಾ' ಇತ್ಯನುಕ್ತ್ವಾ ಚೇತೋಽರ್ಪಣೇತ್ಯುಕ್ತಿಃ ಉಪಾಸನಾಸ್ವರೂಪಕಥನಾರ್ಥಾ । ಅನೇನ ಪ್ರಸಿದ್ಧ-ಗಾಯತ್ರ್ಯಾದಿಪದೇನ ವಿಷ್ಣೋರಭಿಧಾನಂ ವ್ಯರ್ಥಮಿತಿ ಶಂಕಾ ಪರಿಹೃತಾ ।

ಈ ಅಧಿಕರಣದಲ್ಲಿ ವೇದಕ್ಕೆ ಸಂಬಂಧಿಸಿರುವ ಗಾಯತ್ರೀ ಮೊದಲಾದ ಸಮಸ್ತ ಶಬ್ದಗಳ ಸಮನ್ವಯವನ್ನು ಮಾಡಲಾಗುವುದು. ಸಂಗತಿ ಮೊದಲಾದ ವಿಷಯಗಳಲ್ಲಿ ಜಿಜ್ಞಾಸೆಯನ್ನು ಉಂಟುಮಾಡಲು ಛಂದಃ ಎಂಬುದಾಗಿ ಸೂತ್ರವನ್ನೇ ಭಾಷ್ಯಕಾರರು ಆರಂಭದಲ್ಲಿ ಪಠಿಸುತ್ತಿದ್ದಾರೆ. ಇಲ್ಲಿ ಛಂದಃ ಎಂಬ ಪದವು ಆವೃತ್ತಿಯನ್ನು ಪಡೆಯು-ವುದು. ಅವುಗಳಲ್ಲಿ ಒಂದು ಸಮಾಸವನ್ನು ಹೊಂದದ ಪ್ರತ್ಯೇಕ ಪದವಾಗಿಯೂ; ಮತ್ತೊಂದು ಸಮಾಸದಲ್ಲಿ ಸೇರಿದ ಪದವೂ ಆಗಿರುವುದು. ತಥಾಚ '**ಛಂದೋऽಭಿ-ಧಾನಾತ್**'– 'ಗಾಯತ್ರೀ ವಾ ಇದಂ ಸರ್ವಮ್' ಎಂಬ ವಾಕ್ಯದಲ್ಲಿರುವ ಗಾಯತ್ರೀ-ಶಬ್ದದಿಂದ ಇಪ್ಪತ್ತನಾಲ್ಕು ಅಕ್ಷರಗಳ ಮಂತ್ರವಿಶೇಷರೂಪವಾಗಿರುವ ಛಂದಸ್ಸಿನ ಪ್ರತಿ-ಪಾದನೆ ಇರುವುದರಿಂದ, ಆ ಗಾಯತ್ರೀಶಬ್ದವು ಛಂದಸ್ಸಿನಲ್ಲಿ ರೂಢವಾಗಿರುವುದರಿಂದ ಗಾಯತ್ರೀಶಬ್ದವಾಚ್ಯನು ವಿಷ್ಣುವಲ್ಲ. ಕಿಂತು ಛಂದ ಏವ - ಆದರ ಬದಲು ಛಂದಸ್ಸೇ ಆಗಿರುವುದು. ಯಾವ ಕಾರಣದಿಂದ ಗಾಯತ್ರೀಶಬ್ದವಾಚ್ಯನು ವಿಷ್ಣುವಲ್ಲವೋ ಆದರ ಬದಲು ಛಂದಸ್ಸಾಗಿರುವುದೋ ಆದ್ದರಿಂದ ಜ್ಯೋತಿಸ್ಸೂ ಕೂಡ ವಿಷ್ಣುವಲ್ಲ. ಆದರ ಬದಲು ಛಂದಸ್ಸೇ ಆಗಿರುವುದು. ಏಕೆಂದರೆ, **ಛಂದೋಭಿಧಾನಾತ್** - **ಛಂದಸಾ** - ಛಂದಸ್ಸಾಗಿರುವ, **ಗಾಯತ್ರ್ಯಾ** - ಗಾಯತ್ರಿಯಿಂದ ಅಂದರೆ ಆದರ ಐಕ್ಯದ ಅಭಿ-ಪ್ರಾಯದಿಂದ **ಜ್ಯೋತಿಷಃ ಅಭಿಧಾನಾತ್** - ಜ್ಯೋತಿಸ್ಸನ್ನು ಉಪಕ್ರಮದಲ್ಲಿ ಹೇಳಿ-ರುವುದರಿಂದ ಎಂದು ಶಂಕಿಸಿದರೆ ಅದು ಸರಿಯಲ್ಲ. ಜ್ಯೋತಿಸ್ಸು ವಿಷ್ಣುವೇ ಆಗಿರು-ವುದು. ಏಕೆಂದರೆ? '**ನಿಗದಾತ್**' - ಗಾಯತ್ರೀಪದದಿಂದ ವಿಷ್ಣುವನ್ನೇ ಹೇಳಿರುವುದ-ರಿಂದ ಗಾಯತ್ರೀ ಮೊದಲಾದ ಪದಗಳಿಂದ ವಿಷ್ಣುವನ್ನೇ ಹೇಳಿರುವುದು ಗಾಯತ್ರೀ ಮತ್ತು ವಿಷ್ಣುವಿಗೆ ಅಭೇದವನ್ನು ಹೇಳುವುದಕ್ಕೋಸ್ಕರವಲ್ಲ; ಆದರ ಬದಲು ಉಪಾ-ಸನೆಗೋಸ್ಕರವಾಗಿ ಎಂಬುದಾಗಿ ತಥಾ ಎಂದು ಹೇಳಲಾಗಿದೆ. **ತಥಾ** - ಗಾಯತ್ರೀ ಮೊದಲಾದ ಶಬ್ದಗಳ ಅರ್ಥವಾಗಿರುವ ಗುಣಗಳ ಸ್ವರೂಪನೇ ಆಗಿರುವನೆಂದು, **ಚೇತಸಃ** - ಮನಸ್ಸನ್ನು, **ಅರ್ಪಣಾಯ** - ಬ್ರಹ್ಮನಲ್ಲಿ ನೆಲೆಗೊಳಿಸುವುದಕ್ಕೋಸ್ಕರ ಅಂದರೆ ಉಪಾಸನೆಗೋಸ್ಕರವಾಗಿಯೇ ವಿಷ್ಣುವನ್ನು ಹೇಳಿರುವುದರಿಂದ ಎಂದು ಅರ್ಥ. 'ಉಪಾಸನೆ' ಎಂದು ಹೇಳದೇ '**ಚೇತೋಽರ್ಪಣ**' ಎಂದು ಹೇಳಿರುವುದು ಉಪಾ-ಸನೆಯ ಸ್ವರೂಪವನ್ನು ಹೇಳುವ ಉದ್ದೇಶದಿಂದ. ಇದರಿಂದ ಪ್ರಸಿದ್ಧವಾದ ಗಾಯತ್ರೀ

ಮೊದಲಾದ ಪದಗಳಿಂದ ವಿಷ್ಣುವನ್ನು ಹೇಳುವುದು ವ್ಯರ್ಥ ಎಂಬ ಶಂಕೆಯ ಪರಿಹಾರವಾಗುವುದು.

(ಭಾ.ದೀ.) ನನು ಭವೇದ್ ಗಾಯತ್ರೀಶಬ್ದವಾಚ್ಯತ್ವೇನ ವಿಷ್ಣೋರ್ಜ್ಯೋತಿಶ್ಶಬ್ದವಾಚ್ಯತ್ವಸಾಧನಮ್, ಯದಿ ಗಾಯತ್ರೀಶಬ್ದವಾಚ್ಯತ್ವಂ ವಿಷ್ಣೋಃ ಪ್ರಮಿತಂ ಸ್ಯಾತ್ । ತದೇವ ಕುತಃ? ಇತ್ಯತ ಆಹ – **ತಥಾಹೀತಿ** ॥ **ಹಿ** ಯಸ್ಮಾತ್ **ತಥಾ** ಗಾನತ್ರಾಣಕರ್ತೃತ್ವನಿಮಿತ್ತೇನ ವಿಷ್ಣೋರ್ಗಾಯತ್ರೀಶಬ್ದವಾಚ್ಯತ್ವಸಾಧಕಂ ದರ್ಶನಂ 'ದೃಶ್ಯತೇ ಜ್ಞಾಯತೇಽರ್ಥೋ ಯಯಾ' ಇತಿ ವ್ಯುತ್ಪತ್ತ್ಯಾ 'ಗಾಯತಿ ಚ ತ್ರಾಯತಿ ಚ' (ಶಾಖಾಂತರಮ್) ಇತ್ಯಾದಿರೂಪಾ ಶ್ರುತಿರಸ್ತಿ ತಸ್ಮಾತ್ – ಇತಿ ಸೂತ್ರಾರ್ಥಃ।

ಗಾಯತ್ರೀಶಬ್ದವಾಚ್ಯನಾಗಿರುವುದರಿಂದ ವಿಷ್ಣುವು ಜ್ಯೋತಿಃಶಬ್ದವಾಚ್ಯನಾಗಿರುವನೆಂದು ಸಾಧಿಸುವುದು ಗಾಯತ್ರೀಶಬ್ದವಾಚ್ಯತ್ವವು ವಿಷ್ಣುವಿನಲ್ಲಿ ಪ್ರಮಾಣಸಿದ್ಧವಾಗಿದ್ದರೆ ಮಾತ್ರ ಸಾಧ್ಯವಾಗುವುದು. ಆದರೆ ಗಾಯತ್ರೀಶಬ್ದವಾಚ್ಯತ್ವವು ವಿಷ್ಣುವಿಗೆ ಇರುವುದು ಎಂಬ ವಿಷಯದಲ್ಲಿ ಆಧಾರವೇನು? ಎಂಬ ಶಂಕೆಗೆ ಉತ್ತರವಾಗಿ ತಥಾಹಿ ಎಂದು ಹೇಳಲಾಗಿದೆ. ಹಿ ಯಾವ ಕಾರಣದಿಂದ ತಥಾ ಗಾನಕರ್ತೃತ್ವ ಮತ್ತು ತ್ರಾಣಕರ್ತೃತ್ವನಿಮಿತ್ತದಿಂದ ವಿಷ್ಣುವಿಗೆ ಗಾಯತ್ರೀಶಬ್ದವಾಚ್ಯತ್ವವನ್ನು ಸಾಧಿಸುವ, ದರ್ಶನಂ – ದೃಶ್ಯತೇ ಅರ್ಥೋ ಯಯಾ - ಯಾವುದರಿಂದ ವಿಷಯವು ತಿಳಿಯಲ್ಪಡುವುದೋ ಅದು ದರ್ಶನ ಎಂಬ ವ್ಯುತ್ಪತ್ತಿಯಿಂದ ದರ್ಶನವೆಂದೆನಿಸುವ 'ಗಾಯತಿ ತ್ರಾಯತಿ ಚ' ಇತ್ಯಾದಿ ರೂಪವಾದ ಶ್ರುತಿಯು ಇರುವುದೋ ಆದ್ದರಿಂದ ಎಂದು ಸೂತ್ರದ ಅರ್ಥ.

ಭಾ– 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' (ಛಾಂ.ಉ. ೩-೧೩-೭) ಇತ್ಯುಕ್ತಸ್ಯ ಜ್ಯೋತಿಷೋ 'ಗಾಯತ್ರೀ ವಾ ಇದಂ ಸರ್ವಮ್' (ಛಾಂ.ಉ.೩-೧೨-೧) ಇತಿ ಗಾಯತ್ರ್ಯಾ ಸಮಾರಂಭಃ ಕೃತಃ। ತಸ್ಮಾನ್ನ ವಿಷ್ಣುರಿತಿ ಚೇತ್,

'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' (ಛಾಂ.ಉ. ೩-೧೨-೭) ಎಂಬಲ್ಲಿ ಹೇಳಲ್ಪಟ್ಟಿರುವ ಜ್ಯೋತಿಸ್ಸಿನ ವಿಷಯದಲ್ಲಿ

'ಗಾಯತ್ರೀ ವಾ ಇದಂ ಸರ್ವಮ್'(ಛಾಂ.ಉ.೩-೧೨-೧) ಎಂಬ ವಾಕ್ಯದಲ್ಲಿ ಗಾಯತ್ರೀಶಬ್ದದಿಂದ ಉಪಕ್ರಮವನ್ನು ಮಾಡಲಾಗಿದೆ-ಯಾದ್ದರಿಂದ ಜ್ಯೋತಿಸ್ಸು ವಿಷ್ಣುವಲ್ಲ ಎಂದು ಶಂಕಿಸಿದರೆ –

(ಭಾ.ದೀ.) ಶ್ರುತ್ಯಾದಿಸಂಗತಿವಿಷಯವಾಕ್ಯವಿಷಯಸಂಶಯಪೂರ್ವಪಕ್ಷ-ತತ್ಫಲಾನಿ ಸೂಚಯನ್ ಸೂತ್ರೇ ಪೂರ್ವಪಕ್ಷಾಂಶಂ ವ್ಯಾಚಷ್ಟೇ – **ಅಥೇತಿ ॥** 'ಉಕ್ತಸ್ಯ' ಇತ್ಯಾವರ್ತ್ಯತೇ । ತಥಾ ಚ 'ಹೃದಯ ಆಹಿತಂ ಯತ್' ಇತಿ ಗುಹಾನಿಹಿತತ್ವೇನ ಯದುಕ್ತಂ ತಸ್ಯೈವ 'ಜ್ಯೋತಿಷಃ' ಪುನಃ 'ಅಥ ಯದತಃ ಪರೋ ದಿವೋ ಜ್ಯೋತಿ-ರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು ಅನುತ್ತಮೇಷೂತ್ತಮೇಷು ಲೋಕೇಷು। ಇದಂ ವಾವ ತದ್ಯದಿಮಸ್ಮಿನ್ನಂತಃಪುರುಷೇ ಜ್ಯೋತಿಃ' ಇತಿ ಛಾಂದೋಗ್ಯೇ-ಽಪಿ ಉಕ್ತಸ್ಯ 'ಗಾಯತ್ರ್ಯಾ', ಇತ್ಥಂಭೂತಲಕ್ಷಣೇ ತೃತೀಯಾ, ಗಾಯತ್ರೀತ್ವೇನ ತದ್ರೂಪತಯಾ 'ಸಮಾರಂಭಃ' ಪಾಠಃ ಕೃತಃ । ಕುತೋಽಯಂ ವಿಜ್ಞಾಯತೇ ''ಯತೋ 'ಗಾಯತ್ರೀ ವಾ ಇದಂ ಸರ್ವಂ ವಾಗ್ ವೈ ಗಾಯತ್ರೀ ವಾಗ್ವಾ ಇದಂ ಸರ್ವಮ್' ಇತಿ ವಾಕ್ಯೇ 'ಗಾಯತ್ರ್ಯಾ' ಗಾಯತ್ರೀಶಬ್ದೇನ ತದೈಕ್ಯತಾತ್ಪರ್ಯೇಣ 'ಸಮಾರಂಭಃ' ಉಪಕ್ರಮಃ ಕೃತಃ, ಅತಃ'' – ಇತಿ ಯೋಜನಾ । ತತಃ ಕಿಮ್? ಇತ್ಯತ ಆಹ – **ತಸ್ಮಾದಿತಿ ॥** ಇದಂ ಚ ಆವರ್ತತೇ । 'ಜ್ಯೋತಿರ್ಗಾಯತ್ರೀ' ಇತಿ ಚ ಶೇಷಃ । 'ಛಂದಃ' ಇತ್ಯನುಷಜ್ಯತೇ । ತಥಾ ಚ – ''ಯಸ್ಮಾದ್ ಗಾಯತ್ರ್ಯಾ ಸಮಾರಂಭಃ ಕೃತಃ, ಸ ಚ ಯಸ್ಮಾದ್ ಅನುಪಸಂಜಾತವಿರೋಧಿತ್ವೇನ ಬಲವಾನ್ ತಸ್ಮಾತ್ ಇದಂ ಜ್ಯೋತಿಃ ಗಾಯತ್ರ್ಯೇವ ಭವೇತ್ । ಸಾ ಚ ಗಾಯತ್ರೀ ವರ್ಣಸಮಾವೇಶಲಕ್ಷಣಮಂತ್ರಾತ್ಮಕ-ಛಂದ ಏವ ಭವೇತ್, ನ ವಿಷ್ಣುಃ । ಕುತಃ? ತಸ್ಮಾದ್ ಗಾಯತ್ರೀಶಬ್ದಸ್ಯ ಛಂದಸ್ಯೇವ ರೂಢತ್ವಾತ್ ವಾಕ್ಯಾಭಿಧಾನಾಚ್ಚ ಇತಿ ಯೋಜನಾ ।

ಶ್ರುತಿ ಮೊದಲಾದವುಗಳ ಸಂಗತಿ, ಈ ಅಧಿಕರಣದ ವಿಷಯವಾಕ್ಯ , ವಿಷಯ, ಸಂಶಯ, ಪೂರ್ವಪಕ್ಷ ಮತ್ತು ಅದರ ಫಲಗಳನ್ನು ಸೂಚಿಸುತ್ತಾ ಸೂತ್ರದಲ್ಲಿ ಪೂರ್ವ-ಪಕ್ಷದ ಅಂಶವನ್ನು ಅಥ ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ('ಇತ್ಯುಕ್ತಸ್ಯ'

ಎಂಬಲ್ಲಿರುವ) ಉಕ್ತಸ್ಯ ಎಂಬ ಪದವು ಆವೃತ್ತಿಯನ್ನು ಪಡೆಯುವುದು. ತಥಾಚ – **'ಹೃದಯ ಆಹಿತಂ ಯತ್'** – ಹೃದಯಗುಹಾನಿಹಿತವಾಗಿರುವುದೆಂದು ಯಾವ ಜ್ಯೋತಿಸ್ಸು ಹೇಳಲ್ಪಟ್ಟಿದೆಯೋ ಅದೇ ಜ್ಯೋತಿಸ್ಸನ್ನು ಪುನಃ **'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು ಅನುತ್ತಮೇಷೂತ್ತಮೇಷು ಲೋಕೇಷು । ಇದಂ ವಾವ ತದ್ಯದಿಮಸ್ಮಿನ್ನಂತಃಪುರುಷೇ ಜ್ಯೋತಿಃ'** ಎಂದು ಛಾಂದೋಗ್ಯದಲ್ಲೂ ಹೇಳಲಾಗಿದ್ದು, ಆ ಜ್ಯೋತಿಸ್ಸನ್ನು **'ಗಾಯತ್ರ್ಯಾ'** ಇಲ್ಲಿ ತೃತೀಯಾವಿಭಕ್ತಿಯು ಇತ್ಥಂಭೂತಲಕ್ಷಣ[೧] ಎಂಬ ಅರ್ಥವನ್ನು ಹೇಳುವುದು – ಗಾಯತ್ರೀ ಎಂಬುದಾಗಿ ಗಾಯತ್ರಿಯ ಸ್ವರೂಪವೇ ಆಗಿರುವುದೆಂದು **ಸಮಾರಂಭಃ ಕೃತಃ** - ಪಠಿಸಲಾಗಿದೆ. ಈ ವಿಷಯವು ಯಾವ ಆಧಾರದಿಂದ ತಿಳಿದು ಬರುವುದು ಎಂದರೆ – ಯಾವ ಕಾರಣದಿಂದ **'ಗಾಯತ್ರೀ ವಾ ಇದಂ ಸರ್ವಂ ವಾಗ್ ವೈ ಗಾಯತ್ರೀ ವಾಗ್ವಾ ಇದಂ ಸರ್ವಮ್'** ಎಂಬ ವಾಕ್ಯದಲ್ಲಿ **ಗಾಯತ್ರ್ಯಾ** – ಗಾಯತ್ರೀಶಬ್ದದಿಂದ – ಗಾಯತ್ರಿಯ ಅಭೇದವಿರುವ ಅಭಿಪ್ರಾಯದಿಂದ **ಸಮಾರಂಭಃ ಕೃತಃ** ಉಪಕ್ರಮವನ್ನು ಮಾಡಲಾಗಿದೆಯೋ ಆದ್ದರಿಂದ – ಎಂದು ಯೋಜನೆ. ಮುಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ **ತಸ್ಮಾತ್** ಎಂದು ಹೇಳಲಾಗಿದೆ. ಈ ಪದವೂ ಆವೃತ್ತಿಯನ್ನು ಪಡೆಯುವುದು. 'ಜ್ಯೋತಿಃ ಗಾಯತ್ರೀ' ಎಂಬ ಪದಗಳು ಶೇಷವಾಗಿರುವವು. 'ಛಂದಃ' ಎಂಬ ಪದವು ಅನುವೃತ್ತಿಯನ್ನು ಪಡೆಯುವುದು. ತಥಾಚ – ಯಾವ ಕಾರಣದಿಂದ **ಗಾಯತ್ರ್ಯಾ ಸಮಾರಂಭಃ ಕೃತಃ** - ಗಾಯತ್ರೀಶಬ್ದದಿಂದ ಉಪಕ್ರಮವನ್ನು ಮಾಡಲಾಗಿದೆಯೋ ಹಾಗೂ ಆ ಉಪಕ್ರಮವೂ ಕೂಡ ಯಾವುದೇ ವಿರೋಧಿಯಾದದ್ದು ಉತ್ಪನ್ನವಾಗದೇ ಇರುವುದರಿಂದ ಪ್ರಬಲವಾಗಿರುವುದೋ ಆದ್ದರಿಂದ ಈ ಜ್ಯೋತಿಸ್ಸು ಗಾಯತ್ರಿಯೇ ಆಗಿರುವುದು. ಆ ಗಾಯತ್ರಿಯೂ ಕೂಡ ವರ್ಣಗಳ ಸಂಯೋಜನೆ ರೂಪವಾದ ಮಂತ್ರಾತ್ಮಕವಾದ ಛಂದಸ್ಸೇ ಆಗಿರುವುದು, ಹೊರತು ವಿಷ್ಣುವಲ್ಲ. ಏಕೆಂದರೆ, ತಸ್ಮಾತ್ -ಗಾಯತ್ರೀ ಶಬ್ದವು ಛಂದಸ್ಸಿನಲ್ಲೇ ರೂಢವಾಗಿರುವುದರಿಂದ, ಮತ್ತು 'ವಾಗ್‌ವೈ ಗಾಯತ್ರೀ' ಎಂಬುದಾಗಿ ಗಾಯತ್ರಿಯನ್ನು ವಾಕ್ ಎಂಬುದಾಗಿ ಹೇಳಿರುವುದರಿಂದ ಎಂದು ಭಾಷ್ಯದ ಪದಗಳ ಯೋಜನೆ.

(೧) 'ಇತ್ಥಂಭೂತಲಕ್ಷಣೇ' (ಪಾ.ಸೂ.೨.೩.೨೧) – ಧರ್ಮವೊಂದನ್ನು

ಹೊಂದಿರುವುದೆಂದು ಜ್ಞಾಪಿಸುವ ಶಬ್ದದ ಮುಂದೆ ತೃತೀಯಾವಿಭಕ್ತಿ ಬರುವುದು. ಪ್ರಕೃತ, ಜ್ಯೋತಿಸ್ಸು ಗಾಯತ್ರೀತ್ವವೆಂಬ ಧರ್ಮವನ್ನು ಹೊಂದಿರುವುದೆಂದು ತಿಳಿಸುವ ವಿವಕ್ಷೆಯಿಂದ 'ಗಾಯತ್ರ್ಯಾ' ಎಂದು ತೃತೀಯಾವಿಭಕ್ತಿ ಬಂದಿದೆ ಎಂದು ಭಾವ.

(ಭಾ.ದೀ.) ಅನೇನ 'ಗಾಯತ್ರೀ ವಾ ಇದಂ ಸರ್ವಮ್' ಇತಿ ಪೂರ್ವವಾಕ್ಯಸ್ಥ-ಗಾಯತ್ರೀಶಬ್ದಸ್ಯ ವಿಷ್ಣ್ವನ್ಯಪರತ್ವೇ ತತ ಏವೋತ್ತರವಾಕ್ಯಸ್ಥಜ್ಯೋತಿಷೋ ವಿಷ್ಣ್ವನ್ಯ-ತ್ವಾಪತ್ತ್ಯಾ ತತ ಏವ ಅಗ್ನಿಸೂಕ್ತಗತಜ್ಯೋತಿಷೋಽಪಿ ತದನ್ಯತ್ವಮೇವ ಭವೇತ್ । ಅತ ಏವ ಆನಂದಮಯತ್ವಮಪಿ ಅನ್ಯಸ್ಯೈವ ಭವೇತ್ ನ ವಿಷ್ಣೋಃ ; ಇತಿ ಪೂರ್ವೋಕ್ತಾ-ಕ್ಷೇಪೇಣ ಏತದಧಿಕರಣೋತ್ಥಾನಾತ್ ಪೂರ್ವೇಣ ಅಸ್ಯಾಕ್ಷೇಪಿಕೀ ಸಂಗತಿಃ।

ಇದರಿಂದ, 'ಗಾಯತ್ರೀ ವಾ ಇದಂ ಸರ್ವಮ್' ಎಂಬ ಹಿಂದಿನ ವಾಕ್ಯದಲ್ಲಿರುವ ಗಾಯತ್ರೀಶಬ್ದವು ವಿಷ್ಣುಭಿನ್ನನನ್ನು ಹೇಳುವ ತಾತ್ಪರ್ಯವುಳ್ಳದ್ದಾದರೆ ಆದರಿಂದಲೇ ಮುಂದಿನ ವಾಕ್ಯದಲ್ಲಿರುವ ಜ್ಯೋತಿಸ್ಸೂ ವಿಷ್ಣುಭಿನ್ನವೇ ಆಗಬೇಕಾಗುವುದು. ಆದ್ದರಿಂದಲೇ ಅಗ್ನಿಸೂಕ್ತದಲ್ಲಿರುವ ಜ್ಯೋತಿಸ್ಸೂ ವಿಷ್ಣುಭಿನ್ನವೇ ಎಂದಾಗುವುದು. ಆದ್ದರಿಂದಲೇ ಆನಂದಮಯತ್ವವೂ ಕೂಡ ಮತ್ತೊಬ್ಬನಿಗೇ ಇರುವುದು ಹೊರತು ವಿಷ್ಣುವಿಗಲ್ಲ – ಎಂದು ಹಿಂದೆ ಹೇಳಿರುವುದನ್ನು ಆಕ್ಷೇಪಿಸಿ ಈ ಅಧಿಕರಣವು ಹೊರಟಿ-ರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು ಇರುವುದು.

(ಭಾ.ದೀ.) ಏವಂ ಗಾಯತ್ರೀ ವಿಷಯಃ। ಕಿಂ ಛಂದೋವಿಶೇಷಃ ಉತ ವಿಷ್ಣುರಿತಿ ಸಂದೇಹಃ । ತಥಾ ಗಾಯತ್ರೀ ಛಂದೋವಿಶೇಷ ಏವ ಭವೇತ್; ತಚ್ಛಬ್ದಸ್ಯ ತತ್ರ ರೂಢತ್ವಾತ್ ಇತಿ ಸಯುಕ್ತಿಕಃ ಪೂರ್ವಪಕ್ಷಃ। ತಥಾ ತಸ್ಮಾತ್ 'ಜ್ಯೋತಿರಪಿ ಛಂದ ಏವ' ಇತಿ, ತಸ್ಯೈವ ಗುಹಾನಿಹಿತತ್ವಮ್ ಆನಂದಮಯತ್ವಂ ಚ ಇತಿ ಪೂರ್ವಪಕ್ಷಫಲಂ ಚ ಸೂಚಿತಂ ಭವತಿ। ಅತ್ರ ಪೂರ್ವಪಕ್ಷೇ ಗಾಯತ್ರ್ಯಾದಿಶಬ್ದಾಃ ಮಂತ್ರಪರಾಃ ಸರ್ವಮಪಿ ವಾಕ್ಯಂ ತನ್ಮಾಹಾತ್ಮ್ಯಪರತಯಾ ಯೋಜನೀಯಮ್।

ಇದೇ ರೀತಿಯಾಗಿ, (ಈ ಅಧಿಕರಣಕ್ಕೆ) ಗಾಯತ್ರಿಯು ವಿಷಯವಾಗಿದೆ. ಅದು ಛಂದೋವಿಶೇಷವೇ ಅಥವಾ ವಿಷ್ಣುವೇ ಎಂದು ಸಂದೇಹ. ಗಾಯತ್ರಿಯು ಛಂದೋ-ವಿಶೇಷವೇ ಆಗಿರುವುದು ಏಕೆಂದರೆ ಆ ಶಬ್ದವು ಛಂದೋವಿಶೇಷದಲ್ಲೇ ರೂಢವಾಗಿದೆ ಎಂಬುದಾಗಿ ಈ ಅಧಿಕರಣದ ಪೂರ್ವಪಕ್ಷವಾಗಿದೆ. ಹಾಗೆಯೇ ಗಾಯತ್ರಿಯು ಛಂದೋವಿಶೇಷವಾದದ್ದರಿಂದ ಜ್ಯೋತಿಸ್ಸೂ ಛಂದಸ್ಸೇ ಆಗಿದೆ. ಆದಕಾರಣ ಛಂದಸ್ಸಿಗೆ ಹೃದಯಗುಹಾನಿಹಿತತ್ವವೂ ಮತ್ತು ಆನಂದಮಯತ್ವವೂ ಇರುವುದೆಂದು ಪೂರ್ವ-ಪಕ್ಷದ ಫಲವು ಸೂಚಿತವಾಗುವುದು. ಈ ಪೂರ್ವಪಕ್ಷದ ಪ್ರಕಾರ ಗಾಯತ್ರೀ ಮೊದ-ಲಾದ ಶಬ್ದಗಳು ಮಂತ್ರಗಳನ್ನು ಹೇಳುವ ತಾತ್ಪರ್ಯವನ್ನು ಹೊಂದಿರುತ್ತವೆ. ಎಲ್ಲ ವೇದವಾಕ್ಯಗಳೂ ಆ ಮಂತ್ರಗಳ ಮಾಹಾತ್ಮ್ಯವನ್ನು ಹೇಳುವ ತಾತ್ಪರ್ಯವನ್ನು ಹೊಂದಿವೆ ಎಂದು ಯೋಜಿಸಬೇಕು.

(ಭಾ.ದೀ.) ಸಿದ್ಧಾಂತೇ ತು 'ಅಥ' ಇತ್ಯಾದೇರಯಮರ್ಥಃ –

ಭಗವನ್ಮಾಹಾತ್ಮ್ಯಾಂತರಾರಂಭೇಽಥಶಬ್ದಃ । **ಯತ್** ಶ್ವೇತದ್ವೀಪಾನಂತಾಸನ-ವೈಕುಂಠಗತಂ ನಾರಾಯಣವಾಸುದೇವವೈಕುಂಠಾಖ್ಯಂ ರೂಪತ್ರಯಂ **ತತ್ ಅತಃ** ಏತಸ್ಮಾದ್ ವಿವಕ್ಷಿತಾದ್ ಬುದ್ಧಿಸ್ಥಾತ್ **ದಿವಃ ಪರಃ** ಪರಂ ತದಪೇಕ್ಷಯಾ ಉಚ್ಚ-ಸ್ಥಾನಸ್ಥಿತಮ್ ಇತ್ಯರ್ಥಃ । **ಜ್ಯೋತಿಃ** ತೇಜೋಮಯಂ ಏವಂಭೂತಂ ತತ್ **'ವಿಶ್ವತಃ ಪೃಷ್ಠೇಷು'**

'ಪೃಥಿವ್ಯಾಂ ಬ್ರಹ್ಮಣೋ ಮೇರೌ ವೈಜಯಂತೇಽಂತರಿಕ್ಷಗಮ್ ।
ತೃತೀಯಂ ಸತ್ಯಲೋಕೇ ಚ ಸದನಂ ತ್ರಿವಿಧಂ ಮತಮ್ ॥

ಇತಿ ವಚನಾದಂತರಿಕ್ಷಗವೈಜಯಂತಮೇರುಸತ್ಯಲೋಕಗತೇಭ್ಯೋ ಬ್ರಹ್ಮ-ಸದನೇಭ್ಯಃ ಕ್ರಮೇಣ ಉಚ್ಚೇಷು 'ಸರ್ವತಃ ಪೃಷ್ಠೇಷು' ಅಂತರಿಕ್ಷಪೃಥಿವೀಸ್ವರಾತ್ಮಕ-ಲೋಕೇಭ್ಯಃ ಕ್ರಮೇಣ ಉಚ್ಚೇಷು 'ಅನುತ್ತಮೇಷು' ನ ವಿದ್ಯತೇ ಉತ್ತಮೋ ಲೋಕೋ ಯೇಭ್ಯಃ, ತೇಷು ಪ್ರತ್ಯವರೇಷು ಇತಿ ವಾ । ಉತ್ತಮೇಷು ಸ್ವಯಮೇವ ಉತ್ತಮೇಷು 'ಲೋಕೇಷು' ಶ್ವೇತದ್ವೀಪಾನಂತಾಸನವೈಕುಂಠೇಷು 'ದೀಪ್ಯತೇ' ಪ್ರಕಾಶತೇ । 'ತತ್'

ದೀಪ್ಯಮಾನಂ ತೇಜಃ, 'ಇದಂ ವಾವ' ಇದಂ ಖಲು । ಇದಂ ಚ ಕಿಮ್? '**ಯದಿದಮಸ್ಮಿನ್ ಪುರುಷೇ**' ಹೃದಯೇ 'ಅಂತರ್ಜ್ಯೋತಿಃ' ತಚ್ಛಬ್ದಿತಂ ಬ್ರಹ್ಮಾಸ್ತಿ ತತ್ ತೇನೈಕೀಭೂತಮಿತ್ಯರ್ಥಃ । ಯೋ ಗಾಯತ್ರೀನಾಮಾ ಗಾಯತ್ರೀಸಂಸ್ಥಃ ಸ್ತ್ರೀರೂಪೋ ಹಯಶೀರ್ಷಾಖ್ಯೋ ಭಗವಾನ್ ತದಿದಂ ಪ್ರಥಮಂ ರೂಪಮ್ ಇತ್ಯಾಶಯೇನ ತಸ್ಯ ದ್ವಿತೀಯಂ ರೂಪಂ ವಕ್ತುಂ 'ಗಾಯತ್ರೀ' ಇತ್ಯಾದಿವಾಕ್ಯಂ ಪ್ರವೃತ್ತಮ್ ।

'**ಯದಿದಂ ಕಿಂಚ ಭೂತಂ**' ಪೂರ್ಣಂ ಮತ್ಸ್ಯಾದ್ಯವತಾರರೂಪಂ ಯಚ್ಚ 'ಸರ್ವಂ' ಸರ್ವಾಂತಃಸ್ಥಿತಂ ರೂಪಂ ತತ್ಸರ್ವಂ '**ಗಾಯತ್ರೀ**' ಗಾಯತ್ರೀನಾಮಾ ಭಗವಾನೇವ । ವೈ ಪ್ರಸಿದ್ಧಮ್ । ತಸ್ಯೈವ ತೃತೀಯಂ ರೂಪಮಾಹ – **ವಾಗಿತಿ** ॥ ಗಾಯತ್ರೀನಾಮಾ ಭಗವಾನ್ '**ವಾಗ್ ವೈ**' ವಾಙ್‌ನಾಮಕೋ ವಿಷ್ಣುರೇವ । ಕುತೋಽಸ್ಯ ವಿಷ್ಣುತ್ವಮ್? ಇತ್ಯತಃ ತಲ್ಲಕ್ಷಣಯೋಗಾತ್ ಇತ್ಯಾಹ – **ವಾಗ್ ವಾ** ಇತಿ ॥ 'ಇದಂ ಸರ್ವಂ ಭೂತಂ' ಪ್ರಾಣಿಜಾತಂ 'ವಾಗ್ ವೈ' ವಾಙ್‌ನಾಮಕಭಗವದಧೀನಮೇವ । ಅತಃ ಸರ್ವಸ್ವಾಮಿತ್ವಾದ್ ವಾಚೋ ವಿಷ್ಣುತ್ವಮಿತಿ ॥

ಸಿದ್ಧಾಂತದಲ್ಲಾದರೋ 'ಅಥ ಯದತಃ ಪರೋ' ಇತ್ಯಾದಿ ವಾಕ್ಯದ ಅರ್ಥ ಹೀಗಿದೆ –

ಭಗವಂತನ ಮತ್ತೊಂದು ಮಾಹಾತ್ಮ್ಯವನ್ನು ಹೇಳುವುದರ ಆರಂಭವನ್ನು ಅಥಶಬ್ದವು ಸೂಚಿಸುವುದು. ಯತ್ ಶ್ವೇತದ್ವೀಪ ಅನಂತಾಸನ ಮತ್ತು ವೈಕುಂಠ ಎಂಬ ಲೋಕಗಳಲ್ಲಿರುವ ನಾರಾಯಣ, ವಾಸುದೇವ, ವೈಕುಂಠವೆಂಬ ಯಾವ ರೂಪತ್ರಯವಿರುವುದೋ ಅದು, ಅತಃ - ಇದರಿಂದ ಅಂದರೆ ಬುದ್ಧಿಸ್ಥವಾದ ದಿವಃ – ದ್ಯುಲೋಕಕ್ಕಿಂತಲೂ ಪರಃ- ಪರವಾಗಿದೆ ಅಂದರೆ, ದ್ಯುಲೋಕಕ್ಕಿಂತಲೂ ಉಚ್ಚವಾದ ಸ್ಥಾನದಲ್ಲಿದೆ ಎಂದು ಅರ್ಥ. ಜ್ಯೋತಿಃ ತೇಜೋಮಯವಾದ ಆ ರೂಪತ್ರಯವು ವಿಶ್ವತಃ ಪೃಷ್ಠೇಷು –

'ಪೃಥಿವ್ಯಾಂ ಬ್ರಹ್ಮಣೋ ಮೇರೌ ವೈಜಯಂತೇಽಂತರಿಕ್ಷಗಮ್ ।
ತೃತೀಯಂ ಸತ್ಯಲೋಕೇ ಚ ಸದನಂ ತ್ರಿವಿಧಂ ಮತಮ್ ॥

ಎಂಬ ವಚನಕ್ಕನುಸಾರವಾಗಿ ಅಂತರಿಕ್ಷದಲ್ಲಿರುವ ವೈಜಯಂತ, ಮೇರುಪರ್ವತ ಮತ್ತು ಸತ್ಯಲೋಕದಲ್ಲಿರುವ ಬ್ರಹ್ಮಸದನಗಳಿಗಿಂತ ಉನ್ನತವಾಗಿರುವ, **'ಸರ್ವತಃ ಪೃಷ್ಠೇಷು'** - ಅಂತರಿಕ್ಷಲೋಕ ಪೃಥಿವೀಲೋಕ ಸ್ವರ್ಲೋಕ ಎಂಬ ಲೋಕಗಳಿಗಿಂತ ಕ್ರಮವಾಗಿ ಉಚ್ಚವಾಗಿರುವ, **ಅನುತ್ತಮೇಷು**- ಯಾವುದಕ್ಕಿಂತ ಉತ್ತಮವಾದ ಲೋಕವಿಲ್ಲವೋ ಅಂತಹ, **ಉತ್ತಮೇಷು** - ಸ್ವಯಮೇವ ಉತ್ತಮವಾಗಿರುವ **ಲೋಕೇಷು** - ಶ್ವೇತದ್ವೀಪ ಅನಂತಾಸನ ವೈಕುಂಠವೆಂಬ ಲೋಕಗಳಲ್ಲಿ, **ದೀಪ್ಯತೇ** ಪ್ರಕಾಶಿಸುತ್ತಿರುವುದು, **ತತ್** - ಆ ಪ್ರಕಾಶಿಸುತ್ತಿರುವ ತೇಜಸ್ಸು, **ಇದಂ ವಾವ** - ಇದೇ ಆಗಿರುವುದಷ್ಟೇ! ಇದು ಎಂದರೆ ಯಾವುದು?, **'ಯದಿದಮಸ್ಮಿನ್ ಪುರುಷೇ'** – ಯಾವ ಈ ಪುರುಷನ ಹೃದಯದಲ್ಲಿ, **ಅಂತರ್ಜ್ಯೋತಿಃ** ಅಂತರ್ಜ್ಯೋತಿಃ ಎಂಬ ಶಬ್ದದಿಂದ ಹೇಳಲ್ಪಡುವ ಬ್ರಹ್ಮನಿದ್ದಾನೋ ಅವನು ಆ ಜ್ಯೋತಿಯಿಂದ ಅಭಿನ್ನನೇ ಆಗಿದ್ದಾನೆ ಎಂದು ಅರ್ಥ. ಯಾವ ಗಾಯತ್ರೀನಾಮಕನಾದ ಗಾಯತ್ರಿಯಲ್ಲಿರುವ ಹಯಶೀರ್ಷ ಎಂಬ ಹೆಸರಿನ ಸ್ತ್ರೀರೂಪಿಯಾದ ಭಗವಂತನಿರುವನೋ ಅವನು ಈ ಜ್ಯೋತಿಸ್ಸಿನ ಮೊದಲನೆಯ ರೂಪವಾಗಿರುವನು ಎಂಬ ಆಶಯದಿಂದ ಅವನ ಎರಡ-ನೆಯ ರೂಪವನ್ನು ಹೇಳಲು **ಗಾಯತ್ರೀ** ಇತ್ಯಾದಿ ವಾಕ್ಯವು ಹೊರಟಿದೆ. **'ಯದಿದಂ ಕಿಂಚ ಭೂತಮ್'** - ಪೂರ್ಣವಾಗಿರುವ ಮತ್ಸ್ಯಾದಿ ಅವತಾರರೂಪ ಯಾವುದಿರು-ವುದೋ ಮತ್ತು **ಯಚ್ಚ ಸರ್ವಂ** – ಯಾವ ಸರ್ವರ ಒಳಗಿರುವ ರೂಪವಿದೆಯೋ ಅದೆಲ್ಲವೂ **ಗಾಯತ್ರೀ** - ಗಾಯತ್ರೀನಾಮಕನಾದ ಭಗವಂತನೇ ಆಗಿದ್ದಾನೆ. **ವೈ** – ಇದು ಪ್ರಸಿದ್ಧವಾದುದು. ಆ ಜ್ಯೋತಿಸ್ಸಿನ ಮೂರನೆಯ ರೂಪವನ್ನು **ವಾಗ್ ವಾ ಗಾಯತ್ರೀ** ಎಂದು ಹೇಳಲಾಗಿದೆ. ಗಾಯತ್ರೀನಾಮಕನಾದ ಭಗವಂತನು **ವಾಗ್ ವೈ** - ವಾಙ್ನಾಮಕನಾದ ವಿಷ್ಣುವೇ ಆಗಿದ್ದಾನೆ. ವಾಕ್ ವಿಷ್ಣುವಾಗಿರುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಅವನ ಲಕ್ಷಣವಿರುವುದರಿಂದ ವಾಕ್ ವಿಷ್ಣುವೇ ಆಗಿದೆ ಎಂದು **ವಾಗ್ ವಾ ಇದಂ ಸರ್ವಮ್** ಎಂದು ಹೇಳಲಾಗಿದೆ. **ಇದಂ ಸರ್ವಂ ಭೂತಂ** ಈ ಎಲ್ಲಾ ಪ್ರಾಣಸಮೂಹವು ವಾಗ್ವೈ ವಾಙ್ನಾಮಕನಾದ ಭಗವಂತನ ಅಧೀನವೇ ಆಗಿದೆ. ಆದ್ದರಿಂದ ಸರ್ವಸ್ವಾಮಿಯಾದ ಕಾರಣ ವಾಕ್ ವಿಷ್ಣುವೇ ಆಗಿದೆ ಎಂದು ಅರ್ಥ.

**ಭಾ– ನ, ತಥಾ ಚೇತೋಽರ್ಪಣಾರ್ಥಂ ಹಿ ನಿಗದ್ಯತೇ।**

**ಅಗ್ನಿಗಾಯತ್ರ್ಯಾದಿಶಬ್ದಾರ್ಥರೂಪೋಽಸಾವಿತಿ ಚೇತೋಽರ್ಪಣಾರ್ಥಂ ಹಿ ನಿಗದ್ಯತೇ। ತಥಾ ಹಿ ದರ್ಶನಂ 'ಗಾಯತಿ ತ್ರಾಯತಿ ಚ'** (ಛಾಂ.ಉ. ೩-೧೨-೧) **ಇತ್ಯಾದಿ।**

ಇದು (ಈ ಪೂರ್ವಪಕ್ಷವು) ಸರಿಯಲ್ಲ; ತಥಾ ಚೇತೋರ್ಪಣಾರ್ಥಂ ಹಿ ನಿಗದ್ಯತೇ- ಅಂದರೆ ಅಗ್ನಿ, ಗಾಯತ್ರೀ ಇತ್ಯಾದಿ ಶಬ್ದಗಳ ಅರ್ಥವೇ ಈ ಭಗವಂತನಾಗಿರುವನು ಎಂದು ಉಪಾಸನೆಗಾಗಿ ಹಾಗೆ ಹೇಳಲಾಗಿದೆ. ಈ ವಿಷಯದಲ್ಲಿ ಶ್ರುತಿಯೂ ಹೀಗಿರುವುದು – ಗಾಯತಿ ತ್ರಾಯತಿ ಚ - ಇತ್ಯಾದಿಯಾಗಿ.

(ಭಾ.ದೀ.) ಸಿದ್ಧಾಂತಯತ್ಸೂತ್ರಾಂಶಮನುಕರೋತಿ – **ನೇತಿ** ॥ 'ನಿಗದ್ಯತೇ' ಇತ್ಯತ್ರಾಪಿ ಸಂಬಧ್ಯತೇ । ತಥಾಚ 'ಜ್ಯೋತಿಃಶಬ್ದವಾಚ್ಯೋ ವಿಷ್ಣುರ್ನೇತಿ ನ, ಕಿಂತು ಜ್ಯೋತಿಃಶಬ್ದೇನ ವಿಷ್ಣುರೇವ ನಿಗದ್ಯತೇ' ಇತ್ಯರ್ಥಃ । ಕುತಃ? ಇತ್ಯತೋ 'ನಿಗದಾತ್' ಇತಿ ಹೇತುಂ ಯೋಜಯತಿ – **ಹಿ ನಿಗದ್ಯತ ಇತಿ** ॥ 'ಗಾಯತ್ರೀಶಬ್ದೇನ' ಇತಿ ಶೇಷಃ । ತಥಾಚ ಹಿ ಯಸ್ಮಾದ್ ಗಾಯತ್ರೀಶಬ್ದೇನಾಪಿ ವಿಷ್ಣುರೇವ '**ನಿಗದ್ಯತೇ**' ಅಧೀಯತೇ ತಸ್ಮಾತ್ ಇತ್ಯರ್ಥಃ।

ಸಿದ್ಧಾಂತವನ್ನು ನಿರೂಪಿಸುವ ಸೂತ್ರಾಂಶವನ್ನು ನ, ತಥಾ ಚೇತೋರ್ಪಣಾರ್ಥಂ ಹಿ ನಿಗದ್ಯತೇ ಎಂಬುದಾಗಿ ಭಾಷ್ಯಕಾರರು ಅನುಕರಿಸುತ್ತಿದ್ದಾರೆ. ನ ಎಂಬ ಪದದ ನಂತರವೂ 'ನಿಗದ್ಯತೇ' ಎಂಬ ಪದವು ಸಂಬಂಧವನ್ನು ಹೊಂದುತ್ತದೆ. ತಥಾಚ ಜ್ಯೋತಿಃಶಬ್ದವಾಚ್ಯನು ವಿಷ್ಣುವಲ್ಲ ಎನ್ನುವುದು ಸರಿಯಲ್ಲ. ಕಿಂತು, ಜ್ಯೋತಿಃಶಬ್ದೇನ ವಿಷ್ಣುರೇವ ನಿಗದ್ಯತೇ - ಜ್ಯೋತಿಶಬ್ದದಿಂದ ವಿಷ್ಣುವೇ ಹೇಳಲ್ಪಡುವನು ಎಂದು ಅರ್ಥ. ಏಕೆ? ಎಂಬ ಶಂಕೆಯ ಪರಿಹಾರಕ್ಕಾಗಿ 'ನಿಗದಾತ್' ಎಂದು ಸೂತ್ರದಲ್ಲಿ ಹೇಳಿರುವ ಹೇತುವನ್ನು ಹಿ ನಿಗದ್ಯತೇ ಎಂದು ಯೋಜಿಸುತ್ತಿದ್ದಾರೆ. 'ಗಾಯತ್ರೀಶಬ್ದೇನ' ಎಂಬ ಪದವು ಇಲ್ಲಿ ಶೇಷವಾಗಿದೆ. ತಥಾಚ 'ಹಿ' ಯಾವ ಕಾರಣದಿಂದ

ಗಾಯತ್ರೀಶಬ್ದದಿಂದಲೂ ವಿಷ್ಣುವೇ, ನಿಗದ್ಯತೇ ಹೇಳಲ್ಪಡುವನೋ ಆದ್ದರಿಂದ ಎಂದು ಅರ್ಥ.

(ಭಾ.ದೀ.) ವಿಷ್ಣೋಃ ಗಾಯತ್ರ್ಯಾದಿಶಬ್ದೈರಭಿಧಾನಂ ಚ ನ ತದಭೇದ-ವಿಧಾನಾರ್ಥಂ, ಕಿಂತು ತಥೋಪಾಸನಾರ್ಥಮೇವ ಇತ್ಯಾಹ – **ತಥೇತಿ** ॥ 'ಚೇತೋಽರ್ಪಣ' ಇತ್ಯುಕ್ತಪ್ರಯೋಜನಂ ಪೂರ್ವವತ್ । ಭಾಷ್ಯತ್ವಜ್ಞಾಪನಾಯ 'ತಥಾ' ಇತ್ಯಾದಿಸ್ವಪದಾನಿ ತಥಾಶಬ್ದಾರ್ಥಕಥನೇನ ವಿವೃಣೋತಿ – **ಅಗ್ನೀತಿ** ॥ ಅತ್ರ ಜ್ಯೋತಿಃಶಬ್ದೋಪಲಕ್ಷಕಾಗ್ನಿಪದಂ ಜ್ಯೋತಿಃಸೂತ್ರಸ್ಯ ಭಿನ್ನಾಧಿಕರಣತ್ವಪಕ್ಷೇಽನ್ಯತ್ರ ಪ್ರಸಿದ್ಧಸ್ಯ ಗಾಯತ್ರೀಪದಸ್ಯ ವಿಷ್ಣೌ ಪ್ರಯೋಗೇ ಪ್ರಯೋಜನಮತ್ರ ವದತಾ ಸೂತ್ರಕೃತಾ ಪೂರ್ವತ್ರೋತ್ತರತ್ರ ಚಾಗ್ನ್ಯಾದಿಪದಸ್ಯ ವಿಷ್ಣೌ ಪ್ರಯೋಗೇ ಪ್ರಯೋಜನಂ ಸೂಚಿತಮಿತಿ ದರ್ಶಯಿತುಮ್ । ನ ಚ ಗಾಯತ್ರ್ಯಾದಿಪದಾಭ್ಯಾಮೇವ ಗಾಯತ್ರೀ-ಪದಸಮನ್ವಯಫಲಸ್ಯ ಪೂರ್ವತ್ರೋತ್ತರತ್ರ ಚೋಕ್ತಸಮನ್ವಯಫಲಸ್ಯ ಚ ಸೂಚನ-ಸಂಭವಾದಗ್ನಿಪದಂ ವ್ಯರ್ಥಮಿತಿ ವಾಚ್ಯಮ್ । ಫಲೀಭೂತಸಮನ್ವಯವಿಷಯತ್ವೇ-ನಾಸ್ಯಾಪಿ ಅವಶ್ಯೋಪಾದೇಯತ್ವಾತ್ । ಸಮಾನಪ್ರಕರಣಸ್ಥವಾಗಾದಿಗ್ರಾಹಕತ್ವೇನ ಆದಿಶಬ್ದಸ್ಯಾಪ್ಯವಶ್ಯಕತ್ವಾತ್ । ಅವಶ್ಯಾಪೇಕ್ಷಿತಾಭ್ಯಾಮುಭಾಭ್ಯಾಮಪಿ ಆನಂದ-ಮಯಾದ್ಯಧಿಕರಣೇಷೂತ್ತರತ್ರ ಚೋಕ್ತಪ್ರಯೋಜನಸ್ಯಾಪಿ ಸೂಚನಸಂಭವಾದು-ಭಯಮಪ್ಯಾವಶ್ಯಕಮ್ ।

'ಜ್ಯೋತಿಃ' ಇತ್ಯಾದಿಚತುಸ್ಸೂತ್ರ್ಯಾ ಏಕಾಧಿಕರಣತ್ವಪಕ್ಷೇ ತು ಸಾಕ್ಷಾತ್ ಸಮನ್ವೇ-ತವ್ಯಶಬ್ದತ್ವೇನೈವ ಶಬ್ದದ್ವಯೋಪಾದಾನಂ, ನ ತು ಫಲತ್ವೇನ ಅಗ್ನಿಶಬ್ದಸ್ಯ ಅಧಿಕರ-ಣಾಂತರೇಽಪಿ ಏತನ್ನ್ಯಾಯಸೂಚನಂ ತ್ವಾದಿಶಬ್ದೇನೈವ, ನ ತೂಭಾಭ್ಯಾಮ್ । ಭಿನ್ನ-ಜಾತೀಯಾನೇಕಶಬ್ದಗ್ರಹಣಾರ್ಥಂ ಶಬ್ದದ್ವಯೋತ್ತರಾದಿಪದಮ್ । ಅತ ಏವ ತತ್ತ್ವ-ಪ್ರದೀಪೇ ಆದಿಶಬ್ದಸ್ಯೋಭಯತ್ರಾನ್ವಯಂ, ಪ್ರಥಮಾದಿಶಬ್ದೇನ ತೇಜಃಶಬ್ದಾನಾಂ ದ್ವಿತೀಯೇನ ಛಂದಃಶಬ್ದಾನಾಂ ಚ ಗ್ರಹಣಮಭಿಪ್ರೇತ್ಯ 'ಅಗ್ನ್ಯಾದಿತೇಜಃಶಬ್ದಾನಾಂ ಗಾಯತ್ರ್ಯಾದಿಛಂದಃಶಬ್ದಾನಾಂ ಚ' ಇತ್ಯುಕ್ತಮ್ ।

ವಿಷ್ಣುವನ್ನು ಗಾಯತ್ರೀ ಮೊದಲಾದ ಶಬ್ದಗಳಿಂದ ಹೇಳಿರುವುದೂ ಕೂಡ ಗಾಯತ್ರೀ ಮೊದಲಾದವುಗಳಿಂದ ವಿಷ್ಣುವಿಗೆ ಅಭೇದವನ್ನು ಹೇಳುವ ಉದ್ದೇಶದಿಂದಲ್ಲ, ಕಿಂತು ಹಾಗೆ ಉಪಾಸನೆಗೋಸ್ಕರವಾಗಿ ಎಂದು 'ತಥಾ ಚೇತೋರ್ಪಣಾರ್ಥಂ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. (ಉಪಾಸನಾರ್ಥಂ ಎಂಬ ಪದದ ಬದಲಾಗಿ) ಚೇತೋರ್ಪಣ ಎಂಬುದಾಗಿ ಹೇಳಿರುವುದರ ಪ್ರಯೋಜನವು ಹಿಂದೆ ಬಂದಿದೆ. (ತಮ್ಮ ಗ್ರಂಥವು) ಭಾಷ್ಯರೂಪವಾದದ್ದು ಎಂಬುದನ್ನು ತಿಳಿಸಲು ಭಾಷ್ಯಕಾರರು 'ತಥಾ' ಮೊದಲಾದ ತಮ್ಮ ಪದಗಳನ್ನು 'ತಥಾ'ಶಬ್ದದ ಅರ್ಥವನ್ನು ಹೇಳುವ ಮೂಲಕ ಅಗ್ನಿಗಾಯತ್ರ್ಯಾದಿ ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ. ಈ ವಾಕ್ಯದಲ್ಲಿ ಜ್ಯೋತಿಃಶಬ್ದವನ್ನು ಲಕ್ಷಣಾವೃತ್ತಿಯಿಂದ ಸೂಚಿಸುವ ಅಗ್ನಿಪದವು, ಜ್ಯೋತಿಸೂತ್ರವು ಬೇರೆಯೇ ಅಧಿಕರಣವಾಗಿದೆ ಎಂಬ ಪಕ್ಷದಲ್ಲಿ ಅನ್ಯತ್ರಪ್ರಸಿದ್ಧವಾದ ಗಾಯತ್ರೀಪದವನ್ನು ವಿಷ್ಣುವಿನಲ್ಲಿ ಪ್ರಯೋಗಮಾಡುವುದರ ಪ್ರಯೋಜನವನ್ನು ಈ ಸೂತ್ರದಲ್ಲಿ ಹೇಳುವ ಸೂತ್ರಕಾರರು ಹಿಂದಿನ ಮತ್ತು ಮುಂದಿನ ಅಧಿಕರಣಗಳಲ್ಲಿ ಅಗ್ನಿ ಮೊದಲಾದ ಪದಗಳಿಗೆ ವಿಷ್ಣುವಿನಲ್ಲಿ ಪ್ರಯೋಗ ಮಾಡುವುದರ ಪ್ರಯೋಜನವನ್ನು ಸೂಚಿಸುತ್ತಿದ್ದಾರೆ ಎಂದು ತಿಳಿಸುವ ಉದ್ದೇಶವನ್ನು ಹೊಂದಿದೆ.

ಶಂಕೆ – ಗಾಯತ್ರೀಪದ ಮತ್ತು ಆದಿಪದಗಳಿಂದಲೇ ಗಾಯತ್ರೀಪದದ ಸಮನ್ವಯದ ಫಲವನ್ನು ಹಾಗೂ ಹಿಂದು ಮುಂದಿನ ಅಧಿಕರಣಗಳಲ್ಲಿ ಹೇಳಿರುವ ಸಮನ್ವಯದ ಫಲವನ್ನೂ ಸೂಚಿಸಲು ಸಾಧ್ಯವಿರುವುದರಿಂದ ಈ ವಾಕ್ಯದಲ್ಲಿ ಅಗ್ನಿಪದ ವ್ಯರ್ಥವೇ ಆಗಿದೆ.

ಸಮಾಧಾನ – ಈ ಶಂಕೆಯು ಸರಿಯಲ್ಲ. ಏಕೆಂದರೆ, ಈ ಅಧಿಕರಣದಲ್ಲಿ ಜ್ಯೋತಿಃಶಬ್ದದ ಸಮನ್ವಯವನ್ನು ಮಾಡದಿದ್ದರೂ ಇಲ್ಲಿ ಮಾಡುವ ಸಮನ್ವಯದ ಫಲವು ಜ್ಯೋತಿಃಶಬ್ದದ ಸಮನ್ವಯವೇ ಆಗಿರುವುದರಿಂದ ಜ್ಯೋತಿಃಶಬ್ದವನ್ನು ಸೂಚಿಸುವ ಅಗ್ನಿಪದವನ್ನು ಇಲ್ಲಿ ಸೇರಿಸಿರುವುದು ಆವಶ್ಯಕವಾಗಿದೆ. ಅಂತೆಯೇ ಗಾಯತ್ರೀಶಬ್ದವಿರುವ ಪ್ರಕರಣದಲ್ಲೇ ಇರುವ ವಾಕ್ ಮೊದಲಾದ ಶಬ್ದಗಳನ್ನು ಗ್ರಹಿಸಲು ಆದಿಶಬ್ದವೂ ಆವಶ್ಯಕವಾಗಿದೆ. ಹೀಗೆ ಆವಶ್ಯಕವೂ ಅಪೇಕ್ಷಿತವೂ ಆದ ಅಗ್ನಿಶಬ್ದ ಮತ್ತು ಆದಿಶಬ್ದ ಎಂಬ ಎರಡು ಪದಗಳಿಂದಲೂ ಆನಂದಮಯಾಧಿಕರಣವೇ

ಮೊದಲಾದ ಅಧಿಕರಣಗಳಲ್ಲಿ ಮತ್ತು ಮುಂದಿನ ಅಧಿಕರಣಗಳಲ್ಲೂ ಇಲ್ಲಿ ಹೇಳಿರುವ ಪ್ರಯೋಜನವನ್ನು ಸೂಚಿಸುವ ಸಾಧ್ಯತೆ ಇರುವುದರಿಂದ ಈ ಎರಡೂ ಪದಗಳು ಇಲ್ಲಿ ಆವಶ್ಯಕವಾಗಿವೆ.

ಜ್ಯೋತಿಶ್ಚರಣಾಭಿಧಾನಾತ್ ಎಂದು ಆರಂಭಿಸಿ ನಾಲ್ಕು ಸೂತ್ರಗಳು ಒಂದು ಅಧಿಕರಣವಾಗಿವೆ ಎಂಬ ಪಕ್ಷದಲ್ಲಾದರೂ ಸಾಕ್ಷಾತ್ತಾಗಿ ಈ ಅಧಿಕರಣದಲ್ಲಿ ಸಮನ್ವಯ ಮಾಡಲ್ಪಡುವ ಶಬ್ದಗಳೆಂದೇ ಅಗ್ನಿ, ಗಾಯತ್ರೀ ಎಂಬ ಎರಡು ಶಬ್ದಗಳನ್ನು ಈ ವಾಕ್ಯದಲ್ಲಿ ಗ್ರಹಿಸಲಾಗಿದೆ ಹೊರತು, ಹಿಂದೆ ಹೇಳಿದಂತೆ ಈ ಅಧಿಕರಣದಲ್ಲಿ ಮಾಡ-ಲಾಗುವ ಗಾಯತ್ರೀಶಬ್ದದ ಸಮನ್ವಯದ ಫಲ ಅಗ್ನಿಶಬ್ದದ ಸಮನ್ವಯವಾಗಿದೆ ಎಂದು ಸೂಚಿಸುವ ಸಲುವಾಗಿ ಅಗ್ನಿಶಬ್ದವನ್ನು ಇಲ್ಲಿ ಗ್ರಹಿಸಿರುವುದಿಲ್ಲ. ಇತರ ಅಧಿಕರಣಗಳಲ್ಲಿ ಈ ನ್ಯಾಯದ (ಉಪಾಸನೆಗೋಸ್ಕರವಾಗಿ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ ಎಂಬ ನ್ಯಾಯದ) ಸೂಚನೆಯಾದರೋ ಆದಿಶಬ್ದದಿಂದಲೇ ಆಗುವುದು ಹೊರತು ಅಗ್ನಿಶಬ್ದ ಮತ್ತು ಆದಿಶಬ್ದ ಎಂಬ ಎರಡು ಶಬ್ದಗಳಿಂದಲ್ಲ. ಭಿನ್ನಜಾತೀಯವಾದ ಅನೇಕಶಬ್ದಗಳ ಗ್ರಹಣದ ಉದ್ದೇಶದಿಂದ [೧]ಅಗ್ನಿ, ಗಾಯತ್ರೀ ಎಂಬ ಎರಡು ಪದಗಳ ನಂತರ ಆದಿಪದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದಲೇ ತತ್ವಪ್ರದೀಪದಲ್ಲಿ ಆದಿಶಬ್ದಕ್ಕೆ 'ಅಗ್ನಿ', 'ಗಾಯತ್ರೀ' ಎಂಬ ಎರಡೂ ಪದಗಳೊಂದಿಗೆ ಅನ್ವಯವಿದೆ-ಯೆಂದೂ ಮೊದಲನೆಯ ಆದಿಶಬ್ದದಿಂದ ತೇಜಸ್ಸಿನಲ್ಲಿ ಪ್ರಸಿದ್ಧವಾದ ಶಬ್ದಗಳ, ಎರಡನೆಯ ಆದಿಶಬ್ದದಿಂದ ಛಂದಸ್ಸಿನಲ್ಲಿ ಪ್ರಸಿದ್ಧವಾದ ಶಬ್ದಗಳ ಗ್ರಹಣವಾಗುವುದು ಎಂದು ಅಭಿಪ್ರಾಯಪಟ್ಟು 'ಅಗ್ನ್ಯಾದಿತೇಜಃಶಬ್ದಾನಾಂ ಗಾಯತ್ರ್ಯಾದಿಛಂದಃ-ಶಬ್ದಾನಾಂ ಚ' ಎಂದು ಹೇಳಲಾಗಿದೆ.

(೧) 'ಆಕಾಶ' ಮೊದಲಾದ ಭೂತವಾಚಕಶಬ್ದಗಳು 'ಇಂದ್ರ' ಮೊದಲಾದ ದೇವತಾವಾಚಕಶಬ್ದಗಳು ಇತ್ಯಾದಿ ಶಬ್ದಗಳು ಭಿನ್ನಜಾತೀಯವಾದ ಶಬ್ದಗಳು. ಅವುಗಳನ್ನು ಗ್ರಹಿಸುವ ಉದ್ದೇಶದಿಂದ 'ಅಗ್ನಿಗಾಯತ್ರ್ಯಾದಿ' ಎಂದು ಆದಿ-ಪದವನ್ನು ಪ್ರಯೋಗಿಸಲಾಗಿದೆ ಎಂದು ಭಾವ.

(ಭಾ.ದೀ.) ಕೇಚಿತ್ತು ಭಾಷ್ಯಗತ'ಹಿ'ಶಬ್ದಃ 'ಜ್ಞಾನಾರ್ಥಮಥ ಧ್ಯಾನಾರ್ಥಮ್' ಇತಿ ಪ್ರಮಾಣಪ್ರಸಿದ್ಧಿದ್ಯೋತಕಃ, ಅಧಿಕರಣಾಂತರೇಽಪ್ಯಸ್ಯ ನ್ಯಾಯಸ್ಯಾನುಸಂಧೇಯ-

ತ್ವಜ್ಞಾಪಕಶ್ಚೇತ್ಯಾಹುಃ । 'ಚೇತೋಽರ್ಪಣಾರ್ಥಮ್' ಇತಿ ಸಾವಧಾರಣಮ್ । ತಥಾ ಚ 'ಅಸೌ' ಭಗವಾನಗ್ನಿಗಾಯತ್ರ್ಯಾದಿಶಬ್ದೈರಗ್ನಿಗಾಯತ್ರ್ಯಾದಿಶಬ್ದಾರ್ಥಗುಣಸ್ವರೂಪ ಇತಿ ತತ್ರ 'ಚೇತೋಽರ್ಪಣಾರ್ಥಂ' ಬುದ್ಧ್ಯವತಾರಣಾರ್ಥಮ್ ಉಪಾಸನಾರ್ಥ-ಮೇವ ನಿಗದ್ಯತೇ, ನ ತದಭೇದವಿಧಾನಾರ್ಥಮಿತ್ಯರ್ಥಃ । 'ಇತಿ' ಇತ್ಯಂತೇನ ತಥಾ-ಶಬ್ದಾರ್ಥ ಉಕ್ತಃ । ಅನೇನಾಪ್ರಸಿದ್ಧಗಾಯತ್ರ್ಯಾದಿಪದೇನ ವಿಷ್ಣೋರಭಿಧಾನಸ್ಯ ವೈಯರ್ಥ್ಯಶಂಕಾ ಪರಿಹೃತಾ ।

ಕೆಲವರು– ಭಾಷ್ಯದಲ್ಲಿರುವ 'ಹಿ'ಶಬ್ದವು 'ಜ್ಞಾನಾರ್ಥಮಥ ಧ್ಯಾನಾರ್ಥಮ್' - ಜ್ಞಾನಕ್ಕೋಸ್ಕರವಾಗಿ ಮತ್ತು ಉಪಾಸನೆಗೋಸ್ಕರವಾಗಿ (ಶಬ್ದಗಳ ಸಮನ್ವಯವನ್ನು ಹೇಳಲಾಗಿದೆ) ಎಂಬ ಪ್ರಮಾಣದಿಂದ ಈ ಸೂತ್ರದಲ್ಲಿ ಹೇಳಿರುವ ವಿಷಯವು ಪ್ರಸಿದ್ಧವಾಗಿದೆ ಎಂದು ಸೂಚಿಸುವುದು. ಅಲ್ಲದೇ ಇತರ ಅಧಿಕರಣಗಳಲ್ಲೂ ಇದೇ ನ್ಯಾಯವನ್ನು ಅನುಸಂಧಾನಮಾಡತಕ್ಕದ್ದು ಎಂಬುದನ್ನೂ ಹಿಶಬ್ದವು ಸೂಚಿಸುವುದು – ಎಂದು ಹೇಳುವರು. (ಭಾಷ್ಯದಲ್ಲಿ) ಚೇತೋಽರ್ಪಣಾರ್ಥಮ್ ಎಂಬ ವಾಕ್ಯವು ಚೇತೋರ್ಪಣಾರ್ಥಮೇವ ಎಂದು ಅವಧಾರಣಸಹಿತವಾಗಿದೆ. ತಥಾಚ, 'ಅಸೌ' ಈ ಭಗವಂತನು ಅಗ್ನಿ ಗಾಯತ್ರೀ ಮೊದಲಾದ ಶಬ್ದಗಳ ಅರ್ಥವಾದ ಗುಣಗಳ ಸ್ವರೂಪವೇ ಆಗಿದ್ದಾನೆ ಎಂಬುದಾಗಿ ಆ ಭಗವಂತನಲ್ಲಿ, ಚೇತೋರ್ಪಣಾರ್ಥಂ ಮನಸ್ಸನ್ನು ಇಡಲು ಅಂದರೆ, ಉಪಾಸನೆಗೋಸ್ಕರವಾಗಿಯೇ ಅಗ್ನಿ, ಗಾಯತ್ರೀ ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟಿದ್ದಾನೆ ಹೊರತು ಅಗ್ನಿ, ಗಾಯತ್ರೀ ಮೊದಲಾದ ದೇವತೆಗಳ ಅಭೇದವನ್ನು ತಿಳಿಸುವ ಉದ್ದೇಶ್ಯದಿಂದಲ್ಲ ಎಂದು ಅರ್ಥ. (ಭಾಷ್ಯದಲ್ಲಿ) 'ಅಸೌ ಇತಿ' ಎಂಬುದಾಗಿ ಇತಿಶಬ್ದದಿಂದ ಕೊನೆಗೊಳ್ಳುವ ಭಾಗದಿಂದ 'ತಥಾ' ಶಬ್ದದ ಅರ್ಥವು ಹೇಳಲ್ಪಟ್ಟಿದೆ. ಇದರಿಂದ ಅಪ್ರಸಿದ್ಧವಾದ ಗಾಯತ್ರೀ ಮೊದಲಾದ ಪದ-ಗಳಿಂದ ವಿಷ್ಣುವನ್ನು ಹೇಳುವುದು ವ್ಯರ್ಥ ಎಂಬ ಶಂಕೆಯು ಪರಿಹೃತವಾಗುವುದು.

(ಭಾ.ದೀ.) ನನು ಭವೇದ್ ಗಾಯತ್ರ್ಯಾದಿಶಬ್ದವಾಚ್ಯತ್ವೇನ ವಿಷ್ಣೋರ್ಜ್ಯೋತಿ-ಶ್ಶಬ್ದವಾಚ್ಯತಾಸಾಧನಂ ಯದೀಯಂ ಗಾಯತ್ರೀ ವಿಷ್ಣುಃ ಸ್ಯಾತ್, ತದೇವ ಕುತಃ? ಇತ್ಯತೋ ಗಾನತ್ರಾಣಕರ್ತೃತ್ವಲಿಂಗಾತ್ ಇತ್ಯಾಶಯೇನ ತಸ್ಯಾಸಿದ್ಧಿಪರಿಹಾರಾಯ

ಪ್ರವೃತ್ತಂ 'ತಥಾ ಹಿ' ಇತಿ ಸೂತ್ರಶೇಷಮ್ ಅನುಕೃತ್ಯ ದರ್ಶನಪದೋಕ್ತಾಂ ಶ್ರುತಿಂ ದರ್ಶಯತಿ – **ತಥೇತಿ** ॥ ಹಿ ಯಸ್ಮಾತ್ ಇತ್ಯಾದಿದರ್ಶನಂ ಶ್ರುತಿರಸ್ತೀತ್ಯನ್ವಯಃ । ಯದ್ಯಪಿ 'ಗಾಯತಿ ತ್ರಾಯತೇ ಚ' ಇತಿ ಪಾಠಃ ಛಂದೋಗಾನಾಂ, ತಥಾಽಪಿ ಶಾಖಾಂತರಮೇವೇದಮ್ ಇತ್ಯದೋಷಃ । ಆದಿಪದೇನ 'ಯಾ ವೈ ಸಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವ್ಯಸ್ಯಾಂ ಹೀದಂ ಸರ್ವಂ ಭೂತಂ ಪ್ರತಿಷ್ಠಿತ-ಮೇತಾಮೇವ ನಾತಿಶೀಯತೇ' (ಛಾಂ.ಉ.೩.೧೨.೨) ಇತ್ಯಾದಿಕಂ ಗೃಹ್ಯತೇ । ಶ್ರುತ್ಯರ್ಥಸ್ತು – ಯತೋ ಗಾಯತ್ರೀವಾಚ್ಯೋ ಭಗವಾನ್ ವೇದಾನ್ 'ಗಾಯತಿ' ಮುಖಾನ್ನಿಸ್ಸಾರಯತಿ, ಪ್ರಥಮೋ ವಕ್ತೀತಿ ಯಾವತ್, ಯಸ್ಮಾಚ್ಚ 'ತ್ರಾಯತೇ' ಅಖಿಲಮ್ ಇತಿ ಶೇಷಃ, ಅತೋ ಗಾಯತ್ರೀಶಬ್ದೇನೋಚ್ಯತೇ । 'ಯಾ' ಪ್ರಸಿದ್ಧಾ ಗಾಯತ್ರೀ ತನ್ನಾಮಾ ವಿಷ್ಣುಃ 'ಸಾ ಇಯಂ ವೈ' ಇಯಂ ಖಲು । ಕಿಮಿಯಮ್? 'ಯೇಯಂ ಪೃಥಿವೀ' ತನ್ನಾಮಾ ಭಗವಾನ್ ।

ಕಥಂ ಪೃಥಿವೀ ವಿಷ್ಣುಃ? ಇತ್ಯತಃ ತಲ್ಲಕ್ಷಣಯೋಗಾತ್ ಇತ್ಯಾಹ – **ಅಸ್ಯಾಂ ಹೀದಮಿತಿ** ॥ 'ಅಸ್ಯಾಂ' ಪೃಥಿವ್ಯಾಂ 'ಭೂತಂ' ಪ್ರಾಣಿಜಾತಮಾಶ್ರಿತಮಿತಿ । **ಸುಧಾಯಾಂ** ತು ಪೂರ್ವಪಕ್ಷಾನುಗುಣತಯಾ ಗಾಯತ್ರೀ 'ಗಾಯತಿ' ಅರ್ಥಂ ಪ್ರತಿ-ಪಾದಯತಿ, ಅಧ್ಯೇತೄನ್ 'ತ್ರಾಯತೇ' ಪಾಲಯತಿ ಪಾಪಾದ್ ರಕ್ಷತಿ ಇತ್ಯರ್ಥ ಉಕ್ತಃ।

ಗಾಯತ್ರೀ ಮೊದಲಾದ ಶಬ್ದಗಳಿಂದ ವಾಚ್ಯನಾಗಿರುವುದರಿಂದ ವಿಷ್ಣುವು ಜ್ಯೋತಿಃ -ಶಬ್ದವಾಚ್ಯನೂ ಆಗಿದ್ದಾನೆ ಎಂದು ಸಾಧಿಸುವುದು, ಇಲ್ಲಿ ಹೇಳಿರುವ ಗಾಯತ್ರಿಯು ವಿಷ್ಣುವೇ ಎಂದು ಸಿದ್ಧವಾದರೆ ಯುಕ್ತವಾಗುವುದು. ಆದರೆ ಈ ಛಾಂದೋಗ್ಯವಾಕ್ಯದಲ್ಲಿ ಹೇಳಿರುವ ಗಾಯತ್ರಿಯು ವಿಷ್ಣುವೇ ಎಂಬ ವಿಷಯದಲ್ಲಿ ಆಧಾರವೇನು? ಎಂಬ ಶಂಕೆಯ ಪರಿಹಾರಕ್ಕಾಗಿ 'ಗಾನತ್ರಾಣಕರ್ತೃತ್ವ'ವೆಂಬ ಲಿಂಗದಿಂದ ಗಾಯತ್ರಿಯು ವಿಷ್ಣುವೆಂದು ಸಿದ್ಧನಾಗುವನು - ಎಂದು ಅಭಿಪ್ರಾಯಪಟ್ಟು, ಆ ಧರ್ಮಗಳು ವಿಷ್ಣುವಿ-ನಲ್ಲಿ ಇಲ್ಲದಿರುವುದರಿಂದ ಅಸಿದ್ಧಿ ದೋಷ ಬರುವುದು ಎಂಬ ಶಂಕೆಯ ಪರಿಹಾರಕ್ಕಾಗಿ ಹೊರಟಿರುವ 'ತಥಾ ಹಿ' ಎಂಬ ಸೂತ್ರದ ಶೇಷಭಾಗವನ್ನು ಅನುಕರಿಸಿ, ಆ ಭಾಗದಲ್ಲಿ

'ದರ್ಶನ'ಪದವು ಸೂಚಿಸುವ ಶ್ರುತಿಯನ್ನು ಭಾಷ್ಯದಲ್ಲಿ ತಥಾ ಹಿ ಎಂಬುದಾಗಿ ತೋರಿಸುತ್ತಿದ್ದಾರೆ. 'ಹಿ' ಯಾವ ಕಾರಣದಿಂದ 'ಇತ್ಯಾದಿ ದರ್ಶನಮ್' '' ಗಾಯತಿ ತ್ರಾಯತಿ ಚ- ಇತ್ಯಾದಿ ಶ್ರುತಿಯಿರುವುದೋ'' ಎಂದು ಪದಗಳ ಅನ್ವಯ. ಯದ್ಯಪಿ ಛಂದೋಗರು 'ಗಾಯತಿ ತ್ರಾಯತೇ ಚ' ಎಂಬ ಪಾಠವನ್ನು ಹೇಳುವರು. ಆದರೆ ಇಲ್ಲಿ ಹೇಳಿರುವ ಪಾಠವು ಶಾಖಾಂತರಕ್ಕೆ ಸಂಬಂಧಿಸಿರುವುದರಿಂದ ದೋಷವಿಲ್ಲ. (ಇತ್ಯಾದಿ ಎಂಬುದಾಗಿ ಭಾಷ್ಯದಲ್ಲಿರುವ) ಆದಿಶಬ್ದದಿಂದ 'ಯಾ ವೈ ಸಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವ್ಯಸ್ಯಾಂ ಹೀದಂ ಸರ್ವಂ ಭೂತಂ ಪ್ರತಿಷ್ಠಿತ-ಮೇತಾಮೇವ ನಾತಿಶೀಯತೇ' ಇತ್ಯಾದಿ ಶ್ರುತಿವಾಕ್ಯಗಳನ್ನು ಗ್ರಹಿಸಬೇಕು. ಶ್ರುತ್ಯರ್ಥವಾದರೋ – ಯಾವ ಕಾರಣದಿಂದಾಗಿ ಗಾಯತ್ರೀಶಬ್ದವಾಚ್ಯನಾದ ಭಗ-ವಂತನು ವೇದಗಳನ್ನು ಗಾಯತಿ ತನ್ನ ಮುಖದಿಂದ ಹೊರಡಿಸುವನೋ, ಸೃಷ್ಟಿಕಾಲ-ದಲ್ಲಿ ಪ್ರಥಮವಾಗಿ ವೇದಗಳನ್ನು ಹೇಳುವನೋ ಎಂದು ಅಭಿಪ್ರಾಯ; ಮತ್ತು ಯಾವ ಕಾರಣದಿಂದಾಗಿ 'ತ್ರಾಯತೇ' - ಇಲ್ಲಿ ಅಖಿಲಂ ಎಂಬ ಪದವು ಶೇಷವಾಗಿದೆ. - ಎಲ್ಲವನ್ನೂ ರಕ್ಷಿಸುವನೋ ಆದ್ದರಿಂದ ಗಾಯತ್ರೀಶಬ್ದವಾಚ್ಯನಾಗಿದ್ದಾನೆ. 'ಯಾ' ಪ್ರಸಿದ್ಧವಾದ ಯಾವ ಗಾಯತ್ರಿಯು ಅಂದರೆ ಗಾಯತ್ರೀನಾಮಕನಾದ ವಿಷ್ಣುವಿರು-ವನೋ, ಸಾ ಇಯಂ ವೈ- ಅವನು ಇದೇ ಆಗಿರುವನು. ಇದು ಎಂದರೆ ಯಾವುದು? 'ಯೇಯಂ ಪೃಥಿವೀ' ಯಾವ ಪೃಥಿವೀನಾಮಕನಾದ ಭಗವಂತನೋ ಅವನೇ ಆಗಿರುವನು.

ಈ ಪೃಥಿವೀಶಬ್ದವಾಚ್ಯನು ವಿಷ್ಣುವೇ ಆಗಿರುವನು ಎಂಬ ವಿಷಯದಲ್ಲಿ ಆಧಾರವೇನು? ಎಂಬ ಶಂಕೆಗೆ ಉತ್ತರವಾಗಿ ವಿಷ್ಣುವಿನ ಲಕ್ಷಣ ಇರುವುದರಿಂದ ಈ ಪೃಥಿವಿಯು ವಿಷ್ಣುವೇ ಆಗಿದ್ದಾನೆ ಎಂದು ಅಸ್ಯಾಂ ಹಿ ಇದಮ್ ಎಂಬ ವಾಕ್ಯದಿಂದ ಹೇಳಲಾಗಿದೆ. ಅಸ್ಯಾಂ - ಈ ಪೃಥಿವಿಯಲ್ಲಿ, ಭೂತಂ - ಎಲ್ಲ ಪ್ರಾಣಿಸಮೂಹವೂ ಆಶ್ರಿತವಾಗಿದೆ. ಸುಧಾದಲ್ಲಾದರೋ ಪೂರ್ವಪಕ್ಷಕ್ಕೆ ಅನುಗುಣವಾಗಿ ಗಾಯತ್ರೀ ಅಂದರೆ ಗಾಯತಿ - ಅರ್ಥವನ್ನು ಪ್ರತಿಪಾದಿಸುತ್ತದೆ, ಮತ್ತು ಅಧ್ಯಯನ ಮಾಡುವವ-ರನ್ನು ತ್ರಾಯತೇ - ಪಾಲಿಸುತ್ತದೆ; ಪಾಪಗಳಿಂದ ರಕ್ಷಿಸುತ್ತದೆ ಎಂಬ ಅರ್ಥವನ್ನು ಹೇಳಲಾಗಿದೆ.

ಭಾ– 'ಸರ್ವಚ್ಛಂದೋಽಭಿಧೋ ಹ್ಯೇಷಃ ಸರ್ವದೇವಾಭಿಧೋ ಹ್ಯಸೌ ।
ಸರ್ವಲೋಕಾಭಿಧೋ ಹ್ಯೇಷಃ ತೇಷಾಂ ತದುಪಚಾರತಃ ।।'
ಇತಿ ವಾಮನೇ ।। ೨೫ ।।

ಈ ವಿಷ್ಣುವು ಛಂದಸ್ಸುಗಳನ್ನು ಹೇಳುವ ಎಲ್ಲ ಶಬ್ದಗಳಿಂದ ವಾಚ್ಯನಾಗಿದ್ದಾನೆ. ಅವನು ಎಲ್ಲ ದೇವತಾವಾಚಕವಾದ ಶಬ್ದಗಳಿಂದ ವಾಚ್ಯನಾಗಿದ್ದಾನೆ. ಈ ವಿಷ್ಣುವು ಸರ್ವಲೋಕವಾಚಕಶಬ್ದಗಳಿಂದಲೂ ವಾಚ್ಯನಾಗಿದ್ದಾನೆ. ಛಂದಸ್ಸು, ದೇವತೆಗಳು ಮತ್ತು ಲೋಕಗಳಿಗೆ ಆಯಾಯಾ ಶಬ್ದವಾಚ್ಯತ್ವವು ಅಮುಖ್ಯವೃತ್ತಿಯಿಂದ ಇರುವುದು ಎಂದು ವಾಮನಪುರಾಣದಲ್ಲಿ ಹೇಳಿದೆ.

(ಭಾ.ದೀ.) ನನು ಗಾಯತ್ರ್ಯಾದಿಶಬ್ದಸ್ಯಾನ್ಯತ್ರ ರೂಢತ್ವಾತ್ ಕಥಂ ಲಿಂಗಮಾತ್ರೇಣ ವಿಷ್ಣುತ್ವನಿಶ್ಚಯ ಇತ್ಯತೋ ಗಾಯತ್ರ್ಯಾದಿಶ್ರುತೇಃ ಸಾವಕಾಶತ್ವಾದಿತಿ ಭಾವೇನ ಗಾಯತ್ರ್ಯಗ್ನಿಪೃಥಿವ್ಯಾದಿಶಬ್ದಾಃ ನ ಕೇವಲಂ ಶ್ರುತ್ಯುಕ್ತಯೋಗೇನ ವಿಷ್ಣೌ ಸಾವಕಾಶಾಃ, ಅಪಿ ತು ಪೌರಾಣಿಕರೂಢ್ಯಾ ಗಾಯತ್ರ್ಯಾಃ ಭಗವದಧೀನತ್ವಾದಪಿ ಇತ್ಯಾಶಯೇನ ತತ್ರ ಸ್ಮೃತಿಮಾಹ – **ಸರ್ವೇತಿ** ।। **ಏಷಃ** ವಿಷ್ಣುಃ, ಸರ್ವಛಂದೋಭಿಧಃ ಸರ್ವಛಂದಸಾಮ್ ಅಭಿಧೇವಾಭಿಧಾ ಯಸ್ಯೇತಿ ಬಹುವ್ರೀಹಿಃ । ಛಂದೋವಾಚಕಗಾಯತ್ರ್ಯಾದಿಸರ್ವಶಬ್ದವಾಚ್ಯಃ । ಏವಮಸೌ ವಿಷ್ಣುಃ ಸರ್ವದೇವತಾ-ವಾಚಕಾಗ್ನ್ಯಾದಿಶಬ್ದವಾಚ್ಯಃ । ತಥಾ 'ಏಷಃ' ವಿಷ್ಣುಃ ಸರ್ವಲೋಕವಾಚಕಪೃಥಿವ್ಯಾದಿಶಬ್ದವಾಚ್ಯ ಇತ್ಯರ್ಥಃ । ಕುತಃ? ಇತ್ಯತಃ 'ಛಂದಆದೀನಾಂ ಭಗವದಧೀನತ್ವಾತ್' ಇತಿ ಪ್ರತ್ಯೇಕಂ ಹೇತುಸೂಚನಾಯ ಹಿಶಬ್ದತ್ರಯಂ, ವೇದಪ್ರಸಿದ್ಧಿಜ್ಞಾಪನಾಯ ವಾ । ಛಂದಸಾಂ ಲೋಕಾನಾಂ ಚ ಪ್ರತ್ಯಕ್ಷತ್ವಾದ್ ದೇವಾನಾಂ ಚ ಪರೋಕ್ಷತ್ವಾದೇಷೋಽಸಾವಿತಿ ವಿಚಿತ್ರೋಕ್ತಿಃ । ಕಥಂ ತರ್ಹ್ಯನ್ಯತ್ರ ವ್ಯವಹಾರಃ? ಇತ್ಯತ ಆಹ – **ತೇಷಾಮಿತಿ** ।। ಛಂದೋದೇವಲೋಕಾನಾಮ್ ಇತ್ಯರ್ಥಃ । ತತ್ ತಚ್ಛಬ್ದ-

**ಬೋಧ್ಯತ್ವಮ್, ಉಪಚಾರತಃ - ವಿಷ್ಣುಸಮೀಪೇ ಚರಣಾತ್ - ತದಧೀನತ್ವಾದ್ ಅಮುಖ್ಯತ ಏವ ಇತ್ಯರ್ಥಃ।**

ಗಾಯತ್ರೀ ಮೊದಲಾದ ಶಬ್ದಗಳು ಬೇರೆ ಅರ್ಥಗಳ ವಿಷಯದಲ್ಲಿ ರೂಢಿಯನ್ನು ಹೊಂದಿರುವುದರಿಂದ ಕೇವಲ ಲಿಂಗದ ಆಧಾರದಿಂದ ಗಾಯತ್ರೀಶಬ್ದವಾಚ್ಯನು ವಿಷ್ಣು-ವೆಂದು ನಿಶ್ಚಯಿಸುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಗಾಯತ್ರೀ ಮೊದಲಾದ ಶಬ್ದಗಳು ಸಾವಕಾಶವಾಗಿರುವ ಕಾರಣ ಲಿಂಗದ ಆಧಾರದಿಂದ ಆ ಶಬ್ದವಾಚ್ಯನು ವಿಷ್ಣುವೆಂದು ನಿಶ್ಚಯಿಸಬಹುದು ಎಂಬ ಅಭಿಪ್ರಾಯದಿಂದ ಗಾಯತ್ರೀ, ಅಗ್ನಿ, ಪೃಥಿವೀ ಮೊದಲಾದ ಶಬ್ದಗಳು ಶ್ರುತಿಯಲ್ಲಿ ತೋರಿಸಿರುವ ಯೋಗವೃತ್ತಿಯಿಂದ ಮಾತ್ರವೇ ವಿಷ್ಣುವಿನಲ್ಲಿ ಸಾವಕಾಶಗಳು ಎಂದಷ್ಟೇ ಅಲ್ಲ, ಕಿಂತು ಪುರಾಣದಿಂದ ತಿಳಿದು ಬರುವ ರೂಢಿಯಿಂದ ಮತ್ತು ಗಾಯತ್ರೀ ಮೊದಲಾದವುಗಳು ಭಗವದಧೀನವಾದ ಕಾರಣ-ದಿಂದಲೂ ವಿಷ್ಣುವಿನಲ್ಲಿ ಸಾವಕಾಶವಾಗಿವೆ ಎಂಬ ಆಶಯದಿಂದ ಆ ವಿಷಯದಲ್ಲಿ 'ಸರ್ವ' ಎಂಬ ಸ್ಮೃತಿಯನ್ನು ಭಾಷ್ಯದಲ್ಲಿ ಉದಾಹರಿಸುತ್ತಿದ್ದಾರೆ. ಏಷಃ - ಈ ವಿಷ್ಣುವು, ಸರ್ವಚ್ಛಂದೋಭಿಧಃ - ಈ ಪದವು ಎಲ್ಲ ಛಂದಸ್ಸುಗಳಿಗೆ ವಾಚಕಗಳಾದ ಶಬ್ದದಂತೆ ಇರುವ ವಾಚಕಶಬ್ದಗಳನ್ನು ಹೊಂದಿರುವವನು - ಎಂದು ಬಹುವ್ರೀಹಿ-ಸಮಾಸವಾಗಿದೆ. ಅಂದರೆ, ಛಂದೋವಾಚಕವೆಂದು ನಾವು ತಿಳಿದಿರುವ ಗಾಯತ್ರೀ ಮೊದಲಾದ ಎಲ್ಲ ಶಬ್ದಗಳಿಂದ ವಾಚ್ಯನಾಗಿದ್ದಾನೆ ಎಂದು ಅರ್ಥ. ಹಾಗೆಯೇ ಅಸೌ - ಆ ವಿಷ್ಣುವು ಸರ್ವದೇವತಾವಾಚಕವಾದ ಅಗ್ನ್ಯಾದಿಶಬ್ದಗ- ಳಿಂದಲೂ ವಾಚ್ಯನಾಗಿ-ದ್ದಾನೆ. ಹಾಗೆಯೇ ಏಷಃ - ಈ ವಿಷ್ಣುವು ಸರ್ವಲೋಕಾಭಿಧಃ - ಸರ್ವಲೋಕಗಳಿಗೆ ವಾಚಕಗಳಾಗಿರುವ ಪೃಥಿವ್ಯಾದಿಶಬ್ದಗಳಿಂದಲೂ ವಾಚ್ಯನಾಗಿದ್ದಾನೆ ಎಂದು ಅರ್ಥ. ಹೀಗೇಕೆ? ಎಂಬ ಪ್ರಶ್ನೆಗೆ ಸಮಾಧಾನವಾಗಿ ಛಂದಸ್ಸೇ ಮೊದಲಾದವುಗಳು ಭಗವದ-ಧೀನವಾಗಿರುವ ನಿಮಿತ್ತದಿಂದ ಎಂಬುದಾಗಿ ಪ್ರತ್ಯೇಕವಾಗಿ ಮೂರು ಹೇತುಗಳನ್ನು ಸೂಚಿಸುವ ಸಲುವಾಗಿ ಮೂರು 'ಹಿ'ಶಬ್ದಗಳನ್ನು ಪ್ರಯೋಗಿಸಲಾಗಿದೆ. ಅಥವಾ ಮೂರು 'ಹಿ'ಶಬ್ದಗಳು ವೇದಪ್ರಸಿದ್ಧಿಯನ್ನು ಜ್ಞಾಪಿಸುತ್ತವೆ. ಛಂದಸ್ಸುಗಳು ಮತ್ತು ಲೋಕಗಳು ಪ್ರತ್ಯಕ್ಷಗೋಚರವಾದದ್ದರಿಂದ ದೇವತೆಗಳು ಪರೋಕ್ಷರಾಗಿರುವುದ-

ರಿಂದ ಏಷಃ, ಅಸೌ ಎಂಬುದಾಗಿ ವಿಭಿನ್ನ ರೀತಿಯಲ್ಲಿ ಹೇಳಲಾಗಿದೆ. ಹಾಗಿದ್ದ ಪಕ್ಷದಲ್ಲಿ ಶಬ್ದಗಳನ್ನು ಬೇರೆ ಅರ್ಥಗಳಲ್ಲಿ ವ್ಯವಹರಿಸುವುದು ಹೇಗೆ ಎಂಬ ಪ್ರಶ್ನೆಗೆ ಉತ್ತರವಾಗಿ ತೇಷಾಂ ಎಂಬುದಾಗಿ ಹೇಳಲಾಗಿದೆ. ಛಂದಸ್ಸುಗಳಿಗೆ ದೇವತೆಗಳಿಗೆ ಮತ್ತು ಲೋಕ-ಗಳಿಗೆ ಎಂದು 'ತೇಷಾಂ' ಪದದ ಅರ್ಥ. ತತ್ ಎಂದರೆ ಆ ಶಬ್ದವಾಚ್ಯತ್ವವು ಉಪ-ಚಾರತಃ - ಉಪ ಎಂದರೆ ವಿಷ್ಣುವಿನ ಸಮೀಪದಲ್ಲಿ, ಚರಣಾತ್ - ಸಂಚರಿಸುವು-ದರಿಂದ; ಒಟ್ಟಿನಲ್ಲಿ ಆ ದೇವಾದಿಗಳು ಭಗವಂತನಿಗೆ ಅಧೀನವಾದುದರಿಂದ ಅಮುಖ್ಯ-ದೃಷ್ಟಿಯಿಂದಲೇ ಅವರನ್ನು ಕುರಿತು ಆ ಶಬ್ದಗಳನ್ನು ಪ್ರಯೋಗಿಸಲಾಗಿದೆ ಎಂದು ಅರ್ಥ.

(ಭಾ.ದೀ.) ವಾಮನ ಇತ್ಯಸ್ಯ 'ಹಿ' ಯತೋ ವಾಮನೇ ಇತಿ ದರ್ಶನಂ ಪ್ರತಿ-ಪಾದನಮ್ ಅಸ್ತಿ ಅತಃ ಶ್ರುತೇರ್ಮುಖ್ಯವೃತ್ತ್ಯಾ ವಿಷ್ಣಾವೇವ ಸಾವಕಾಶತ್ವಾತ್ ಲಿಂಗಸ್ಯ ಅಮುಖ್ಯತೋಽಪಿ ಅನ್ಯತ್ರಾನವಕಾಶತ್ವಾತ್ ತೇನ ತದ್ಬಾಧೋಪಪತ್ತೇರ್ಭವತ್ಯೇವ ಗಾನತ್ರಾಣಕರ್ತೃತ್ವಲಿಂಗಮಾತ್ರೇಣಾಯಂ ನಿರ್ಣಯಃ ಇತ್ಯುಪಸ್ಕಾರೇಣ ಅನ್ವಯಃ ॥

ವಾಮನೇ ಎಂಬ ಶಬ್ದಕ್ಕೆ, ಹಿ ಅಂದರೆ ಯಾವ ಕಾರಣದಿಂದ ವಾಮನೇ ಇತಿ ದರ್ಶನಂ - ವಾಮನಪುರಾಣದಲ್ಲಿ ಹೀಗೆ ಪ್ರತಿಪಾದನೆಯು ಇರುವುದೋ ಆದ್ದರಿಂದ ಗಾಯತ್ರೀ ಮೊದಲಾದ ಶಬ್ದಗಳಿಗೆ ಮುಖ್ಯವೃತ್ತಿಯಿಂದಲೇ ವಿಷ್ಣುವಿನಲ್ಲೇ ಅವಕಾಶವಿ-ರುವುದರಿಂದ ಲಿಂಗಕ್ಕಾದರೋ ಅಮುಖ್ಯದೃಷ್ಟಿಯಿಂದಲೂ ಕೂಡ ವಿಷ್ಣುವನ್ನು ಬಿಟ್ಟು ಇತರ ವಿಷಯಗಳಲ್ಲಿ ಅವಕಾಶವಿಲ್ಲದಿರುವುದರಿಂದ; ಲಿಂಗವು ಶ್ರುತಿಯನ್ನು ಬಾಧಿ ಸುವುದು ಯುಕ್ತವಾಗಿದೆ. ಆದ್ದರಿಂದ ಗಾನತ್ರಾಣಕರ್ತೃತ್ವವೆಂಬ ಲಿಂಗದಿಂದ ಮಾತ್ರವೇ ಈ ನಿರ್ಣಯವನ್ನು ಮಾಡಲಾಗಿದೆ ಎಂಬುದಾಗಿ ಪದಗಳನ್ನು ಸೇರಿಸಿ ಅನ್ವಯವನ್ನು ಹೇಳತಕ್ಕದ್ದು.

**ಸೂ– ॥ ಓಂ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್ ಓಂ ॥ ೨೬ ॥**

ಸಮಸ್ತ ಜಗತ್ತೇ ಮೊದಲಾದ ಪಾದಗಳನ್ನು ಹೊಂದಿರುವ ಗಾಯತ್ರಿ-ಯನ್ನು ಪ್ರತಿಪಾದಿಸುವ ವಾಕ್ಯವು ಯುಕ್ತವಾಗುವ ಕಾರಣದಿಂದಲೂ ಗಾಯತ್ರೀಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ.

(ಭಾ.ದೀ.) ಹೇತ್ವಂತರೇಣಾಪಿ ಗಾಯತ್ರ್ಯಾಃ ವಿಷ್ಣುತ್ವಂ ಸಾಧಯತ್ ಸೂತ್ರಮುಪನ್ಯಸ್ಯ ಶ್ರುತಿಮುದಾಹರತಿ – **ಭೂತಾದೀತಿ** ॥ 'ಇತಿ'ಶಬ್ದಸ್ಯ 'ಭೂತಾದಿ' ಇತ್ಯನೇನಾನ್ವಯಃ । ಸೂತ್ರೇ ಭೂತಂ ವಿಶ್ವಮಾದಿಃ ಪ್ರಥಮೋದ್ದಿಷ್ಟಂ ಯೇಷು ತೇ ಭೂತಾದಯಃ, ತೇ ಪಾದಾಃ ಯಸ್ಯ ಗಾಯತ್ರೀಪದಾರ್ಥಸ್ಯ ಸ **ಭೂತಾದಿಪಾದಃ**, ತಸ್ಯ ವ್ಯಪದೇಶಃ ತತ್ಪ್ರತಿಪಾದಕಂ ವಾಕ್ಯಂ ತಸ್ಯೋಪಪತ್ತೇಃ ಯುಕ್ತತ್ವಾತ್ ಇತಿ ವಿಗ್ರಹಃ । **ಪಾದಶಬ್ದೋ** ಭಾವಪ್ರಧಾನಃ । ಅತ ಏವ 'ಭೂತಾದಿಪಾದತ್ವಸ್ಯ' ಇತ್ಯುಕ್ತಂ ಟೀಕಾಯಾಮ್ । '**ಏವಮ್**' ಇತ್ಯಸ್ಯ ಚ ಉಭಯತ್ರಾನ್ವಯಃ । ತಥಾಚ 'ಪಾದೋಽಸ್ಯ ಸರ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ' ಇತ್ಯೇವಂ ಗಾಯತ್ರ್ಯಾಃ ಭೂತಾದಿಶಬ್ದಗೃಹೀತಾಮೃತಾಖ್ಯಾಂಶಚತುಷ್ಟಯವತ್ತ್ವೋಪದೇಶಾತ್ ತಸ್ಯ ಚ ವಿಷ್ಣಾವೇವ ಉಪಪತ್ತೇಃ ಅನ್ಯತ್ರಾನುಪಪತ್ತೇರೇವ ಗಾಯತ್ರೀಶಬ್ದವಾಚ್ಯೋ ವಿಷ್ಣುರೇವ ಭವೇದಿತ್ಯರ್ಥಃ । **ಚಶಬ್ದಸ್ಯ** ವ್ಯಪದೇಶಪದೇನಾನ್ವಯೇ ಗಾಯತ್ರ್ಯಾ ವಿಷ್ಣುತ್ವೇ ಸಾಧ್ಯೇ ಪೂರ್ವಸೂತ್ರೇ ದರ್ಶನಪದೋಕ್ತಹೇತೋಃ ಏತತ್ಸೂತ್ರೋಕ್ತಹೇತುದ್ವಯಸ್ಯ ಚ ಸಮುಚ್ಚಯೇ ಸಃ । ಯಥಾಶ್ರುತಾನ್ವಯೇ ತು ಭೂತಾದಿಪಾದಸ್ಯ ವಿಷ್ಣುಲಿಂಗತ್ವಂ ನ ಕೇವಲಂ ವಿಷ್ಣೋರೇವ ಉಪಪತ್ತೇಃ ಸಿದ್ಧಮ್, ಕಿಂತು ಪುರುಷಸೂಕ್ತತ್ವಾಚ್ಚ ಇತಿ ಹೇತುಸಮುಚ್ಚಯೇ ಸ ಇತಿ ಜ್ಞೇಯಮ್ ।

ಮತ್ತೊಂದು ಹೇತುವಿನಿಂದಲೂ ಗಾಯತ್ರಿಯು ವಿಷ್ಣುವೆಂದು ಸಾಧಿಸುವ ಸೂತ್ರವನ್ನು ಉಲ್ಲೇಖಿಸಿ ಆ ಸೂತ್ರವು ಗ್ರಹಿಸುವ ಶ್ರುತಿಯನ್ನು ಭೂತಾದಿ ಎಂದು ಉದಾಹರಿಸುತ್ತಿದ್ದಾರೆ. ಇತಿಶಬ್ದಕ್ಕೆ ಭೂತಾದಿ ಎಂಬ ಸೂತ್ರದ ಪದದಿಂದ ಅನ್ವಯವಾಗುವುದು. ಸೂತ್ರದಲ್ಲಿ ಭೂತಂ - ಅಂದರೆ ವಿಶ್ವವು, ಯಾವುಗಳಲ್ಲಿ ಆದಿಃ- ಮೊದಲು ಹೇಳಲ್ಪಟ್ಟಿದೆಯೋ ಅವುಗಳು ಭೂತಾದಿಗಳು. ಆ ಭೂತಾದಿಗಳು ಯಾವ ಗಾಯತ್ರೀಪದದ ಅರ್ಥಕ್ಕೆ ಪಾದಗಳಾಗಿವೆಯೋ ಆ ಗಾಯತ್ರೀಪದಾರ್ಥವು ಭೂತಾದಿಪಾದ ಎಂದೆನಿಸುವುದು. ಅದರ ವ್ಯಪದೇಶ ಅಂದರೆ ಅದನ್ನು ಪ್ರತಿಪಾದಿಸುವ ವಾಕ್ಯ. ಅದು ಉಪಪತ್ತೇಃ = ಯುಕ್ತವಾಗುವುದರಿಂದ ಎಂಬುದಾಗಿ (ಭೂತಾದಿಪಾದವ್ಯಪದೇಶೋಪಪತ್ತೇಃ ಎಂಬ ಪದದ) ವಿಗ್ರಹವಿರುವುದು. ಪಾದಶಬ್ದವು ಪಾದತ್ವ ಎಂಬ ಧರ್ಮ-

ವನ್ನು ಪ್ರಧಾನವಾಗಿ ಹೇಳುವ ಶಬ್ದವಾಗಿದೆ. ಆದ್ದರಿಂದಲೇ ತತ್ತ್ವಪ್ರಕಾಶಿಕೆಯಲ್ಲಿ 'ಭೂತಾದಿಪಾದತ್ವಸ್ಯ'[೧] ಎಂದು ಹೇಳಲಾಗಿದೆ. [೨]'ಏವಮ್' ಎಂಬ ಶಬ್ದಕ್ಕೆ ಎರಡೂ ಕಡೆ ಅನ್ವಯವಿರುವುದು. ತಥಾಚ 'ಪಾದೋऽಸ್ಯ ಸರ್ವಾ ಭೂತಾನಿ । ತ್ರಿಪಾದಸ್ಯಾ-ಮೃತಂ ದಿವಿ' ಎಂಬುದಾಗಿ ಗಾಯತ್ರೀಗೆ ಭೂತಾದಿಶಬ್ದವು ಹೇಳುವ ಅಮೃತವೆಂಬ ಅಂಶಚತುಷ್ಟಯವನ್ನು ಉಪದೇಶಿಸಿರುವುದರಿಂದ, ಹಾಗೆ ಅಂಶಚತುಷ್ಟಯವನ್ನು ಹೊಂದಿರುವಿಕೆಯು ವಿಷ್ಣುವಿನಲ್ಲೇ ಉಪಪನ್ನವಾಗುವುದರಿಂದ ಮತ್ತು ಅನ್ಯತ್ರ ಅನುಪಪನ್ನವಾಗುವುದರಿಂದ ಗಾಯತ್ರೀಶಬ್ದವಾಚ್ಯನು ವಿಷ್ಣುವೇ ಆಗುವನು ಎಂದರ್ಥ. (ಸೂತ್ರದಲ್ಲಿರುವ) ಚಶಬ್ದಕ್ಕೆ ವ್ಯಪದೇಶಪದದಿಂದ ಅನ್ವಯವನ್ನು ಮಾಡಿದಲ್ಲಿ – ಗಾಯತ್ರಿಯು ವಿಷ್ಣುವೆಂದು ಸಾಧಿಸುವಾಗ ಹಿಂದಿನ ಸೂತ್ರದಲ್ಲಿ ದರ್ಶನಪದದಿಂದ ಹೇಳಿದ ಹೇತುವಿಗೆ ಈ ಸೂತ್ರದಲ್ಲಿ ಹೇಳಲಾಗುವ ಎರಡು ಹೇತುಗಳ[೩] ಸಮುಚ್ಚಯ-ವನ್ನು ಅದು ಹೇಳುವುದು – ಯಥಾಶ್ರುತವಾಗಿ ಉಪಪತ್ತೇಃ ಎಂಬಲ್ಲೇ ಅನ್ವಯ-ಮಾಡಿದ ಪಕ್ಷದಲ್ಲಾದರೋ ಭೂತಾದಿಪಾದತ್ವವು ವಿಷ್ಣುವಿನ ಲಿಂಗವಾಗಿದೆ ಎಂಬುದು ಅದು ವಿಷ್ಣುವಿಗೆ ಮಾತ್ರ ಉಪಪನ್ನವಾಗುವುದರಿಂದ ಮಾತ್ರ ಸಿದ್ಧವಲ್ಲ; ಕಿಂತು ಪುರುಷ-ಸೂಕ್ತದಲ್ಲಿ ಹೇಳಲ್ಪಟ್ಟಿರುವ ಕಾರಣದಿಂದಲೂ ಅದು ವಿಷ್ಣುಲಿಂಗವೆಂದು ಸಿದ್ಧವಾಗು-ವುದು ಎಂಬುದಾಗಿ ಚಶಬ್ದವು ಹೇತುಗಳ ಸಮುಚ್ಚಯವನ್ನು ಹೇಳುವುದೆಂದು ತಿಳಿಯಬೇಕು.

(೧) 'ಭೂತಾದಿಪಾದತ್ವ' ಎಂದರೆ ಭೂತಾದಿಗಳನ್ನು ಪಾದಗಳನ್ನಾಗಿ ಪಡೆದಿ-ರುವಿಕೆ.

(೨) ಸೂತ್ರದಲ್ಲಿರುವ 'ಏವಂ' ಎಂಬ ಶಬ್ದವನ್ನು ಆವೃತ್ತಿ ಮಾಡಿಕೊಂಡು ಒಂದನ್ನು 'ಏವಂ ಭೂತಾದಿವ್ಯಪದೇಶಸ್ಯ ಉಪಪತ್ತೇಃ' ಎಂದು ವ್ಯಪದೇಶಕ್ಕೆ ಅನ್ವಯಿಸಬೇಕು. 'ಗಾಯತ್ರೀಶಬ್ದವಾಚ್ಯನು ವಿಷ್ಣುವೆಂದಾದಲ್ಲಿ ಮಾತ್ರ ಏವಂ – ಈ ರೀತಿಯಾಗಿ ಭೂತಾದಿಗಳನ್ನು ಪಾದಗಳೆಂದು ವ್ಯವಹರಿಸುವುದು ಯುಕ್ತ-ವಾಗುವುದರಿಂದ' ಎಂದು ಈ ವಾಕ್ಯದ ಅರ್ಥ. ಇನ್ನೊಂದು 'ಏವಂ'ಶಬ್ದವನ್ನು 'ಗಾಯತ್ರಿಯು ವಿಷ್ಣುವೇ' ಎಂಬ ಸಿದ್ಧಾಂತವನ್ನು ಹೇಳುವ ಪದವಾಗಿ ಅನ್ವಯಿ-ಸಬೇಕೆಂದು ಭಾವ.

(೩) ಭೂತಾದಿಪಾದತ್ವ ಮತ್ತು ಪುರುಷಸೂಕ್ತೋಕ್ತತ್ವ ಎಂಬ ಎರಡು ಹೇತು- ಗಳು.

(ಭಾ.ದೀ.) ಛಾಂದೋಗ್ಯೇ ಹಿ 'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ' (ಛಾಂ.೩-೧೨-೫) ಇತಿ ವಾಕ್ಯೇನ 'ಯೈಷಾ ಷಡ್ವಿಧಾ ಗಾಯತ್ರೀ ಸಾ ಚತುಷ್ಪದಾ' ಇತ್ಯೇವಂ ಗಾಯತ್ರೀನಾಮಕಸ್ಯ ಭಗವತಃ ಪ್ರಾಗುಕ್ತಗಾಯತ್ರೀಭೂತವಾಕ್‌ಪೃಥಿವೀ- ಶರೀರಹೃದಯಲಕ್ಷಣಷಡ್ವಿಧತ್ವಮನೂದ್ಯ ಅಂಶಚತುಷ್ಟಯವತ್ತ್ವರೂಪಂ ಚತುಷ್ಪಾ- ದತ್ವಂ ವಿಧಾಯ ಸ್ವೋಕ್ತಾರ್ಥೇ ಏವ ಪುರುಷಸೂಕ್ತಮಂತ್ರಃ ಸಮಾಖ್ಯಾರೂಪತ್ವೇ- ನೋದಾಹೃತೋ ಬ್ರಾಹ್ಮಣೇನ 'ತದೇತದೃಚಾಽಭ್ಯನೂಕ್ತಮ್' (ಛಾಂ.೩-೧೨-೫) 'ತದೇತತ್' ಭಗವತಃ ಚತುಷ್ಪಾದತ್ವಂ 'ಋಚಾ' ಋಙ್ಮಂತ್ರೇಣ 'ಅಭಿ' ನಿಃಶಂಕಂ ಸ್ಪಷ್ಟಂ 'ಅನು' ಆನುಕೂಲ್ಯೇನ ಉಕ್ತಮ್ ಇತ್ಯರ್ಥಃ।

ಛಾಂದೋಗ್ಯದಲ್ಲಿ 'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ' ಎಂಬ ವಾಕ್ಯದಿಂದ 'ಯಾವ ಈ ಷಡ್ವಿಧವಾದ ಗಾಯತ್ರೀ ಇರುವುದೋ ಅದು ನಾಲ್ಕುಪಾದಗಳನ್ನು ಹೊಂದಿದೆ' ಎಂಬುದಾಗಿ ಗಾಯತ್ರೀನಾಮಕನಾದ ಭಗವಂತನಿಗೆ ಹಿಂದೆ ಹೇಳಲಾದ ಗಾಯತ್ರೀ , ಭೂತ, ವಾಕ್, ಪೃಥಿವೀ, ಶರೀರ ಮತ್ತು ಹೃದಯವೆಂಬ ಆರು ವಿಧವಾಗಿ- ರುವಿಕೆಯನ್ನು ಅನುವಾದ ಮಾಡಿ 'ಅಂಶಚತುಷ್ಟಯವನ್ನು ಹೊಂದಿರುವಿಕೆ' ಎಂಬ ಚತುಷ್ಪಾದತ್ವವನ್ನು ವಿಧಾನಮಾಡಿ ತಾನು ಹೇಳಿದ ವಿಷಯದಲ್ಲೇ ಪುರುಷಸೂಕ್ತದ ಮಂತ್ರವನ್ನು ಸಮಾಖ್ಯಾರೂಪವಾಗಿ 'ತದೇತದ್ ಋಚಾಽಭ್ಯನೂಕ್ತಮ್' ಎಂದು ಉದಾಹರಿಸಲಾಗಿದೆ. 'ತದೇತತ್' ಈ ಭಗವಂತನ ಚತುಷ್ಪಾದತ್ವವು ಋಚಾ - ಋಙ್ಮಂತ್ರದಿಂದ ಅಭಿ - ನಿಃಶಂಕವಾಗಿ ಅಂದರೆ ಸ್ಪಷ್ಟವಾಗಿ ಅನೂಕ್ತಮ್ - ಅನು- ಕೂಲವಾಗಿ ಹೇಳಲ್ಪಟ್ಟಿದೆ ಎಂದು ಅರ್ಥ.

ಭಾ– 'ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ।
ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ'
(ಛಾಂ. ೩-೧೨-೬) ಇತಿ।

ಯಾವ ಮಹಿಮೆ ಹಿಂದೆ ಹೇಳಲ್ಪಟ್ಟಿದೆಯೋ ಅದು ಅಷ್ಟೇ ಅಲ್ಲ ಕಿಂತು, ಆ ಪುರುಷನು ಹಿಂದೆ ಹೇಳಿದ ಮಹಿಮೆಗಿಂತಲೂ ಅಧಿಕವಾದ ಮಹಿಮೆಯನ್ನು ಹೊಂದಿದ್ದಾನೆ. ಸಮಸ್ತವಿಶ್ವವೂ ಆ ವಿಷ್ಣುವಿನ ಒಂದು ಅಂಶವಾಗಿದೆ. ಅವನ ನಾಶರಹಿತವಾದ ಮೂರು ಅಂಶಗಳು ದ್ಯುಶಬ್ದವಾಚ್ಯವಾದ ಶ್ವೇತದ್ವೀಪ- ಅನಂತಾಸನ- ವೈಕುಂಠಗಳಲ್ಲಿ ಇರುವುದು – ಎಂದು ಪುರುಷಸೂಕ್ತದ ಋಙ್ಮಂತ್ರದಲ್ಲಿ ಹೇಳಲಾಗಿದೆ.

(ಭಾ.ದೀ.) 'ಕಿಮುಕ್ತಮ್? ಇತ್ಯತಃ ತನ್ಮಂತ್ರಂ ಪಠತಿ – **ತಾವಾನಿತಿ ||** ಯದ್ಯಪಿ ಋಚಿ 'ಏತಾವಾನ್' ಇತಿ, 'ವಿಶ್ವಾ' ಇತಿ ಚ ಪಾಠಃ । ತಥಾಪಿ ಶಾಖಾಂತರ-ಪಾಠೋಽಯಮ್ ಇತ್ಯದೋಷಃ । '**ಅಸ್ಯ**' ಪುರುಷಸ್ಯ 'ಪುರುಷ ಏವೇದಂ ಸರ್ವಮ್' (ತೈ.ಆ.೩-೧೨) ಇತ್ಯೃಚಾ ಯಃ ಸರ್ವೇಶಾನತ್ವಾದಿರೂಪಃ ತಾವಾನ್ ಮಹಿಮೋಕ್ತಃ, ನ ಕೇವಲಮೇತಾವಾನ್, ಕಿಂತು, ಪುರುಷಃ '**ತತಃ**' ಪೂರ್ವೋಕ್ತಾದಪಿ ಮಹಿಮ್ನೋ '**ಜ್ಯಾಯಾನ್**' ಅಧಿಕಮಾಹಾತ್ಮ್ಯೋಪೇತ ಇತ್ಯರ್ಥಃ। ಜ್ಯಾಯಸ್ತ್ವಮೇವ ದರ್ಶಯತಿ – **ಪಾದೋಽಸ್ಯ ಇತ್ಯಾದಿನಾ ||** '**ಸರ್ವಾ ಭೂತಾನಿ**' ಸರ್ವಂ ವಿಶ್ವಮ್, '**ಅಸ್ಯ**' ವಿಷ್ಣೋರೇಕಃ '**ಪಾದಃ**' ಪಾದವತ್ ಪಾದೋ ಭಿನ್ನಾಂಶಃ।

ಏನು ಹೇಳಲಾಗಿದೆ? ಎಂಬ ಪ್ರಶ್ನೆಗೆ ಉತ್ತರವಾಗಿ '**ತಾವಾನ್**' ಎಂಬುದಾಗಿ ಆ ಮಂತ್ರವನ್ನು ಭಾಷ್ಯಕಾರರು ಪಠಿಸುತ್ತಿದ್ದಾರೆ. ಯದ್ಯಪಿ ಪುರುಷಸೂಕ್ತದ ಆ ಋಕ್ಕಿನಲ್ಲಿ 'ಏತಾವಾನ್' ಎಂದು ಹಾಗೂ 'ವಿಶ್ವಾ' ಎಂದು ಪಾಠವಿದೆ. ಆದರೂ ಈ ಪಾಠವು ಮತ್ತೊಂದು ವೇದಶಾಖೆಯಲ್ಲಿ ಇದ್ದದ್ದು ಇಲ್ಲಿ ಉದಾಹರಿಸಲ್ಪಟ್ಟಿದೆಯಾದ್ದರಿಂದ ಯಾವ ದೋಷವೂ ಇಲ್ಲ. ಅಸ್ಯ – ಈ ಪುರುಷನಿಗೆ 'ಪುರುಷ ಏವೇದಂ ಸರ್ವಂ' ಎಂಬುದಾಗಿ ಹಿಂದಿನ ಋಕ್ಕಿನಿಂದ ಯಾವ ಸರ್ವೇಶ್ವರತ್ವಾದಿ ರೂಪವಾದ, ತಾವಾನ್ ಮಹಿಮಾ - ಅಷ್ಟು ಮಹಿಮೆಯು ಹೇಳಲ್ಪಟ್ಟಿದೆಯೋ ಅದು ಅಷ್ಟೇ ಅಲ್ಲ ಕಿಂತು, ಆ ಪುರುಷನು, ತತಃ - ಹಿಂದೆ ಹೇಳಿದ ಮಹಿಮೆಗಿಂತಲೂ, ಜ್ಯಾಯಾನ್ - ಅಧಿಕವಾದ ಮಾಹಾತ್ಮ್ಯವನ್ನು ಹೊಂದಿರುವವನು ಎಂದು ಅರ್ಥ. ಆ ಆಧಿಕ್ಯವನ್ನೇ ಪಾದೋಽಸ್ಯ ಇತ್ಯಾದಿಯಾಗಿ ಶ್ರುತಿಯು ತಿಳಿಸುತ್ತಿದೆ. 'ಸರ್ವಾ ಭೂತಾನಿ' ಸಮಸ್ತವಿಶ್ವವು 'ಅಸ್ಯ'

ಈ ವಿಷ್ಣುವಿನ, ಪಾದಃ - ಒಂದು ಪಾದವಾಗಿದೆ. 'ಪಾದದಂತೆ ಪಾದ' ಅಂದರೆ ಅವನಿಂದ ಭಿನ್ನವಾದ ಅವನ ಅಂಶವಾಗಿದೆ.

(ಭಾ.ದೀ.) ಯದ್ಯಪಿ **ತತ್ವಪ್ರದೀಪೇ** – ವಿಶ್ವಭೂತವಿಧಿರ್ಭಾತಿ । ತಥಾಽಪಿ ಟೀಕಾಯಾಂ ಸರ್ವಾಣಿ ಭೂತಾನಿ ಅಸ್ಯೈಕಃ ಪಾದ ಇತಿ ಪಾದವಿಧಾನದರ್ಶನಾತ್, **ಚಂದ್ರಿಕಾಯಾಂ** 'ಪಶ್ವೇಕತ್ವವದ್ ವಿಧೇಯಗತತ್ವಾತ್ ಪಾದೈಕತ್ವಂ ವಿವಕ್ಷಿತಮ್' ಇತ್ಯುಕ್ತತ್ವಾಚ್ಚ ತತ್ತ್ವಪ್ರದೀಪೋಽಪಿ ಏವಮೇವ ವ್ಯಾಖ್ಯೇಯಃ । ಅಸ್ಯ '**ಅಮೃತಂ**' ನಾಶರಹಿತಮ್ ಅತ ಏವ ಸ್ವರೂಪಭೂತಂ '**ತ್ರಿಪಾತ್**' ತ್ರಯಾಣಾಂ ಪಾದಾನಾಂ ಅಂಶಾನಾಂ ಸಮುದಾಯೋ ನಾರಾಯಣವಾಸುದೇವವೈಕುಂಠಸಂಜ್ಞಂ ತ್ರಿಷು ರೂಢ್ಯಾ, ದ್ಯೋತಮಾನತ್ವಾಚ್ಚ ದ್ಯುಶಬ್ದವಾಚ್ಯೇಷು ಶ್ವೇತದ್ವೀಪಾನಂತಾಸನವೈಕುಂಠೇಷು ತಿಷ್ಠತೀತಿ ಋಚೋಕ್ತಮ್ ಇತ್ಯರ್ಥಃ।

ಯದ್ಯಪಿ ಭೂತಶಬ್ದೋ 'ಭಿನ್ನಪಾದಃ ಸರ್ವಜೀವಾಃ' ಇತಿ ಛಾಂದೋಗ್ಯಭಾಷ್ಯೇ ಜೀವಪರತಯಾ ವ್ಯಾಖ್ಯಾತಃ। ತಥಾಽಪಿ 'ಸುವರ್ಣಮ್' ಇತಿ ಶ್ರುತ್ಯನುಸಾರೇಣಾತ್ರ ವಿಶ್ವಾರ್ಥತಯಾ ವ್ಯಾಖ್ಯಾತವ್ಯಃ।

ಯದ್ಯಪಿ ತತ್ವಪ್ರದೀಪದಲ್ಲಿ ಸಮಸ್ತಭೂತವನ್ನು ಈ ಮಂತ್ರವು ವಿಧಾನಮಾಡುತ್ತಿರುವಂತೆ ತೋರುತ್ತದೆ. ತಥಾಪಿ, ತತ್ವಪ್ರಕಾಶಿಕೆಯಲ್ಲಿ ಸಮಸ್ತಭೂತಗಳು ಈ ಪುರುಷನ ಒಂದು ಪಾದವಾಗಿದೆ ಎಂಬುದಾಗಿ ಪಾದವನ್ನು ವಿಧಿಸಿರುವುದು ಕಂಡುಬರುವುದರಿಂದ ಮತ್ತು ಚಂದ್ರಿಕಾದಲ್ಲಿ 'ಪಶುವಿನ ಏಕತ್ವದಂತೆ ವಿಧೇಯವಾದ ಪಾದದಲ್ಲಿ ಇರುವ ಕಾರಣ ಪಾದದ ಏಕತ್ವವು ವಿವಕ್ಷಿತವಾಗಿದೆ' ಎಂದು ಹೇಳಿರುವುದರಿಂದಲೂ; ತತ್ವಪ್ರದೀಪವನ್ನೂ ಕೂಡ ಈ ಅಭಿಪ್ರಾಯಕ್ಕೆ ಅನುಸಾರವಾಗಿಯೇ ವ್ಯಾಖ್ಯಾನ ಮಾಡಬೇಕು. ಅಸ್ಯ - ಈ ಪುರುಷನ, **ಅಮೃತಂ** - ನಾಶರಹಿತವಾದ, ಆದ್ದರಿಂದಲೇ ಅವನ ಸ್ವರೂಪವೇ ಆದ, **ತ್ರಿಪಾತ್** - ಮೂರು ಪಾದಗಳ ಅಂದರೆ ನಾರಾಯಣ, ವಾಸುದೇವ, ವೈಕುಂಠ ಎಂಬ ಹೆಸರಿನ ಅಂಶಗಳ ಸಮುದಾಯವು, ದಿವಿ - ರೂಢಿ ಇರುವ ಕಾರಣ ಹಾಗೂ ದ್ಯೋತಮಾನವಾಗಿದೆ ಅಂದರೆ,

ಪ್ರಕಾಶಮಾನವಾಗಿದೆ ಎಂಬ ಯೋಗವಿರುವುದರಿಂದಲೂ ದ್ಯುಶಬ್ದದಿಂದ ವಾಚ್ಯವಾದ ಶ್ವೇತದ್ವೀಪ, ಅನಂತಾಸನ, ವೈಕುಂಠ ಎಂಬ ಮೂರು ಲೋಕಗಳಲ್ಲಿ ಇರುವುದು ಎಂದು ಋಙ್ಮಂತ್ರದಿಂದ ಹೇಳಲಾಗಿದೆ ಎಂದು ಅರ್ಥ.

ಯದ್ಯಪಿ 'ಭಿನ್ನಪಾದಃ ಸರ್ವಜೀವಾಃ' ಎಲ್ಲ ಜೀವರೂ ಭಿನ್ನಾಂಶರಾಗಿದ್ದಾರೆ ಎಂದು ಛಾಂದೋಗ್ಯಭಾಷ್ಯದಲ್ಲಿ ಇಲ್ಲಿರುವ ಭೂತಶಬ್ದವನ್ನು ಜೀವಪರವಾಗಿ ವ್ಯಾಖ್ಯಾನ ಮಾಡಲಾಗಿದೆ. ಆದರೂ 'ಸುವರ್ಣಂ' ಎಂಬ (ಭಾಷ್ಯದಲ್ಲಿ ಮುಂದೆ ಉದಾಹರಿಸಲಾಗುವ) ಶ್ರುತಿಯನ್ನು ಅನುಸರಿಸಿ ಇಲ್ಲಿ ಜಗತ್ಪರವಾಗಿ ವ್ಯಾಖ್ಯಾನ-ಮಾಡಬೇಕು.

**ಭಾ – 'ಸುವರ್ಣಂ ಕೋಶಂ ರಜಸಾ ಪರೀವೃತಮ್ ದೇವಾನಾಂ ವಸುಧಾನೀಂ ವಿರಾಜಮ್ । ಅಮೃತಸ್ಯ ಪೂರ್ಣಾಂ ತಾಮು ಕಲಾಂ ವಿಚಕ್ಷತೇ ಪಾದಂ ಷಡ್ಢೋತುರ್ನ ಕಿಲಾ ವಿವಿತ್ಸೇ' (ತೈ.ಆ.೩-೧೧) ಇತಿ ಶ್ರುತೇಃ ಪಾದ ಇತಿ ಏಕದೇಶಪರಿಮಿತಂ ಚತುರ್ಭಾಗಬಲ ಇತಿವದ್ ಭಿನ್ನಂ ಚ ।**

'ಸುವರ್ಣಂ ಕೋಶಂ ರಜಸಾ ಪರೀವೃತಮ್ ದೇವಾನಾಂ ವಸು-ಧಾನೀಂ ವಿರಾಜಮ್। ಅಮೃತಸ್ಯ ಪೂರ್ಣಾಂ ತಾಮು ಕಲಾಂ ವಿಚಕ್ಷತೇ ಪಾದಂ ಷಡ್ಢೋತುರ್ನ ಕಿಲಾ ವಿವಿತ್ಸೇ' ಎಂದು ಶ್ರುತಿ ಇರುವದರಿಂದ ಪಾದ ಎಂದರೆ ವಿಷ್ಣುವಿನ ಸಾಮರ್ಥ್ಯದ ದೃಷ್ಟಿಯಿಂದ ಏಕದೇಶದಂತೆ ಪರಿಮಿತವಾದದ್ದು ಹಾಗೂ 'ನಾಲ್ಕನೆಯ ಒಂದು ಭಾಗದ ಬಲವುಳ್ಳವನು' ಎಂದು ಹೇಳುವಂತೆ ಭಿನ್ನವಾದ ಅಂಶವೂ ಆಗಿದೆ.

(ಭಾ.ದೀ.) ನನು ಗಾಯತ್ರ್ಯಾಮಿವ ವಿಷ್ಣಾವಪಿ ಭೂತಾದಿಪಾದತ್ವೋಕ್ತಿರನು-ಪಪನ್ನಾ । ತಸ್ಯ ಭೂತಭಿನ್ನತ್ವಾತ್, ಇತ್ಯತ ಆಹ – **ಸುವರ್ಣಮಿತ್ಯಾದಿ** ॥

'ಸುವರ್ಣಮ್' ಇತ್ಯಾರಭ್ಯ 'ಭಿನ್ನಂ ಚ' ಇತ್ಯಂತಮ್ ಏಕವಾಕ್ಯತಯಾಽರ್ಥ-ಕ್ರಮೇಣ ವ್ಯಾಖ್ಯೇಯಮ್ । ಯಜ್ಞದತ್ತಸ್ಯ ದೇವದತ್ತಃ ಇತ್ಯುಚ್ಯತೇ ವಿಶ್ವಮ್ ಇತಿ ಚ ಶೇಷಃ । 'ಪಾದಃ' ಇತಿ ಚ ಆವರ್ತತೇ । 'ಚ'ಶಬ್ದ ಏವಾರ್ಥೇ ಹೇತೌ ಚ । 'ಏಕದೇಶಪರಿಮಿತಮ್' ಇತಿ ಹೇತುಗರ್ಭಮಾವರ್ತನೀಯಮ್ । ತಥಾಚ **'ಚ'** ಯತಃ ಶ್ರುತಿಸ್ಥೇನ ಪಾದ ಇತಿ ಶಬ್ದೇನ ನ ಭೂತಾನಾಮ್ ಇತ್ಯಮೃತಪಾದತ್ರಯವತ್ ಸ್ವರೂಪಾಂಶತ್ವಮುಚ್ಯತೇ । ಯೇನ ಅನುಪಪತ್ತಿಃ ಸ್ಯಾತ್ । ಕಿಂತು ಯಜ್ಞದತ್ತಸ್ಯ ಚತುರ್ಭಾಗಬಲೋ ದೇವದತ್ತಃ ಇತಿವದ್ ಭಿನ್ನಮೇವ ವಿಶ್ವಮ್ । ಯತಃ **'ಪರಿ-ಮಿತಮ್'** ವಿಷ್ಣುಪಾದಪರಿಮಿತಿಸಾಮರ್ಥ್ಯಮ್ ಅತಃ ಪಾದ ಇತಿ ವಿಷ್ಣುಪಾದತ್ವೇ-ನೋಚ್ಯತ ಇತ್ಯರ್ಥಃ । ಅಸ್ಯ ಅತೋ ವಿಷ್ಣೌ ಭೂತಾದಿಪಾದವ್ಯಪದೇಶೋಪಪತ್ತೇಃ ಏವಮ್ ಇತಿ ಪೂರ್ವೇಣಾನ್ವಯಃ । ತರ್ಹಿ 'ವಿಶ್ವಚತುಷ್ಟಯಸಮೋ ಹರಿಃ' ಇತ್ಯಾಗತಮ್ ಇತ್ಯತೋಽಪಿ ಆಹ – **ಪಾದ ಇತೀತಿ** ॥ ತಥಾ ಚ ಯತಃ ಶ್ರೌತಪಾದ ಇತಿ ಪದೇನ ಚತುರ್ಭಾಗಬಲ ಇತಿವತ್ ನ ವಿಶ್ವಂ ವಿಷ್ಣುಸಾಮರ್ಥ್ಯಸ್ಯ ಚತು-ರ್ಥಾಂಶಪರಿಮಿತಮ್ ಇತ್ಯುಚ್ಯತೇ ಕಿಂತು **'ಏಕದೇಶಪರಿಮಿತಮ್'** ವಿಷ್ಣು-ಸಾಮರ್ಥ್ಯೈಕದೇಶಪರಿಮಿತಮ್ ಇತ್ಯತೋ ನೋಕ್ತದೋಷ ಇತ್ಯರ್ಥಃ । ಕುತ ಏತದ್ ಜ್ಞಾಯತೇ? ಇತ್ಯತ ಆಹ – **ಸುವರ್ಣಂ ಕೋಶಮಿತಿ** ॥ **'ಶ್ರುತೇಃ'** ತೈತ್ತಿರೀಯ-ಶ್ರುತೇಃ । ಶ್ರುತೌ ತೃತೀಯಾರ್ಥೇ ಷಷ್ಠೀ , ಸಮುದಾಯೈಕವಚನಂ ಚೈತತ್ । ಅತ ಏವ 'ಮುಕ್ತೈಃ ಪೂರ್ಣಾಮ್' ಇತ್ಯುಕ್ತಂ ಟೀಕಾಯಾಮ್ । ಏವಂ ಚ ತತ್ತ್ವಪ್ರದೀಪ-ಟೀಕಯೋರೇಕವಾಕ್ಯತಾ(೧) ।

ಗಾಯತ್ರಿಯು ಭೂತಾದಿಗಳನ್ನು ಅಂಶವಾಗಿ ಹೊಂದಿರುವುದು ಎಂದು ಹೇಳು-ವುದು ಹೇಗೆ ಅಯುಕ್ತವೋ ಹಾಗೆ ವಿಷ್ಣುವಿನ ವಿಷಯದಲ್ಲೂ ಅವನು ಭೂತಾದಿಗಳನ್ನು ಅಂಶವಾಗಿ ಹೊಂದಿದ್ದಾನೆ ಎಂದು ಹೇಳುವುದು ಅಯುಕ್ತವಾಗಿದೆ. ಏಕೆಂದರೆ, ವಿಷ್ಣುವು ಭೂತಗಳಿಂದ ಭಿನ್ನನಾಗಿದ್ದಾನೆ ಎಂಬ ಆಕ್ಷೇಪಕ್ಕೆ ಉತ್ತರವಾಗಿ 'ಸುವರ್ಣಮ್' ಇತ್ಯಾದಿ ವಾಕ್ಯವು ಹೊರಟಿದೆ. 'ಸುವರ್ಣಮ್' ಎಂದು ಆರಂಭಿಸಿ, 'ಭಿನ್ನಂ ಚ' ಎಂಬಲ್ಲಿಯ

ವರೆಗೆ ಒಂದೇ ವಾಕ್ಯವಾಗುವಂತೆ ಅರ್ಥಕ್ರಮದಿಂದ ವ್ಯಾಖ್ಯಾನಮಾಡಬೇಕು. ಇಲ್ಲಿ 'ಯಜ್ಞದತ್ತಸ್ಯ' 'ದೇವದತ್ತಃ' 'ಇತ್ಯುಚ್ಯತೇ' 'ವಿಶ್ವಂ' ಎಂಬ ಪದಗಳು ಶೇಷವಾಗಿವೆ. 'ಪಾದ' ಎಂಬ ಶಬ್ದವು ಆವೃತ್ತಿಯನ್ನು ಪಡೆಯುವುದು. ಚಶಬ್ದವು ಏವ ಎಂಬ ಅರ್ಥವನ್ನು ಹಾಗೂ ಹೇತು ಎಂಬ ಅರ್ಥವನ್ನೂ ಹೇಳುವುದು. ಏಕದೇಶಪರಿಮಿತಂ ಎನ್ನುವ ಪದವು ಹೇತುವನ್ನು ಒಳಗೊಂಡಿರುವ ಅರ್ಥವನ್ನು ಹೊಂದಿದ್ದು ಅದನ್ನು ಆವೃತ್ತಿ ಮಾಡಿಕೊಳ್ಳಬೇಕು. ತಥಾಚ - 'ಚ' - ಯಾವ ಕಾರಣದಿಂದ ಶ್ರುತಿಯಲ್ಲಿರುವ ಪಾದವೆಂಬ ಶಬ್ದದಿಂದ ಮೂರು ಅಮೃತಪಾದಗಳಿಗೆ ಹೇಳಿರುವಂತೆ (ಪೃಥಿವ್ಯಾದಿ) ಭೂತಗಳಿಗೆ ಸ್ವರೂಪಾಂಶತ್ವವು ಹೇಳಲ್ಪಡುವುದಿಲ್ಲವೋ – ಯಾವುದರಿಂದ ಅನುಪಪತ್ತಿಯಿರುವ ಸಂಭವವಿದೆಯೋ – ಕಿಂತು, ಯಜ್ಞದತ್ತಸ್ಯ ಚತುರ್ಭಾಗಬಲೋ ದೇವದತ್ತಃ - ಯಜ್ಞದತ್ತನ ಬಲದ ನಾಲ್ಕನೆಯ ಒಂದಂಶ ಬಲವುಳ್ಳವನು ದೇವದತ್ತ ಎಂದು ಹೇಳುವಂತೆ ವಿಶ್ವವು ಭಿನ್ನಾಂಶವೇ ಆಗಿದೆ. ಯಾವ ಕಾರಣದಿಂದಾಗಿ, ಪರಿಮಿತಂ - ವಿಷ್ಣುವಿನ ಅಂಶಕ್ಕಿಂತಲೂ ಪರಿಮಿತವಾದ ಸಾಮರ್ಥ್ಯವುಳ್ಳದ್ದೋ ಆದ್ದರಿಂದ ಪಾದ ಎಂಬುದಾಗಿ ವಿಷ್ಣುವಿನ ಅಂಶವೆಂದು ಹೇಳಲ್ಪಟ್ಟಿದೆ ಎಂದು ಅರ್ಥ. ಈ ವಾಕ್ಯಕ್ಕೆ 'ಅತೋ ವಿಷ್ಣೌ ಭೂತಾದಿಪಾದವ್ಯಪದೇಶೋಪಪತ್ತೇಶ್ಚ ಏವಮ್' ಎಂಬುದಾಗಿ ಹಿಂದಿನ ವಾಕ್ಯದೊಂದಿಗೆ ಅನ್ವಯವಾಗುವುದು. ಹಾಗಿದ್ದ ಪಕ್ಷದಲ್ಲಿ ಶ್ರೀಹರಿಯು ನಾಲ್ಕು ವಿಶ್ವಗಳಿಗೆ ಸಮನಾದವನು ಎಂದಾಗುವುದು ಎಂಬ ಶಂಕೆಗೆ ಸಮಾಧಾನವಾಗಿಯೂ ಪಾದ ಇತಿ ಎಂದು ಭಾಷ್ಯದಲ್ಲಿ ಹೇಳಲಾಗಿದೆ. ತಥಾಚ– ಯಾವ ಕಾರಣದಿಂದಾಗಿ ಶ್ರುತಿಯಲ್ಲಿರುವ ಪಾದವೆಂಬ ಪದದಿಂದ ಚತುರ್ಭಾಗಬಲಃ ಎಂಬಲ್ಲಿ ಹೇಳುವಂತೆ ಜಗತ್ತು ವಿಷ್ಣುಸಾಮರ್ಥ್ಯದ ನಾಲ್ಕನೆಯ ಒಂದಂಶದಷ್ಟು ಪರಿಮಿತವಾದದ್ದು ಎಂದು ಹೇಳಲ್ಪಡುವುದಿಲ್ಲವೋ ಕಿಂತು, ಏಕದೇಶಪರಿಮಿತಂ - ವಿಷ್ಣುವಿನ ಸಾಮರ್ಥ್ಯದ ಏಕದೇಶದ ದೃಷ್ಟಿಯಿಂದ ಪರಿಮಿತವಾದದ್ದು ಎಂದು ಹೇಳಲಾಗಿದೆಯೋ ಆದ್ದರಿಂದ ಇಲ್ಲಿ ಹಿಂದೆ ಹೇಳಿದ ದೋಷವಿಲ್ಲ ಎಂದು ಅರ್ಥ. ಈ ಅಭಿಪ್ರಾಯವು ಇಲ್ಲಿ ಹೇಗೆ ತಿಳಿದು ಬರುವುದು? ಎಂಬ ಶಂಕೆಗೆ ಉತ್ತರವಾಗಿ ಸುವರ್ಣಂ ಕೋಶಂ ಎಂದು ಹೇಳಲಾಗಿದೆ. ಶ್ರುತೇಃ ಎಂಬುದಕ್ಕೆ ತೈತ್ತಿರೀಯಶ್ರುತೇಃ ಎಂದು ಅರ್ಥ. ಶ್ರುತಿಯಲ್ಲಿ ಅಮೃತಸ್ಯ ಎಂಬಲ್ಲಿರುವ ಷಷ್ಠೀವಿಭಕ್ತಿಯು ತೃತೀಯಾವಿಭಕ್ತ್ಯರ್ಥದಲ್ಲಿ ಪ್ರಯೋಗಿ-

ಸಲ್ಪಟ್ಟಿದೆ. ಏಕವಚನವು ಸಮುದಾಯವನ್ನು ಹೇಳುವ ಅಭಿಪ್ರಾಯವುಳ್ಳದ್ದು. ಆದ್ದರಿಂದಲೇ ತತ್ವಪ್ರಕಾಶಿಕೆಯಲ್ಲಿ 'ಮುಕ್ತೈಃ ಪೂರ್ಣಾಮ್' ಎಂದು ಬಹುವಚನಪ್ರಯೋಗವನ್ನು ಮಾಡಲಾಗಿದೆ. ಹೀಗೆ ತತ್ವಪ್ರದೀಪ ಮತ್ತು ತತ್ವಪ್ರಕಾಶಿಕೆಗಳಿಗೆ ಏಕಾಭಿಪ್ರಾಯವಿದೆ.

(೧) 'ಅಮೃತಸ್ಯ' ಎಂಬ ಪದದಲ್ಲಿರುವ ಷಷ್ಠೀವಿಭಕ್ತಿಯು ತೃತೀಯಾವಿಭಕ್ತ್ಯರ್ಥವನ್ನು ಹೇಳುವುದು ಮತ್ತು ಈ ಪದದ ಏಕವಚನವು ಸಮುದಾಯದ ಏಕತ್ವವನ್ನು ಹೇಳುವುದು ಎಂಬ ತತ್ತ್ವಪ್ರದೀಪದ ಅಭಿಪ್ರಾಯವನ್ನೇ 'ಅಮೃತಸ್ಯ ಪೂರ್ಣಾಂ' ಎಂಬ ಪದಗಳಿಗೆ 'ಮುಕ್ತೈಃ ಪೂರ್ಣಾಂ' ಎಂದು ವ್ಯಾಖ್ಯಾನ ಮಾಡುವ ಮೂಲಕ ತತ್ತ್ವಪ್ರಕಾಶಿಕೆಯಲ್ಲಿ ವ್ಯಕ್ತಪಡಿಸಿರುವುದರಿಂದ ಎರಡು ವ್ಯಾಖ್ಯಾನಗಳಿಗೆ ಏಕವಾಕ್ಯತೆ ಇರುವುದೆಂದು ಭಾವ.

(ಭಾ.ದೀ.) 'ಪಾದಮ್' ಇತ್ಯಾವರ್ತತೇ। ತತ್ರೈಕಂ ಭಾವಸಾಧನಮ್। ನ ಕಿಲಾ ಇತಿ ದೀರ್ಘಃ ಸಾಂಹಿತಿಕಃ। ತಥಾ ಚ ಏಕಸ್ಮಿನ್ ಕಪಾಲೇ '**ಸುವರ್ಣಂ**' ತನ್ಮಯಂ '**ರಜಸಾ ಪರಿವೃತಂ**' ರಜೋಗುಣೋಪಲಕ್ಷಿತಾಬಗ್ನೀರನಭೋಽಹಂಕೃನ್ಮಹತ್ತತ್ವಗುಣತ್ರಯೈಃ ಪರಿವೃತಂ '**ವಿರಾಜಂ**' ಬ್ರಹ್ಮಣಃ ಶರೀರಂ, ತತ್ತ್ವಪ್ರದೀಪರೀತ್ಯಾ 'ವಿಶೇಷೇಣ ರಾಜಂತಮಿವ' '**ಕೋಶಂ**' ಲಿಂಗವ್ಯತ್ಯಯಃ, ಬ್ರಹ್ಮಾಂಡಾಖ್ಯಂ ಯದಸ್ತಿ। **ದೇವಾನಾಂ** '**ವಸುಧಾನೀಂ**' ದ್ರವ್ಯನಿಧಾನಮಂಜೂಷಾಮ್, '**ಅಮೃತೈಃ**' ಮುಕ್ತೈಃ, **ಪೂರ್ಣಾಂ** **ತಾಂ** '**ಷಡ್ಢೋತುಃ**' ಷಡಿಂದ್ರಿಯೇಷು ವಿಷಯಾನ್ ಜುಹ್ವತಃ, ಷಡಿಂದ್ರಿಯಾಣಿ ವಿಷಯೇಷು ಜೀವೇನ ಜುಹ್ವತೋ ವಾ, ಷಡಿಂದ್ರಿಯೈಃ ಸಾರಾದನಕರ್ತುರ್ವಾ, ವಿಷ್ಣೋಃ '**ಕಲಾಮ್ ಉ**' ಏಕದೇಶಪರಿಮಿತಾಮೇವ '**ಪಾದಂ ವಿಚಕ್ಷತೇ**' ಪಾದಶಬ್ದೇನ ಆಚಕ್ಷತೇ ವದಂತಿ ಪುರುಷಸೂಕ್ತಾದ್ಯಾಗಮಾ ಇತಿ ಶೇಷಃ। 'ನ ಕಿಲ' ಅತ್ರ ಪಾದಶಬ್ದೇನಾಂಘ್ರಿಂ ವದಂತಿ, ನಾಪಿ ಚತುರ್ಥಾಂಶಮಿತ್ಯೇವಾರ್ಥಃ। ಕುತಃ? ಯತಃ ಸಾ ಮಂಜೂಷಾ '**ಪಾದಂ**' ಪಾದತ್ವಂ ಚತುರ್ಥಭಾಗಸಾಮ್ಯಂ '**ನ ವಿವಿತ್ಸೇ**' ನ ಲೇಭೇ ಕಿಲ - ಇತಿ ಶ್ರುತ್ಯರ್ಥಃ।

**ಸತ್ತರ್ಕದೀಪಾವಲ್ಯಾಮ್– 'ಪಾದಂ ನ ವಿವಿತ್ಸೇ' ಇತಿ ಪಾದಸಾಮ್ಯಂ ನ ಲೇಭೇ ಇತ್ಯುಕ್ತಮ್ । ಅತ್ರ ಪಕ್ಷದ್ವಯೇऽಪಿ ಪುರುಷವ್ಯತ್ಯಯಸ್ತುಲ್ಯಃ । ಟೀಕಾಕೃತ್ಪಕ್ಷೇ ಲಕಾರ-ವ್ಯತ್ಯಯಶ್ಚ । ಯದ್ವಾ – ಲಿಂಗವ್ಯತ್ಯಯಸ್ಯ ಛಾಂದಸತ್ವಂ, ಕೋಶಮ್ ಇತ್ಯಸ್ಯ ದ್ವಿತೀ-ಯಾಂತತ್ವಂ ಚೋಪೇತ್ಯ ಸ್ತ್ರೀಲಿಂಗಪದಾನಾಮಪಿ ಕೋಶವಿಶೇಷಣತ್ವೇನೈಕ ಏವಾ-ನ್ವಯಃ ।**

(ಈ ಶ್ರುತಿಯಲ್ಲಿರುವ) ಪಾದಂ ಎಂಬ ಪದವು ಆವೃತ್ತಿಯನ್ನು ಹೊಂದುತ್ತದೆ. ಅವೆರಡರಲ್ಲಿ ಒಂದು ಪಾದತ್ವವೆಂಬ ಧರ್ಮವನ್ನು ಹೇಳುವುದು. 'ನ ಕಿಲಾ' ಎಂಬಲ್ಲಿ ದೀರ್ಘವು ವೈದಿಕಪ್ರಯೋಗವಾಗಿದೆ. ತಥಾಚ – ಒಂದು ಕಪಾಲದಲ್ಲಿ ಸುವರ್ಣಂ - ಸುವರ್ಣಮಯವಾದ ರಜಸಾ ಪರೀವೃತಂ - ರಜಸ್ಸೆಂಬ ಶಬ್ದವು ಲಕ್ಷಣಯಾ ಸೂಚಿಸುವ ಜಲ, ಅಗ್ನಿ, ವಾಯು, ಆಕಾಶ, ಅಹಂಕಾರತತ್ವ, ಮಹತ್ತತ್ವ ಮತ್ತು ಸತ್ತ್ವರಜಸ್ತಮೋಗುಣಗಳಿಂದ ಪರಿವೃತವಾದ 'ವಿರಾಜಂ - ಚತುರ್ಮುಖಬ್ರಹ್ಮನ-ತತ್ವಪ್ರದೀಪದ ಪ್ರಕಾರ ವಿರಾಜ ಅಂದರೆ ವಿಶೇಷವಾಗಿ ಪ್ರಕಾಶಿಸುವ ಎಂದು ಅರ್ಥ. **ಕೋಶಂ** – ಈ ಶಬ್ದವು ಪುಲ್ಲಿಂಗಶಬ್ದವಾಗಿದ್ದು ಶ್ರುತಿಯಲ್ಲಿ ಲಿಂಗವ್ಯತ್ಯಾಸಮಾಡಿ, ನಪುಂಸಕಲಿಂಗದಲ್ಲಿ ಪ್ರಯೋಗಿಸಲಾಗಿದೆ, ಬ್ರಹ್ಮಾಂಡವೆಂಬ ಶರೀರವು ಯಾವುದಿ-ದೆಯೋ; ದೇವಾನಾಂ - ದೇವತೆಗಳ, ವಸುಧಾನೀಂ - ಸಂಪತ್ತಿಗೆ ಆಶ್ರಯವಾದ ಪೆಟ್ಟಿಗೆಯಾದ, ಅಮೃತೈಃ - ಮುಕ್ತರಿಂದ, ಪೂರ್ಣಾಂ - ತುಂಬಿರುವ, ತಾಂ - ಅದನ್ನು, ಷಡ್ಢೋತುಃ ಆರು ಇಂದ್ರಿಯಗಳಲ್ಲಿ ವಿಷಯಪದಾರ್ಥಗಳನ್ನು ಹೋಮಿ-ಸುವ, ಅಥವಾ ಆರು ಇಂದ್ರಿಯಗಳನ್ನು ವಿಷಯಪದಾರ್ಥಗಳಲ್ಲಿ ಜೀವನ ಮೂಲಕ-ವಾಗಿ ಹೋಮಿಸುವ, ಅಥವಾ ಆರು ಇಂದ್ರಿಯಗಳಿಂದ ವಿಷಯಪದಾರ್ಥಗಳ ಸಾರವನ್ನು ಸ್ವೀಕರಿಸುವ, ವಿಷ್ಣುವಿನ, ಕಲಾಮ್ ಉ - ಕೇವಲ ಏಕದೇಶಪರಿಮಿತ-ವಾದದ್ದನ್ನು, ಪಾದಂ ವಿಚಕ್ಷತೇ- ಪುರುಷಸೂಕ್ತವೇ ಮೊದಲಾದ ಆಗಮಗಳು ಪಾದಶಬ್ದದಿಂದ ಹೇಳುತ್ತವೆ. 'ಪುರುಷಸೂಕ್ತವೇ ಮೊದಲಾದ ಆಗಮಗಳು' ಎಂಬ ಪದಗಳು ಇಲ್ಲಿ ಶೇಷವಾಗಿವೆ. ಇಲ್ಲಿ ನ ಕಿಲ - ಪಾದಶಬ್ದದಿಂದ ವಿಷ್ಣುವಿನ ಚರಣವೆಂಬ ಅವಯವವನ್ನಾಗಲೀ ಅಥವಾ ನಾಲ್ಕನೆಯ ಒಂದಂಶ ಎಂಬ ಅರ್ಥವನ್ನಾಗಲೀ ಹೇಳು-

ವುದಿಲ್ಲ ಎಂಬ ಅರ್ಥವನ್ನು ಏವಶಬ್ದವು ಹೇಳುವುದು. ಏಕೆಂದರೆ, ಯಾವ ಕಾರಣ-ದಿಂದಾಗಿ ಆ ಪೆಟ್ಟಿಗೆಯೆಂದು ಹೇಳಲಾದ ಬ್ರಹ್ಮಾಂಡವು ಪಾದಂ - ಪಾದತ್ವವನ್ನು ಅಂದರೆ ನಾಲ್ಕನೆಯ ಒಂದಂಶದ ಸಾಮ್ಯವನ್ನು, ನ ವಿವಿತ್ಸೇ ಕಿಲ - ಹೊಂದಿಲ್ಲವಷ್ಟೇ! ಎಂದು ಶ್ರುತಿಯ ಅರ್ಥವಾಗಿದೆ.

ಸತ್ತರ್ಕದೀಪಾವಲಿಯಲ್ಲಿ ಪಾದಂ ನ ವಿವಿತ್ಸೇ ಅಂದರೆ ಪಾದಸಾಮ್ಯವನ್ನು ಹೊಂದಿಲ್ಲ ಎಂದು ಅರ್ಥವನ್ನು ಹೇಳಲಾಗಿದೆ. (೧)ಎರಡೂ ಪಕ್ಷಗಳಲ್ಲಿ ವಿವಿತ್ಸೇ - ಎಂಬ ಕ್ರಿಯಾಪದದಲ್ಲಿ ಪ್ರಥಮಪುರುಷವನ್ನು ವ್ಯತ್ಯಾಸಮಾಡಿ ಮಧ್ಯಮಪುರುಷವನ್ನು ಪ್ರಯೋಗಿಸಿರುವುದು ಸಮಾನವಾಗಿದೆ. (೨)ಟೀಕಾಕೃತ್ಪಾದರ ಪಕ್ಷದಲ್ಲಿ ಲಕಾರದ ವ್ಯತ್ಯಾಸವೂ ಆಗಿರುವುದು. ಅಥವಾ - ಲಿಂಗವ್ಯತ್ಯಾಸವಾಗಿರುವುದು ವೈದಿಕವೆಂದೂ, ಕೋಶಂ ಎಂಬ ಪದವು ದ್ವಿತೀಯಾಂತವಾಗಿದೆ ಎಂಬುದನ್ನು ಅಂಗೀಕರಿಸಿ, ಸ್ತ್ರೀಲಿಂಗ ಪದಗಳು ಕೋಶಕ್ಕೆ ವಿಶೇಷಣವಾಗಿದೆ ಎಂದೂ ಸ್ವೀಕರಿಸಿ, ಒಂದೇ ಅನ್ವಯವನ್ನು ಹೇಳಬಹುದು.

(೧) ತತ್ತ್ವಪ್ರದೀಪಕಾರರ ಹಾಗೂ ತತ್ತ್ವಪ್ರಕಾಶಿಕಾಕಾರರ ಪಕ್ಷಗಳಲ್ಲಿ.

(೨) ತತ್ತ್ವಪ್ರದೀಪಕಾರರು 'ವಿವಿತ್ಸೇ' ಎಂಬ ಕ್ರಿಯಾಪದಕ್ಕೆ 'ಅವಿಂದತ' ಎಂದು ವ್ಯಾಖ್ಯಾನದ ಮೂಲಕ ಲಙ್‌ಲಕಾರವು ಇಲ್ಲಿ ವಿವಕ್ಷಿತವೆಂದು ಅಭಿಪ್ರಾಯ-ಪಟ್ಟರೆ, ತತ್ತ್ವಪ್ರಕಾಶಿಕಾಕಾರರು 'ಲೇಭೇ' ಎಂದು ಲಿಟ್‌ಲಕಾರವನ್ನು ಇಲ್ಲಿ ಅಭಿಪ್ರೇತವೆಂದು ಸೂಚಿಸುವರು. ಹೀಗೆ ಇವೆರಡು ಸ್ಥಳಗಳಲ್ಲಿ ಲಕಾರವ್ಯತ್ಯಾಸ-ವಿದೆ ಎಂದು ಭಾವ.

**ಭಾ— ಸ ಹಿ ಪುರುಷಸೂಕ್ತಾಭಿಧೇಯಃ। 'ಯಜ್ಞೇನ ಯಜ್ಞಮಯಜಂತ' (ತೈ.ಆ. ೩-೧೨) ಇತಿ ಯಜ್ಞಶಬ್ದಾತ್। 'ಯಜ್ಞೋ ವಿಷ್ಣುರ್ದೇವತಾ' ಇತಿ ಹಿ ಶ್ರುತಿಃ।**

'ಯಜ್ಞೇನ ಯಜ್ಞಮಯಜಂತ' ಎಂಬ ಮಂತ್ರದಲ್ಲಿ ಯಜ್ಞಶಬ್ದವಿರು-ವುದರಿಂದ ಪುರುಷಸೂಕ್ತಪ್ರತಿಪಾದ್ಯನು ಆ ವಿಷ್ಣುವೇ ಆಗಿದ್ದಾನೆ.

'ಯಜ್ಞೋ ವಿಷ್ಣುರ್ದೇವತಾ' - ಎಂಬ ಶ್ರುತಿಯಲ್ಲಿ ಯಜ್ಞಶಬ್ದದಿಂದ ವಿಷ್ಣುವೇ ಹೇಳಲ್ಪಡುವನಷ್ಟೇ .

(ಭಾ.ದೀ.) ಸ್ಯಾದೇತದೇವಂ ಯದಿ 'ತಾವಾನ್' ಇತ್ಯಸ್ಯಾಮ್ ಋಚಿ ವಿಷ್ಣುರಭಿಧೀಯತೇ ಇತ್ಯತ್ರ ಪ್ರಮಾಣಂ ಸ್ಯಾತ್; ತದೇವ ನಾಸ್ತಿ, ಅತೋ ಲಿಂಗಮನ್ಯನಿಷ್ಠಂ ಭವಿಷ್ಯತಿ ಇತ್ಯತಃ ಸೌತ್ರಚಶಬ್ದೇನ ಭೂತಾದಿಪಾದತ್ವಸ್ಯ ವಿಷ್ಣುಲಿಂಗತ್ವೇ ಸಾಧ್ಯೇ ಪುರುಷಸೂಕ್ತೋಕ್ತತ್ವಾದಿತಿ ಯದನುಮಾನಂ ಸೂಚಿತಂ ತಸ್ಯಾಪ್ರಯೋಜಕತ್ವಮಾಶಂಕ್ಯ ಪರಿಹರತಿ – **ಸ ಹೀತಿ** ॥ 'ಹಿ' ಯಸ್ಮಾತ್ 'ಸಃ' ವಿಷ್ಣುರೇವ 'ಪುರುಷಸೂಕ್ತಾಭಿಧೇಯಃ ತತ್ಪ್ರತಿಪಾದ್ಯಃ ತಸ್ಮಾತ್ ಸ ಏವ ಪುರುಷಸೂಕ್ತೋಕ್ತಭೂತಾದಿಪಾದೋऽಪಿ ಇತಿ ಯೋಜನಾ । ಅನ್ಯಥಾ ಭೂತಾದಿಪಾದತ್ವಸ್ಯ ವಿಷ್ಣುಧರ್ಮತ್ವಾಭಾವೇ ಪುರುಷಸೂಕ್ತಪ್ರತಿಪಾದ್ಯತ್ವಂ ನ ಸ್ಯಾದಿತಿ ಭಾವಃ । ಯದ್ವಾ– ಗಾಯತ್ರ್ಯಾ ವಿಷ್ಣುತ್ವೇ ಸಾಧ್ಯೇ ಸೂತ್ರೇ ಭಿನ್ನಕ್ರಮೇಣಾನ್ವಿತಚಶಬ್ದಸೂಚಿತಯುಕ್ತ್ಯಂತರಮಾಹ – **ಸ ಹೀತಿ** ॥ ಅಸ್ಯ 'ತಸ್ಮಾದ್ ಗಾಯತ್ರೀ ವಿಷ್ಣುರೇವ' ಇತಿ ಪ್ರಧಾನಪ್ರತಿಜ್ಞಾವಾಕ್ಯೇನಾನ್ವಯಃ । 'ಚತುಷ್ಪದಾ' ಇತ್ಯುಕ್ತಗಾಯತ್ರೀಚತುಷ್ಪಾದತ್ವಸ್ಯ ಪುರುಷಸೂಕ್ತಮಂತ್ರೇಣೋಪಪಾದನಾತ್ ತತ್ಪ್ರತಿಪಾದ್ಯತ್ವೇ ತದುಪಪಾದ್ಯಗಾಯತ್ರೀಶಬ್ದಾರ್ಥತಾऽಪಿ ತಸ್ಯೈವ ಪ್ರಾಪ್ನೋತೀತಿ ಭಾವಃ।

ಪುರುಷಸೂಕ್ತೋಕ್ತಸ್ಯ ವಿಷ್ಣುತ್ವಂ ಕುತಃ? ಇತ್ಯತ ಆಹ – **ಯಜ್ಞೇನೇತಿ** ॥ ದೇವಾಃ ಯಜ್ಞೇನ ಜ್ಞಾನಕರ್ಮಾತ್ಮಕೇನ ರುದ್ರಾಖ್ಯಪಶುನಾ ವಾ ಯಜ್ಞಂ ವಿಷ್ಣುಮ್ ಅಯಜಂತ ಅಪೂಜಯನ್ ಇತಿ ಶ್ರುತ್ಯರ್ಥಃ। ಇತಿ **ಯಜ್ಞಶಬ್ದಾತ್ ಇತಿ** ॥ ಇತಿ ವಾಕ್ಯೇ ಯಜ್ಞಶಬ್ದಶ್ರವಣಾದ್ ಇತ್ಯರ್ಥಃ।

ಯಜ್ಞಶಬ್ದಃ ಕಥಂ ವಿಷ್ಣುತ್ವನಿಶ್ಚಾಯಕಃ? ಇತ್ಯತೋ ವಿದ್ವದ್ರೂಢ್ಯಾ ಇತ್ಯಾಹ – **ಯಜ್ಞ ಇತಿ** ॥ ಹಿ ಯತಃ ಯಜ್ಞ ಇತಿ ಪದೇನ ವಿಷ್ಣ್ವಾಖ್ಯಾ ದೇವತಾ ಉಚ್ಯತೇ ಇತ್ಯರ್ಥಃ। ಯದ್ಯಪಿ 'ಯಜ್ಞೋ ವೈ ವಿಷ್ಣುಃ' ಇತ್ಯಧ್ವರ್ಯೂಣಾಂ ಶ್ರುತಿಃ। ತಥಾऽಪಿ ಶ್ರುತ್ಯಂತರಮಿತ್ಯದೋಷಃ।

'ತಾವಾನಸ್ಯ ಮಹಿಮಾ' ಎಂಬ ಋಕ್ಕಿನಲ್ಲಿ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣವಿದ್ದರೆ ಈಗ ಹೇಳಿದಂತೆ ವಿಷ್ಣುವೇ ಭೂತಾದಿಪಾದನು ಎಂದು ಒಪ್ಪಬಹುದು. ಆದರೆ ಅಂತಹ ಪ್ರಮಾಣವೇ ಇಲ್ಲವಾದ್ದರಿಂದ, ಭೂತಾದಿಪಾದತ್ವವೆಂಬ ಲಿಂಗವು ಅನ್ಯಲಿಂಗವೇ ಹೊರತು ವಿಷ್ಣುಲಿಂಗವಲ್ಲ ಎಂಬ ಶಂಕೆಗೆ ಉತ್ತರವಾಗಿ ಸೂತ್ರದಲ್ಲಿರುವ ಚಶಬ್ದವು ಸೂಚಿಸುವ 'ಭೂತಾದಿಪಾದತ್ವವು ವಿಷ್ಣುಲಿಂಗವಾಗಿದೆ; ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿರುವುದರಿಂದ' ಎಂಬ ಅನುಮಾನದಲ್ಲಿ ಪುರುಷ-ಸೂಕ್ತೋಕ್ತತ್ವವೆಂಬ ಹೇತುವು ಅಪ್ರಯೋಜಕವಾದದ್ದು ಎಂದು ಆಶಂಕಿಸಿ, 'ಸ ಹಿ' ಎಂಬ ವಾಕ್ಯದಿಂದ ಪರಿಹರಿಸಲಾಗಿದೆ. ಹಿ- ಯಾವ ಕಾರಣದಿಂದ, ಸಃ- ಆ ವಿಷ್ಣುವೇ, **ಪುರುಷಸೂಕ್ತಾಭಿಧೇಯಃ** - ಪುರುಷಸೂಕ್ತಪ್ರತಿಪಾದ್ಯನಾಗಿದ್ದಾನೋ, ಆದ್ದರಿಂದ ಆ ವಿಷ್ಣುವೇ ಪುರುಷಸೂಕ್ತವು ಹೇಳುವ ಭೂತಾದಿಗಳನ್ನು ಪಾದವಾಗಿ ಹೊಂದಿರುವವನೂ ಆಗಿದ್ದಾನೆ ಎಂದು ಯೋಜನೆ. ಹೀಗೆ ಅಂಗೀಕರಿಸದೇ ಭೂತಾದಿಪಾದತ್ವವು ವಿಷ್ಣು-ಧರ್ಮವಲ್ಲ ಎಂದು ಹೇಳಿದ ಪಕ್ಷದಲ್ಲಿ ಆ ಧರ್ಮವು ಪುರುಷಸೂಕ್ತಪ್ರತಿಪಾದ್ಯ-ವಾಗಲಾರದು ಎಂದು ಭಾವ. ಅಥವಾ - 'ಸ ಹಿ' ಎಂಬ ಭಾಷ್ಯವಾಕ್ಯವು ಗಾಯತ್ರಿಯು ವಿಷ್ಣುವೇ ಎಂದು ಸಾಧಿಸಲು ಸೂತ್ರದಲ್ಲಿ [೧]ಭಿನ್ನಕ್ರಮದಿಂದ ಅನ್ವಯವನ್ನು ಹೊಂದುವ ಚಶಬ್ದವು ಸೂಚಿಸುವ ಇನ್ನೊಂದು ಯುಕ್ತಿಯನ್ನು ಹೇಳುತ್ತಿದೆ. 'ಸ ಹಿ' ಎಂಬ ಈ ವಾಕ್ಯಕ್ಕೆ 'ತಸ್ಮಾದ್ ಗಾಯತ್ರೀ ವಿಷ್ಣುರೇವ' ಎಂಬ ಪ್ರಧಾನವಾದ ಪ್ರತಿಜ್ಞಾವಾಕ್ಯ-ದೊಂದಿಗೆ ಅನ್ವಯವಾಗುವುದು. 'ಚತುಷ್ಪದಾ' ಎಂದು ಹೇಳಿರುವ ಗಾಯತ್ರಿಯ ಚತುಷ್ಪಾದತ್ವವು ಪುರುಷಸೂಕ್ತಮಂತ್ರದಿಂದ ವಿವರಿಸಲ್ಪಟ್ಟಿರುವುದರಿಂದ, ಚತುಷ್ಪಾ-ದತ್ವವು ಪುರುಷಸೂಕ್ತಪ್ರತಿಪಾದ್ಯವಾದ ಪಕ್ಷದಲ್ಲಿ ಅದರಿಂದ ಸಿದ್ಧವಾಗುವ ಗಾಯತ್ರೀ-ಶಬ್ದವಾಚ್ಯತ್ವವು ವಿಷ್ಣುವಿಗೇ ಸಿದ್ಧಿಸುವುದು ಎಂದು ಭಾವ.

'ಪುರುಷಸೂಕ್ತಪ್ರತಿಪಾದ್ಯನು ವಿಷ್ಣುವಾಗಿದ್ದಾನೆ' ಎಂಬ ವಿಷಯದಲ್ಲಿ ಪ್ರಮಾಣ-ವೇನು? ಎಂಬ ಶಂಕೆಗೆ ಉತ್ತರವಾಗಿ ಯಜ್ಞೇನ ಎಂಬ ವಾಕ್ಯವು ಹೊರಟಿದೆ. ದೇವತೆ-ಗಳು ಯಜ್ಞೇನ ಜ್ಞಾನ-ಕರ್ಮಸ್ವರೂಪವಾದ ಯಜ್ಞದಿಂದ ಅಥವಾ ರುದ್ರನೆಂಬ ಪಶುವಿನಿಂದ, ಯಜ್ಞಂ- ವಿಷ್ಣುವನ್ನು, ಅಯಜಂತ- ಪೂಜಿಸಿದರು ಎಂದು ಶ್ರುತ್ಯರ್ಥ.

'ಇತಿ ಯಜ್ಞಶಬ್ದಾತ್' ಅಂದರೆ ಈ ವಾಕ್ಯದಲ್ಲಿ ಯಜ್ಞಶಬ್ದದ ಶ್ರವಣವಿರುವುದರಿಂದ ಎಂದು ಅರ್ಥ.

ಪುರುಷಸೂಕ್ತಪ್ರತಿಪಾದ್ಯನು ವಿಷ್ಣುವೆಂದು ಯಜ್ಞಶಬ್ದವು ಹೇಗೆ ನಿರ್ಣಯಿಸು-ವುದು? ಎಂಬ ಪ್ರಶ್ನೆಗೆ ಉತ್ತರವಾಗಿ ಯಜ್ಞಶಬ್ದವು ವಿದ್ವದ್ರೂಢಿಯಿಂದ ವಿಷ್ಣುವನ್ನೇ ಹೇಳುವುದು ಎಂದು ಯಜ್ಞೋ ವಿಷ್ಣುಃ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಹಿ-ಯಾವ ಕಾರಣದಿಂದ ಯಜ್ಞ ಎಂಬ ಪದದಿಂದ, ವಿಷ್ಣುಃ - ವಿಷ್ಣುವೆಂಬ ದೇವತೆಯು ಹೇಳಲ್ಪಡುವುದೋ ಆದ್ದರಿಂದ ಎಂದು ಅರ್ಥ. ಯದ್ಯಪಿ 'ಯಜ್ಞೋ ವೈ ವಿಷ್ಣುಃ' ಎಂದು ಯಜುಃಶಾಖೆಯ ಪಾಠವಿದೆ. ಆದರೂ ಇದು ಬೇರೆಯೇ ಶ್ರುತಿಯಾದದ್ದರಿಂದ ದೋಷವಿಲ್ಲ.

(೧) ಚಶಬ್ದವು ತಾನಿದ್ದ ಸ್ಥಳದಲ್ಲಿ ಅನ್ವಯವನ್ನು ಹೊಂದುವ ಬದಲು ಬೇರೆಡೆ ಅನ್ವಯವನ್ನು ಹೊಂದಿದರೆ ಅದು ಭಿನ್ನಕ್ರಮದಿಂದ ಅನ್ವಯವನ್ನು ಪಡೆಯುವ ಶಬ್ದವಾಗುವುದು. ಪ್ರಕೃತ ಸೂತ್ರದಲ್ಲಿರುವ ಚಶಬ್ದವು ತಾನಿರುವ ಸ್ಥಳವನ್ನು ಬಿಟ್ಟು ವ್ಯಪದೇಶಪದದೊಂದಿಗೆ ಅನ್ವಯವನ್ನು ಪಡೆದರೆ ಅದು ಭಿನ್ನಕ್ರಮದಿಂದ ಅನ್ವಯವೆನಿಸುವುದು.

**ಭಾ– 'ತಸ್ಮಿನ್ ಕಾಲೇ ಮಹಾರಾಜ ರಾಮ ಏವಾಭಿಧೀಯತೇ।**
**ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ।'**
**ಇತಿ ಚ ಸ್ಕಾಂದೇ ॥ ೨೬ ॥**

'ಹೇ ಮಹಾರಾಜ! ಹೇಗೆ ಪುರುಷಸೂಕ್ತದಲ್ಲಿ ವಿಷ್ಣುವೇ ಹೇಳಲ್ಪಡು-ವನೋ ಹಾಗೆ ಆ ತ್ರೇತಾಯುಗದಲ್ಲಿ ಎಲ್ಲ ಪುರುಷನಾಮಗಳಿಂದ ರಾಮನೇ ಹೇಳಲ್ಪಡುತ್ತಿದ್ದನು' - ಎಂದು ಸ್ಕಾಂದಪುರಾಣದಲ್ಲಿಯೂ ಹೇಳಲಾಗಿದೆ.

(ಭಾ.ದೀ.) ನನು ಪುರುಷಸೂಕ್ತಂ ನ ವಿಷ್ಣುಪ್ರಕರಣಂ, ಕಿಂತು ಅನ್ಯಪ್ರಕರಣ-ಮೇವ। ನ ಚ ಯಜ್ಞಶ್ರುತಿವಿರೋಧಃ। ಪಶುರೂಪಾನ್ಯಪ್ರಕರಣೇ ತದನ್ಯವಿಷ್ಣುಶ್ರುತೇ-

ರಯೋಗಾತ್ ಇತಿ ವಾಚ್ಯಮ್ । ತಸ್ಯಾಃ ಪ್ರಾಸಂಗಿಕತ್ವಸಂಭವಾತ್ । ನ ಚ ತತ ಏವ ಭೂತಾದಿಪಾದತ್ವಸ್ಯ ವಿಷ್ಣುಲಿಂಗತ್ವನಿಶ್ಚಯಃ । ತಥಾಽಪ್ಯಸಿದ್ಧಿಃ । 'ಪಾದೋಽಸ್ಯ ವಿಶ್ವಾ ಭೂತಾನಿ' ಇತಿ ಶ್ರುತೇರ್ಭೂತಾದಿಪಾದೇ ಯಜ್ಞಶ್ರುತೇರಭಾವಾತ್ ಇತ್ಯತಃ ಪುರುಷ-ಸೂಕ್ತೋಕ್ತಸ್ಯ ವಿಷ್ಣುತ್ವೇ ಸ್ಮೃತಿಂ ಚಾಽಽಹ – **ತಸ್ಮಿನ್ನಿತಿ** ॥ 'ಮಹಾರಾಜ' ಇತಿ ಕಸ್ಯಚಿತ್ ಸಂಬೋಧನಂ ರಾಮವಿಶೇಷಣಂ ವಾ । ತಥಾತ್ವೇ ದೀರ್ಘಃ ಸ್ಯಾತ್ । ತಥಾಚ – ಹೇ ಮಹಾರಾಜ! ತಸ್ಮಿನ್ ತ್ರೇತಾಯುಗೇ ಸರ್ವೈಃ ಪುರುಷನಾಮಭೀ ರಾಮ ಏವಾಭಿ-ಧೀಯತೇ ಇತ್ಯರ್ಥಃ।

ಅತ ಏವಾಂಶಾಧಿಕರಣೇ –

''ನಕ್ಷತ್ರಮಾನಗಣಿತಂ ತ್ರಯೋದಶಸಹಸ್ರಕಮ್ ।
ಬ್ರಹ್ಮಲೋಕಸಮಂ ಚಕ್ರೇ ಸಮಸ್ತಂ ಕ್ಷಿತಿಮಂಡಲಮ್ ॥
ರಾಮೋ ರಾಮ ಇತಿ ಹ್ಯಾಖ್ಯಾ ಸರ್ವೇಷಾಮಭವತ್ ತದಾ ।
ಸರ್ವೋ ರಾಮಮಯೋ ಲೋಕೋ ಯದಾ ರಾಮಸ್ತ್ವಪಾಲಯತ್ ॥
– ಇತಿ ಸ್ಕಾಂದೇ''

ಇತ್ಯುಕ್ತಂ ತತ್ವಪ್ರದೀಪೇ ।

ಅತ್ರ ದೃಷ್ಟಾಂತಮಾಹ – **ಯಥೇತಿ** ॥ ಯಥಾ ಕೃತ್ಸ್ನೇ ಪೌರುಷೇ ಸೂಕ್ತೇ ವಿಷ್ಣುರೇವ ನ ತ್ವನ್ಯಃ। ಪಶುಃ ನರಃ ಪ್ರಾಸಂಗಿಕತಯಾಽಭಿಧೀಯತೇ ಇತ್ಯರ್ಥಃ। ಅನೇನ ಸಿದ್ಧಸ್ಯೈವ ದೃಷ್ಟಾಂತತ್ವಾತ್ ಪುರುಷಸೂಕ್ತಸ್ಯ ವಿಷ್ಣುಪರತ್ವಂ ಸಿದ್ಧಮಿತಿ ಭಾವಃ । '**ಸ್ಕಾಂದೇ**' ಇತ್ಯನಂತರಂ 'ಏತದುಕ್ತಮ್' ಇತಿ ಶೇಷಃ । ಅಸ್ಯ '**ಸ ಹಿ**' ಇತಿ ಪೂರ್ವ-ವಾಕ್ಯೇನಾನ್ವಯಃ ॥

**ಶಂಕೆ** – ಪುರುಷಸೂಕ್ತವು, ವಿಷ್ಣುವಿಗೆ ಸಂಬಂಧಿಸಿದ ಪ್ರಕರಣವಲ್ಲ. ವಿಷ್ಣುಭಿನ್ನನಿಗೆ ಸಂಬಂಧಿಸಿದ ಪ್ರಕರಣವೇ ಆಗಿದೆ. ಹಾಗಿದ್ದ ಪಕ್ಷದಲ್ಲಿ ಪಶುವೆಂಬ ಭಿನ್ನವಸ್ತುವಿಗೆ ಸಂಬಂಧಪಟ್ಟ ಪ್ರಕರಣದಲ್ಲಿ ಅದಕ್ಕಿಂತಲೂ ಭಿನ್ನವಾದ ವಿಷ್ಣುವಾಚಕ ಪದವಿರುವುದು ಅಯುಕ್ತವಾದದ್ದರಿಂದ ವಿಷ್ಣುವಾಚಕವಾದ ಯಜ್ಞಪದದಿಂದ ವಿರೋಧಬರುವುದು

ಎಂದರೆ ಅದು ಸರಿಯಲ್ಲ. ಏಕೆಂದರೆ, ಪ್ರಾಸಂಗಿಕವಾಗಿ ವಿಷ್ಣುವಾಚಕವಾದ ಯಜ್ಞ-ಪದವು ಅಲ್ಲಿರುವ ಸಂಭವವಿದೆ. ಯಜ್ಞಪದದ ಆಧಾರದಿಂದ ಭೂತಾದಿಪಾದತ್ವವು ವಿಷ್ಣುವಿನ ಅಸಾಧಾರಣಧರ್ಮವೆಂದು ನಿರ್ಣಯಿಸುವುದೂ ಯುಕ್ತವಲ್ಲ. ಏಕೆಂದರೆ, 'ಪಾದೋಽಸ್ಯ ವಿಶ್ವಾ ಭೂತಾನಿ' ಎಂದೇ ಶ್ರುತಿವಾಕ್ಯವಿದೆ. ಆ ವಾಕ್ಯದಲ್ಲಿ ಭೂತಾದಿ-ಪಾದವನ್ನು ಉದ್ದೇಶಿಸಿ ಯಜ್ಞಪದವು ಶ್ರುತವಾಗಿಲ್ಲವಾದ್ದರಿಂದ ಅಸಿದ್ಧಿದೋಷ ಬರುವುದು.

ಈ ಶಂಕೆಯನ್ನು ಪರಿಹರಿಸಲು ಭಾಷ್ಯಕಾರರು ಪುರುಷಸೂಕ್ತಪ್ರತಿಪಾದ್ಯನು ವಿಷ್ಣು-ವೇ ಆಗಿದ್ದಾನೆ ಎಂಬ ವಿಷಯದಲ್ಲಿ 'ತಸ್ಮಿನ್' ಎಂಬ ಸ್ಮೃತಿವಾಕ್ಯವನ್ನು ಪ್ರಮಾಣವಾಗಿ ಉದಾಹರಿಸುತ್ತಿದ್ದಾರೆ. ಇಲ್ಲಿ ಮಹಾರಾಜ ಎಂಬುದಾಗಿ ಒಬ್ಬ ರಾಜನನ್ನು ಕುರಿತು ಮಾಡಿದ ಸಂಬೋಧನೆಯಾಗಿದೆ; ಅಥವಾ ಈ ಪದವು ರಾಮನಿಗೆ ವಿಶೇಷಣವಾಗಿದೆ. ಆದರೆ ಆ ಪಕ್ಷದಲ್ಲಿ (೧)ಮಹಾರಾಜೋ ಎಂಬುದಾಗಿ ದೀರ್ಘವಿರಬೇಕಾಗುವುದು. ತಥಾಚ ಹೇ ಮಹಾರಾಜ ತಸ್ಮಿನ್ - ಆ ತ್ರೇತಾಯುಗದಲ್ಲಿ ಎಲ್ಲ ಪುರುಷರ ನಾಮ-ಗಳಿಂದ ರಾಮನೇ ಹೇಳಲ್ಪಡುತ್ತಿದ್ದನು ಎಂದು ಅರ್ಥ.

ಆದ್ದರಿಂದಲೇ ಅಂಶಾಧಿಕರಣದಲ್ಲಿ –

''ನಕ್ಷತ್ರಮಾನಗಣಿತಂ ತ್ರಯೋದಶಸಹಸ್ರಕಮ್ ।
ಬ್ರಹ್ಮಲೋಕಸಮಂ ಚಕ್ರೇ ಸಮಸ್ತಂ ಕ್ಷಿತಿಮಂಡಲಮ್ ॥

ರಾಮೋ ರಾಮ ಇತಿ ಹ್ಯಾಖ್ಯಾ ಸರ್ವೇಷಾಮಭವತ್ ತದಾ ।
ಸರ್ವೋ ರಾಮಮಯೋ ಲೋಕೋ ಯದಾ ರಾಮಸ್ತ್ವಪಾಲಯತ್ ॥

'ನಕ್ಷತ್ರಮಾನದ ಪ್ರಕಾರವಾಗಿ ಹದಿಮೂರು ಸಹಸ್ರವರ್ಷಗಳ ಕಾಲ ಶ್ರೀರಾಮನು ಸಮಸ್ತಭೂಮಂಡಲವನ್ನು ಬ್ರಹ್ಮಲೋಕಕ್ಕೆ ಸಮಾನವಾದುದನ್ನಾಗಿ ಮಾಡಿದನು. ಆಗ ಎಲ್ಲರಿಗೂ ರಾಮ ರಾಮ ಎಂದೇ ಹೆಸರಿದ್ದಿತು. ರಾಮನು ರಾಜ್ಯಪಾಲನೆ ಮಾಡುವ ಸಮಯದಲ್ಲಿ ಸಮಸ್ತಲೋಕವೂ ರಾಮಮಯವೇ ಆಗಿತ್ತು' – ಎಂದು ಸ್ಕಾಂದದಲ್ಲಿ ಹೇಳಿದೆ – ಎಂದು ತತ್ವಪ್ರದೀಪದಲ್ಲಿ ಉಲ್ಲೇಖಿಸಿಲಾಗಿದೆ.

ಈ ವಿಷಯದಲ್ಲಿ ಯಥಾ ಎಂಬುದಾಗಿ ದೃಷ್ಟಾಂತವನ್ನು ಹೇಳಲಾಗಿದೆ. ಹೇಗೆ ಸಮಗ್ರಪುರುಷಸೂಕ್ತದಲ್ಲಿ ವಿಷ್ಣುವೇ ಹೇಳಲ್ಪಟ್ಟಿದ್ದಾನೆ ಹೊರತು ಬೇರೊಬ್ಬರಲ್ಲವೋ ಹಾಗೆ. ನರನೆಂಬ ಪಶುವು ಪ್ರಾಸಂಗಿಕವಾಗಿ ಹೇಳಲ್ಪಟ್ಟಿದೆ ಎಂದು ಅರ್ಥ. ಇದರಿಂದ ದೃಷ್ಟಾಂತವಾಗಬೇಕಾದರೆ ಪ್ರಸಿದ್ಧವಾದ ವಿಷಯವೇ ಆಗಬೇಕಾದುದರಿಂದ ಪುರುಷ-ಸೂಕ್ತವು ವಿಷ್ಣುಪರವೆಂಬುದು ಸಿದ್ಧವಾದ ವಿಷಯವೆಂದು ಭಾವ. 'ಸ್ಕಾಂದೇ' ಎಂಬ ಪದದ ನಂತರ 'ಏತದುಕ್ತಮ್' 'ಇದನ್ನು ಹೇಳಲಾಗಿದೆ' ಎಂದು ಶೇಷವನ್ನು ಸೇರಿಸ-ಬೇಕು. ಈ ವಾಕ್ಯಕ್ಕೆ 'ಸ ಹಿ' ಎಂಬ ಹಿಂದಿನ ಭಾಷ್ಯವಾಕ್ಯದೊಂದಿಗೆ ಅನ್ವಯ.

(೧) ಸಂಬೋಧನಪ್ರಥಮಾವಿಭಕ್ತಿಯಲ್ಲಿ ಮಾತ್ರ ವಿಸರ್ಗಲೋಪವಾಗಿ 'ಮಹಾರಾಜ' ಎಂದು ರೂಪವಾಗುವುದು. ರಾಮನಿಗೆ ವಿಶೇಷಣವಾಗಿದ್ದ ಪಕ್ಷ-ದಲ್ಲಿ 'ಮಹಾರಾಜಃ' ಎಂದು ಪದವಿದ್ದು ಸಂಧಿಯಾದಾಗ 'ಮಹಾರಾಜೋ' ಎಂಬ ರೂಪವಿರಬೇಕಾಗುವುದೆಂದು ಭಾವ.

**ಸೂ– ॥ ಓಂ ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯ-ವಿರೋಧಾತ್ ಓಂ ॥**

(ಗಾಯತ್ರಿಯು ದ್ಯುಲೋಕದಲ್ಲಿರುವುದೆಂದು, ಜ್ಯೋತಿಸ್ಸು ದ್ಯು-ಲೋಕದ ಮೇಲೆ ಇರುವುದೆಂದು) ವಿಭಿನ್ನರೀತಿಯಲ್ಲಿ ಉಪದೇಶಿಸಿ-ರುವುದರಿಂದ ವಿಷ್ಣುವೆಂಬ ಒಂದೇ ವಸ್ತು ಇಲ್ಲಿ ಪ್ರತಿಪಾದಿಸಲ್ಪಟ್ಟಿಲ್ಲ ಎಂದರೆ, ಅದು ಸರಿಯಲ್ಲ; ಏಕೆಂದರೆ, ಈ ಎರಡೂ ಉಪದೇಶ-ಗಳಲ್ಲಿ ಯಾವ ವಿರೋಧವೂ ಇಲ್ಲ.

**ಭಾ– 'ತ್ರಿಪಾದಸ್ಯಾಮೃತಂ ದಿವಿ' (ಛಾಂ.೩-೧೨-೬)ಇತಿ ಪೂರ್ವೋಪ-ದೇಶಃ। 'ಪರೋ ದಿವಃ' (ಛಾಂ.೩-೧೩-೭)ಇತಿ ಪಂಚಮ್ಯಂತಃ ಪಶ್ಚಿಮಃ। ತಸ್ಮಾನ್ನೈಕಂ ವಸ್ತ್ವತ್ರೋಚ್ಯತ ಇತಿ ಚೇತ್,**

ತ್ರಿಪಾದಸ್ಯಾಮೃತಂ ದಿವಿ ಎಂದು ಹಿಂದಿನ ವಾಕ್ಯವಿದೆ. ಪರೋ ದಿವಃ

ಎಂಬ ಮುಂದಿನ ವಾಕ್ಯವು ಪಂಚಮ್ಯಂತವಾದ ಪದವನ್ನು ಹೊಂದಿದೆ. ಆದ್ದರಿಂದ ಇಲ್ಲಿ ಒಂದು ವಸ್ತುವನ್ನು ಹೇಳಲಾಗಿಲ್ಲ ಎಂದರೆ,

(ಭಾ.ದೀ.) ಉಕ್ತಮಾಕ್ಷಿಪ್ಯ ಸಮಾದಧತ್ ಸೂತ್ರಮ್ ಉಪನ್ಯಸ್ಯತಿ – **ಉಪದೇಶೇತಿ** ॥ '**ಉಪದೇಶಯೋಃ**' ಸಪ್ತಮೀಪಂಚಮೀಯುತವಾಕ್ಯಯೋಃ '**ಉಪದೇಶೇನ**' ಗಾಯತ್ರೀಜ್ಯೋತಿಷೋಃ ದ್ಯುಸ್ಥತ್ವದಿವಃಪರತ್ವರೂಪವಿರುದ್ಧಧರ್ಮೋಕ್ತ್ಯಾ '**ಭೇದಾತ್**' ವಿರೋಧಾನ್ನ ದ್ವಯೋರ್ವಿಷ್ಣ್ವಾಖ್ಯಮ್ ಏಕಂ ವಸ್ತು ಪ್ರತಿಪಾದ್ಯಂ, ಕಿಂತು ಭಿನ್ನಮೇವ ಇತಿ ಚೇತ್ – ನ, ಕಿಂತು '**ಉಭಯಸ್ಮಿನ್**' ಉಭಯತ್ರಾಪ್ಯುಪದೇಶೇ ಏಕಮೇವ ಪ್ರತಿಪಾದ್ಯಂ, ಕಥಮ್? **ಅವಿರೋಧಾತ್** ತ್ರಿಸಪ್ತಲೋಕಾಪೇಕ್ಷಯಾ ಸಪ್ತಮೀಪಂಚಮ್ಯೋಃ ಏಕಾರ್ಥತ್ವೇನ ವಿರೋಧಾಭಾವಾದಿತಿ ಸೂತ್ರಯೋಜನಾಮ್ ಅಭಿಪ್ರಯನ್ ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – **ತ್ರಿಪಾದಿತಿ** ॥ **ಪೂರ್ವೋಪದೇಶಃ** ಪೂರ್ವೋಕ್ತಿಃ । **ಪಶ್ಚಿಮಃ** ಪಶ್ಚಾತ್ತನಃ ಉತ್ತರ ಉಪದೇಶಃ ತದ್ಭಿನ್ನೋಽಸ್ತಿ ಇತಿ ಶೇಷಃ । ವಿರೋಧಸ್ಫೋರಣಾಯ **ಪಂಚಮ್ಯಂತ** ಇತ್ಯಾದ್ಯುಕ್ತಿಃ । ಉಪಕ್ರಮಗತಸ್ಯ ಪ್ರಾಬಲ್ಯೋಪಪಾದನಾಯ **ಪೂರ್ವಃ** ಇತ್ಯುಕ್ತಿಃ । ತತಃ ಕಿಮ್? ಇತ್ಯತ ಆಹ – **ತಸ್ಮಾದಿತಿ** ॥ ಯಸ್ಮಾದೇವಂ ಭಿನ್ನೋಪದೇಶದ್ವಯಮಸ್ತಿ ತಸ್ಮಾದತ್ರೋಪದೇಶದ್ವಯೇ ಗಾಯತ್ರೀಜ್ಯೋತಿಃಶಬ್ದಾಭ್ಯಾಂ ನೈಕಂ ವಸ್ತು ವಿಷ್ಣ್ವಾಖ್ಯಮುಚ್ಯತೇ । ಕುತಃ? ಯತೋಽತ್ರ **ನೈಕಮ್** ಅನೇಕಂ ವಸ್ತು ದ್ಯುಸ್ಥತ್ವದಿವಃಪರತ್ವರೂಪಂ ಧರ್ಮದ್ವಯಮುಚ್ಯತೇ । ಕಿಂತ್ವತ್ರ **ನೈಕಮ್** ಅನೇಕಂ ವಸ್ತುದ್ವಯಮ್ ಉಚ್ಯತೇ ಇತಿ ಯೋಜನಾ ।

ಹಿಂದೆ ಹೇಳಿದ ವಿಷಯವನ್ನು ಆಕ್ಷೇಪಿಸಿ, ಸಮಾಧಾನವನ್ನು ಹೇಳುವ ಸೂತ್ರವನ್ನು ಉಪದೇಶ ಎಂಬುದಾಗಿ ಉಲ್ಲೇಖಿಸುತ್ತಿದ್ದಾರೆ. ಉಪದೇಶಯೋಃ - ಸಪ್ತಮೀವಿಭಕ್ತಿ ಮತ್ತು ಪಂಚಮೀವಿಭಕ್ತಿಗಳನ್ನು ಹೊಂದಿರುವ ವಾಕ್ಯಗಳಲ್ಲಿ; ಉಪದೇಶೇನ - ಗಾಯತ್ರೀ ಮತ್ತು ಜ್ಯೋತಿಸ್ಸುಗಳಿಗೆ ದ್ಯುಲೋಕದಲ್ಲಿರುವಿಕೆ, ದ್ಯುಲೋಕದ ಮೇಲಿರುವಿಕೆ ಎಂಬ ವಿರುದ್ಧಧರ್ಮಗಳನ್ನು ಹೇಳಿರುವಕಾರಣ, ಭೇದಾತ್- ವಿರೋಧ -ವಿರುವುದರಿಂದ ಈ ಎರಡೂ ವಾಕ್ಯಗಳಲ್ಲಿ ವಿಷ್ಣುವೆಂಬ ಒಂದು ವಸ್ತುವನ್ನು ಪ್ರತಿ-

ಪಾದಿಸಲಾಗಿಲ್ಲ. ಅದರ ಬದಲು ಭಿನ್ನವಾದ ವಸ್ತುಗಳೇ ಪ್ರತಿಪಾದ್ಯವಾಗಿವೆ ಎಂದರೆ, ಅದು ಸರಿಯಲ್ಲ. 'ಉಭಯಸ್ಮಿನ್'- ಎರಡೂ ವಾಕ್ಯಗಳಲ್ಲೂ ಕೂಡ ಒಂದೇ ವಸ್ತುವೇ ಪ್ರತಿಪಾದ್ಯವಾಗಿದೆ. ಹೇಗೆಂದರೆ, ಅವಿರೋಧಾತ್ - ಏಕೆಂದರೆ, ಮೂರು ಮತ್ತು ಏಳು ಲೋಕಗಳ ದೃಷ್ಟಿಯಿಂದ ಸಪ್ತಮೀ ಮತ್ತು ಪಂಚಮೀ ವಿಭಕ್ತಿಗಳು ಒಂದೇ ವಿಷಯವನ್ನು ಹೇಳುವುದರಿಂದ ವಿರೋಧವಿಲ್ಲ– ಎಂದು ಸೂತ್ರದ ಪದಗಳ ಯೋಜನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮೊದಲು ಆಕ್ಷೇಪಾಂಶವನ್ನು ತ್ರಿಪಾತ್ ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಪೂರ್ವೋಪದೇಶಃ ಎಂದರೆ ಮೊದಲು ಇರುವ ವಾಕ್ಯ. ಪಶ್ಚಿಮಃ ಎಂದರೆ ಅನಂತರದ ಅಂದರೆ ಮುಂದಿನ ವಾಕ್ಯ. 'ತದ್ಭಿನ್ನಃ ಅಸ್ತಿ' ಎಂಬ ಪದಗಳು ಇಲ್ಲಿ ಶೇಷವಾಗಿವೆ. ವಿರೋಧವನ್ನು ಸ್ಪಷ್ಟಪಡಿಸಲು ಪಂಚಮ್ಯಂತ ಇತ್ಯಾದಿ ಪದಗಳನ್ನು ಪ್ರಯೋಗಮಾಡಲಾಗಿದೆ. ಉಪಕ್ರಮದಲ್ಲಿರುವ ವಾಕ್ಯ ಪ್ರಬಲವಾದದ್ದು ಎಂಬುದನ್ನು ಸೂಚಿಸಲು 'ಪೂರ್ವ' ಎಂದು ಹೇಳಲಾಗಿದೆ. ಅದರಿಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ ತಸ್ಮಾತ್ ಎಂದು ಹೇಳಲಾಗಿದೆ. ಯಾವ ಕಾರಣದಿಂದ ಹೀಗೆ ವಿರುದ್ಧವಾದ ಎರಡು ವಾಕ್ಯಗಳಿವೆಯೋ ಆದ್ದರಿಂದ ಈ ಎರಡು ವಾಕ್ಯಗಳಲ್ಲಿ ಇರುವ ಗಾಯತ್ರೀ ಮತ್ತು ಜ್ಯೋತಿಸ್ ಶಬ್ದಗಳಿಂದ ವಿಷ್ಣುವೆಂಬ ಒಂದೇ ವಸ್ತು ಹೇಳಲ್ಪಟ್ಟಿಲ್ಲ. ಏಕೆಂದರೆ? ಇಲ್ಲಿ ನೈಕಮ್ - ಅನೇಕವಸ್ತುಗಳು ಅಂದರೆ ದ್ಯುಸ್ಥತ್ವ, ದಿವಃಪರತ್ವ ಎಂಬ ಧರ್ಮದ್ವಯಗಳು ಹೇಳಲ್ಪಟ್ಟಿವೆ. ಆದ್ದರಿಂದಲೇ ಇಲ್ಲಿ ನೈಕಮ್ - ಅನೇಕ ಅಂದರೆ ಎರಡು ವಸ್ತುಗಳು ಹೇಳಲ್ಪಟ್ಟಿವೆ – ಎಂದು ಯೋಜನೆ.

**ಭಾ– ನ। ತ್ರಿಸಪ್ತಲೋಕಾಪೇಕ್ಷಯೋಭಯಸ್ಮಿನ್ನಪ್ಯವಿರೋಧಾತ್ ॥ ೨೭ ॥**

**॥ ಇತಿ ಛಂದೋಽಭಿಧಾನಾಧಿಕರಣಮ್ ॥ 11 ॥**

ಇದು ಸರಿಯಲ್ಲ. ಏಕೆಂದರೆ ಮೂರು ಮತ್ತು ಏಳು ಲೋಕಗಳ ದೃಷ್ಟಿಯಿಂದ ಎರಡು ವಾಕ್ಯಗಳಲ್ಲಿ ಯಾವ ವಿರೋಧವೂ ಇಲ್ಲ.

(ಭಾ.ದೀ.) (೧) ಸಿದ್ಧಾಂತಯತ್ಸೂತ್ರಾಂಶಂ ವ್ಯಾಚಷ್ಟೇ – **ನೇತಿ ॥** ನಾತ್ರ ವಸ್ತುದ್ವಯಮ್ ಉಚ್ಯತೇ ಇತ್ಯರ್ಥಃ। 'ಕಿಂತು' ಇತಿ ಶೇಷಃ; 'ಏಕಂ ವಸ್ತು ಉಚ್ಯತೇ'

ಇತ್ಯನುಷಜ್ಯತೇ । 'ಉಭಯಸ್ಮಿನ್' ಇತಿ ಸಾಧ್ಯಾಂತರ್ಗತಮ್ । ಅಪಿಶಬ್ದೋ 'ನ ಕೇವಲಮೇಕತ್ರ, ಕಿಂತು ಉಭಯತ್ರಾಪಿ' ಇತಿ ಸಮುಚ್ಚಯೇ । ತಥಾಚ – ಕಿಂತು ಉಭಯಸ್ಮಿನ್ ಉಪದೇಶೇ ಏಕಮೇವ ವಿಷ್ಣ್ವಾಖ್ಯಂ ವಸ್ತು ಉಚ್ಯತೇ ಇತಿ ಯೋಜನಾ। ವಿರೋಧಾತ್ ಕಥಮೇತದ್ ಯುಜ್ಯತೇ? ಇತ್ಯತ ಆಹ – **ತ್ರಿಸಪ್ತಲೋಕಾಪೇಕ್ಷಯೇತಿ** ॥ ತ್ರಿಲೋಕವಿವಕ್ಷಯಾ ಸಪ್ತಲೋಕವಿವಕ್ಷಯಾ ಚ '**ಅವಿರೋಧಾತ್**' ಉಭಯತ್ರಾಪ್ಯೇಕವಸ್ತ್ವಭಿಧಾನೇ ವಿರೋಧಾಭಾವಾತ್ ಇತ್ಯರ್ಥಃ।

ಸಿದ್ಧಾಂತವನ್ನು ಹೇಳುವ ಸೂತ್ರಾಂಶವನ್ನು 'ನ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಇಲ್ಲಿ ಎರಡು ವಸ್ತುಗಳು ಹೇಳಲ್ಪಟ್ಟಿಲ್ಲ ಎಂದು ಅರ್ಥ. 'ಕಿಂತು' ಎಂದು ಶೇಷವನ್ನು ಸೇರಿಸಬೇಕು. 'ಏಕಂ ವಸ್ತು ಉಚ್ಯತೇ' ಎಂಬ ಪದಗಳು ಹಿಂದಿನ ವಾಕ್ಯದಿಂದ ಇಲ್ಲಿ ಅನುವೃತ್ತಿಯನ್ನು ಹೊಂದುತ್ತವೆ. 'ಉಭಯಸ್ಮಿನ್' ಎಂಬ ಪದವು ಸಾಧ್ಯಭಾಗದಲ್ಲಿ ಅಂತರ್ಗತವಾಗುವುದು. ಅಪಿಶಬ್ದವು ಕೇವಲ ಒಂದು ಕಡೆಯಲ್ಲಲ್ಲ; ಎರಡೂ ವಾಕ್ಯಗಳಲ್ಲೂ ಎಂಬುದಾಗಿ ಸಮುಚ್ಚಯವನ್ನು ಹೇಳುವುದು. ತಥಾಚ – 'ಉಭಯಸ್ಮಿನ್ನಪಿ ಉಪದೇಶೇ ಏಕಮೇವ ವಿಷ್ಣ್ವಾಖ್ಯಂ ವಸ್ತೂಚ್ಯತೇ' ಎರಡೂ ವಾಕ್ಯಗಳಲ್ಲಿ ವಿಷ್ಣುವೆಂಬ ಒಂದೇ ವಸ್ತುವು ಹೇಳಲ್ಪಟ್ಟಿದೆ ಎಂದು ಪದಗಳ ಯೋಜನೆಯಾಗುವುದು. ವಿರೋಧ ಬರುವುದರಿಂದ ಇದು ಹೇಗೆ ಯುಕ್ತವಾಗುವುದು? ಎಂಬ ಶಂಕೆಗೆ ಉತ್ತರವಾಗಿ ತ್ರಿಸಪ್ತಲೋಕಾಪೇಕ್ಷಯಾ ಎಂದು ಹೇಳಲಾಗಿದೆ. ಮೂರು ಲೋಕಗಳ ಅಭಿಪ್ರಾಯದಿಂದ ಮತ್ತು ಏಳು ಲೋಕಗಳ ಅಭಿಪ್ರಾಯದಿಂದ **ಅವಿರೋಧಾತ್** - ಎರಡೂ ಕಡೆಗಳಲ್ಲಿ ಒಂದೇ ವಸ್ತುವನ್ನು ಹೇಳಿದ ಪಕ್ಷದಲ್ಲಿ ವಿರೋಧವಿಲ್ಲವಾದ್ದರಿಂದ ಎಂದು ಅರ್ಥ.

(ಭಾ.ದೀ.) ಅಯಂ ಭಾವಃ – ಯದಾ 'ಭೂಃ, ಭುವಃ, ಸ್ವಃ' ಇತಿ ಲೋಕತ್ರಯವಿವಕ್ಷಾ, ತದಾ ಲಕ್ಷಯೋಜನೋಚ್ಚ್ರಿತಾಂತರಿಕ್ಷಾಖ್ಯಭುವಃ ಉಪರಿತನಸ್ಯ ಸರ್ವಸ್ಯಾಪಿ ದ್ಯುತ್ವಾತ್ ಶ್ವೇತದ್ವೀಪಾನಂತಾಸನವೈಕುಂಠಾನಾಂ ಚ ಅಂತರಿಕ್ಷಾದುಪರಿತನತ್ವಾತ್ ತತ್ರತ್ಯಂ ನಾರಾಯಣವಾಸುದೇವವೈಕುಂಠಾಖ್ಯಂ ತ್ರಿಪಾಚ್ಛಬ್ದೋಕ್ತಂ ರೂಪತ್ರಯಂ ದಿವಿ ತಿಷ್ಠತೀತ್ಯುಚ್ಯತೇ ಇತಿ ನ ಸಪ್ತಮ್ಯಂತೋಪದೇಶವಿರೋಧಃ।

(೨) ಅಭಿಪ್ರಾಯ ಹೀಗಿದೆ – ಯಾವಾಗ ಭೂಲೋಕ, ಭುವರ್ಲೋಕ, ಸ್ವರ್ಲೋಕ ಎಂಬುದಾಗಿ ಮೂರು ಲೋಕಗಳ ವಿವಕ್ಷೆ ಇರುವುದೋ ಆಗ ಲಕ್ಷ-ಯೋಜನಗಳಷ್ಟು ಎತ್ತರವಾದ, ಅಂತರಿಕ್ಷವೆಂದು ಕರೆಯಲ್ಪಡುವ ಭುವರ್ಲೋಕದ ಮೇಲಿರುವ ಎಲ್ಲವೂ ದ್ಯುಲೋಕವಾಗಿರುವುದರಿಂದ, ಶ್ವೇತದ್ವೀಪ, ಅನಂತಾಸನ, ವೈಕುಂಠಗಳು ಅಂತರಿಕ್ಷಲೋಕದ ಮೇಲ್ಭಾಗದಲ್ಲಿರುವುದರಿಂದ ಅಲ್ಲಿರುವ ನಾರಾ-ಯಣ, ವಾಸುದೇವ, ವೈಕುಂಠವೆಂಬ ತ್ರಿಪಾತ್ ಎಂಬ ಶಬ್ದದಿಂದ ಹೇಳಲ್ಪಡುವ ಮೂರು ರೂಪಗಳು ದ್ಯುಲೋಕದಲ್ಲಿರುವುದು ಎಂದು ಹೇಳಲ್ಪಡುವುದು. ಆದ್ದರಿಂದ ಸಪ್ತಮ್ಯಂತಪದದಿಂದ ಕೂಡಿರುವ ವಾಕ್ಯವಿರೋಧವಿಲ್ಲ.

(ಭಾ.ದೀ.) ನ ಚ

'ಪೃಥಿವೀಸ್ಥೇಷು ಸರ್ವೋಚ್ಚೋ ಲೋಕೋಽನಂತಾಸನಾತ್ಮಕಃ ।
ಅಂತರಿಕ್ಷಾತ್ಮಕೇಭ್ಯಶ್ಚ ಶ್ವೇತದ್ವೀಪಸ್ಥಿತೋ ಹರಿಃ ॥'

ಇತ್ಯುಕ್ತೇರನಂತಾಸನಸ್ಯ ನಾಂತರಿಕ್ಷಾತ್ ಉಪರಿತನತಾ ಇತಿ ಶಂಕ್ಯಮ್ । ತಸ್ಯ ಪೃಥಿವೀಸ್ಥತ್ವೇಽಪಿ ಬಹುಲಕ್ಷಯೋಜನೋಚ್ಚ್ರಿತತ್ವೇನ ಏಕಲಕ್ಷಯೋಜನೋಚ್ಚ್ರಿತಾಂತ-ರಿಕ್ಷಾದುಪರಿತನತ್ವೋಪಪತ್ತೇಃ । ಸರ್ವಪೃಥಿವೀಸ್ಥೋಚ್ಚತ್ವೋಕ್ತ್ಯಾ ತು ನ ಪೃಥಿವೀ-ಸ್ಥಾನ್ಯೋಚ್ಚತ್ವಯೋಗೋ ವ್ಯಾವರ್ತ್ಯತೇ । ಕಿಂತು ಪೃಥಿವೀಸ್ಥೋಚ್ಚತ್ವಾಯೋಗಃ । ಯದಾ ತು ಭೂರ್ಭುವಃಸ್ವರ್ಮಹರ್ಜನಸ್ತಪಃಸತ್ಯಮಿತಿ ಸಪ್ತಲೋಕವಿವಕ್ಷಾ ತದಾ ಇಂದ್ರಸದನಸ್ಯ ದ್ಯುತ್ವಾತ್ ತದುಚ್ಚಸ್ಯಾಪ್ಯುಪರಿಸ್ಥಿತತ್ವೇನ ತತ್ಸಜಾತೀಯಸ್ಯ ವೈಕುಂಠಸ್ಯ ದಿವಃ ಪರತ್ವಮ್ ।

'ಪೃಥಿವೀಸ್ಥೇಷು ಸರ್ವೋಚ್ಚೋ ಲೋಕೋಽನಂತಾಸನಾತ್ಮಕಃ ।
ಅಂತರಿಕ್ಷಾತ್ಮಕೇಭ್ಯಶ್ಚ ಶ್ವೇತದ್ವೀಪಸ್ಥಿತೋ ಹರಿಃ ॥'

'ಪೃಥಿವಿಯಲ್ಲಿರುವ ಎಲ್ಲಾ ಲೋಕಗಳಿಗಿಂತಲೂ ಅನಂತಾಸನವೆಂಬ ಲೋಕವು ಮೇಲಿರುವುದು. ಅದು ಅಂತರಿಕ್ಷವೆಂದು ಹೇಳುವ ಲೋಕಗಳಿಗಿಂತಲೂ ಮೇಲಿರುವ ಶ್ವೇತದ್ವೀಪದಲ್ಲಿ ಶ್ರೀಹರಿಯು ಇರುವನು' – ಎಂದು ಹೇಳಿರುವುದರಿಂದ ಅನಂತಾ-

ಸನವು ಅಂತರಿಕ್ಷಕ್ಕಿಂತಲೂ ಮೇಲಿರುವುದು ಸಾಧ್ಯವಿಲ್ಲ ಎಂದು ಶಂಕಿಸಿದರೆ ಅದು ಯುಕ್ತವಲ್ಲ. ಆ ಅನಂತಾಸನವು ಪೃಥಿವಿಯಲ್ಲಿ ಇರುವುದಾದರೂ ಅನೇಕಲಕ್ಷ-ಯೋಜನಗಳಷ್ಟು ಉನ್ನತವಾಗಿರುವುದರಿಂದ ಒಂದು ಲಕ್ಷ ಯೋಜನದಷ್ಟು ಉನ್ನತ-ವಾಗಿರುವ ಅಂತರಿಕ್ಷಲೋಕಕ್ಕಿಂತಲೂ ಮೇಲ್ಭಾಗದಲ್ಲಿದೆ ಎನ್ನುವುದು ಯುಕ್ತವೇ ಆಗಿದೆ. ಪೃಥಿವಿಯಲ್ಲಿರುವ ಎಲ್ಲದಕ್ಕಿಂತಲೂ ಉಚ್ಚವಾಗಿದೆ ಎಂಬ ಮಾತಿಗೆ 'ಪೃಥಿವಿಯಲ್ಲಿ ಇಲ್ಲದಿರುವ ಅನ್ಯಲೋಕಗಳಿಗಿಂತ ಉಚ್ಚತ್ವವಿಲ್ಲವೆಂದು ನಿಷೇಧಿಸುವ ತಾತ್ಪರ್ಯವಿಲ್ಲ ಎಂದು ಅರ್ಥವಲ್ಲ. ಅದರ ಬದಲು ಪೃಥಿವೀಸ್ಥವಾದ ಇತರಲೋಕಗಳಿಗಿಂತ ಉಚ್ಚ-ವಲ್ಲ ಎಂಬುದನ್ನು ನಿಷೇಧಿಸುವ ಅಭಿಪ್ರಾಯವು ಆ ವಾಕ್ಯಕ್ಕಿದೆ. ಯಾವಾಗ ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಮ್ ಎಂಬ ಏಳು ಲೋಕಗಳ ವಿವಕ್ಷೆ ಇರುವುದೋ ಆಗ ಇಂದ್ರಸದನವೂ ದ್ಯುಲೋಕವೆನಿಸುವುದು, ಅದಕ್ಕಿಂತಲೂ ಉಚ್ಚ-ವಾದದ್ದೆಲ್ಲವೂ ಕೂಡ ದ್ಯುಲೋಕದ ಮೇಲೆ ಇರುವ ಕಾರಣ ಅಂತಹ ವೈಕುಂಠ-ಲೋಕವು 'ದಿವಃ ಪರ' - ಅಂದರೆ ದ್ಯುಲೋಕದ ಮೇಲಿರುವ ಲೋಕವೆಂದೆ-ನಿಸುವುದು.

(ಭಾ.ದೀ.)

'ಪೃಥಿವ್ಯಾಂ ದ್ಯೌರ್ಮಹಾಮೇರುರಾಕಾಶೇ ಸೂರ್ಯಮಂಡಲಮ್ ।
ದಿವೀಂದ್ರಸದನಂ ಚೈವ ತತ್ಪರೇ ತು ದಿವಃ ಪರೇ ॥'

ಇತಿ ಸ್ಮೃತೇರ್ಮೇರೋರಪಿ ದ್ಯುತ್ವಾತ್ ತದುಚ್ಚಸ್ಯ ಭೂಸ್ಪೃಷ್ಟತ್ವೇನ ತತ್ಸಜಾ-ತೀಯಾನಂತಸನಸ್ಯಾಪಿ ದಿವಃ ಪರತಾ । ಏವಂ ಸೂರ್ಯಮಂಡಲಸ್ಯಾಪಿ ದ್ಯುತ್ವಾತ್ ತದುಚ್ಚಸ್ಯೋಪರಿಸ್ಥಿತತ್ವೇನ ತತ್ಸಜಾತೀಯಸ್ಯ ಭೂಮೇಃ ಕಿಂಚಿದಂತರಿತಸ್ಯ ಸ್ವರ್ಗ-ಸಮೋನ್ನತಸ್ಯ ಶ್ವೇತದ್ವೀಪಸ್ಯಾಪಿ ದಿವಃ ಪರತ್ವಮಸ್ತೀತಿ ನ ಪಂಚಮ್ಯಂತೋಪದೇಶ-ವಿರೋಧೋಽಪೀತಿ । ದ್ಯುಪರತ್ವಂ ಚ ಸಂಭಾವಿತಸಜಾತೀಯದ್ಯುಪರತ್ವಮಿತಿ ನ ಯಾವತ್ತ್ವಯತ್ಕಿಂಚಿತ್ವಮುಖೇನ ದೂಷಣಾವಕಾಶಃ । ವೈಕುಂಠಸ್ಯ ಸ್ವರ್ಗಲೋಕಾತ್ ಪರತ್ವೇನೈವ ದಿವಃ ಪರತ್ವಸಿದ್ಧಾವಪಿ ತಸ್ಯ 'ಸರ್ವತಃ ಪೃಷ್ಠೇಷು' ಇತ್ಯನೇನೈವ ಉಕ್ತತ್ವಾತ್ ಸ್ವರ್ಗತ್ಯಾಗೇನ ಇಂದ್ರಸದನಸ್ಯ ದ್ಯುತ್ವೋಕ್ತಿಃ ।

'ಪೃಥಿವಿಯಲ್ಲಿ ಮಹಾಮೇರುವು ದ್ಯುಲೋಕವೆನಿಸುವುದು; ಆಕಾಶದಲ್ಲಿ ಸೂರ್ಯ-ಮಂಡಲವು ದ್ಯುಲೋಕವೆನಿಸುವುದು; ಸ್ವರ್ಗದಲ್ಲಿ ಇಂದ್ರಸದನವು ದ್ಯುಲೋಕವೆನಿ-ಸುವುದು; ಅದರ ಮೇಲಿರುವುದೆಲ್ಲವೂ ಕೂಡ ದಿವಃ ಪರಃ - 'ದ್ಯುಲೋಕದ ಮೇಲಿರತಕ್ಕವುಗಳು' ಎಂಬ ಸ್ಮೃತಿಯ ಪ್ರಕಾರ ಮೇರುಪರ್ವತವು ದ್ಯುಲೋಕವೆಂದೆ-ನಿಸುವುದರಿಂದ, ಅದಕ್ಕಿಂತ ಮೇಲಿರುವ, ಭೂಸ್ಪರ್ಶವನ್ನು ಪಡೆದಿರುವ ಕಾರಣ, ಮೇರುಸಜಾತೀಯವಾದ ಅನಂತಾಸನವು, ದಿವಃ ಪರ - ದ್ಯುಲೋಕದ ಮೇಲ್ಭಾಗ-ದಲ್ಲಿರತಕ್ಕದ್ದಾಗುವುದು. ಹಾಗೆಯೇ ಸೂರ್ಯಮಂಡಲವು ದ್ಯುಲೋಕವಾಗಿರುವು-ದರಿಂದ ಅದರ ಮೇಲಿರುವ, ಮೇಲ್ಭಾಗದಲ್ಲಿರುವ ಕಾರಣದಿಂದ ಸೂರ್ಯಮಂಡಲಕ್ಕೆ ಸಜಾತೀಯವಾಗಿರುವ, ಭೂಮಿಯಿಂದ ಸ್ವಲ್ಪ ದೂರವಿರುವ ಸ್ವರ್ಗಲೋಕಕ್ಕೆ ಸಮಾನವಾಗಿ ಉನ್ನತವಾಗಿರುವ ಶ್ವೇತದ್ವೀಪವೂ ದಿವಃ ಪರವಾಗುವುದಾದ್ದರಿಂದ 'ಪರೋ ದಿವಃ' ಎಂದು ಪಂಚಮ್ಯಂತವಾದ 'ದಿವಃ' ಎಂಬ ಪದವಿರುವ ವಾಕ್ಯದ ವಿರೋಧವಿಲ್ಲ. ದ್ಯುಪರತ್ವವು ಸಂಭಾವಿತವಾದ ಸಜಾತೀಯವಾದ ದ್ಯುಲೋಕಕ್ಕಿಂತ ಮೇಲಿರುವಿಕೆ ಎಂಬ ಅರ್ಥವುಳ್ಳದ್ದಾದ್ದರಿಂದ, ಎಲ್ಲಾ ದ್ಯುಪರತ್ವ ಅಥವಾ ಯಾವುದೋ ಒಂದು ದ್ಯುಪರತ್ವವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ದೂಷಿಸಲು ಅವಕಾಶವಿಲ್ಲ. ಯದ್ಯಪಿ ವೈಕುಂಠವು ಸ್ವರ್ಗಲೋಕಕ್ಕಿಂತ ಮೇಲ್ಭಾಗದಲ್ಲಿ ಇರುವುದರಿಂದಲೇ ದ್ಯು-ಲೋಕದ ಮೇಲಿರುವುದು ಎಂದು ಸಿದ್ಧವಾಗುವುದು. ಆದರೂ ಆ ರೀತಿಯ ದಿವಃ-ಪರತ್ವವು 'ಸರ್ವತಃ ಪೃಷ್ಠೇಷು' ಎಂಬ ವಾಕ್ಯದಿಂದಲೇ ಹೇಳಲ್ಪಟ್ಟಿರುವುದರಿಂದ ಸ್ವರ್ಗ-ವನ್ನು ಬಿಟ್ಟು ಇಂದ್ರಸದನವನ್ನು ಇಲ್ಲಿ ದ್ಯುಲೋಕವೆಂದು ಹೇಳಲಾಗಿದೆ.

(ಭಾ.ದೀ.) ನ ಚ ಲೋಕತ್ರಯವಿವಕ್ಷಯೈವ ಅನಂತಾಸನಾದೀನಾಮಪಿ ಮೇರ್ವಾದಿಪರತ್ವೇನ ದಿವಃ ಪರತ್ವಸ್ಯಾಪಿ ಸಿದ್ಧೇಃ ಸಪ್ತಲೋಕವಿವಕ್ಷಾ ವ್ಯರ್ಥಾ ಇತಿ ವಾಚ್ಯಮ್ । ತಥಾ ಸತಿ ವೈಕುಂಠಸ್ಯಾಪಿ ದ್ಯುಶಬ್ದಾರ್ಥನಿವಿಷ್ಟತ್ವೇನ ತಸ್ಯ ಸರ್ವದ್ಯು-ಪರತ್ವಾಸಿದ್ಧ್ಯಾಪತ್ತ್ಯಾ 'ದ್ವ್ಯಾತ್ಮಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ' ಇತಿ ಪ್ರಮಾಣವಿರೋಧಾಪಾತಾತ್ ।

ಛಾಂದೋಗ್ಯಭಾಷ್ಯೇ ತು –

'ಅನಂತಶಯನಂ ಚೈವ ತಥಾऽನಂತಾಸನಂ ಹರೇಃ।
ಬಹುಲಕ್ಷೋಚ್ಛ್ರಿತೇ ನಿತ್ಯೇ ವಿಮಾನೇ ಸಂಸ್ಥಿತಂ ಯತಃ।
ಚಿತ್ರಕೃತ್ಯಾತ್ಮನಿ ಯತೋ ದಿವೀತಿ ಕಥಿತಂ ಶ್ರುತೌ ॥'

ಇತಿ ಪ್ರಮಾಣಬಲೇನ ಚಿತ್ರಕೃತ್ಯಾತ್ಮಕಾನಂತಾಸನಶ್ವೇತದ್ವೀಪವೈಕುಂಠಾಖ್ಯಸ್ಥಾನತ್ರಯೇ ಸಪ್ತಮ್ಯಂತೋ ದ್ಯುಶಬ್ದೋ ದ್ಯೋತಮಾನತ್ವನಿಮಿತ್ತೇನ ಯೌಗಿಕಃ, ಸ್ವರ್ಗಾದೌ ತು ರೂಢ ಇತಿ ಉಪದೇಶಯೋರವಿರೋಧ ಇತಿ ಪ್ರಕಾರಾಂತರೇಣ ವಿರೋಧಪರಿಹಾರಃ ಕೃತಃ ॥

॥ಇತಿ ಛಂದೋऽಭಿಧಾನಾಧಿಕರಣಮ್ ॥

ಶಂಕೆ – ಲೋಕತ್ರಯದ ವಿವಕ್ಷೆಯಿಂದಲೇ ಅನಂತಾಸನ ಮೊದಲಾದ ಲೋಕಗಳಿಗೂ ಮೇರ್ವಾದಿಗಳಿಗಿಂತ ಮೇಲ್ಭಾಗದಲ್ಲಿ ಇರುವಿಕೆ ಇರುವುದರಿಂದ ದಿವಃಪರತ್ವವು ಸಿದ್ಧವಾಗುವ ಕಾರಣ ಸಪ್ತಲೋಕವಿವಕ್ಷೆಯು ವ್ಯರ್ಥವಾಗಿದೆ.

ಸಮಾಧಾನ – ಹಾಗೆ ಹೇಳಿದ ಪಕ್ಷದಲ್ಲಿ ವೈಕುಂಠವು ದ್ಯುಶಬ್ದದ ಅರ್ಥವೇ ಆಗುವುದರಿಂದ ವೈಕುಂಠಕ್ಕೆ ಎಲ್ಲಾ ದ್ಯುಲೋಕಗಳಿಂದ ಮೇಲಿರುವಿಕೆಯು ಸಿದ್ಧವಾಗಲಾರದು. ಆದ ಕಾರಣ 'ದ್ವ್ಯಾತ್ಮಕೇಭ್ಯಶ್ಚ ಸರ್ವೇಭ್ಯಃ ವೈಕುಂಠಶ್ಚ ಉಚ್ಚ ಉಚ್ಯತೇ' ದ್ಯುಲೋಕವೆಂದೆನಿಸುವ ಎಲ್ಲ ಲೋಕಗಳಿಗಿಂತ ವೈಕುಂಠವು ಉನ್ನತಸ್ಥಾನದಲ್ಲಿದೆ ಎಂದು ಹೇಳುವ ಪ್ರಮಾಣವಿರೋಧ ಬಂದೀತು.

ಛಾಂದೋಗ್ಯಭಾಷ್ಯದಲ್ಲಾದರೋ –

ಅನಂತಶಯನಂ ಚೈವ ತಥಾऽನಂತಾಸನಂ ಹರೇಃ।
ಬಹುಲಕ್ಷೋಚ್ಛ್ರಿತೇ ನಿತ್ಯೇ ವಿಮಾನೇ ಸಂಸ್ಥಿತಂ ಯತಃ।
ಚಿತ್ರಕೃತ್ಯಾತ್ಮನಿ ಯತೋ ದಿವೀತಿ ಕಥಿತಂ ಶ್ರುತೌ ॥'

– ಶ್ರೀಹರಿಯ ನಾರಾಯಣನಾಮಕವಾದ ಅನಂತಶಯನರೂಪವು ಮತ್ತು ವಾಸುದೇವಾಖ್ಯವಾದ ಅನಂತಾಸನರೂಪವು ಬಹುಲಕ್ಷಯೋಜನಗಳಿಂದ ಉನ್ನತವಾದ ಚಿತ್ರಕೃತ್ಯಾತ್ಮಕವಾದ, ಆದ್ದರಿಂದಲೇ ನಿತ್ಯವಾದ ಲೋಕದಲ್ಲಿರುವ ಕಾರಣ ಶ್ರೀಹರಿಯು

ದ್ಯುಲೋಕದಲ್ಲಿರುವನೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತಾನೆ – ಎಂಬ ಪ್ರಮಾಣದ ಆಧಾರದಿಂದ ಚೇತನಪ್ರಕೃತಿಸ್ವರೂಪವಾದ ಅನಂತಾಸನ, ಶ್ವೇತದ್ವೀಪ, ವೈಕುಂಠವೆಂಬ ಮೂರು ಸ್ಥಾನಗಳ ವಿಷಯದಲ್ಲಿ ಸಪ್ತಮೀವಿಭಕ್ತ್ಯಂತವಾದ ದ್ಯುಶಬ್ದವು ದ್ಯೋತಮಾನ-ವಾಗಿದೆ ಅಂದರೆ ಪ್ರಕಾಶಮಾನವಾಗಿದೆ ಎಂಬ ಕಾರಣದಿಂದ ಯೌಗಿಕವಾಗಿದೆ. ಸ್ವರ್ಗಾದಿಲೋಕಗಳ ವಿಷಯದಲ್ಲಿ ದ್ಯುಶಬ್ದವು ರೂಢವಾಗಿದೆ. ಆದ್ದರಿಂದ ಸಪ್ತಮ್ಯಂತ ಮತ್ತು ಪಂಚಮ್ಯಂತ ದ್ಯುಶಬ್ದಗಳಿರುವ ವಾಕ್ಯಗಳಿಗೆ ವಿರೋಧವಿಲ್ಲ ಎಂಬುದಾಗಿ ಪ್ರಕಾರಾಂತರದಿಂದ ವಿರೋಧವನ್ನು ಪರಿಹರಿಸಲಾಗಿದೆ.

* * * * * *

## ೧೨. ಅಥ ಪಾದಾಂತ್ಯಪ್ರಾಣಾಧಿಕರಣಮ್

ಭಾ– 'ಪ್ರಾಣೋ ವಿಷ್ಣುಃ' ಇತ್ಯುಕ್ತಮ್ । ತತ್ರ 'ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಶ್ಚಕ್ಷುಶ್ಶ್ರೋತ್ರಂ ಮನೋ ವಾಕ್ ಪ್ರಾಣಃ' (ಐ.ಆ.೨-೧-೪) ಇತ್ಯತ್ರ ಪ್ರಾಣಸ್ಯ ವಿಷ್ಣುತ್ವಂ ನ ವಿದ್ಯತೇ[೧] । ಇಂದ್ರಿಯೈಃ ಸಹಾಭಿಧಾನಾತ್, ಇತಿ ।

(ಪೂರ್ವಪಕ್ಷ) ಹಿಂದೆ (ಮೊದಲನೆಯ ಪ್ರಾಣಾಧಿಕರಣದಲ್ಲಿ 'ತದ್ವೈತ್ವಂ ಪ್ರಾಣೋಽಭವಃ' ಎಂಬ ವಾಕ್ಯದಲ್ಲಿ ಹೇಳಲಾದ) ಪ್ರಾಣನು ವಿಷ್ಣುವೆಂದು ಹೇಳಲಾಗಿತ್ತು. ಆದರೆ ಆ ಪ್ರಾಣನ ವಿಷಯದಲ್ಲಿ ಶ್ರುತ-ವಾಗಿರುವ 'ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಶ್ಚಕ್ಷುಶ್ಶ್ರೋತ್ರಂ ಮನೋ ವಾಕ್ ಪ್ರಾಣಃ' ಎಂಬ ಶ್ರುತಿಯಲ್ಲಿರುವ ಪ್ರಾಣನಿಗೆ ವಿಷ್ಣುತ್ವವು ಯುಕ್ತವಾಗುವುದಿಲ್ಲ. ಏಕೆಂದರೆ, ಅಲ್ಲಿ ಪ್ರಾಣನು ಇಂದ್ರಿಯಗಳ ಜೊತೆಗೆ ಹೇಳಲ್ಪಟ್ಟಿದ್ದಾನೆ.

---

[೧] ನ ಯುಜ್ಯತೇ (ಪಾ)

(ಭಾ.ದೀ.) ಅತ್ರಾಧಿಕರಣೇ ಲೋಕತೋಽನ್ಯತ್ರ ಪ್ರಸಿದ್ಧಪ್ರಾಣನಾಮ್ನೋ ವಿಷ್ಣೌ ಸಮನ್ವಯಃ ಪ್ರತಿಪಾದ್ಯತೇ । ಶ್ರುತ್ಯಾದಿಸಂಗತಿವಿಷಯವಾಕ್ಯವಿಷಯಸಂಶಯ-ಸಯುಕ್ತಿಕಪೂರ್ವಪಕ್ಷಾನ್ ದರ್ಶಯತಿ – **ಪ್ರಾಣ ಇತಿ ॥** ಆದ್ಯಪ್ರಾಣಾಧಿಕರಣೇ 'ತದ್ವೈ ತ್ವಮ್' ಇತಿ ವಾಕ್ಯೋಕ್ತಪ್ರಾಣೋ ವಿಷ್ಣುರಿತ್ಯುಕ್ತಮ್ ಇತ್ಯರ್ಥಃ। ತತಃ ಕಿಮ್? ಇತ್ಯತ ಆಹ – **ತತ್ರೇತಿ ॥ 'ಉಕ್ತಮ್'** ಇತ್ಯನುಷಜ್ಯತೇ। ತಸ್ಯ ಆವೃತ್ತಿವಿಪರಿಣಾಮೌ। ಏವಂ **ತತ್ರ** ಇತ್ಯಪ್ಯಾವರ್ತನೀಯಮ್ । ತಥಾಚ 'ತತ್ರ' ತದ್ವೈ ತ್ವಮಿತಿ ವಾಕ್ಯೇ, ಉಕ್ತಸ್ಯ ಪ್ರಾಣಸ್ಯ ವಿಷ್ಣುತ್ವಂ ನ ವಿದ್ಯತೇ ನ ಯುಜ್ಯತೇ। ಕುತಃ ಯತಸ್ತತ್ರ 'ತದ್ವೈ ತ್ವಮ್' ಇತಿ ವಾಕ್ಯೋಕ್ತಪ್ರಾಣವಿಷಯೇ ಉಕ್ತೇ ಶ್ರುತೇ 'ತಾ ವಾ ಏತಾಃ' ಇತ್ಯೈತರೇಯವಾಕ್ಯೇ ಉಕ್ತಸ್ಯ ಶ್ರುತಸ್ಯ ಪ್ರಾಣಸ್ಯ ವಿಷ್ಣುತ್ವಂ ನ ವಿದ್ಯತೇ ಇತಿ ಯೋಜನಾ । ಕುತೋ ನ ವಿದ್ಯತೇ? ಇತ್ಯತ ಆಹ – **ಇಂದ್ರಿಯೈಃ ಸಹಾಭಿಧಾನಾತ್ ಇತಿ ॥** ಇಂದ್ರಿಯೈಃ ಸಹ ಪಠಿತತ್ವಾದ್ ಇಂದ್ರಿಯಗಣೇ ಗಣಿತತ್ವಾದಿತ್ಯರ್ಥಃ । ಅನೇನ ಐತರೇಯಪ್ರಾಣಸ್ಯ ವಿಷ್ಣ್ವನ್ಯತ್ವಾಕ್ಷೇಪಮುಖೇನ ಪ್ರಾಚೀನತೈತ್ತಿರೀಯೋಕ್ತಪ್ರಾಣಸ್ಯಾಪಿ ಅನ್ಯತ್ವಾಕ್ಷೇಪಾತ್ ತೇನಾಸ್ಯಾಽಕ್ಷೇಪಿಕೀ ಸಂಗತಿರುಕ್ತಾ ಭವತಿ॥

ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಪ್ರಾಣವೆಂಬ ನಾಮಾತ್ಮಕಶಬ್ದಕ್ಕೆ ವಿಷ್ಣುವಿನಲ್ಲಿ ಸಮನ್ವಯವನ್ನು ಪ್ರತಿಪಾದಿಸಲಾಗಿದೆ. 'ಪ್ರಾಣಃ' ಎಂಬ ವಾಕ್ಯದಿಂದ ಭಾಷ್ಯಕಾರರು ಶ್ರುತಿ ಮೊದಲಾದವುಗಳ ಸಂಗತಿ, ಈ ಅಧಿಕರಣದ ವಿಷಯವಾಕ್ಯ, ವಿಷಯ, ಸಂಶಯ ಮತ್ತು ಯುಕ್ತಿಸಹಿತವಾದ ಪೂರ್ವಪಕ್ಷ ಇವುಗಳನ್ನು ತೋರಿಸು-ತ್ತಿದ್ದಾರೆ. ಮೊದಲನೆಯ ಪ್ರಾಣಾಧಿಕರಣದಲ್ಲಿ 'ತದ್ವೈ ತ್ವಮ್' ಎಂಬ ವಾಕ್ಯದಲ್ಲಿ ಹೇಳಲಾಗಿರುವ ಪ್ರಾಣನು ವಿಷ್ಣು ಎಂಬುದಾಗಿ ಹೇಳಲಾಗಿದೆ ಎಂದು ಅರ್ಥ. ಮುಂದೇನು? ಎಂಬ ಶಂಕೆಗೆ ಉತ್ತರವಾಗಿ 'ತತ್ರ' ಎಂಬ ವಾಕ್ಯವು ಹೊರಟಿದೆ. 'ಉಕ್ತಮ್' ಎಂಬ ಪದವು ಅನುವೃತ್ತಿಯನ್ನು ಪಡೆಯುವುದು. ಆ ಪದವು ಆವೃತ್ತಿ ಮತ್ತು ವಿಭಕ್ತಿಯ ಬದಲಾವಣೆಗಳನ್ನು ಹೊಂದುವುದು. ಇದೇ ರೀತಿಯಾಗಿ 'ತತ್ರ' ಎಂಬ ಪದವನ್ನೂ ಆವೃತ್ತಿಮಾಡಿಕೊಳ್ಳಬೇಕು. ತಥಾಚ – 'ತತ್ರ'- 'ತದ್ವೈ ತ್ವಮ್' ಎಂಬ ವಾಕ್ಯದಲ್ಲಿ ಉಕ್ತಸ್ಯ - ಹೇಳಲ್ಪಟ್ಟ ಪ್ರಾಣನಿಗೆ, ವಿಷ್ಣುತ್ವಂ ನ ವಿದ್ಯತೇ -

ವಿಷ್ಣುತ್ವವು ಯುಕ್ತವಾಗುವುದಿಲ್ಲ. ಏಕೆಂದರೆ, ತತ್ರ - 'ತದ್ವೈ ತ್ವಮ್' ಎಂಬ ವಾಕ್ಯದಲ್ಲಿ ಹೇಳಲಾಗಿರುವ ಪ್ರಾಣನ ವಿಷಯದಲ್ಲಿ, ಉಕ್ತೇ - ಶ್ರುತವಾಗಿರುವ, 'ತಾ ವಾ ಏತಾಃ' ಎಂಬ ಐತರೇಯವಾಕ್ಯದಲ್ಲಿ, ಉಕ್ತಸ್ಯ - ಶ್ರುತನಾಗಿರುವ, ಪ್ರಾಣಸ್ಯ ವಿಷ್ಣುತ್ವಂ ನ ವಿದ್ಯತೇ - ಪ್ರಾಣನಿಗೆ ವಿಷ್ಣುತ್ವವು ಯುಕ್ತವಾಗುವುದಿಲ್ಲ ಎಂದು ಯೋಜನೆ. ಏಕೆ ಯುಕ್ತವಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ 'ಇಂದ್ರಿಯೈಃ ಸಹಾಭಿಧಾನಾತ್' ಎಂದು ಹೇಳಲಾಗಿದೆ. ಇಂದ್ರಿಯಗಳೊಂದಿಗೆ ಪಠಿತವಾಗಿರುವುದರಿಂದ - ಇಂದ್ರಿಯಗಳ ಸಮೂಹದಲ್ಲಿ ಪರಿಗಣಿತವಾಗಿರುವುದರಿಂದ ಎಂದು ಅರ್ಥ. ಇದರಿಂದ ಐತರೇಯ ವಾಕ್ಯದಲ್ಲಿ ಹೇಳಲಾದ ಪ್ರಾಣನಿಗೆ ವಿಷ್ಣುಭಿನ್ನತ್ವವಿರುವುದೆಂದು ಆಕ್ಷೇಪಿಸುವ ಮೂಲಕ ಹಿಂದೆ ತೈತ್ತಿರೀಯದಲ್ಲಿ ಹೇಳಿದ ಪ್ರಾಣನಿಗೂ ವಿಷ್ಣುಭಿನ್ನತ್ವವನ್ನು ಶಂಕಿಸುವ ಕಾರಣ ಆ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯನ್ನು ಹೇಳಿದಂತಾಗುವುದು.

(ಭಾ.ದೀ.) ಐತರೇಯಪ್ರಾಣಾಖ್ಯೋ ವಿಷಯಃ, 'ಪ್ರಾಣೋಽನ್ಯಃ ಉತ ವಿಷ್ಣುಃ' ಇತಿ ಸಂಶಯಶ್ಚ ಸೂಚಿತಃ । ತಥಾ 'ವಾಯ್ವಾದಿರನ್ಯ ಏವ' ಇತಿ ಪೂರ್ವಪಕ್ಷಃ ಇಂದ್ರಿಯಗಣೇ ಗಣಿತತ್ವಾಖ್ಯತತ್ಸಾಧಕಲಿಂಗಂ ಚ ಸೂಚಿತಮ್ ।

(ಈ ಅಧಿಕರಣದಲ್ಲಿ) ಐತರೇಯವಾಕ್ಯದಲ್ಲಿ ಹೇಳಿರುವ ಪ್ರಾಣನು ವಿಷಯ-ನಾಗಿದ್ದಾನೆ ಮತ್ತು ಪ್ರಾಣನು ವಿಷ್ಣುಭಿನ್ನನೋ ಅಥವಾ ವಿಷ್ಣುವೋ ಎಂದು ಸಂಶಯ-ವೆಂದು ಸೂಚಿತವಾಗುವುದು. ಹಾಗೆಯೇ, ವಾಯುವೇ ಮೊದಲಾದವರು ಮತ್ತು ವಿಷ್ಣುಭಿನ್ನರೇ ಆಗಿದ್ದಾರೆ ಎಂದು ಪೂರ್ವಪಕ್ಷವು ಮತ್ತು ಇಂದ್ರಿಯಗಣದಲ್ಲಿ ಪರಿ-ಗಣಿತವಾಗಿರುವಿಕೆ ಎಂಬ ಆ ಪೂರ್ವಪಕ್ಷವನ್ನು ಸಾಧಿಸುವ ಲಿಂಗವೂ ಇಲ್ಲಿ ಸೂಚಿತ-ವಾಗುವುದು.

(ಭಾ.ದೀ.) 'ತಾ ವಾ ಏತಾಃ' ಇತ್ಯೇತಚ್ಚ ಚತುರ್ಮುಖಶಿರಸಿ ಶಿರಃಶಬ್ದ-ಪ್ರವೃತ್ತಿನಿಮಿತ್ತಕಥನಾಯ ಪ್ರವೃತ್ತಮ್ । ವೈಶಬ್ದಃ ಪ್ರಸಿದ್ಧೌ । ತಥಾಚ ಯತಃ 'ತಾ ಏತಾಃ' ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣ ಇತ್ಯೇತಚ್ಛಬ್ದವಾಚ್ಯಾಃ ತದಭಿ-ಮಾನಿನ್ಯೋ ದೇವತಾಃ 'ಶೀರ್ಷನ್' ಶೀರ್ಷ್ಣಿ ಶಿರಃಸಂಜ್ಞಕಮೂರ್ಧ್ನಿ ಶ್ರಿತಾಃ ಅತ ಏವ ಶ್ರಯಣಾತ್ ಶ್ರಿಯಃ – ಇತಿ ಸಿದ್ಧಾಂತೇ ಶ್ರುತ್ಯರ್ಥಃ ।

**ಅನೇನ ಚಕ್ಷುರಾದಿಭಿಃ ಶ್ರಿತತ್ವಂ ಶಿರಃಪದಪ್ರವೃತ್ತಿನಿಮಿತ್ತಮಿತ್ಯುಕ್ತಂ ಭವತಿ । ಪೂರ್ವಪಕ್ಷೀ ತು ಪ್ರಾಣಶಬ್ದಮ್ ಅನ್ಯಮಾತ್ರಪರಂ ಮನ್ಯತೇ ॥**

'ತಾ ವಾ ಏತಾಃ' ಎಂಬ ವಾಕ್ಯವು ಚತುರ್ಮುಖನ ಶಿರಸ್ಸಿನಲ್ಲಿ ಶಿರಃಶಬ್ದದ ಪ್ರವೃತ್ತಿಯಾಗಲು ನಿಮಿತ್ತವನ್ನು ಹೇಳುವ ಉದ್ದೇಶದಿಂದ ಹೊರಟಿದೆ. ಈ ವಾಕ್ಯದಲ್ಲಿ 'ವೈ' ಎಂಬ ಶಬ್ದವು ಪ್ರಸಿದ್ಧಿಯನ್ನು ಸೂಚಿಸುವುದು. ತಥಾಚ – ಯಾವ ಕಾರಣದಿಂದಾಗಿ, 'ತಾ ಏತಾಃ' ಆ ಚಕ್ಷುಸ್ಸು, ಶ್ರೋತ್ರ , ಮನಸ್ಸು, ವಾಕ್, ಪ್ರಾಣ ಎಂಬ ಶಬ್ದಗಳಿಂದ ವಾಚ್ಯರಾದ ಚಕ್ಷುರಾದಿಗಳಿಗೆ ಅಭಿಮಾನಿಗಳಾದ ದೇವತೆಗಳು, ಶೀರ್ಷನ್ - ಶೀರ್ಷ್ಣಿ ಎಂದರೆ ಶಿರಸ್ಸೆಂಬ ಸಂಜ್ಞೆಯುಳ್ಳ ತಲೆಯ ಸ್ಥಾನದಲ್ಲಿ ಶ್ರಿತಾಃ - ಆಶ್ರಿತರಾಗಿರುವರೋ, ಆದ್ದರಿಂದಲೇ ಶ್ರಯಣಾತ್ ಶ್ರಿಯಃ - ಆಶ್ರಯಿಸಿರುವುದರಿಂದ ಶ್ರಿಯಃ ಎಂದೆನಿಸುವರು ಎಂಬುದಾಗಿ ಸಿದ್ಧಾಂತದ ಪ್ರಕಾರ ಈ ಶ್ರುತಿಯ ಅರ್ಥವಾಗಿದೆ.

ಇದರಿಂದ ಚಕ್ಷುರಾದಿಗಳಿಂದ ಆಶ್ರಯಿಸಲ್ಪಟ್ಟಿರುವಿಕೆಯು ಶಿರಃಪದದ ಪ್ರವೃತ್ತಿನಿಮಿತ್ತವೆಂದು ಹೇಳಿದಂತಾಗುವುದು. ಪೂರ್ವಪಕ್ಷಿಯಾದರೋ ಇಲ್ಲಿ ಪ್ರಾಣಶಬ್ದವು ವಿಷ್ಣುಭಿನ್ನನನ್ನು ಮಾತ್ರ ಹೇಳುವುದೆಂದು ಅಭಿಪ್ರಾಯಪಡುವನು.

**ಭಾ– ಅತ ಆಹ –**

**॥ ಓಂ ಪ್ರಾಣಸ್ತಥಾಽನುಗಮಾತ್ ಓಂ ॥ ೨೮ ॥**

ಈ ಆಕ್ಷೇಪದ ಪರಿಹಾರಕ್ಕೋಸ್ಕರವಾಗಿ 'ಓಂ ಪ್ರಾಣಸ್ತಥಾಽನುಗಮಾತ್ ಓಂ' ಎಂಬ ಸೂತ್ರವು ಹೊರಟಿದೆ.

**(ಭಾ.ದೀ.) ಸಿದ್ಧಾಂತಯತ್ಸೂತ್ರಮವತಾರಯತಿ – ಅತ ಇತಿ ॥ ಯತಃ ಪೂರ್ವಪಕ್ಷಃ ಪ್ರಾಪ್ತಃ ಅತ ಉತ್ತರಂ ಸೂತ್ರಮಾಹ ಭಗವಾನ್ ಬಾದರಾಯಣಃ ಇತ್ಯರ್ಥಃ।**

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅತಃ ಎಂಬ ವಾಕ್ಯದಿಂದ ಭಾಷ್ಯದಲ್ಲಿ ಅವತಾರಿಕೆಯನ್ನು ನೀಡುತ್ತಿದ್ದಾರೆ. ಯಾವ ಕಾರಣದಿಂದಾಗಿ ಈ ಪೂರ್ವಪಕ್ಷವು ಪ್ರಾಪ್ತವಾಗಿದೆಯೋ ಅತಃ - ಆದ್ದರಿಂದ, ಉತ್ತರರೂಪವಾಗಿ ಭಗವಾನ್ ಬಾದರಾಯಣರು

'ಓಂ ಪ್ರಾಣಸ್ತಥಾನುಗಮಾತ್ ಓಂ' ಎಂಬ ಸೂತ್ರವನ್ನು ಹೇಳುತ್ತಿದ್ದಾರೆ ಎಂದು ಅರ್ಥ.

**ಭಾ– 'ತಂ ದೇವಾಃ ಪ್ರಾಣಯಂತ'(ಐ.ಆ.೨-೧-೫); 'ಸ ಏಷೋಽಸುಃ ಸ ಏಷ ಪ್ರಾಣಃ'(ಐ.ಆ.೨-೧-೫); 'ಪ್ರಾಣ ಋಚ ಇತ್ಯೇವ ವಿದ್ಯಾತ್' (ಐ.ಆ.೨-೨-೨), 'ತದಯಂ ಪ್ರಾಣೋಽಧಿತಿಷ್ಠತಿ' (ಐ.ಆ.೨-೩-೮)**

**ಇತ್ಯಾದ್ಯನುಗಮಾತ್, ಅತ್ರಾಪಿ ಪ್ರಾಣೋ ವಿಷ್ಣುರೇವ ।**

'ತಂ ದೇವಾಃ ಪ್ರಾಣಯಂತ' ಮೊದಲಾದ ವಾಕ್ಯಗಳಿಂದ ಹೇಳಲ್ಪಡುವ ವಿಷ್ಣುಲಿಂಗಗಳಿಗೆ ಅಭ್ಯಾಸವಿರುವುದರಿಂದ ಪ್ರಾಣನು ವಿಷ್ಣುವೇ ಆಗಿದ್ದಾನೆ.

(ಭಾ.ದೀ.) ಸೂತ್ರಂ ಪಠಿತ್ವಾ ತತ್ರ 'ಅನುಗಮಾತ್' ಇತಿ ಹೇತ್ವಂಶಂ ಶ್ರುತ್ಯುದಾಹರಣೇನ ವ್ಯಾಚಷ್ಟೇ – **ಪ್ರಾಣ ಇತಿ ॥ ಇತ್ಯಾದೀತಿ ॥** ಏವಮಾದಿವಾಕ್ಯೋಕ್ತಾನಾಂ ದೇವತೋಪದೇಶ್ಯತ್ವಾದಿಲಿಂಗಾನಾಮ್ ಅತ್ರಾಸ್ಮಿನ್ ಪ್ರಕರಣೇ ಬಹುಷು ಸ್ಥಲೇಷು 'ಅನುಗಮಾತ್' ಅನುವೃತ್ತೇರಭ್ಯಾಸಾದಿತ್ಯರ್ಥಃ । ಆದಿಪದೇನ 'ಪ್ರಾಣೋ ಹ್ಯೇವೈಷ ಯ ಏಷ ತಪತಿ' ಇತಿ ಸೂರ್ಯಮಂಡಲಸ್ಥತ್ವಪ್ರತಿಪಾದಕವಾಕ್ಯಂ ಗೃಹ್ಯತೇ । ತಥಾ 'ಸರ್ವಾಣಿ ಭೂತಾನಿ ಆಪಿಪೀಲಿಕಾಭ್ಯಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಾನಿ' ಇತ್ಯಾದಿ ವಾಕ್ಯಂ ಚ ಗೃಹ್ಯತೇ ।

ಭಾಷ್ಯಕಾರರು ಸೂತ್ರವನ್ನು ಪಠಿಸಿ, ಅಲ್ಲಿರುವ 'ಅನುಗಮಾತ್' ಎಂಬ ಹೇತ್ವಂಶವನ್ನು, ಶ್ರುತಿಯನ್ನು ಉದಾಹರಿಸಿ, 'ಪ್ರಾಣ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಇತ್ಯಾದ್ಯನುಗಮಾತ್ - ಎಂದರೆ ಉದಾಹರಿಸಲಾದ ತಂ ದೇವಾಃ ಇತ್ಯಾದಿ ವಾಕ್ಯಗಳಿಂದ ಹೇಳಲ್ಪಡುವ ದೇವತೋಪದೇಶ್ಯತ್ವ - ದೇವತೆಗಳಿಂದ ಉಪದೇಶಿಸಲ್ಪಡುವಿಕೆ ಮೊದಲಾದ ಲಿಂಗಗಳಿಗೆ ಈ ಪ್ರಕರಣದಲ್ಲಿ ಅನೇಕ ಸ್ಥಳಗಳಲ್ಲಿ ಅನುಗಮಾತ್ - ಅನುವೃತ್ತಿ ಇರುವುದರಿಂದ ಅಂದರೆ ಅಭ್ಯಾಸವಿರುವುದರಿಂದ ಎಂದು ಅರ್ಥ. (ಇತ್ಯಾದಿ

ಎಂಬಲ್ಲಿರುವ) ಆದಿಪದದಿಂದ 'ಪ್ರಾಣೋ ಹ್ಯೇವೈಷ ಯ ಏಷ ತಪತಿ' ಎಂಬುದಾಗಿ ಪ್ರಾಣನಿಗೆ ಸೂರ್ಯಮಂಡಲಸ್ಥತ್ವವನ್ನು ಪ್ರತಿಪಾದಿಸುವ ವಾಕ್ಯವು ಗ್ರಹಿಸಲ್ಪಡುವುದು. ಹಾಗೆಯೇ 'ಸರ್ವಾಣಿ ಭೂತಾನ್ಯಾಪಿಪೀಲಿಕಾಭ್ಯಃ ಪ್ರಾಣೇನ ಬೃಹತ್ಯಾ ವಿಷ್ಟಬ್ಧಾನಿ' ಮೊದಲಾದ ವಾಕ್ಯವು ಗ್ರಹಿಸಲ್ಪಡುವುದು.

(ಭಾ.ದೀ.) ಸೌತ್ರಂ ತಥಾಶಬ್ದಂ ವ್ಯಾಚಷ್ಟೇ – **ಅತ್ರಾಪೀತಿ** ॥ 'ಶ್ರುತಃ' ಇತಿ ಶೇಷಃ। ನ ಕೇವಲಂ 'ತದ್ವೈ ತ್ವಮ್' ಇತ್ಯತ್ರ , ಕಿಂತು ಐತರೇಯೇಽಪೀತಿ ಸಮುಚ್ಚಯೇ **ಅಪಿಶಬ್ದಃ**। ಅನೇನ ಯಥಾ 'ತದ್ ವೈ ತ್ವಮ್' ಇತಿ ಶ್ರುತ್ಯುಕ್ತಪ್ರಾಣೋ ವಿಷ್ಣುಃ ; ತಥಾ ಐತರೇಯೋಕ್ತೋಽಪಿ ವಿಷ್ಣುರೇವ ನ ತ್ವನ್ಯಃ। ಕುತಃ? ವಿಷ್ಣುಲಿಂಗಾನಾಂ ದೇವತೋಪದೇಶ್ಯತ್ವಾದೀನಾಮಸ್ಮಿನ್ ಪ್ರಕರಣೇ '**ಅನುಗಮಾತ್**' ಅನುವೃತ್ತೇಃ - ಅಭ್ಯಾಸಾದಿತಿ ಸೂತ್ರಾರ್ಥ ಉಕ್ತೋ ಭವತಿ।

ಸೂತ್ರದಲ್ಲಿರುವ ತಥಾಶಬ್ದವನ್ನು ಅತ್ರಾಪಿ ಎಂದು ವ್ಯಾಖ್ಯಾನಿಸುತ್ತಿದ್ದಾರೆ. 'ಶ್ರುತಃ' ಎಂಬ ಪದವು ಇಲ್ಲಿ ಶೇಷವಾಗಿದೆ. 'ತದ್ವೈ ತ್ವಮ್' ಎಂಬ ತೈತ್ತಿರೀಯದಲ್ಲಿ ಮಾತ್ರವಲ್ಲ, ಕಿಂತು ಐತರೇಯದಲ್ಲೂ ಕೂಡ ಎಂಬುದಾಗಿ (ಅತ್ರಾಪಿ ಎಂಬಲ್ಲಿರುವ) ಅಪಿಶಬ್ದವು ಸಮುಚ್ಚಯವನ್ನು ಹೇಳುವುದು. ಸೂತ್ರದಲ್ಲಿ ಅನುವೃತ್ತಿಯನ್ನು ಪಡೆದಿರುವ 'ತತ್ ತು' ಎಂಬ ಪದಗಳಿಗೆ ವಿಷ್ಣುರೇವ ಎಂದು ಅರ್ಥವನ್ನು ಹೇಳುತ್ತಿದ್ದಾರೆ. ಇದರಿಂದ ಹೇಗೆ 'ತದ್ ವೈ ತ್ವಂ ಪ್ರಾಣಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಪ್ರಾಣನು ವಿಷ್ಣುವೋ ತಥಾ ಹಾಗೆಯೇ ಐತರೇಯದಲ್ಲಿ ಹೇಳಲ್ಪಟ್ಟಿರುವ ಪ್ರಾಣನೂ ವಿಷ್ಣುವೇ ಆಗಿದ್ದಾನೆ. ಅನ್ಯನಲ್ಲ. ಏಕೆಂದರೆ, ದೇವತೋಪದೇಶ್ಯತ್ವ ಮೊದಲಾದ ವಿಷ್ಣುಲಿಂಗಗಳಿಗೆ ಈ ಪ್ರಕರಣದಲ್ಲಿ 'ಅನುಗಮಾತ್' ಅನುವೃತ್ತೇಃ ಅಂದರೆ - ಅನೇಕ ಸಲ ಹೇಳುವಿಕೆ ಇರುವುದರಿಂದ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

(ಭಾ.ದೀ.) ಐತರೇಯೇ 'ತಂ ದೇವಾಃ ಪ್ರಾಣಯಂತ' ಇತಿ ಏಕಖಂಡಸ್ಥಂ ವಾಕ್ಯಮ್ । ತಂ ನಾರಾಯಣಂ ವಾಯುಂ ಚ ದೇವಾಃ 'ಪ್ರಾಣಯಂತ' ಪ್ರಕರ್ಷೇಣ ಶಿಷ್ಯಪ್ರಶಿಷ್ಯಾದಿಷು ನೀತವಂತಃ ಉಪದಿದಿಶುಃ - ಇತ್ಯರ್ಥಃ। ಅನೇನ ವಿಷ್ಣೋಃ ಸರ್ವದೇವೋಪದೇಶ್ಯತ್ವಮುಕ್ತಂ ಭವತಿ।

ಐತರೇಯದಲ್ಲಿ 'ತಂ ದೇವಾಃ ಪ್ರಾಣಯಂತ' ಎಂದು ಒಂದು ಖಂಡದಲ್ಲಿರುವ ವಾಕ್ಯವಾಗಿದೆ. 'ತಂ' ಆ ನಾರಾಯಣನನ್ನು ಮತ್ತು ವಾಯುವನ್ನು ದೇವಾಃ - ದೇವತೆಗಳು, ಪ್ರಾಣಯಂತ- ವಿಶೇಷವಾಗಿ ಶಿಷ್ಯ ಪ್ರಶಿಷ್ಯ ಮೊದಲಾದವರನ್ನು ಕುರಿತು ಒಯ್ದರು - ಉಪದೇಶಿಸಿದರು ಎಂದು ಅರ್ಥ. ಇದರಿಂದ ವಿಷ್ಣುವಿಗೆ ಸರ್ವದೇವೋಪ-ದೇಶ್ಯತ್ವವನ್ನು ಹೇಳಿದಂತಾಗುವುದು.

(ಭಾ.ದೀ.) 'ಸ ಏಷೋಽಸುಃ ಸ ಏಷ ಪ್ರಾಣಃ ಸ ಏಷ ಭೂತಿಃ' ಇತ್ಯಾದಿ - ಅನ್ಯಖಂಡಗತಂ ವಾಕ್ಯಮ್ । ಅನೇನ ಭೂತಿತ್ವಾದಿನಾ ದೇವಾದ್ಯುಪಾಸ್ಯತ್ವಮ್ ಉಚ್ಯತೇ । 'ಸ ಏಷಃ' ಭಗವಾನ್ ದುಷ್ಟನಿರಸನಾತ್ ಅಸುಃ; ಪ್ರಕೃಷ್ಟಾನಂದ-ರೂಪತ್ವಾತ್ ಪ್ರಾಣಃ ದೇವಾನಾಂ ಭೂತಿಶಬ್ದಿತಜ್ಞಾನಾದ್ಯೈಶ್ವರ್ಯಪ್ರದತ್ವಾತ್ ಅಸುರಾಣಾಮ್ ಅಜ್ಞಾನಾದ್ಯನೈಶ್ವರ್ಯಹೇತುತ್ವಾಚ್ಚ ಭೂತ್ಯಭೂತಿಶಬ್ದವಾಚ್ಯಃ ಇತ್ಯರ್ಥಃ।

'ಸ ಏಷೋಽಸುಃ ಸ ಏಷಃ ಪ್ರಾಣಃ ಸ ಏಷ ಭೂತಿಃ' ಇತ್ಯಾದಿ ವಾಕ್ಯವು ಇನ್ನೊಂದು ಖಂಡದಲ್ಲಿರುವ ವಾಕ್ಯವಾಗಿದೆ. ಈ ವಾಕ್ಯದಿಂದ ಭೂತಿ ಮೊದಲಾದ ಸ್ವರೂಪನೆಂದು ದೇವತೆಗಳೇ ಮೊದಲಾದವರಿಂದ ಉಪಾಸ್ಯತ್ವವನ್ನು ಹೇಳಲಾಗಿದೆ. 'ಸಃ ಏಷಃ' ಆ ಭಗವಂತನು, ಅಸುಃ - ದುಷ್ಟರನ್ನು ನಾಶಮಾಡುವುದರಿಂದ ಅಸು-ವೆಂದೆನಿಸುವನು; ಪ್ರಕೃಷ್ಟ ಆನಂದಸ್ವರೂಪನಾದ್ದರಿಂದ ಪ್ರಾಣನೆಂದೆನಿಸುವನು. ದೇವತೆ-ಗಳಿಗೆ ಭೂತಿಶಬ್ದಾರ್ಥವಾದ ಜ್ಞಾನಾದಿ ಐಶ್ವರ್ಯಪ್ರದನಾದ ಕಾರಣ, ಹಾಗೆಯೇ ಅಸುರರಿಗೆ ಅಜ್ಞಾನವೇ ಮೊದಲಾದ ಅಭೂತಿ ಅಂದರೆ ಅನೈಶ್ವರ್ಯಕ್ಕೆ ಕಾರಣ-ನಾದ್ದರಿಂದ ಆ ಭಗವಂತನು ಭೂತಿ, ಅಭೂತಿ ಶಬ್ದಗಳಿಂದ ವಾಚ್ಯನಾಗಿದ್ದಾನೆ ಎಂದು ಅರ್ಥ.

(ಭಾ.ದೀ.) ತತ್ರೈವ 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ। ಪ್ರಾಣ ಋಚ ಏವ ವಿದ್ಯಾತ್' ಇತಿ ಅನ್ಯದ್ ವಾಕ್ಯಮ್ । ಅತ್ರ ಪ್ರಾಣಸ್ಯ ಸರ್ವವೇದೋಕ್ತತ್ವಮ್ ಉಚ್ಯತೇ । ಯಾಸ್ತಾಃ ಏತಾಃ ಸರ್ವಾ ಋಚಸ್ತಾಸಾಂ 'ಏಕೈವ ವ್ಯಾಹೃತಿಃ' ಏಕಮೇವ ವ್ಯಾಹರ್ತವ್ಯಂ -

ಪ್ರತಿಪಾದ್ಯಮ್ । ತಚ್ಚ ಕಿಮ್? ಪ್ರಾಣೋ ವಿಷ್ಣುರೇವ । ಕಿಂಚ ಯೇ ಸಮುದ್ರಾದಿ-ಘೋಷಾಃ ತೇಷಾಮಪಿ, ಸರ್ವೇ ವೇದಾಃ ತೇಷಾಮಪಿ, ಕಿಮು ವೇದಾನಾಮ್ । ತತ್ರ ಋಚಸ್ತು ವಿಶೇಷತ ಇಂದ್ರಾದಿನಾಮವತೋ ವಿಷ್ಣೋರ್ಗುಣಾನ್ ಅಲ್ಪಜ್ಞಾನಾಮಪಿ ಪ್ರಕಾಶಯಂತೀತಿ ಪ್ರಾಣೇ ನಾರಾಯಣೇ ತದ್ವಿಷಯಾ ಏವ 'ವಿದ್ಯಾತ್' ತತ್ಪ್ರತಿ-ಪಾದಿಕಾ ಏವೇತಿ ಜಾನೀಯಾತ್ ಇತ್ಯರ್ಥಃ।

ಅದೇ ಖಂಡದಲ್ಲಿ 'ತಾ ವಾ ಏತಾಃ ಸರ್ವಾ ಋಚಃ, ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ । ಪ್ರಾಣ ಋಚ ಏವ ವಿದ್ಯಾತ್' ಎಂಬುದಾಗಿ ಇನ್ನೊಂದು ವಾಕ್ಯವಿದೆ. ಇಲ್ಲಿ ಪ್ರಾಣನಿಗೆ ಸರ್ವವೇದೋಕ್ತತ್ವವನ್ನು ಹೇಳ-ಲಾಗಿದೆ. ಯಾವ 'ತಾ ಏತಾಃ ಸರ್ವಾ - ಆ ಎಲ್ಲಾ ಋಕ್ಕುಗಳಿವೆಯೋ, ಅವುಗಳಿಗೆ 'ಏಕೈವ ವ್ಯಾಹೃತಿಃ' ಏಕಮೇವ ವ್ಯಾಹರ್ತವ್ಯಮ್- ಒಂದೇ ವಸ್ತುವು ಪ್ರತಿಪಾದ್ಯ-ವಾಗಿದೆ. ಅದು ಯಾವುದು? ಪ್ರಾಣ ಏವ - ವಿಷ್ಣುವೇ ಆಗಿದೆ. ಮತ್ತು ಸರ್ವೇ ವೇದಾಃ ಯಾವ ವೇದಗಳಿವೆಯೋ ಅವೆಲ್ಲಕ್ಕೂ ಕೂಡ ಪ್ರಾಣನೇ ಪ್ರತಿಪಾದ್ಯ-ನಾಗಿದ್ದಾನೆ. ಮತ್ತು ಸರ್ವೇ ಘೋಷಾಃ - ಯಾವ ಸಮುದ್ರ ಮೊದಲಾದವುಗಳಿಂದ ಉಂಟಾಗುವ ಶಬ್ದಗಳಿವೆಯೋ ಅವೆಲ್ಲಕ್ಕೂ (ಕೂಡ ಪ್ರಾಣನೇ ಪ್ರತಿಪಾದ್ಯನಾಗಿದ್ದಾನೆ.). ಹೀಗಿರುವಾಗ ವೇದಗಳಿಗೆ ಪ್ರತಿಪಾದ್ಯನಾಗಿದ್ದಾನೆ ಎಂದು ಹೇಳುವುದೇನು? ಅವುಗಳಲ್ಲಿ ಋಕ್ಕುಗಳಾದರೋ ವಿಶೇಷವಾಗಿ ಇಂದ್ರಾದಿನಾಮಗಳನ್ನು ಹೊಂದಿರುವ ವಿಷ್ಣುವಿನ ಗುಣಗಳನ್ನು ಅಲ್ಪಜ್ಞರಿಗೂ ತಿಳಿಸುತ್ತಿವೆಯಾದ ಕಾರಣ ಪ್ರಾಣೇ - ನಾರಾಯಣೇ - ನಾರಾಯಣನಲ್ಲಿ ಅಂದರೆ ಅವನ ವಿಷಯಕವಾಗಿಯೇ ಇವೆ ಎಂಬುದಾಗಿ ವಿದ್ಯಾತ್ - ತಿಳಿಯತಕ್ಕದ್ದು. ಅವನನ್ನೇ ಪ್ರತಿಪಾದಿಸುತ್ತವೆ ಎಂದು ತಿಳಿಯತಕ್ಕದ್ದು ಎಂದರ್ಥ.

(ಭಾ.ದೀ.) ಐತರೇಯಭಾಷ್ಯೇ ತು - ಪ್ರಥಮಪ್ರಾಣಪದಮಪಿ ವಿಷಯ-ಸಪ್ತಮ್ಯಂತತಯಾ ವ್ಯಾಹೃತಿಶಬ್ದಂ ಚ ವ್ಯಾಹರಣಪರತಯಾ ವ್ಯಾಖ್ಯಾಯ ಏಕಮೇವ ವ್ಯಾಹರಣಂ ನಿರ್ದೋಷಗುಣಪೂರ್ತಿವಾಚಕತ್ವಾದೇಕಪ್ರಕಾರಮೇವ ನಾಮೇತ್ಯರ್ಥ ಉಕ್ತಃ। ತತ್ತ್ವಪ್ರದೀಪೇऽಪಿ ಅಯಮೇವೋಕ್ತಃ।

ಐತರೇಯಭಾಷ್ಯದಲ್ಲಾದರೋ ('ಏಕೈವ ವ್ಯಾಹೃತಿಃ ಪ್ರಾಣ ಏವ' ಎಂಬಲ್ಲಿರುವ) ಮೊದಲನೆಯ ಪ್ರಾಣಪದವೂ ವಿಷಯ ಎಂಬ ಅರ್ಥವುಳ್ಳ ಸಪ್ತಮೀವಿಭಕ್ತ್ಯಂತವಾಗಿದೆ. ವ್ಯಾಹೃತಿಶಬ್ದವೂ ಕೂಡ ವ್ಯಾಹರಣವನ್ನು ಹೇಳುವ ಅಭಿಪ್ರಾಯವುಳ್ಳದ್ದು ಎಂದು ವ್ಯಾಖ್ಯಾನ ಮಾಡಿ, (ಏಕೈವ ವ್ಯಾಹೃತಿಃ) - ಏಕಮೇವ ವ್ಯಾಹರಣಮ್ - ನಿರ್ದೋಷ-ಗುಣಪೂರ್ಣತ್ವವಾಚಕವಾಗಿರುವುದರಿಂದ ಏಕಪ್ರಕಾರವಾದ ನಾಮವಾಗಿದೆ ಎಂದು ಅರ್ಥವನ್ನು ಹೇಳಲಾಗಿದೆ. ತತ್ವಪ್ರದೀಪದಲ್ಲೂ ಹೀಗೆಯೇ ಹೇಳಲಾಗಿದೆ.

(ಭಾ.ದೀ.) 'ಅಥ ದೇವರಥಃ ತಸ್ಯ ವಾಗುದ್ಧಿಃ ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇ ಮನಃ ಸಂಗೃಹೀತಾ ತದಯಂ ಪ್ರಾಣೋಽಧಿತಿಷ್ಠತಿ' ಇತಿ ವಾಕ್ಯಾಂತರಮ್ । ಅತ್ರ ಪ್ರಾಣಸ್ಯ ದೇಹರಥತ್ವಮುಚ್ಯತೇ । ಪ್ರಮೇಯಾಂತರಕಥನಾರಂಭಃ 'ಅಥ'ಶಬ್ದಃ । 'ಉಚ್ಯತೇ' ಇತಿ ಶೇಷಃ। ತಥಾ ಚ ದೇವಸ್ಯ ವಿಷ್ಣೋಃ ವಾಯೋಃ ಅಧ್ಯಾತ್ಮಮಧಿದೈವತಂ ಚ ರಥ ಉಚ್ಯತೇ ಇತ್ಯರ್ಥಃ । ತಸ್ಯಾಧ್ಯಾತ್ಮಂ ದೇಹಾಖ್ಯರಥಸ್ಯ ವಾಕ್ ವಾಗಾಖ್ಯಾ ಉಮಾ ಉದ್ಧಿಃ ಧಾರಣರಜ್ಜುರೂಪಾ । ಅಧಿದೈವಂ ವಿಷ್ಣುರಥಸ್ಯ ಪ್ರಸಿದ್ಧಸ್ಯಂದನಸ್ಯ ಚ ನಾಗಾಕಾರೋಮಾ ಉದ್ಧಿಃ । 'ಶ್ರೋತ್ರೇ' ದಕ್ಷವಾಮಶ್ರೋತ್ರಗತಚಂದ್ರತದ್ಭಾರ್ಯೇ 'ಪಕ್ಷಸೀ' ಪಾರ್ಶ್ವಯುಕ್ತಾಶ್ವೌ ಅನ್ಯತ್ರಾಶ್ವರೂಪೌ ಪಾರ್ಶ್ವಯೋರ್ಯುಕ್ತೌ । 'ಚಕ್ಷುಷೀ' ಉಭಯಪಾರ್ಶ್ವಗತಸೂರ್ಯತದ್ಭಾರ್ಯೇ ಚ 'ಯುಕ್ತೇ' ಅಗ್ರತೋ ನಿಯುಕ್ತಾಶ್ವೌ । 'ಮನಃ' ಮನೋಽಭಿಮಾನೀ ರುದ್ರಃ 'ಸಂಗೃಹೀತಾ' ಸಾರಥಿಃ । ಏವಮ್ ಅಧಿದೈವಂ ಪ್ರಸಿದ್ಧಸ್ಯಂದನಸ್ಯಾಪಿ ರುದ್ರಃ ಸಾರಥಿಃ । ಸ ಚಾಸಾವಯಂ ಚ ತದನ್ಯಮ್ ಇತ್ಯೇಕಂ ಪದಮ್ । ತತ್ತ್ವಪ್ರದೀಪರೀತ್ಯಾ ಭಿನ್ನಪದತ್ವೇಽಪಿ ತದಿತಿ ರಥತಯೋಕ್ತಂ ಶರೀರಂ ಪರಾಮೃಶ್ಯತೇ । ಲಿಂಗವ್ಯತ್ಯಯೇನ 'ತಂ ರಥಮ್' ಇತಿ ವಾ । ಅಯಂ ಪ್ರಾಣೋ ವಿಷ್ಣುಃ ವಾಯುಶ್ಚ ಅಧಿತಿಷ್ಠತಿ ಇತ್ಯರ್ಥಃ।

'ಅಥ ದೇವರಥಃ ತಸ್ಯ ವಾಗುದ್ಧಿಃ ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇ ಮನಃ ಸಂಗೃಹೀತಾ ತದಯಂ ಪ್ರಾಣೋಽಧಿತಿಷ್ಠತಿ' ಎಂದು ಇನ್ನೊಂದು ವಾಕ್ಯ. ಇಲ್ಲಿ ಪ್ರಾಣನು ದೇಹವನ್ನು ರಥವನ್ನಾಗಿ ಹೊಂದಿರುವನೆಂದು ಹೇಳಲಾಗಿದೆ. 'ಅಥ'ಶಬ್ದವು ಇನ್ನೊಂದು ಪ್ರಮೇಯದ ನಿರೂಪಣೆಯ ಆರಂಭವನ್ನು ಹೇಳುವುದು.

ಉಚ್ಯತೇ ಎಂಬ ಪದವು ಇಲ್ಲಿ ಶೇಷವಾಗಿದೆ. ತಥಾಚ – ದೇವಸ್ಯ - ವಿಷ್ಣುವಿಗೆ ಮತ್ತು ವಾಯುವಿಗೆ ಅಧ್ಯಾತ್ಮದಲ್ಲಿ ಮತ್ತು ಅಧಿದೈವದಲ್ಲಿ ರಥವನ್ನು ಹೇಳಲಾಗುವುದು ಎಂದರ್ಥ. ಆ ದೇವರಿಗೆ ಅಧ್ಯಾತ್ಮದಲ್ಲಿ ದೇಹವೇ ರಥವಾಗಿದ್ದು, ಆ ರಥಕ್ಕೆ 'ವಾಕ್' ವಾಕ್ ನಾಮಕಳಾದ ಉಮೆಯು, ಉದ್ಧಿಃ - ಅಂದರೆ ಅಶ್ವವನ್ನು ಹಿಡಿಯುವ ಹಗ್ಗದ ರೂಪದಲ್ಲಿದ್ದಾಳೆ. ಅಧಿದೈವದಲ್ಲಿ ವಿಷ್ಣುರಥವೆಂದರೆ, ಪ್ರಸಿದ್ಧ ರಥವೇ ಆಗಿದೆ. ಆ ರಥಕ್ಕೆ ನಾಗನ ಆಕಾರವುಳ್ಳ ಉಮೆಯು ಉದ್ಧಿಃ - ಅಶ್ವವನ್ನು ಹಿಡಿಯುವ ಹಗ್ಗವಾಗಿದ್ದಾಳೆ. 'ಶ್ರೋತ್ರೇ' ಕ್ರಮವಾಗಿ ಬಲಭಾಗ ಮತ್ತು ಎಡಭಾಗದಲ್ಲಿರುವ ಶ್ರೋತ್ರೇಂದ್ರಿಯದಲ್ಲಿ ಇರುವ ಚಂದ್ರ ಮತ್ತು ಅವನ ಪತ್ನಿ ಇವರಿಬ್ಬರು, ಪಕ್ಷಸೀ - ಪಾರ್ಶ್ವಭಾಗದಲ್ಲಿ ಯೋಜಿಸುವ ಅಶ್ವಗಳಾಗಿದ್ದಾರೆ. ಪ್ರಸಿದ್ಧರಥಕ್ಕೆ ಸಂಬಂಧಿಸಿದಂತೆ ಪಾರ್ಶ್ವಭಾಗಗಳಲ್ಲಿ ಯೋಜಿಸುವ ಅಶ್ವಗಳಾಗಿದ್ದಾರೆ. ಚಕ್ಷುಷೀ – ಚಕ್ಷುಸ್ಸಿನ ಉಭಯಪಾರ್ಶ್ವಗಳಲ್ಲಿರುವ ಸೂರ್ಯ ಮತ್ತು ಅವನ ಪತ್ನಿ ಇವರಿಬ್ಬರು , ಯುಕ್ತೇ - ಮುಂಭಾಗದಲ್ಲಿ ಯೋಜಿಸಲಾಗುವ ಅಶ್ವಗಳಾಗಿದ್ದಾರೆ. ಮನಃ ಮನೋಭಿಮಾನಿಯಾದ ರುದ್ರನು ಸಂಗೃಹೀತಾ - ಸಾರಥಿಯಾಗಿದ್ದಾನೆ. ಇದೇ ರೀತಿಯಾಗಿ ಅಧಿದೈವದಲ್ಲೂ ಪ್ರಸಿದ್ಧರಥಕ್ಕೂ ರುದ್ರನು ಸಾರಥಿಯಾಗಿದ್ದಾನೆ. 'ತದಯಂ' ಎಂಬ ಪದವು 'ಸ ಚಾಸೌ ಅಯಂ ಚ' ಎಂಬ ವಿಗ್ರಹ ಉಳ್ಳ ಒಂದೇ ಸಮಾಸಪದವಾಗಿದೆ. ತತ್ತ್ವಪ್ರದೀಪರೀತ್ಯಾ ಭಿನ್ನಪದಗಳಾಗಿದ್ದರೂ, 'ತತ್' ಎಂಬ ಪದವು ರಥವೆಂದು ಹೇಳಲಾದ ಶರೀರವನ್ನು ಪರಾಮರ್ಶಿಸುವುದು. ಅಥವಾ ತಂ ಎಂಬುದಾಗಿ ಪುಲ್ಲಿಂಗವಾಗಿ ವ್ಯತ್ಯಾಸವನ್ನು ಪಡೆದು ರಥವನ್ನು ಎಂಬ ಅರ್ಥವನ್ನು ಹೇಳುವುದು. ಅಯಂ ಪ್ರಾಣಃ - ವಿಷ್ಣು ಮತ್ತು ವಾಯುವು ಆ ರಥದಲ್ಲಿ, ಅಧಿತಿಷ್ಠತಿ - ಅಧಿಷ್ಠಿತರಾಗಿರುವರು ಎಂದು ಅರ್ಥ.

(ಭಾ.ದೀ.) ಲಿಂಗೇನ ಪೂರ್ವಪಕ್ಷಿತೇ ಕಥಂ ತೇನೈವ ಸಿದ್ಧಾಂತಃ? ಇತ್ಯಾಶಂಕಾನುದಯಾಯ ಲಿಂಗಬಾಹುಲ್ಯೋಕ್ತಿಃ।

ಲಿಂಗದ ಆಧಾರದಿಂದ ಪೂರ್ವಪಕ್ಷವನ್ನು ಮಾಡಿದಾಗ ಲಿಂಗದಿಂದಲೇ ಸಿದ್ಧಾಂತವನ್ನು ಹೇಳುವುದು ಹೇಗೆ? ಎಂಬ ಶಂಕೆ ಬರದಿರಲು ಅನೇಕ ಲಿಂಗಗಳನ್ನು ಸಿದ್ಧಾಂತದಲ್ಲಿ ಹೇಳಲಾಗಿದೆ.

ಭಾಷ್ಯಮ್ –

'ವಿಷ್ಣುಮೇವಾನಯನ್ ದೇವಾ ವಿಷ್ಣುಂ ಭೂತಿಮುಪಾಸತೇ ।
ಸ ಏವ ಸರ್ವವೇದೋಕ್ತಸ್ತದ್ರಥೋ ದೇಹ ಉಚ್ಯತೇ' ಇತಿ ಸ್ಕಾಂದೇ ॥

ದೇವತೆಗಳು ಪ್ರಧಾನವಾಗಿ ವಿಷ್ಣುವನ್ನೇ ಶಿಷ್ಯಪರಂಪರೆಯಲ್ಲಿ ಉಪ-ದೇಶಿಸಿದರು. ವಿಷ್ಣುವನ್ನೇ ಜ್ಞಾನಾದಿ ಐಶ್ವರ್ಯಸ್ವರೂಪನೆಂದು ಉಪಾ-ಸನೆ ಮಾಡುವರು. ಆ ವಿಷ್ಣುವೇ ಸರ್ವವೇದಗಳಿಂದ ಪ್ರತಿಪಾದ್ಯ-ನಾಗಿದ್ದಾನೆ. ದೇಹವು ವಿಷ್ಣುವಿನ ರಥವೆಂದೆನಿಸುವುದು – ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ.

(ಭಾ.ದೀ.) ನನು ಬಾಹುಲ್ಯೇನ ಬಲವತಃ ಸೈದ್ಧಾಂತಿಕಲಿಂಗಾದಪಿ ಪೂರ್ವ-ವಾದ್ಯುಕ್ತಲಿಂಗಮೇವ ಬಲವತ್ । ನಿರವಕಾಶತ್ವೇನ ಸ್ವಭಾವತೋ ಬಲವತ್ತ್ವಾತ್ । ನ ಚಾವಿಶೇಷೇಣಾನಿರ್ಣಯಃ, ಬಾಹುಲ್ಯೇನ ಬಲವತೋಽಪಿ ಸ್ವಭಾವಬಲಿನಃ ಪ್ರಾಬಲ್ಯಾತ್ । ಯದಾಹುಃ –

ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ ।
ತಯೋಃ ಸ್ವಭಾವೋ ಬಲವಾನ್ ಉಪಜೀವ್ಯಾದಿಕಶ್ಚ ಸಃ ॥ ಇತಿ ।

ಅತಃ ಕಥಂ ತೈರ್ವಿಷ್ಣುತ್ವನಿಶ್ಚಯ ಇತ್ಯತೋ ದೇವತೋಪದೇಶ್ಯತ್ವಾದಿ-ಲಿಂಗಾನಾಂ ನಿರವಕಾಶತ್ವಮಪಿ ಸ್ಮೃತ್ಯಾ ಸಾಧಯತಿ – **ವಿಷ್ಣುಮಿತಿ** ॥ ದೇವಾಃ ವಿಷ್ಣುಮೇವ ಪ್ರಾಧಾನ್ಯೇನ ಶಿಷ್ಯಾದಿಷು ಜ್ಞಾನಸಂಪ್ರದಾಯಪ್ರವರ್ತನೇನ **ಆನಯನ್** ಉಪದಿಶನ್ । ಭೂತಿಮುದ್ದಿಶ್ಯ ವಿಷ್ಣುಮೇವೋಪಾಸತೇ । 'ಭೂತಿಮ್' ಇತಿ ವಿಧೇಯ-ವಿಶೇಷಣಂ ವಾ । ತಥಾಚ – 'ವಿಷ್ಣುಂ ಭೂತಿಂ ಭೂತಿರ್ಜ್ಞಾನಾದ್ಯೈಶ್ವರ್ಯರೂಪ ಇತ್ಯುಪಾಸತೇ' ಇತ್ಯರ್ಥಃ । 'ಸಃ' ವಿಷ್ಣುಃ 'ಮುಖ್ಯವಾಚ್ಯತಯಾ' ಇತಿ ಶೇಷಃ, ತೇನ ಏವಕಾರೋಪಪತ್ತಿಃ । 'ತದ್ ರಥಃ' ವಿಷ್ಣೋರೇವ ರಥಃ । ಅತ್ರ ಏವಕಾರಸ್ಯ ದ್ವಿರ್ಗ್ರಹಣಾತ್ ಸರ್ವತ್ರಾನುಷಂಗಃ ಸೂಚಿತಃ । ತೇನ ಸರ್ವಲಿಂಗಾನಾಮಪಿ ನಿರ-

ವಕಾಶತ್ವಮುಕ್ತಂ ಭವತಿ । 'ಸ್ಕಾಂದೇ' ಇತ್ಯನಂತರಂ 'ಲಿಂಗಾನಾಮ್ ಅನನ್ಯಥಾಸಿದ್ಧತ್ವಮ್ ಉಕ್ತಮ್' ಇತಿ ವಾಕ್ಯಶೇಷಃ । ತಥಾ ಚೈಕಪ್ರಕಾರೇಣ ಪ್ರಬಲಾತ್ ಪೂರ್ವಪಕ್ಷಲಿಂಗಾತ್ ಪ್ರಕಾರದ್ವಯೇನಾಪಿ ಪ್ರಬಲಸ್ಯ ಸೈದ್ಧಾಂತಿಕಲಿಂಗಸ್ಯಾಽಧಿಕ್ಯೇನ ನಿರ್ಣಯೋಪಪತ್ತಿರಿತಿ ಭಾವಃ । ಅಭ್ಯುಪೇತ್ಯ ಚೇದಮುದಿತಮ್ । ವಸ್ತುತಸ್ತು ಪೂರ್ವಪಕ್ಷಿಲಿಂಗಸ್ಯ ನ ನಿರವಕಾಶತ್ವೇನಾಪಿ ಪ್ರಾಬಲ್ಯಮಸ್ತಿ, ಪ್ರಾಣೈಃ ಸಹ ಗಣಿತತ್ವಸ್ಯ ಅಂತರ್ಯಾಮಿನಿಷ್ಠತಾಸಂಭವಾತ್ ।

ಬಹುಲವಾಗಿರುವ ಪ್ರಯುಕ್ತ ಪ್ರಾಬಲ್ಯವನ್ನು ಹೊಂದಿರುವ, ಸಿದ್ಧಾಂತಕ್ಕೆ ಸಂಬಂಧಿ-ಸಿದ ಲಿಂಗಗಳಿಗಿಂತಲೂ ಪೂರ್ವಪಕ್ಷಿ ಹೇಳುವ ಲಿಂಗವೇ ಪ್ರಬಲವಾಗಿದೆ. ಏಕೆಂದರೆ ಅದು ನಿರವಕಾಶವಾಗಿದ್ದು, ಸ್ವಭಾವತಃ ಪ್ರಾಬಲ್ಯವನ್ನು ಪಡೆದಿದೆ. ಇವುಗಳ ಮಧ್ಯೆ ವಿಶೇಷವಿಲ್ಲದಿರುವುದರಿಂದ ನಿರ್ಣಯಮಾಡಲು ಸಾಧ್ಯವಿಲ್ಲ ಎಂದೂ ಹೇಳಲಾಗದು. ಏಕೆಂದರೆ ಬಾಹುಳ್ಯಪ್ರಯುಕ್ತ ಪ್ರಬಲವಾಗಿರುವುದಕ್ಕಿಂತಲೂ ಸ್ವಭಾವತಃ ಬಲವತ್ತಾದುದು ಹೆಚ್ಚು ಪ್ರಬಲವಾಗಿರುವುದು. ಇದನ್ನು ಹೀಗೆ ಹೇಳಿರುವರು–

ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ ।
ತಯೋಃ ಸ್ವಭಾವೋ ಬಲವಾನ್ ಉಪಜೀವ್ಯಾದಿಕಶ್ಚ ಸಃ ॥

'ಪ್ರಾಬಲ್ಯವು ಬಹುತ್ವಪ್ರಯುಕ್ತವಾದುದು ಮತ್ತು ಸ್ವಭಾವಪ್ರಯುಕ್ತವಾದುದು ಎಂಬುದಾಗಿ ಎರಡು ವಿಧವಾಗಿದೆ. ಅವುಗಳ ಮಧ್ಯೆ ಸ್ವಭಾವವೇ ಹೆಚ್ಚು ಪ್ರಬಲವಾದದ್ದು. ಅದು ಉಪಜೀವ್ಯವೇ ಮೊದಲಾದ ಸ್ವರೂಪವಾಗಿರುವುದು.'

ಆದ್ದರಿಂದ ಸಿದ್ಧಾಂತಿಗಳು ಹೇಳುವ ಲಿಂಗಗಳಿಂದ ಪ್ರಾಣನು ವಿಷ್ಣುವೆಂದು ನಿಶ್ಚಯಿಸುವುದು ಹೇಗೆ? ಎಂಬ ಶಂಕೆಗೆ ಪರಿಹಾರವಾಗಿ ದೇವತೋಪದೇಶ್ಯತ್ವ ಮೊದಲಾದ ಲಿಂಗಗಳಿಗೆ ನಿರವಕಾಶತ್ವವಿರುವುದನ್ನು ಆಚಾರ್ಯರು ವಿಷ್ಣುಂ ಎಂಬ ಸ್ಮೃತಿವಾಕ್ಯದಿಂದ ಸಾಧಿಸುತ್ತಿದ್ದಾರೆ. 'ದೇವಾಃ - ದೇವತೆಗಳು, ವಿಷ್ಣುಮೇವ - ವಿಷ್ಣುವನ್ನೇ, ಪ್ರಧಾನವಾಗಿ, ಶಿಷ್ಯರೇ ಮೊದಲಾದವರಲ್ಲಿ ಜ್ಞಾನಸಂಪ್ರದಾಯವನ್ನು ಪ್ರವರ್ತಿಸುವುದರ ಮೂಲಕ ಆನಯನ್ - ಉಪದೇಶಿಸಿದರು. ಭೂತಿಂ - ಐಶ್ವರ್ಯವನ್ನು

ಉದ್ದೇಶಿಸಿ, ವಿಷ್ಣುಮೇವ ಉಪಾಸತೇ - ವಿಷ್ಣುವನ್ನೇ ಉಪಾಸನೆ ಮಾಡುವರು. ಅಥವಾ ಭೂತಿಂ ಎಂಬುವುದು ವಿಧೇಯವಿಶೇಷಣವಾಗಿದೆ. ತಥಾಚ - ವಿಷ್ಣುವನ್ನು ಉದ್ದೇಶಿಸಿ ಭೂತಿಂ ಉಪಾಸತೇ - ಭೂತಿ ಎಂದರೆ ಜ್ಞಾನಾದ್ಯೈಶ್ವರ್ಯವು. ವಿಷ್ಣುವನ್ನು ಜ್ಞಾನಾದ್ಯೈಶ್ವರ್ಯಸ್ವರೂಪನೆಂದು ಉಪಾಸನೆ ಮಾಡುವರು ಎಂದರ್ಥ. ಸಃ ಏವ - ಆ ವಿಷ್ಣುವೇ ಸರ್ವವೇದಗಳಿಂದ ಉಕ್ತನಾಗಿದ್ದಾನೆ. 'ಮುಖ್ಯವಾಚ್ಯತಯಾ' ಎಂಬುದು ಇಲ್ಲಿ ಶೇಷವಾಗಿದೆ. ಮುಖ್ಯಪ್ರತಿಪಾದ್ಯನೆಂದು ಉಕ್ತನಾಗಿದ್ದಾನೆ ಎಂದು ಆಶಯ. ಇದರಿಂದ ವಿಷ್ಣುವೇ ಉಕ್ತನಾಗಿದ್ದಾನೆ ಎಂಬ ಏವಕಾರವು ಯುಕ್ತವಾಗುವುದು. ದೇಹವು 'ತದ್ರಥಃ' ವಿಷ್ಣುವಿನದ್ದೇ ಆಗಿರುವ ರಥವಾಗಿದೆ. ಈ ಶ್ಲೋಕದಲ್ಲಿ ಏವಕಾರವನ್ನು ಎರಡು ಸಲ ಹೇಳಿರುವುದರಿಂದ, ಅದು ಎಲ್ಲ ವಾಕ್ಯಗಳಲ್ಲೂ ಅನುವೃತ್ತಿಯನ್ನು ಪಡೆ-ಯುವುದೆಂದು ಸೂಚಿತವಾಗಿದೆ. ಆದರಿಂದ, ಎಲ್ಲ ಲಿಂಗಗಳಿಗೂ ನಿರವಕಾಶತ್ವವನ್ನು ಹೇಳಿದಂತಾಗುವುದು. 'ಸ್ಕಾಂದೇ' ಎಂಬ ಪದದ ಅನಂತರ 'ಲಿಂಗಾನಾಮನನ್ಯಥಾ-ಸಿದ್ಧತ್ವಮುಕ್ತಮ್' 'ಲಿಂಗಗಳು ಅನನ್ಯಥಾಸಿದ್ಧ ಅಂದರೆ ಮತ್ತೊಬ್ಬರಲ್ಲಿ ಅವಕಾಶವಿಲ್ಲ-ದಿರುವವುಗಳೆಂದು ಉಕ್ತವಾಗುವುದು' ಎಂಬುದು ವಾಕ್ಯಶೇಷವಾಗಿದೆ. ತಥಾಚ – ಕೇವಲ ಒಂದು ಪ್ರಕಾರದಿಂದ ಪ್ರಬಲವಾದ ಪೂರ್ವಪಕ್ಷಿಯ ಲಿಂಗಕ್ಕಿಂತಲೂ ಎರಡು ಪ್ರಕಾರಗಳಿಂದಲೂ ಪ್ರಬಲವಾದ ಸಿದ್ಧಾಂತದ ಲಿಂಗಗಳು ಹೆಚ್ಚು ಪ್ರಬಲವಾದುದರಿಂದ ನಿರ್ಣಯ ಮಾಡಲು ಸಾಧ್ಯವಿದೆ ಎಂದು ಭಾವ. ಈ ಸಮಾಧಾನವನ್ನು ಪೂರ್ವಪಕ್ಷಿಯ ಆಕ್ಷೇಪವನ್ನು ಒಪ್ಪಿಕೊಂಡು ಹೇಳಲಾಗಿದೆ. ವಾಸ್ತವಿಕವಾಗಿ ಪೂರ್ವಪಕ್ಷಿ ಹೇಳುವ ಲಿಂಗಕ್ಕೆ ನಿರವಕಾಶತ್ವಪ್ರಯುಕ್ತವಾಗಿಯೂ ಪ್ರಾಬಲ್ಯವಿಲ್ಲ. ಏಕೆಂದರೆ, ಪೂರ್ವಪಕ್ಷಿಯು ಹೇಳುವ 'ಇಂದ್ರಿಯಗಳೊಂದಿಗೆ ಪರಿಗಣಿತವಾಗಿರುವಿಕೆ' ಎಂಬ ಲಿಂಗವು ಅಂತ-ರ್ಯಾಮಿಗೆ ಸಂಬಂಧಿಸಿದ್ದೆಂದು ಹೇಳಲು ಅವಕಾಶವಿದೆ.

ಭಾ – ಬ್ರಹ್ಮಶಬ್ದಾನುಗಮಾಚ್ಚ ॥ ೨೮ ॥

(ಈ ಪ್ರಕರಣದಲ್ಲಿ) ಬ್ರಹ್ಮನನ್ನು ಬಿಟ್ಟು ಉಳಿದ ಕಡೆ ಅವಕಾಶವಿಲ್ಲದ ಬ್ರಹ್ಮಶಬ್ದದ ಅಭ್ಯಾಸವು ಇರುವುದರಿಂದಲೂ (ಪ್ರಾಣನು ವಿಷ್ಣುವೇ ಆಗಿದ್ದಾನೆ.)

(ಭಾ.ದೀ.) ಯದಾ ಬಹುತ್ವ-ನಿರವಕಾಶತ್ವಾಖ್ಯಪ್ರಕಾರದ್ವಯೇನಾಪಿ ದುರ್ಬಲ-ಲಿಂಗಸ್ಯ ಉಭಯಥಾ ಪ್ರಬಲಲಿಂಗತೋ ಬಾಧಸಂಭವೇನ ತೇನೈವ ಪ್ರಾಣಸ್ಯ ವಿಷ್ಣುತ್ವ-ಸಿದ್ಧಿಃ, ತದಾ ಕಿಮು ವಾಚ್ಯಂ ನಿರವಕಾಶಬ್ರಹ್ಮಶಬ್ದಾಭ್ಯಾಸಾತ್ ಇತಿ ಭಾವೇನ 'ಅನುಗಮ'ಪದಂ ಪ್ರಕಾರಾಂತರೇಣ ವ್ಯಾಚಷ್ಟೇ – ಬ್ರಹ್ಮೇತಿ ॥ ಅಸ್ಮಿನ್ ಪ್ರಕರಣೇ 'ಏತದ್ ಬ್ರಹ್ಮ' (ಐ.ಆ.೨-೧-೧); 'ಬ್ರಹ್ಮಣೋ ಲೋಕಃ' (ಐ.ಆ.೨-೧-೩); 'ಬ್ರಹ್ಮೇಮಂ ಪುರುಷಮ್' (ಐ.ಆ. ೨-೧-೪); 'ಉದರಂ ಬ್ರಹ್ಮೇತ್ಯಾಚಕ್ಷತೇ' (ಐ.ಆ.೨-೧-೪); 'ಅ ಇತಿ ಬ್ರಹ್ಮ' (ಐ.ಆ. ೨-೩-೮) ಇತ್ಯಾದಿ ನಿರವಕಾಶ-ಬ್ರಹ್ಮಶಬ್ದಾಭ್ಯಾಸಾಚ್ಚ ಇತ್ಯರ್ಥಃ। ಏತದ್ ವಿಷ್ಣುಸ್ವರೂಪಂ ಬ್ರಹ್ಮ ಗುಣಪೂರ್ಣಮ್। ಅಯಂ ಜೀವೋ ಬ್ರಹ್ಮಣಃ ಪರಸ್ಯ ಆಶ್ರಯಃ। ಇಮಂ ಪುರುಷಂ ಚತುರ್ಮುಖಂ ಪರಬ್ರಹ್ಮ ಪ್ರಾಪದ್ಯತ। ವಾಯುರ್ಯತ್ರ ಸ್ಥಿತ ಉರ್ವೇವ ಗರಣಂ ಸ್ತವನಂ ಚಕ್ರೇ ತತ್ ಸ್ಥಾನಮ್ ಉದರಂ ತದ್ಗತಮ್ – ಇತ್ಯರ್ಥಃ।

ಯಾವಾಗ ಬಹುತ್ವ ಮತ್ತು ನಿರವಕಾಶತ್ವ ಎಂಬ ಎರಡು ಪ್ರಕಾರಗಳಿಂದಲೂ ಬಲವಿಲ್ಲದಿರುವ ಲಿಂಗಕ್ಕೆ ಎರಡು ರೀತಿಯಿಂದಲೂ ಪ್ರಬಲವಾಗಿರುವ ಲಿಂಗದಿಂದ ಬಾಧ ಉಂಟಾಗುವ ಕಾರಣ ಅಂತಹ ಲಿಂಗದಿಂದಲೇ ಪ್ರಾಣನು ವಿಷ್ಣುವೆಂದು ಸಿದ್ಧ-ವಾಗುವುದೋ ಆಗ ನಿರವಕಾಶವಾದ ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದಲೂ ಅದು ಸಿದ್ಧಿಸುವುದು ಎಂಬುದನ್ನು ಹೇಳಬೇಕಾದುದೇನು? ಎಂಬ ಆಶಯದಿಂದ ಸೂತ್ರ-ದಲ್ಲಿರುವ ಅನುಗಮಪದವನ್ನು ಆಚಾರ್ಯರು 'ಬ್ರಹ್ಮ' ಎಂಬವಾಕ್ಯದಿಂದ ಇನ್ನೊಂದು ರೀತಿಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ಈ ಪ್ರಕರಣದಲ್ಲಿ 'ಏತದ್‌ಬ್ರಹ್ಮ'(ಐ.ಆ.೨-೧-೧) 'ಬ್ರಹ್ಮಣೋ ಲೋಕಃ' (ಐ.ಆ.೨-೧-೩) 'ಬ್ರಹ್ಮೇಮಂ ಪುರುಷಂ' 'ಉದರಂ ಬ್ರಹ್ಮೇತ್ಯಾಚಕ್ಷತೇ 'ಅ ಇತಿ ಬ್ರಹ್ಮ' ಇತ್ಯಾದಿಯಾಗಿ ನಿರವಕಾಶವಾದ ಬ್ರಹ್ಮಶಬ್ದದ ಅಭ್ಯಾಸದಿಂದಲೂ ಕೂಡ ಎಂದು ಅರ್ಥ. ಏತದ್ ಬ್ರಹ್ಮ – ಈ ವಿಷ್ಣುಸ್ವರೂಪವು ಬ್ರಹ್ಮ; ಗುಣಪೂರ್ಣವಾಗಿದೆ. ಈ ಜೀವನು ಬ್ರಹ್ಮಣಃ ಲೋಕಃ - ಪರಬ್ರಹ್ಮನಿಗೆ ವಾಸಸ್ಥಾನವಾಗಿದ್ದಾನೆ. ಇಮಂ ಪುರುಷಂ - ಈ ಚತುರ್ಮುಖನನ್ನು ಬ್ರಹ್ಮ(ಪ್ರಾಪದ್ಯತ) ಪರಬ್ರಹ್ಮನು ಹೊಂದಿದನು.

ವಾಯುವು ಎಲ್ಲಿ ಇದ್ದು ಉರ್ವೀವ ಗರಣಂ ಚೆನ್ನಾಗಿ ಸ್ತೋತ್ರವನ್ನು ಮಾಡಿದನೋ, ಆ ಸ್ಥಾನವು ಉದರ; ಪರಬ್ರಹ್ಮನು ಅಲ್ಲಿರುವನೆಂದು ಹೇಳುವರು (ಎಂದು ಉದರಂ ಬ್ರಹ್ಮೇತ್ಯಾಚಕ್ಷತೇ ಎಂಬ ವಾಕ್ಯದ ಆಶಯ).

**॥ ಓಂ ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ಓಂ ॥ ೨೯ ॥**

ಬೃಹತೀಸಹಸ್ರವನ್ನು ಹೇಳಿದ ವಿಶ್ವಾಮಿತ್ರನನ್ನು ಕುರಿತು ಇಂದ್ರನು ತಾನೇ ಪ್ರಾಣನೆಂದು ಉಪದೇಶಿಸಿರುವುದರಿಂದ, ಪ್ರಾಣನು ಬ್ರಹ್ಮನಲ್ಲ ಎಂದರೆ, ಅದು ಸರಿಯಲ್ಲ; ಏಕೆಂದರೆ, ಈ ಪ್ರಕರಣದಲ್ಲಿ ಇಂದ್ರ, ವಿಶ್ವಾಮಿತ್ರ ಮೊದಲಾದವರ ದೇಹಗಳಲ್ಲಿ ಬಹಳವಾದ ವಿಷ್ಣುವಿನ ಸಂಬಂಧವು ಇಲ್ಲಿ ಹೇಳಲ್ಪಟ್ಟಿದೆ.

**ಭಾ– 'ಪ್ರಾಣೋ ವಾ ಅಹಮಸ್ಮ್ಯೃಷೇ'(ಐ.ಆ. ೨-೨-೩)ಇತಿ ವಕ್ತುರಾತ್ಮೋಪದೇಶಾದಿಂದ್ರ ಏವೇತಿ ಚೇನ್ನ, 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಇತಿ ಬಹ್ವಧ್ಯಾತ್ಮಸಂಬಂಧೋ ಹ್ಯತ್ರ ವಿದ್ಯತೇ ॥ ೨೯ ॥**

ಎಲೈ ವಿಶ್ವಾಮಿತ್ರನೇ! 'ನಾನೇ ಪ್ರಾಣಶಬ್ದವಾಚ್ಯನಾಗಿದ್ದೇನೆ' ಎಂದು ಬೃಹತೀಸಹಸ್ರವನ್ನು ಹೇಳುವ ವಿಶ್ವಾಮಿತ್ರನಿಗೆ ಇಂದ್ರನು ತಾನೇ ಪ್ರಾಣನೆಂದು ಉಪದೇಶಿಸಿರುವುದರಿಂದ ಪ್ರಾಣನು ಇಂದ್ರನೇ ಆಗಿದ್ದಾನೆ ಎಂದರೆ, ಅದು ಸರಿಯಲ್ಲ. ಏಕೆಂದರೆ, ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಇತ್ಯಾದಿ ವಾಕ್ಯಗಳಿಂದ ಪ್ರಾಣಾಖ್ಯಪರಮಾತ್ಮನಿಗೆ ಇಂದ್ರ ಮೊದಲಾದ ಅನೇಕ ದೇಹಗಳ ಸಂಬಂಧವನ್ನೇ ಇಲ್ಲಿ ಹೇಳಲಾಗಿದೆ.

(ಭಾ.ದೀ.) ಉಕ್ತಮಾಕ್ಷಿಪ್ಯ ಸಮಾದಧತ್ ಸೂತ್ರಂ ಪಠಿತ್ವಾ ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – **ನೇತಿ** ॥ 'ಪ್ರಾಣಃ' ಇತ್ಯನುವರ್ತತೇ । ತಥಾಚ – **ಪ್ರಾಣೋ**

ವಿಷ್ಣುರಿತಿ ನ ಯುಕ್ತಮ್ । ಕುತಃ? 'ಪ್ರಾಣೋ ವಾ ಅಹಮಸ್ಮಿ ಋಷೇ' ಇತಿ ವಾಕ್ಯೇನ ಬೃಹತೀಸಹಸ್ರವಕ್ತುರ್ವಿಶ್ವಾಮಿತ್ರಸ್ಯ ಇಂದ್ರೇಣ ಪ್ರಾಣತಯಾ ಆತ್ಮನಃ ಸ್ವಸ್ಯೈವ ಉಪದೇಶಾತ್ - ಇತ್ಯರ್ಥಃ। 'ಪ್ರಾಣಃ ಇಂದ್ರ ಏವ' ಇತಿ ಫಲೋಕ್ತಿಃ। ನ ತೂಕ್ತಹೇತೋಃ ಸಾಧ್ಯೋಕ್ತಿಃ।

'ಪ್ರಾಣೋ ವಾ ಅಹಮಸ್ಮಿ ಋಷೇ' ಇತಿ ವಾಕ್ಯಂ ತು 'ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾಃ ವರಂ ತೇ ದದಾಮೀತಿ। ಸ ಹೋವಾಚ ತ್ವಾಮೇವ ಜಾನೀಯಾಮಿತಿ । ತಮಿಂದ್ರ ಉವಾಚ' ಇತಿ ಪೂರ್ವವಾಕ್ಯೇನ ಸಹ ವ್ಯಾಖ್ಯೇಯಮ್ । ತತ್ಪ್ರಕಾರಸ್ತು – 'ತಮ್' ವಿಶ್ವಾಮಿತ್ರಂ 'ಇಂದ್ರಃ' ತದಂತಃಸ್ಥೋ ಭಗವಾನ್ ಉವಾಚ । ಕಿಮಿತಿ? ಹೇ ಋಷೇ! ಮೇ ಪ್ರಿಯಂ ಧಾಮೋಪಾಗಾಃ ಪ್ರಾಪ್ನುಹಿ । ತೇ ವರಂ ದದಾಮೀತಿ। 'ವೈ'ಶಬ್ದೋ ಅವಧಾರಣೇ ಪ್ರಸಿದ್ಧೌ ವಾ।

ಹಿಂದಿನ ಸೂತ್ರದಲ್ಲಿ ಹೇಳಿರುವುದನ್ನು ಆಕ್ಷೇಪಿಸಿ ಸಮಾಧಾನ ಹೇಳುವ ಸೂತ್ರವನ್ನು ಪಠಿಸಿ, ಆಚಾರ್ಯರು ಮೊದಲು ಆಕ್ಷೇಪಾಂಶವನ್ನು 'ನ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಪ್ರಾಣಃ' ಎಂಬ ಪದವು ಅನುವೃತ್ತಿಯನ್ನು ಹೊಂದುತ್ತದೆ. ತಥಾ ಚ – ಪ್ರಾಣನು ವಿಷ್ಣುವೆಂದು ಹೇಳುವುದು ಯುಕ್ತವಲ್ಲ; ಏಕೆಂದರೆ 'ಪ್ರಾಣೋ ವಾ ಅಹಮಸ್ಮಿ ಋಷೇ' ಎಂಬ ವಾಕ್ಯದಿಂದ ಬೃಹತೀಸಹಸ್ರವನ್ನು ಹೇಳುವ ವಿಶ್ವಾಮಿತ್ರನಿಗೆ ಇಂದ್ರನು ಪ್ರಾಣನೆಂದು ಆತ್ಮೋಪದೇಶಾತ್ ಅಂದರೆ ತನ್ನನ್ನೇ ಉಪದೇಶಿಸಿರುವುದರಿಂದ ಎಂದು ಅರ್ಥ. ಭಾಷ್ಯದಲ್ಲಿ ಪ್ರಾಣಃ ಇಂದ್ರ ಏವ ಎಂದು ಪೂರ್ವಪಕ್ಷದ ಫಲವನ್ನು ಹೇಳುವ ಮಾತು; ಹೊರತು ಆತ್ಮೋಪದೇಶಾತ್ ಎಂಬ ಹೇತುವಿಗೆ ಸಾಧ್ಯವನ್ನು ಹೇಳುವ ವಾಕ್ಯವಲ್ಲ.

'ಪ್ರಾಣೋ ವಾ ಅಹಮಸ್ಮಿ ಋಷೇ' ಎಂಬ ವಾಕ್ಯವನ್ನಾದರೋ 'ತಮಿಂದ್ರ ಉವಾಚ ಋಷೇ ಪ್ರಿಯಂ ವೈ ಮೇ ಧಾಮೋಪಾಗಾಃ ವರಂ ತೇ ದದಾಮೀತಿ। ಸ ಹೋವಾಚ ತ್ವಾಮೇವ ಜಾನೀಯಾಮಿತಿ । ತಮಿಂದ್ರ ಉವಾಚ' ಎಂಬ ಹಿಂದಿನ ವಾಕ್ಯದ ಜೊತೆಗೆ ಸೇರಿಸಿ ವ್ಯಾಖ್ಯಾನ ಮಾಡಬೇಕು. ಅದರ ರೀತಿ ಹೀಗಿರು-

ವುದು. – ತಂ ಆ ವಿಶ್ವಾಮಿತ್ರನನ್ನು, ಇಂದ್ರಃ ಉವಾಚ - ಇಂದ್ರನ ಒಳಗಿರುವ ಭಗವಂತನು ಹೇಳಿದನು, ಏನೆಂದು? 'ಹೇ ಋಷೇ! ಮೇ ಪ್ರಿಯಂ ಧಾಮ ಉಪಾಗಾಃ' ಎಲೈ ಋಷಿಯೇ! ನನ್ನ ಪ್ರಿಯವಾದ ಸ್ಥಾನವನ್ನು ನೀನು ಪಡೆಯುವಿ. ತೇ ವರಂ ದದಾಮಿ - ನಿನಗೆ ವರವನ್ನು ಕೊಡುವೆನು ಎಂದು. (ಪ್ರಿಯಂ ವೈ) ಎಂಬ-ಲ್ಲಿರುವ ವೈಶಬ್ದವು ಅವಧಾರಣಾರ್ಥಕವಾಗಿದೆ. ಅಥವಾ ಪ್ರಸಿದ್ಧಿಯನ್ನು ಹೇಳುವುದು.

(ಭಾ.ದೀ.) ಏವಂ ತ್ರಿವಾರಂ ಶಂಸನೇನ ಧಾಮಶಬ್ದಿತಸಾಲೋಕ್ಯಪ್ರಾಪ್ತಿ-ಭಗವತ್ಪುರಪ್ರಾಪ್ತಿಸಾಧನಭಗವತ್ಪ್ರಸಾದಂ ಪ್ರಾಪ್ತಃ 'ಸಃ' ವಿಶ್ವಾಮಿತ್ರಃ ಇಂದ್ರಾವಿಷ್ಟೇನ ಹರಿಣಾ 'ವರಂ ತೇ ದದಾನಿ' ಇತಿ ಪುನರುಕ್ತಃ ಸನ್ ಉವಾಚ । ಕಿಮಿತಿ? ತ್ವಾಂ ಸಾಮಾನ್ಯತಃ ಪೂರ್ವಮ್ ಅಹಂ ಜಾನೇ । ಅಧುನಾ ಕೀದೃಶಃ ತ್ವಮ್? ಇತಿ ವಿಶೇಷತೋ ಜಾನೀಯಾಮಿತಿ । ಏವಮುಕ್ತಃ 'ಇಂದ್ರಃ' ತದಂತರ್ಗತೋ ಹರಿಃ ಋಷಿಂ ಪ್ರತ್ಯುವಾಚ । ಕಿಮಿತಿ? ಹೇ ಋಷೇ! ಅಹಂ ಪ್ರಕೃಷ್ಟಾನಂದರೂಪತ್ವಾತ್ ಪ್ರಾಣ-ಶಬ್ದವಾಚ್ಯೋಽಸ್ಮಿ - ಇತಿ । ಅತ್ರ ವಾಕ್ಯಸಮನ್ವಯಪಕ್ಷೇ ಅಸ್ಮದಾದಿಷು ಉಪಪದೇಷು ವಿಹಿತಾನಾಮ್ 'ಅಸ್ಮಿ' ಇತ್ಯಾದಿತಿಙಂತಪದಾನಾಂ ತದ್ವೃತ್ತೇಃ ಸುಲಭತ್ವಾದಿತಿ ತತ್ವನಿರ್ಣಯಟೀಕಾರೀತ್ಯಾ ಅಹಮಿತಿ ಇಂದ್ರಾಂತಃಸ್ಥೇನ ಹರಿಣಾ ಸ್ವಾತ್ಮನೋ ನಿರ್ದೇಶಾತ್ ಅಸ್ಮೀತಿ ಉತ್ತಮಪುರುಷೋಪಪತ್ತಿಃ।

ಪೂರ್ವಪಕ್ಷಿರೀತ್ಯಾ ಶ್ರುತ್ಯರ್ಥಸ್ತು ಸ್ಪಷ್ಟಃ। ಅಹಂ ಪ್ರಾಣೋಽಸ್ಮೀತಿ ಪದಾನಾಮ್ ಅಹೇಯತ್ವ-ಪ್ರಕೃಷ್ಟಾನಂದತ್ವ-ಸಂಹರ್ತೃತ್ವನಿಮಿತ್ತೈಃ ಭಗವತಿ ಸಮನ್ವಯಪಕ್ಷೇ ತು ನ ತದನುಪಪತ್ತಿರಿತಿ ಧ್ಯೇಯಮ್ ।

ಹೀಗೆ ಮೂರು ಬಾರಿ ಬೃಹತೀಸಹಸ್ರದ ಪಠನದಿಂದ ಧಾಮಶಬ್ದವು ಹೇಳುವ ಸಾಲೋಕ್ಯಪ್ರಾಪ್ತಿ ಅಂದರೆ ಭಗವಂತನ ಪುರದ ಪ್ರಾಪ್ತಿಗೆ ಸಾಧನವಾದ ಭಗವಂತನ ಅನುಗ್ರಹವನ್ನು ಪಡೆದ ಸಃ - ಆ ವಿಶ್ವಾಮಿತ್ರನು, ಇಂದ್ರನಲ್ಲಿ ಆವಿಷ್ಟನಾದ ಹರಿಯಿಂದ 'ನಿನಗೆ ವರವನ್ನು ಕೊಡುವೆನು' ಎಂಬುದಾಗಿ ಪುನಃ ಹೇಳಲ್ಪಟ್ಟವನಾಗಿ ಹೇಳಿದನು. ಏನೆಂದು? ನಿನ್ನನ್ನು ಸಾಮಾನ್ಯರೀತಿಯಿಂದ ಮೊದಲೇ ನಾನು ತಿಳಿದಿದ್ದೇನೆ. ಈಗ ನೀನು

ಎಂತಹವನೆಂದು ವಿಶೇಷವಾಗಿ ತಿಳಿಯಲು ಇಚ್ಛಿಸುತ್ತೇನೆ ಎಂದು. ಹೀಗೆ ಹೇಳಲ್ಪಟ್ಟ 'ಇಂದ್ರಃ' ಇಂದ್ರಾಂತರ್ಗತನಾದ ಹರಿಯು ಋಷಿಯನ್ನು ಕುರಿತು ಹೇಳಿದನು. ಏನೆಂದು? ''ಪ್ರಾಣೋ ವಾ ಅಹಮಸ್ಮ್ಯೃಷೇ'' – 'ಹೇ ಋಷಿಯೇ! ನಾನು ಪ್ರಕೃಷ್ಟ-ವಾದ ಆನಂದದ ಸ್ವರೂಪವೇ ಆಗಿರುವುದರಿಂದ ಪ್ರಾಣಶಬ್ದವಾಚ್ಯನಾಗಿದ್ದೇನೆ' ಎಂದು. ಇಲ್ಲಿ, [೧]ವಾಕ್ಯಸಮನ್ವಯಪಕ್ಷದಲ್ಲಿ – ಅಸ್ಮತ್ ಮೊದಲಾದ ಶಬ್ದಗಳು ಉಪಪದವಾಗಿ-ರುವಾಗ ವಿಹಿತವಾದ ಅಸ್ಮಿ ಮೊದಲಾದ ತಿಙಂತಪದಗಳಿಗೆ ಅಂತರ್ಯಾಮಿವಾಚಿತ್ವವು ಸುಲಭವಾಗಿದೆ ಎಂಬುದಾಗಿ ತತ್ವನಿರ್ಣಯಟೀಕೆಯಲ್ಲಿ ಹೇಳಿದ ಪ್ರಕಾರ ಅಹಂ ಎಂಬುದಾಗಿ ಇಂದ್ರನೊಳಗಿರುವ ಶ್ರೀಹರಿಯು ತನ್ನನ್ನೇ ನಿರ್ದೇಶಿಸುತ್ತಿರುವುದರಿಂದ ಅಸ್ಮಿ ಎಂದು ಉತ್ತಮಪುರುಷವಿರುವುದು ಯುಕ್ತವಾಗಿದೆ.

ಪೂರ್ವಪಕ್ಷಿಯ ಪ್ರಕಾರ ಶ್ರುತ್ಯರ್ಥವು ಸ್ಪಷ್ಟವಾಗಿದೆ. 'ಅಹಂ ಪ್ರಾಣೋऽಸ್ಮಿ' ಎಂಬ ಪದಗಳಿಗೆ ಕ್ರಮವಾಗಿ ಅಹೇಯತ್ವ, ಪ್ರಕೃಷ್ಟಾನಂದತ್ವ, ಸಂಹರ್ತೃತ್ವ ಮತ್ತು ಜ್ಞಾತೃತ್ವ ಎಂಬ ನಿಮಿತ್ತಗಳಿಂದ ಭಗವಂತನಲ್ಲಿ ಸಮನ್ವಯಮಾಡುವ (ಪದಸಮನ್ವಯ) ಪಕ್ಷದಲ್ಲಾದರೋ ಉತ್ತಮಪುರುಷಪ್ರಯೋಗದ ಅನುಪಪತ್ತಿಯೇ ಇಲ್ಲವೆಂದು ತಿಳಿಯಬೇಕು.

(೧) ಶ್ರುತಿಸಮನ್ವಯವು ವಾಕ್ಯಸಮನ್ವಯ, ಪದಸಮನ್ವಯ ಎಂಬುದಾಗಿ ಎರಡು ವಿಧವಾದುದು. ವಾಕ್ಯಸಮನ್ವಯಪಕ್ಷದಲ್ಲಿ ಇಂದ್ರಶಬ್ದವು ಇಂದ್ರಾಂತ-ರ್ಗತನಾದ ಹರಿಯನ್ನು ಹೇಳುವ ಪದವಾಗಿದೆ. ಆ ಶ್ರೀಹರಿಯು ವಿಶ್ವಾಮಿತ್ರ-ನನ್ನು ಕುರಿತು ತನ್ನನ್ನೇ ಅಹಂ ಎಂದು ನಿರ್ದೇಶಿಸಿ, 'ನಾನು ಪ್ರಕೃಷ್ಟಾನಂದ-ಸ್ವರೂಪನಾದುದರಿಂದ ಪ್ರಾಣನೆಂದೆನಿಸುವೆನು' ಎಂದು ಹೇಳುವೆನೆಂದು 'ಪ್ರಾಣೋ ವಾ' ಎಂಬ ಶ್ರುತಿಯ ಅರ್ಥವಾಗುವುದು. ಈ ಪಕ್ಷದಲ್ಲಿ ಅಸ್ಮತ್ ಶಬ್ದವು ಉಪಪದವಾಗಿರುವಾಗ ಕ್ರಿಯಾಪದವು ಉತ್ತಮಪುರುಷದಲ್ಲಿರಬೇಕೆಂಬ ನಿಯಮಕ್ಕೆ ಯಾವ ಬಾಧಕವೂ ಇಲ್ಲ ಎಂಬುದಾಗಿ ತತ್ವನಿರ್ಣಯಟೀಕೆಯಲ್ಲಿ ಹೇಳಿರುವುದನ್ನು ಭಾಷ್ಯದೀಪಿಕೆಯಲ್ಲಿ ಸ್ಮರಿಸಲಾಗಿದೆ.

ಪದಸಮನ್ವಯವೆಂದರೆ ಶ್ರುತಿಯಲ್ಲಿರುವ ಒಂದೊಂದು ಪದವೂ ಭಗವಂತನ ಗುಣವನ್ನು ಹೇಳುವ ಪದವಾಗಿದೆ ಎಂಬುದಾಗಿ ವ್ಯಾಖ್ಯಾನಿಸುವುದು. ಈ ಪಕ್ಷ-

ದಲ್ಲಿ 'ಪ್ರಾಣೋ ವಾ ಅಹಮಸ್ಮಿ' ಎಂಬ ವಾಕ್ಯದಲ್ಲಿ ಪ್ರಾಣಶಬ್ದವು ಪ್ರಕೃಷ್ಟಾನಂದತ್ವವೆಂಬ ಪ್ರವೃತ್ತಿನಿಮಿತ್ತದಿಂದ ಭಗವಂತನನ್ನು ಹೇಳುವುದು. ಅಹಂ–ಶಬ್ದವು ಅಹೇಯತ್ವವೆಂಬ ಧರ್ಮವನ್ನು ನಿಮಿತ್ತವಾಗಿಟ್ಟುಕೊಂಡು ಶ್ರೀಹರಿ–ಯನ್ನು ಹೇಳುವುದು. ಅಸ್ಮಿ ಎಂಬ ಪದದಲ್ಲಿ 'ಅಸ್'ಧಾತುವು ಅಸನ ಅಂದರೆ ಸಂಹರ್ತೃತ್ವನಿಮಿತ್ತದಿಂದ ಮತ್ತು ಮಿ ಎಂಬ ಅಂಶವು ಜ್ಞಾತೃತ್ವನಿಮಿತ್ತದಿಂದ ಭಗವಂತನನ್ನು ಹೇಳುತ್ತದೆ. ಆದ್ದರಿಂದ ಈ ಪಕ್ಷದಲ್ಲಿ ಅಸ್ಮಿ ಎಂಬ ಪದವು ಕ್ರಿಯಾಪದವೇ ಅಲ್ಲ. ಆದ ಪ್ರಯುಕ್ತ ಉತ್ತಮಪುರುಷದಲ್ಲಿ ಕ್ರಿಯಾಪದದ ಪ್ರಯೋಗವಿಲ್ಲದ್ದರಿಂದ, ಇಂದ್ರನು ವಿಶ್ವಾಮಿತ್ರನನ್ನು ಕುರಿತು 'ನಾನೇ ಪ್ರಾಣ–ನಾಗಿದ್ದೇನೆ' ಎಂದು ಹೇಳುವುದು ಹೇಗೆ ಸರಿ ಎಂಬ ಶಂಕೆಗೆ ಅವಕಾಶವಿಲ್ಲವೆಂದು ಭಾವ.

(ಭಾ.ದೀ.) ನಞಧ್ಯಾಹಾರೇಣ ಸಿದ್ಧಾಂತಾಂಶಂ ವ್ಯಾಚಷ್ಟೇ – **ನೇತಿ** ॥ 'ಅನುಗಮಾತ್' ಇತ್ಯನುವರ್ತತೇ । 'ನ' ಇತ್ಯಾವರ್ತತೇ । 'ಹಿ'ಶಬ್ದೋ 'ಯತಃ' ಇತ್ಯರ್ಥೇ । 'ಅಸ್ಯೋಕ್ತಮ್' ಇತಿ ಶೇಷಃ । ತಥಾ ಚ ಇತ್ಥಂ ತತ್ತ್ವಪ್ರದೀಪಟೀಕೋಕ್ತಾ ಯೋಜನಾ – ನಾಯಂ ಪ್ರಾಣಃ ಇಂದ್ರಃ, ಕಿಂತು ವಿಷ್ಣುರೇವ । ಕುತಃ? 'ಅನುಗ–ಮಾತ್' ಪ್ರಾಗುಕ್ತಪ್ರಬಲತಮಲಿಂಗಾದೇಃ । ತಥಾ ಸತಿ ಉಪದೇಶವಿರೋಧ ಇತಿ ಚೇತ್ – ನ, ಕುತಃ? ಯತಃ ಅತ್ರ ಪ್ರಕರಣೇ ಸ್ವಸ್ಥಿತಸ್ಯೈವ ಪ್ರಥಮಂ 'ಪ್ರಾಣೋ ವಾ ಅಹಮಸ್ಮಿ ಋಷೇ' ಇತಿ ವಾಕ್ಯೇನ ಪರಮಾತ್ಮತ್ವಮ್ ಉಕ್ತಮ್ ಇಂದ್ರೇಣ । ತರ್ಹಿ ಐಕ್ಯೋಕ್ತಿವಿರೋಧಃ ಇತ್ಯಪಿ ನ । ಯತಃ ಅತ್ರ ತಸ್ಯೈವ ಪ್ರಾಣಾಖ್ಯಪರಮಾತ್ಮನಃ 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಇತ್ಯೇವಮಾದಿವಾಕ್ಯೇನ 'ಬಹ್ವಧ್ಯಾತ್ಮ–ಸಂಬಂಧಃ' - ಇಂದ್ರಾದಿಜೀವರೂಪಬಹುದೇಹಸಂಬಂಧಃ ಸರ್ವಗತತ್ವಮೇವ ಋಷಿಂ ಪ್ರತಿ ಇಂದ್ರೇಣೋಕ್ತಂ ವಿದ್ಯತೇ - ಅಸ್ತಿ ನ ತು ಐಕ್ಯಮತ ಇತಿ । ಸೂತ್ರೋಕ್ತಸಂಬಂಧ–ಬಾಹುಲ್ಯಂ ಸಂಬಂಧಿನಿ ಪರ್ಯವಸ್ಯತಿ ಇತ್ಯಾಶಯೇನ 'ಬಹು' ಇತ್ಯುಕ್ತಮ್ । 'ಭೂಮ'ಶಬ್ದಸ್ಯ ಭಾವವಾಚಿತ್ವೇಽಪಿ ಭಾವಭವಿತ್ರೋರಭೇದಾದ್ ಭವಿತರಿ ಪ್ರಯೋಗಃ । ಸೂತ್ರೇ ತು ಪರನಿಪಾತ ಆರ್ಷಃ ॥

ಸೂತ್ರದಲ್ಲಿ 'ನಞ್'ಪದವನ್ನು ಅಧ್ಯಾಹಾರ ಮಾಡಿಕೊಂಡು ಸಿದ್ಧಾಂತದ ಅಂಶವನ್ನು 'ನ' ಎಂಬ ವಾಕ್ಯದಿಂದ ವ್ಯಾಖ್ಯಾನಮಾಡಲಾಗಿದೆ. 'ಅನುಗಮಾತ್' ಎಂಬ ಪದವು ಹಿಂದಿನ ಸೂತ್ರದಿಂದ ಅನುವೃತ್ತಿಯನ್ನು ಪಡೆಯುತ್ತದೆ. 'ನ' ಎಂಬ ಪದವು ಆವೃತ್ತಿಯನ್ನು ಹೊಂದುವುದು. 'ಹಿ'ಶಬ್ದವು ಯಾವ ಕಾರಣದಿಂದ ಎಂಬ ಅರ್ಥವನ್ನು ಹೇಳುವುದು. 'ಅಸ್ಯ ಉಕ್ತಮ್' ಎಂಬ ಪದಗಳು ಶೇಷವಾಗಿವೆ. ತಥಾಚ - ತತ್ವ-ಪ್ರದೀಪಟೀಕೆಯ ಪ್ರಕಾರವಾಗಿ ಈ ಮುಂದಿನಂತೆ ಸೂತ್ರದ ಪದಗಳ ಯೋಜನೆ ಇರು-ವುದು – ಈ ಪ್ರಾಣನು ಇಂದ್ರನಲ್ಲ, ಕಿಂತು ವಿಷ್ಣುವೇ ಆಗಿದ್ದಾನೆ. ಏಕೆಂದರೆ? ಅನು-**ಗಮಾತ್** - ಹಿಂದೆ ಹೇಳಲಾದ ಅತ್ಯಂತಪ್ರಬಲವಾದ ಲಿಂಗ ಮೊದಲಾದವುಗಳಿಂದ. ಹಾಗಿದ್ದ ಪಕ್ಷದಲ್ಲಿ ಇಂದ್ರನು ವಿಶ್ವಾಮಿತ್ರನನ್ನು ಕುರಿತು ತನ್ನನ್ನೇ ಪ್ರಾಣನೆಂದು ಉಪದೇಶಿಸಿರುವುದು ವಿರುದ್ಧವಾಗುತ್ತದೆ ಎಂದರೆ, ಇಲ್ಲ. ಏಕೆಂದರೆ, ಈ ಪ್ರಕರಣದಲ್ಲಿ ಇಂದ್ರನು ಮೊದಲು ತನ್ನೊಳಗೆ ಇರುವವನನ್ನೇ 'ಪ್ರಾಣೋ ವಾ ಅಹಮಸ್ಮಿ ಋಷೇ' ಎಂಬ ವಾಕ್ಯದಿಂದ ಪರಮಾತ್ಮನೆಂದು ಹೇಳುತ್ತಿದ್ದಾನೆ. ಹಾಗಿದ್ದ ಪಕ್ಷದಲ್ಲಿ ಐಕ್ಯವನ್ನು ಹೇಳುವ ವಾಕ್ಯವಿರೋಧ ಬರುವುದೋ ಎಂದರೆ ಅದೂ ಇಲ್ಲ. ಏಕೆಂದರೆ, ಈ ವಾಕ್ಯದಲ್ಲಿ ಆ ಪ್ರಾಣಾಖ್ಯನಾದ ಪರಮಾತ್ಮನಿಗೆ 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಇತ್ಯಾದಿ ವಾಕ್ಯದಿಂದ 'ಬಹ್ವಧ್ಯಾತ್ಮಸಂಬಂಧಃ' ಅಂದರೆ ಇಂದ್ರನೇ ಮೊದಲಾದ ಜೀವರೆಂಬ ಬಹುದೇಹಗಳ ಸಂಬಂಧವು ಅಂದರೆ ಸರ್ವಗತತ್ವವೇ ಋಷಿಯನ್ನು ಕುರಿತು ಇಂದ್ರನಿಂದ ಹೇಳಲ್ಪಟ್ಟದ್ದಾಗಿ, ವಿದ್ಯತೇ - ಇರುವುದು. ಆದ್ದ-ರಿಂದ ಇಲ್ಲಿ ಐಕ್ಯವು ಹೇಳಲ್ಪಟ್ಟಿಲ್ಲ. [೧]ಸೂತ್ರದಲ್ಲಿ ಹೇಳಿರುವ ಸಂಬಂಧಬಾಹುಲ್ಯವು ಸಂಬಂಧಿಯಲ್ಲಿ ಪರ್ಯವಸಾನ ಹೊಂದುತ್ತದೆ ಎಂಬ ಆಶಯದಿಂದ ಬಹ್ವಧ್ಯಾತ್ಮ ಎಂಬುದಾಗಿ ಭಾಷ್ಯದಲ್ಲಿ ಹೇಳಲಾಗಿದೆ. ಭೂಮಶಬ್ದವು ಬಹುತ್ವವೆಂಬ ಧರ್ಮವನ್ನು ಹೇಳುವ ಶಬ್ದವಾಗಿದ್ದರೂ ಧರ್ಮಧರ್ಮಿಗಳಿಗೆ ಅಭೇದವಿರುವುದರಿಂದ, ಆ ಶಬ್ದವನ್ನು ಧರ್ಮಿಯಲ್ಲಿ ಪ್ರಯೋಗಿಸಲಾಗಿದೆ. ಸೂತ್ರದಲ್ಲಾದರೋ ಭೂಮಶಬ್ದಕ್ಕೆ ಪರನಿಪಾತ-ವಿರುವುದು ಆರ್ಷಪ್ರಯೋಗವಾಗಿದೆ.

(೧) ಸೂತ್ರದಲ್ಲಿ ಅಧ್ಯಾತ್ಮಸಂಬಂಧಭೂಮಾ ಎಂಬ ಶಬ್ದವಿದೆ. ಭಾಷ್ಯದಲ್ಲಿ ಈ ಪದವನ್ನು ಬಹ್ವಧ್ಯಾತ್ಮಸಂಬಂಧ ಎಂಬುದಾಗಿ ವ್ಯಾಖ್ಯಾನಮಾಡಲಾಗಿದೆ.

ಭೂಮಶಬ್ದವು ಬಹುತ್ವ ಎಂಬ ಧರ್ಮವಾಚಕಶಬ್ದವಾಗಿದೆ. ಅಧ್ಯಾತ್ಮಶಬ್ದವು ಶರೀರವಾಚಕವಾಗಿದ್ದು ಅಧ್ಯಾತ್ಮಸಂಬಂಧಭೂಮಾ ಎಂದರೆ ಶರೀರಸಂಬಂಧ ಬಾಹುಲ್ಯ ಎಂದರ್ಥವಾಗುವುದು. ಸಂಬಂಧದಲ್ಲಿರುವ ಈ ಬಾಹುಲ್ಯವು ಸಂಬಂಧಿಯಾದ ಶರೀರದ ಬಾಹುಲ್ಯದಲ್ಲಿ ಪರ್ಯವಸಾನ ಹೊಂದುವುದರಿಂದ ಬಹ್ವಧ್ಯಾತ್ಮ ಎಂಬುದಾಗಿ ಶರೀರಶಬ್ದಕ್ಕೆ ವಿಶೇಷಣವಾಗಿ ಬಹುಶಬ್ದವನ್ನು ಭಾಷ್ಯಕಾರರು ಪ್ರಯೋಗಿಸಿದ್ದಾರೆ. ಭೂಮಶಬ್ದವು ಬಹುತ್ವವಾಚಕವಾಗಿದ್ದರೂ ಧರ್ಮಧರ್ಮಿಗಳಿಗೆ ಅಭೇದವಿರುವುದರಿಂದ ಧರ್ಮಿಯಾದ ಶರೀರವನ್ನು ಬಹು ಎಂಬುದಾಗಿ ಹೇಳಿರುವುದು ಯುಕ್ತವಾಗಿದೆ ಎಂದು ಅಭಿಪ್ರಾಯ. ಭೂಮಶಬ್ದವು ಅಧ್ಯಾತ್ಮಶಬ್ದಕ್ಕೆ ವಿಶೇಷಣವಾಗಿದ್ದಾಗ ಭೂಮಾಧ್ಯಾತ್ಮ ಎಂಬು-ದಾಗಿ ಪೂರ್ವನಿಪಾತವನ್ನು ಪಡೆಯಬೇಕಾಗಿತ್ತಲ್ಲವೇ ಎಂಬ ಪ್ರಶ್ನೆಗೆ ಭೂಮ-ಶಬ್ದಕ್ಕೆ ಪರನಿಪಾತವಿರುವುದು ಆರ್ಷಪ್ರಯೋಗವಾದದ್ದರಿಂದ ಸಾಧು ಎಂಬು-ದಾಗಿ ಸಮಾಧಾನವನ್ನು ಹೇಳಲಾಗಿದೆ.

(ಭಾ.ದೀ.) ಅಥವಾ - ಅಧಿಕಶ್ಚಾಸಾವಾತ್ಮಾ ಚಾಧ್ಯಾತ್ಮಾ । ತಸ್ಯ ಸಂಬಂಧಃ । ಬಹುಶ್ಚಾಸಾವಧ್ಯಾತ್ಮಸಂಬಂಧಶ್ಚೇತಿ ವಿಗ್ರಹಃ । ತಥಾ ಚ 'ಹಿ' ಯತಃ, 'ಅತ್ರ' ಇಂದ್ರೇ 'ಬಹು' ಬಹುಲಃ ಪರಮಾತ್ಮಸಂಬಂಧಃ ಸನ್ನಿಧಿವಿಶೇಷೋ ವಿದ್ಯತ ಇತ್ಯರ್ಥಃ । 'ವಿದ್ಯತೇ' ಇತ್ಯನಂತರಂ 'ತದಪೇಕ್ಷಯಾ ಅಯಮ್ ಉಪದೇಶೋ ನ ಸ್ವಾಪೇಕ್ಷಯಾ' ಇತಿ ಶೇಷಃ । ತಥಾ ಚ ಇಂದ್ರೇ ತಾತ್ಕಾಲಿಕೇಶ್ವರಸನ್ನಿಧಾನವಿಶೇಷಾಭಿಪ್ರಾಯಾ 'ಪ್ರಾಣೋ ವಾ ಅಹಮ್' ಇತ್ಯುಕ್ತಿಃ, ನ ಸ್ವಾಪೇಕ್ಷಯಾ ಇತಿ ನೋಪದೇಶವಿರೋಧ ಇತಿ ಭಾವಃ । ಕುತೋ ನ ಸ್ವಾಪೇಕ್ಷಯಾ? ಇತ್ಯತಃ 'ಪ್ರಾಣಸ್ತ್ವಂ' ಇತ್ಯಾದ್ಯಾಹ । ಯೋಜನಾ ತು – ಹಿ ಯಸ್ಮಾತ್ 'ಪ್ರಾಣಸ್ತ್ವಮ್' ಇತ್ಯಾದಿ ವಾಕ್ಯೇನಾಸ್ಯ ಪ್ರಾಣಸ್ಯ 'ಬಹ್ವಧ್ಯಾತ್ಮಸಂಬಂಧಃ' ಅಧ್ಯಾತ್ಮತ್ವೇನ ಅಂತರ್ಯಾಮಿತ್ವೇನ ಇಂದ್ರಾದಿರೂಪಬಹು-ದೇಹಸಂಬಂಧಃ ಸರ್ವಗತತ್ವಮುಕ್ತಂ ವಿದ್ಯತೇ । ನ ಚೈತದತ್ರ ಜೀವವಿಶೇಷೇಂದ್ರೇ ವಿದ್ಯತೇ ಯುಜ್ಯತೇ । **ತಸ್ಮಾದಿತಿ** ॥ ಪ್ರಥಮಪಕ್ಷೇ 'ಯಸ್ಯಾತ್ಮಾ ಶರೀರಮ್' (ಮಾಧ್ಯಂದಿನಶ್ರುತಿ) ಇತಿ ಶ್ರುತೇಃ ಇಂದ್ರಾದೀನಾಂ ವಿಷ್ಣುದೇಹತ್ವಾದ್ ಐಕ್ಯವ್ಯಪದೇಶಃ

ಶರೀರಶರೀರಿಭಾವನಿಬಂಧನ ಇತಿ ಜ್ಞಾಪನಾಯ **ಅಧ್ಯಾತ್ಮೇ**ತ್ಯುಕ್ತಿಃ । ಅನೇನ ಬೃಹತೀಸಹಸ್ರವಕ್ತುರ್ವಿಶ್ವಾಮಿತ್ರಸ್ಯ ತಂ ಪ್ರತಿ ಇಂದ್ರೇಣ ಪ್ರಾಣತಯಾಽತ್ಮೋಪದೇಶಾದ್ 'ಅಯಂ ಪ್ರಾಣೋ ನ ವಿಷ್ಣುಃ, ಕಿಂತು ಇಂದ್ರ ಏವ' ಇತಿ ಚೇತ್ - 'ನ ಇಂದ್ರೋಽಯಂ ಪ್ರಾಣಃ, ಕಿಂತು ವಿಷ್ಣುರೇವ । ಕುತಃ? ಅನುಗಮಾತ್ ಪ್ರಾಗುಕ್ತಪ್ರಬಲತಮಲಿಂಗಾದೇಃ । ನ ಚೋಪದೇಶವಿರೋಧಃ । ಯತಃ, ಅಯಮ್ ಇಂದ್ರಗತಾಧ್ಯಾತ್ಮವಿಷಯ ಏವ । ಕುತಃ? ಯಸ್ಮಾದ್ ಅಸ್ಮಿನ್ ಪ್ರಕರಣೇ **ಅಧ್ಯಾತ್ಮಸಂಬಂಧಭೂಮಾ** । ಅತ್ರ ಅಧ್ಯಾತ್ಮಸಂಬಂಧಶಬ್ದೇನ ಆತ್ಮಾಧಿಕಾರೇ ವರ್ತಮಾನಮಿತಿ, ಅಧಿಶ್ಚಾಸೌ ಆತ್ಮಾ ಚೇತಿ ದೇಹಃ ಪರಮಾತ್ಮಾ ಚ ಉಚ್ಯತೇ । ತಥಾ ಚ ಯಸ್ಮಾದ್ ಅಧ್ಯಾತ್ಮನೋ ವಿಷ್ಣೋರಿಂದ್ರವಿಶ್ವಾಮಿತ್ರಾದಿದೇಹಸಂಬಂಧ ಉಕ್ತೋಽಸ್ತಿ ತಸ್ಮಾತ್ ।

ಅಥವಾ – ಹಿ ಯಸ್ಮಾದ್ ಅಸ್ಮಿನ್ನಿಂದ್ರೇ ಅಧ್ಯಾತ್ಮಸಂಬಂಧಭೂಮಾ - ಅಧಿರೀಶ್ವರೇ - ಅಧಿಕಸ್ಯಾಽತ್ಮನಃ ಪರಮಾತ್ಮನಃ ಸಂಬಂಧಸ್ಯ ಆವೇಶಸ್ಯ ಭೂಮಾ ಬಾಹುಲ್ಯಂ ವಿದ್ಯತೇ ತಸ್ಮಾದ್ ಉಪದೇಶಸ್ಯ ಸನ್ನಿಹಿತಪರಮಾತ್ಮವಿಷಯತ್ವೋಪಪತ್ತೇಃ ಇತಿ ಭಾವಃ। ತದಪಿ ಕುತಃ? ಹಿ ಯಸ್ಮಾತ್ ಅಸ್ಮಿನ್ ಪ್ರಕರಣೇ ಅಧ್ಯಾತ್ಮಸಂಬಂಧಭೂಮೋಕ್ತಃ ತಸ್ಮಾತ್ ಇತಿ ಸೂತ್ರಾರ್ಥ ಉಕ್ತೋ ಭವತಿ।

ಅಥವಾ – 'ಅಧಿಕಶ್ಚಾಸೌ ಆತ್ಮಾ ಚ ಅಧ್ಯಾತ್ಮಾ; ತಸ್ಯ ಸಂಬಂಧಃ ಅಧ್ಯಾತ್ಮಸಂಬಂಧಃ; ಬಹುಶ್ಚಾಸೌ ಅಧ್ಯಾತ್ಮಸಂಬಂಧಶ್ಚ -' ಎಂದು ವಿಗ್ರಹ. ತಥಾಚ- ಹಿ ಯಾವ ಕಾರಣದಿಂದ ಅತ್ರ = ಈ ಇಂದ್ರನಲ್ಲಿ, ಬಹುಃ = ಬಹುಲವಾದ ಪರಮಾತ್ಮನ ಸಂಬಂಧವು ಅಂದರೆ ಅವನ ಸನ್ನಿಧಿವಿಶೇಷವು ಇರುವುದೋ ಆದ್ದರಿಂದ ಎಂದು ಅರ್ಥ. ವಿದ್ಯತೇ ಎಂಬ ಪದದ ನಂತರ 'ತದಪೇಕ್ಷಯಾ ಅಯಂ ಉಪದೇಶಃ, ನ ಸ್ವಾಪೇಕ್ಷಯಾ' – ಆ ದೃಷ್ಟಿಯಿಂದ ಇಂದ್ರನು ಮಾಡಿದ ಈ ಉಪದೇಶವು ಇರುವುದೇ ಹೊರತು ತನ್ನ ದೃಷ್ಟಿಯಿಂದ ಮಾಡಿದ ಉಪದೇಶವಲ್ಲ ಎಂಬ ವಾಕ್ಯವು ಶೇಷವಾಗಿವೆ. ತಥಾಚ- ಇಂದ್ರನಲ್ಲಿ ತಾತ್ಕಾಲಿಕವಾಗಿ ಈಶ್ವರನ ಸನ್ನಿಧಾನವಿಶೇಷವಿರುವ ಅಭಿಪ್ರಾಯದಿಂದ 'ಪ್ರಾಣೋ ವಾ ಅಹಮ್' ಎಂಬ ವಾಕ್ಯವಿದೆ; ಹೊರತು ತನ್ನನ್ನು ನಿರ್ದೇಶಿಸುವ

ದೃಷ್ಟಿಯಿಂದ 'ಅಹಂ' ಎಂದು ಹೇಳಿಲ್ಲವಾದ್ದರಿಂದ (ಪ್ರಾಣೋ ವಾ ಅಹಂ ಎಂಬ) ಉಪದೇಶವಿರೋಧವಿಲ್ಲ ಎಂದು ಭಾವ. ತನ್ನ ದೃಷ್ಟಿಯಿಂದಲೇ ಅಹಂ ಎಂದು ಉಪದೇಶಿಸಿಲ್ಲ ಎಂಬುದಕ್ಕೆ ಆಧಾರವೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಉಪನಿಷತ್ತಿನಲ್ಲಿ ''ಪ್ರಾಣಸ್ತ್ವಂ'' ಇತ್ಯಾದಿಯಾಗಿ ಹೇಳಲಾಗಿದೆ. ಈ ಪಕ್ಷದಲ್ಲಿ ಭಾಷ್ಯದ ಪದಗಳ ಯೋಜನೆ ಹೀಗಿರುವುದು – ಹಿ - ಯಾವ ಕಾರಣದಿಂದ, ಪ್ರಾಣಸ್ತ್ವಂ ಇತ್ಯಾದಿ ವಾಕ್ಯದಿಂದ ಈ ಪ್ರಾಣನಿಗೆ 'ಬಹ್ವಧ್ಯಾತ್ಮಸಂಬಂಧಃ' ಅಧ್ಯಾತ್ಮತ್ವೇನ ಅಂದರೆ ಅಂತರ್ಯಾಮಿತ್ವೇನ, ಇಂದ್ರನೇ ಮೊದಲಾದ ಅನೇಕ ದೇಹಗಳ ಸಂಬಂಧ ಅಂದರೆ ಸರ್ವಗತತ್ವವು ಇಲ್ಲಿ ಹೇಳಲ್ಪಟ್ಟಿರುವುದೋ- ಆದ್ದರಿಂದ. ಈ ಸರ್ವಗತತ್ವವು ಜೀವರಲ್ಲಿ ಒಬ್ಬನಾದ ಇಂದ್ರನಲ್ಲಿ ಯುಕ್ತವಾಗುವುದಿಲ್ಲ- ಆದ್ದರಿಂದ ಎಂದು. ಪ್ರಥಮಪಕ್ಷದಲ್ಲಿ 'ಯಸ್ಯಾತ್ಮಾ ಶರೀರಂ' ಎಂಬ ಶ್ರುತಿ ಇರುವುದರಿಂದ ಇಂದ್ರನೇ ಮೊದಲಾದವರು ವಿಷ್ಣುವಿನ ದೇಹವಾಗಿರುವರು. ಆದ್ದರಿಂದ 'ಪ್ರಾಣಸ್ತ್ವಂ' ಇತ್ಯಾದಿಯಾಗಿ ಐಕ್ಯವ್ಯವಹಾರವಿರುವುದು ಶರೀರಶರೀರಿಭಾವನಿಮಿತ್ತಕವಾದುದು ಎಂದು ತಿಳಿಸಲು 'ಅಧ್ಯಾತ್ಮ' ಎಂದು ಹೇಳಲಾಗಿದೆ. ಇದರಿಂದ ಬೃಹತೀಸಹಸ್ರವನ್ನು ಪಠಿಸಿದ ವಿಶ್ವಾಮಿತ್ರನನ್ನು ಕುರಿತು ಇಂದ್ರನು ತಾನೇ ಪ್ರಾಣನೆಂದು ಉಪದೇಶಿಸಿರುವುದರಿಂದ, 'ಪ್ರಾಣನು ವಿಷ್ಣುವಲ್ಲ; ಕಿಂತು ಇಂದ್ರನೇ' ಎಂದು ಶಂಕಿಸಿದರೆ ಈ ಇಂದ್ರನು ಪ್ರಾಣನಲ್ಲ; ಕಿಂತು ವಿಷ್ಣುವೇ ಪ್ರಾಣನಾಗಿದ್ದಾನೆ. ಏಕೆಂದರೆ? ಅನುಗಮಾತ್' ಹಿಂದೆ ಹೇಳಲಾದ ಪ್ರಬಲತಮವಾದ ಲಿಂಗ ಮೊದಲಾದವುಗಳಿರುವುದರಿಂದ. ಹೀಗೆ ಹೇಳಿದಲ್ಲಿ ನಾನೇ ಪ್ರಾಣನೆಂದು ಉಪದೇಶಿಸಿರುವುದರ ವಿರೋಧ ಬರುವುದು ಎಂದರೆ ಅದು ಸರಿಯಲ್ಲ. ಏಕೆಂದರೆ, ಈ ಉಪದೇಶವು ಇಂದ್ರನಲ್ಲಿರುವ ಅಧ್ಯಾತ್ಮನಿಗೆ ಸಂಬಂಧಪಟ್ಟಿದ್ದೇ ಆಗಿರುವುದು. ಏಕೆಂದರೆ, ಹಿ - ಯಾವ ಕಾರಣದಿಂದ, ಈ ಪ್ರಕರಣದಲ್ಲಿ, ಅಧ್ಯಾತ್ಮಸಂಬಂಧಭೂಮಾ - ಇಲ್ಲಿ ಅಧ್ಯಾತ್ಮಸಂಬಂಧಶಬ್ದದಿಂದ ಆತ್ಮನ ಅಧೀನದಲ್ಲಿ ಇರುವ ಕಾರಣದಿಂದ ಹಾಗೂ ಅಧಿಶ್ಚಾಸೌ ಆತ್ಮಾ ಚ - ಎಂಬ ವಿಗ್ರಹಾನುಸಾರವಾಗಿ ದೇಹ ಮತ್ತು ಪರಮಾತ್ಮ ಇಬ್ಬರೂ ಹೇಳಲ್ಪಡುವರು. ತಥಾಚ - ಯಾವ ಕಾರಣದಿಂದ ಅಧ್ಯಾತ್ಮನಃ - ವಿಷ್ಣುವಿಗೆ ಇಂದ್ರವಿಶ್ವಾಮಿತ್ರ ಮೊದಲಾದ ದೇಹಗಳ ಸಂಬಂಧವು ಹೇಳಲ್ಪಟ್ಟಿರುವುದೋ ಆದ್ದರಿಂದ ಎಂದು ಅರ್ಥ.

ಅಥವಾ ಹಿ – ಯಾವ ಕಾರಣದಿಂದ, ಅಸ್ಮಿನ್ - ಈ ಇಂದ್ರನಲ್ಲಿ, ಅಧ್ಯಾತ್ಮ-ಸಂಬಂಧಭೂಮಾ - ಅಧಿರೀಶ್ವರೇ ಎಂಬ ಪಾಣಿನಿಸೂತ್ರದ ಪ್ರಕಾರ ಅಧಿಶಬ್ದವು ಅಧಿಕನಾದ ಈಶ್ವರನಲ್ಲಿ ಹೇಳುವುದು. - ಅಧಿಕನಾದ ಆತ್ಮನ ಅಂದರೆ ಪರಮಾತ್ಮನ ಸಂಬಂಧವೆಂದರೆ ಆವೇಶರೂಪವಾದ ಸಂಬಂಧ. ಅದರ ಭೂಮಾಬಾಹುಲ್ಯವು ಇರುವುದೋ ಆದ್ದರಿಂದ ಈ ಉಪದೇಶವು ಇಂದ್ರನಲ್ಲಿ ಸನ್ನಿಹಿತನಾದ ಪರಮಾತ್ಮನಿಗೆ ಸಂಬಂಧಪಟ್ಟಿರುವುದು ಯುಕ್ತವಾಗಿದೆ ಎಂದು ಭಾವ. ಹೀಗೆ ಹೇಳುವುದಕ್ಕೆ ಆಧಾರವೇನು? ಹಿ - ಯಾವ ಕಾರಣದಿಂದ, ಅಸ್ಮಿನ್- ಈ ಪ್ರಕರಣದಲ್ಲಿ ಅಧ್ಯಾತ್ಮ-ಸಂಬಂಧಭೂಮಾ- ಪರಮಾತ್ಮನ ಸಂಬಂಧವಿಶೇಷವು ಹೇಳಲ್ಪಟ್ಟಿದೆಯೋ ಆದ್ದರಿಂದ ಎಂಬುದಾಗಿ ಸೂತ್ರಾರ್ಥವನ್ನು ಹೇಳಿದಂತಾಗುವುದು.

**॥ ಓಂ ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ಓಂ ॥ ೩೦ ॥**

**ಭಾ– ಶಾಸ್ತ್ರಮಂತರ್ಯಾಮೀ ।**

'ಪ್ರಾಣೋ ವಾ ಅಹಮಸ್ಮಿ ಋಷೇ' ಎಂದು ಮಾಡಲಾದ ಉಪದೇಶವು ವಾಮದೇವ ಮಾಡಿದ ಉಪದೇಶದಂತೆ ಅಂತರ್ಯಾಮಿ ದೃಷ್ಟಿಯಿಂದ ಮಾಡಲ್ಪಟ್ಟಿದೆ.

''ಶಾಸ್ತ್ರ'' ಎಂದರೆ ಅಂತರ್ಯಾಮಿ.

(ಭಾ.ದೀ.) ನನು ಯದಿ ಪ್ರಾಣಶಬ್ದೇನ ಇಂದ್ರೇಣಾಪಿ ವಿಷ್ಣುರೇವ ಸ್ವಾತ್ಮಾದಿ-ಸರ್ವಗತತಯಾ ಉಚ್ಯತೇ ತರ್ಹಿ 'ಮಯಿ ಪ್ರಾಣಃ' ಇತಿ ನಿರ್ದೇಶಃ ಸ್ಯಾತ್ । ನ ತು 'ಅಹಮ್' ಇತಿ । ವಿಷ್ಣೌ ಅಹಮ್ ಇತ್ಯಾದಿರೂಪೋಪದೇಶಾಯೋಗಾತ್ ಇತ್ಯಾ-ಶಂಕಾಂ ಪರಿಹರತ್ಸೂತ್ರಂ ಪಠತಿ – **ಶಾಸ್ತ್ರೇತಿ ॥ ತುರೇವಾರ್ಥೋಽಪ್ಯರ್ಥಃ**; ಯತಃ ಇತ್ಯರ್ಥೇ ಸ್ಮೃತಿಸೂಚಕಶ್ಚ । 'ಯುಜ್ಯತೇ' ಇತಿ ಶೇಷಃ । ತಥಾ ಚ ಯತೋಽಪಿ ಪ್ರಾಣಸ್ಯ ವಿಷ್ಣುತ್ವೇಽಪಿ ಉಪದೇಶಃ 'ಪ್ರಾಣೋ ವಾಽಹಮ್' ಇತ್ಯೇವಂ ರೂಪೋ ಯುಜ್ಯತೇ, ಅತೋ ನ ತದನುಪಪತ್ತಿಃ । ಕಥಮಯಂ ಯುಜ್ಯತೇ? ಯತೋಽಯ-

ಮುಪದೇಶಃ '**ಶಾಸ್ತ್ರದೃಷ್ಟ್ಯಾ**' - ಶಾಸ್ತಿ ಸರ್ವಮಿತಿ ಶಾಸ್ತ್ರಂ ಅಂತರ್ಯಾಮೀ ಭಗವಾನ್, ತದ್ದೃಷ್ಟ್ಯಾ - ತದಪೇಕ್ಷಯೈವ ಪ್ರವೃತ್ತೋ ನ ತ್ವೈಕ್ಯೇನ । ನ ಚಾಂತರ್ಯಾಮಿಣಿ ಅಹಮಾದಿಪ್ರಯೋಗಾದರ್ಶನಾತ್ ತದಯೋಗಃ। ಯತೋ '**ವಾಮದೇವವತ್**' ತತ್ಕರ್ತೃಕಪ್ರಯೋಗವತ್ ।

ಇಂದ್ರನು ಪ್ರಾಣಶಬ್ದದಿಂದ ವಿಷ್ಣುವನ್ನೇ ತಾನೇ ಮೊದಲಾದ ಸರ್ವರಲ್ಲೂ ಇರುವವನೆಂದು ಹೇಳುವುದಾದರೆ 'ಮಯಿ ಪ್ರಾಣಃ' 'ನನ್ನಲ್ಲಿ ಪ್ರಾಣನಿದ್ದಾನೆ' ಎಂದು ವಾಕ್ಯಪ್ರಯೋಗ ಇರಬೇಕಾಗಿದ್ದಿತು. ಹೊರತು ನಾನು ಪ್ರಾಣನೆಂದು ವಾಕ್ಯಪ್ರಯೋಗವು ಇರಲು ಸಾಧ್ಯವಿಲ್ಲ. ವಿಷ್ಣುವನ್ನು ಕುರಿತು ಅಹಂ- ನಾನು ಇತ್ಯಾದಿಯಾಗಿ ಉಪದೇಶ ಮಾಡಲು ಸಾಧ್ಯವಿಲ್ಲ ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಭಾಷ್ಯಕಾರರು 'ಶಾಸ್ತ್ರ' ಎಂದು ಪಠಿಸುತ್ತಿದ್ದಾರೆ. ಸೂತ್ರದಲ್ಲಿ ತುಶಬ್ದವು ಏವ ಮತ್ತು ಅಪಿ ಎಂಬ ಅರ್ಥಗಳನ್ನು ಹೊಂದಿದೆ. ಯತಃ ಎಂಬ ಅರ್ಥದಲ್ಲಿ ಸ್ಮೃತಿಯನ್ನೂ ಸೂಚಿಸುತ್ತದೆ. 'ಯುಜ್ಯತೇ' ಎಂಬ ಪದವು ಶೇಷವಾಗಿದೆ. ತಥಾಚ – ಯತೋಽಪಿ - ಯಾವ ಕಾರಣದಿಂದ ಪ್ರಾಣನು ವಿಷ್ಣುವಾಗಿದ್ದರೂ ಉಪದೇಶಃ - ಪ್ರಾಣೋ ವಾ ಅಹಮ್ ಎಂಬ ಉಪದೇಶವು ಯುಜ್ಯತೇ - ಯುಕ್ತವಾಗುವುದೋ, ಆದ್ದರಿಂದ ಅದರ ಅನುಪಪತ್ತಿ ಇಲ್ಲ. ಈ ಉಪದೇಶವು ಹೇಗೆ ಯುಕ್ತವಾಗುವುದು? ಏಕೆಂದರೆ, ಈ ಉಪದೇಶವು 'ಶಾಸ್ತ್ರದೃಷ್ಟ್ಯಾ' – ಶಾಸ್ತಿ ಸರ್ವಮ್ - ಎಲ್ಲವನ್ನೂ ಶಾಸನಮಾಡುವವನು ಎಂಬ ಅರ್ಥದಲ್ಲಿ ಶಾಸ್ತ್ರವೆಂದರೆ ಅಂತರ್ಯಾಮಿಯಾದ ಭಗವಂತ. ತದ್ದೃಷ್ಟ್ಯಾ ಅವನನ್ನು ತಿಳಿಸುವ ಅಭಿಪ್ರಾಯದಿಂದಲೇ ಪ್ರವೃತ್ತವಾಗಿದೆ ಹೊರತು ಅಭೇದವನ್ನು ಹೇಳುವ ದೃಷ್ಟಿಯಿಂದಲ್ಲ. ಅಂತರ್ಯಾಮಿಯನ್ನು ಉದ್ದೇಶಿಸಿ ಅಹಂ ಇತ್ಯಾದಿ ಪ್ರಯೋಗವು ಎಲ್ಲೂ ಕಾಣದಿರುವುದರಿಂದ ಇದು ಯುಕ್ತವಲ್ಲ ಎಂದರೆ ಅದು ಸರಿಯಲ್ಲ. ಏಕೆಂದರೆ, 'ವಾಮದೇವವತ್' ವಾಮದೇವನು ಮಾಡಿದ ಪ್ರಯೋಗದಂತೆ.

(ಭಾ.ದೀ.) ಯಥಾ ವಾಮದೇವೋ ನಾಮ ಋಷಿಃ ಅಂತರ್ಯಾಮಿವಿವಕ್ಷಯಾ 'ಅಹಂ ಮನುರಭವಮ್' ಇತಿ ಸ್ವಸ್ಮಿನ್ ಅಹಂಮನ್ವಾದಿಶಬ್ದಾನ್ ಪ್ರಯುಯುಜೇ ।

ತಥಾ ಅಯಮುಪದೇಶೋ ಯುಜ್ಯತೇ ಅತ ಇತಿ ಸೂತ್ರಯೋಜನಾಮ್ ಅಭಿಪ್ರಯನ್ ಸೌತ್ರಶಾಸ್ತ್ರಪದಂ ವ್ಯಾಚಷ್ಟೇ – **ಶಾಸ್ತ್ರಮಿತಿ** ॥ 'ವಿಷ್ಣುಃ' ಇತಿ ಶೇಷಃ। ತಥಾ ಚ 'ಅಂತರ್ಯಾಮೀ ವಿಷ್ಣುರಿಹ ಶಾಸ್ತ್ರಪದೇನೋಕ್ತಃ' ಇತ್ಯರ್ಥಃ। '**ಅಂತರ್ಯಾಮಿ**' ಇತಿ ಪ್ರಕೃತಾಭಿಪ್ರಾಯೇಣ । ಯದ್ವಾ – ಶಾಸ್ತಿ ಪ್ರೇರಯತಿ ಸರ್ವಾನ್ ಇತಿ ವ್ಯುತ್ಪತ್ತ್ಯಾ ಅಂತರ್ಯಾಮೀತ್ಯೇತದೇವ ಶಾಸ್ತ್ರಮ್ ಇತ್ಯಸ್ಯ ವ್ಯಾಖ್ಯಾನಂ ಭವತೀತಿ ನಾಪದಾರ್ಥತ್ವಶಂಕಾವಕಾಶಃ। ಅತ ಏವ **ಭಾಗವತೇ** ಧ್ಯೇಯೇ ಅಂತರ್ಯಾಮಿಣ್ಯೇವ ಶಾಸ್ತ್ರಶಬ್ದಪ್ರಯೋಗಃ । **ಐತರೇಯಭಾಷ್ಯೇ** 'ಶಾಸ್ತುರಂತರ್ಯಾಮಿಣಃ' ಇತಿ ಶಾಸ್ತೃಶಬ್ದಂ ಮೂಲೀಕೃತ್ಯ ವ್ಯಾಖ್ಯಾನೇಽಪಿ, ತದನುಸಾರೇಣ ಚ **ತತ್ತ್ವಪ್ರದೀಪೇ** 'ಶಾಸ್ತುರಂತರ್ಯಾಮಿಣೋ ವಿಷ್ಣೋಃ' ಇತಿ ವ್ಯಾಖ್ಯಾನೇಽಪಿ ನಾಸ್ಯ ತದ್ವಿರೋಧಃ ಶಂಕ್ಯಃ, ಯತಃ ತತ್ಪರ್ಯಾಯಶಬ್ದವ್ಯಾಖ್ಯಾನೇನೈವ ಶಾಸ್ತ್ರಶಬ್ದೋ ವ್ಯಾಖ್ಯಾತೋ ಭವತೀತ್ಯಾಶಯೇನ ಶಾಸ್ತ್ರಶಬ್ದಪರ್ಯಾಯಶಾಸ್ತೃಶಬ್ದೋ ವ್ಯಾಖ್ಯಾಯತೇ।

'ಹೇಗೆ ವಾಮದೇವನೆಂಬ ಋಷಿ ಅಂತರ್ಯಾಮಿವಿವಕ್ಷೆಯಿಂದ 'ಅಹಂ ಮನುರಭವಮ್' ನಾನು ಮನುವಾಗಿದ್ದೇನೆ ಎಂದು ತನ್ನನ್ನು ಉದ್ದೇಶಿಸಿ 'ಅಹಂ' 'ಮನು' ಮೊದಲಾದ ಶಬ್ದಗಳನ್ನು ಪ್ರಯೋಗಿಸಿದನೋ ಹಾಗೆಯೇ ಈ ಉಪದೇಶವೂ ಕೂಡ ಯುಕ್ತವಾಗಿದೆ, ಆದ್ದರಿಂದ ಎಂದು ಸೂತ್ರದ ಪದಗಳ ಯೋಜನೆಯನ್ನು ಅಭಿಪ್ರಾಯಪಟ್ಟು, ಭಾಷ್ಯಕಾರರು 'ಶಾಸ್ತ್ರಂ' ಎಂದು ಸೂತ್ರದಲ್ಲಿರುವ ಶಾಸ್ತ್ರಪದವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ವಿಷ್ಣುಃ ಎಂಬ ಪದವು ಇಲ್ಲಿ ಶೇಷವಾಗಿದೆ. ತಥಾಚ - ಅಂತರ್ಯಾಮಿಯಾದ ವಿಷ್ಣುವು ಇಲ್ಲಿ ಶಾಸ್ತ್ರಪದದಿಂದ ಉಕ್ತನಾಗಿದ್ದಾನೆ ಎಂದು ಅರ್ಥ. ಅಂತರ್ಯಾಮೀ ಎಂದು ಹೇಳಿರುವುದು ಪ್ರಸ್ತುತವಾದ ವಿಷಯದ ದೃಷ್ಟಿಯಿಂದ. ಅಥವಾ, ಶಾಸ್ತಿ ಸರ್ವಾನ್ - 'ಎಲ್ಲರನ್ನೂ ಪ್ರೇರಿಸುವವನು' ಎಂಬ ವ್ಯುತ್ಪತ್ತಿಯನ್ನು ಅನುಸರಿಸಿ ಅಂತರ್ಯಾಮಿ ಎಂದೇ ಶಾಸ್ತ್ರಪದದ ವ್ಯಾಖ್ಯಾನವಾಗುವುದಾದ್ದರಿಂದ ಅಂತರ್ಯಾಮಿಯು ಶಾಸ್ತ್ರಪದದ ಅರ್ಥವಲ್ಲ ಎಂಬ ಶಂಕೆಗೆ ಅವಕಾಶವಿಲ್ಲ. ಆದ್ದರಿಂದಲೇ ಭಾಗವತದಲ್ಲಿ ಧ್ಯೇಯನಾದ ಅಂತರ್ಯಾಮಿಯನ್ನು ಉದ್ದೇಶಿಸಿಯೇ ಶಾಸ್ತ್ರಶಬ್ದವನ್ನು ಪ್ರಯೋಗಿಸಲಾಗಿದೆ. ಐತರೇಯಭಾಷ್ಯದಲ್ಲಿ 'ಶಾಸ್ತುಃ ಅಂತರ್ಯಾಮಿಣಃ'

– ನಿಯಮನ ಮಾಡುವ ಅಂತರ್ಯಾಮಿಯ - ಎಂದು ಶಾಸ್ತೃ ಎಂಬ ಶಬ್ದವನ್ನು ಮೂಲವಾಗಿ ಇಟ್ಟುಕೊಂಡು ವ್ಯಾಖ್ಯಾನ ಮಾಡಿದ್ದರೂ, ಅದನ್ನು ಅನುಸರಿಸಿ ತತ್ತ್ವಪ್ರದೀಪದಲ್ಲೂ 'ಶಾಸ್ತುಃ ಅಂತರ್ಯಾಮಿಣಃ ವಿಷ್ಣೋಃ' - ನಿಯಾಮಕನಾದ ಅಂತರ್ಯಾಮಿ ವಿಷ್ಣುವಿನ ಎಂದು ವ್ಯಾಖ್ಯಾನ ಮಾಡಿದ್ದರೂ ಈ ಭಾಷ್ಯಕ್ಕೆ ಅವುಗಳ ವಿರೋಧವನ್ನು ಶಂಕಿಸತಕ್ಕದ್ದಲ್ಲ. ಏಕೆಂದರೆ, ಶಾಸ್ತ್ರಶಬ್ದಕ್ಕೆ ಸಮಾನಾರ್ಥಕವಾದ ಶಬ್ದದ ವ್ಯಾಖ್ಯಾನದಿಂದಲೇ ಶಾಸ್ತ್ರಶಬ್ದದ ವ್ಯಾಖ್ಯಾನವು ಮಾಡಲ್ಪಟ್ಟಂತಾಗುವುದು ಎಂಬ ಆಶಯದಿಂದ ಆ ಗ್ರಂಥಗಳಲ್ಲಿ ಶಾಸ್ತ್ರಶಬ್ದಕ್ಕೆ ಪರ್ಯಾಯಶಬ್ದವಾದ ಶಾಸ್ತೃಶಬ್ದವು ವ್ಯಾಖ್ಯಾನಿಸಲ್ಪಟ್ಟಿದೆ.

(ಭಾ.ದೀ.) ಯದ್ವಾ– ಶಾಸ್ತ್ರಶಬ್ದೇ 'ಶಾಸ್ತೃ ಅ' ಇತ್ಯವಯವವಿಭಾಗಮಭಿಪ್ರೇತ್ಯ ಶಾಸ್ತ್ರಿತ್ಯಂಶಸ್ಯಾಂತರ್ಯಾಮಿಣ ಇತ್ಯನೇನ ಅಶಬ್ದಸ್ಯ ವಿಷ್ಣೋರಿತ್ಯನೇನ ಚ ವ್ಯಾಖ್ಯಾತತ್ವಾತ್, ಅತ್ರ ತ್ವವಯವವಿಭಾಗಮವಿವಕ್ಷಿತ್ವಾ ಶಾಸ್ತ್ರಮ್ ಇತ್ಯಖಂಡಪದಸ್ಯ ಅಂತರ್ಯಾಮೀತಿ ವ್ಯಾಖ್ಯಾನಾತ್ 'ಸಂವಿಚ್ಛಾಸ್ತ್ರಮ್' ಇತಿ ವಚನೋಪನ್ಯಾಸಾಚ್ಚ ನ ವಿರೋಧಃ।

ಅಥವಾ (ಐತರೇಯಭಾಷ್ಯ ಮತ್ತು ತತ್ವಪ್ರದೀಪಗಳಲ್ಲಿ) ಶಾಸ್ತ್ರಶಬ್ದದಲ್ಲಿ ಶಾಸ್ತೃ + ಅ ಎಂದು ಅವಯವಗಳಾದ ಶಬ್ದಗಳ ವಿಭಾಗವಿದೆ ಎಂದು ಅಭಿಪ್ರಾಯಪಟ್ಟು, ಶಾಸ್ತೃ ಎಂಬ ಅಂಶಕ್ಕೆ ಅಂತರ್ಯಾಮಿಣಃ - ಅಂತರ್ಯಾಮಿಯಾದ ಎಂಬ ಪದದಿಂದ, ಅ ಶಬ್ದಕ್ಕೆ - ವಿಷ್ಣೋಃ - ವಿಷ್ಣುವಿನ ಎಂಬ ಪದದಿಂದ ವ್ಯಾಖ್ಯಾನಮಾಡಲಾಗಿದೆ. ಈ ಭಾಷ್ಯದಲ್ಲಾದರೋ ಶಾಸ್ತ್ರಶಬ್ದದ ಅವಯವಗಳ ವಿಭಾಗವನ್ನು ವಿವಕ್ಷಿಸದೇ ಶಾಸ್ತ್ರಮ್ ಎಂಬ ಅಖಂಡಪದಕ್ಕೆ ಅಂತರ್ಯಾಮಿ ಎಂದು ವ್ಯಾಖ್ಯಾನಮಾಡಲಾಗಿದೆ. ಅದಕ್ಕೆ ಅನುಕೂಲವಾಗುವಂತೆ 'ಸಂವಿಚ್ಛಾಸ್ತ್ರಂ' ಎಂಬ ವಚನವನ್ನು ಉದಾಹರಿಸಲಾಗಿದೆ. ಆದ್ದರಿಂದ ವಿರೋಧವಿಲ್ಲ.

ಭಾ– 'ಸಂವಿಚ್ಛಾಸ್ತ್ರಂ ಪರಂ ಪದಮ್' ಇತಿ ಹಿ ಭಾಗವತೇ।

ಭಾಗವತದಲ್ಲಿ 'ಸಂವಿಚ್ಛಾಸ್ತ್ರಂ ಪರಂ ಪದಮ್' ಎಂಬ ವಾಕ್ಯದಲ್ಲಿ

ಶಾಸ್ತ್ರ ಎಂದರೆ ಸರ್ವನಿಯಾಮಕ ಎಂಬ ಅರ್ಥದಲ್ಲಿ ಪ್ರಯೋಗವಿರುವುದರಿಂದ ಶಾಸ್ತ್ರನೆಂದರೆ ಅಂತರ್ಯಾಮಿ ಎಂದು ಅರ್ಥವಾಗುವುದು.

(ಭಾ.ದೀ.) ಅಂತರ್ಯಾಮಿಣೋ ವಿಷ್ಣೋಃ ಶಾಸ್ತ್ರಪದವಾಚ್ಯತ್ವೇ ಪ್ರಮಾಣಮಾಹ – **ಸಂವಿದಿತಿ** ॥ ಪ್ರಥಮಸ್ಕಂಧೇ ವ್ಯಾಸಂ ಪ್ರತಿ ನಾರದವಾಕ್ಯಮಿದಮ್;

ಸ್ವಪ್ನೋ ಮಾಯಾಽಗ್ರಹಃ ಶಯ್ಯಾ ಜಾಗ್ರದಾಭಾಸ ಆತ್ಮನಃ।
ನಾಮರೂಪಕ್ರಿಯಾವೃತ್ತಿಃ ಸಂವಿಚ್ಛಾಸ್ತ್ರಂ ಪರಂ ಪದಮ್ ॥ ಇತಿ।

ಅಸ್ಯಾರ್ಥಃ – ಆತ್ಮನೋ ಜೀವಸ್ಯ ಮಾಯಾ ವಾಸನಾಖ್ಯಸಂಸ್ಕಾರೋಪಾದಾನಕವಸ್ತುಜ್ಞಾನರೂಪಃ ಸ್ವಪ್ನಃ, ಅಗ್ರಹಃ ಜಾಗ್ರತ್ಸ್ವಪ್ನವಿಷಯಜ್ಞಾನರಹಿತಾ ಶಯ್ಯಾ ಸುಷುಪ್ತಿಃ ನಾಮರೂಪಕ್ರಿಯಾಸು ಶಬ್ದಾರ್ಥಕರ್ಮಸು ವೃತ್ತಿರ್ವ್ಯಾವೃತ್ತಿರ್ಯಸ್ಯಾಃ ಸಾ। ಆಭಾಸಃ ಪ್ರತ್ಯಯಃ ಸಂಜ್ಞಾದಿವಿಷಯಜ್ಞಾನರೂಪೋ ಜಾಗ್ರಚ್ಚ ಆಹತ್ಯ ಏತದವಸ್ಥಾತ್ರಯಂ ಯಸ್ಮಾದಾತ್ಮನಃ ಪರಬ್ರಹ್ಮಣೋ ಭವತಿ ತತ್ಸಂವಿತ್ ಸರ್ವವಿಷಯಕಯಥಾರ್ಥಜ್ಞಾನರೂಪಂ ಸರ್ವಜ್ಞಂ ವಾ । ಶಾಸ್ತ್ರಂ ಸರ್ವನಿಯಂತೃ, ಪರಮ್ ಉತ್ತಮಂ ಪದಂ ಸದ್ಭಿಃ ಪ್ರಾಪ್ಯಂ ಬ್ರಹ್ಮ ಅಹಮ್ ಅಚಿಂತಯಮಿತಿ । 'ಭಾಗವತೇ' ಇತ್ಯನಂತರಂ 'ಪ್ರಯೋಗಾತ್' ಇತಿ ಶೇಷಃ। ಅಸ್ಯ 'ಅಂತರ್ಯಾಮೀ' ಇತ್ಯನೇನಾನ್ವಯಃ।

ಅಂತರ್ಯಾಮಿಯಾದ ವಿಷ್ಣುವು ಶಾಸ್ತ್ರಪದವಾಚ್ಯನಾಗಿದ್ದಾನೆ ಎಂಬ ವಿಷಯದಲ್ಲಿ 'ಸಂವಿತ್' ಎಂಬುದಾಗಿ ಪ್ರಮಾಣವನ್ನು ಹೇಳುತ್ತಿದ್ದಾರೆ. ಭಾಗವತಪ್ರಥಮಸ್ಕಂಧದಲ್ಲಿ ವ್ಯಾಸರನ್ನು ಕುರಿತು ನಾರದರು ಹೇಳುವ ವಾಕ್ಯವಿದು –

ಸ್ವಪ್ನೋ ಮಾಯಾಽಗ್ರಹಃ ಶಯ್ಯಾ ಜಾಗ್ರದಾಭಾಸ ಆತ್ಮನಃ।
ನಾಮರೂಪಕ್ರಿಯಾವೃತ್ತಿಃ ಸಂವಿಚ್ಛಾಸ್ತ್ರಂ ಪರಂ ಪದಮ್ ॥

ಈ ಶ್ಲೋಕಕ್ಕೆ ಅರ್ಥ ಹೀಗಿದೆ – ''ಆತ್ಮನಃ - ಜೀವನಿಗೆ, ಮಾಯಾ- ವಾಸನಾ ಎಂದು ಹೇಳಲಾಗುವ ಸಂಸ್ಕಾರವೇ ಉಪಾದಾನಕಾರಣವಾಗಿರುವ ವಸ್ತುವಿನ ಜ್ಞಾನ-

ರೂಪವಾದ ಸ್ವಪ್ನಃ - ಸ್ವಪ್ನ, ಅಗ್ರಹಃ - ಜಾಗ್ರತ್ ಮತ್ತು ಸ್ವಪ್ನಕಾಲದ ವಿಷಯಗಳ ಜ್ಞಾನರಹಿತವಾದ, [೧]ನಾಮರೂಪಕ್ರಿಯಾವೃತ್ತಿಃ- ನಾಮರೂಪಕ್ರಿಯೆಗಳಲ್ಲಿ ಅಂದರೆ ಶಬ್ದ, ಅರ್ಥ ಮತ್ತು ಕರ್ಮಗಳಲ್ಲಿ ಯಾವುದಕ್ಕೆ ವೃತ್ತಿ ಅಂದರೆ ವ್ಯಾವೃತ್ತಿಯು ಯಾವುದಕ್ಕಿರುವುದೋ ಅಂತಹ, ಶಯ್ಯಾ - ಸುಷುಪ್ತಿ ಮತ್ತು ಆಭಾಸಃ ಅಂದರೆ ಪ್ರತ್ಯಯ ಅಂದರೆ ಹೆಸರು ಮೊದಲಾದವುಗಳ ಜ್ಞಾನರೂಪವಾದ ಜಾಗ್ರತ್ ಜಾಗ್ರದವಸ್ಥೆ – ಹೀಗೆ ಒಟ್ಟಿನಲ್ಲಿ ಈ ಮೂರು ಅವಸ್ಥೆಗಳು ಯಾವ [೨]ಆತ್ಮನಿಂದ ಅಂದರೆ ಪರಮಾತ್ಮನಿಂದ ಉಂಟಾಗುವವೋ ಆ ಪರಬ್ರಹ್ಮನು, ಸಂವಿತ್ - ಸರ್ವ-ವಿಷಯಕವಾದ ಯಥಾರ್ಥಜ್ಞಾನಸ್ವರೂಪನಾಗಿದ್ದಾನೆ. ಅಥವಾ ಸರ್ವಜ್ಞನಾಗಿದ್ದಾನೆ; ಶಾಸ್ತ್ರಂ - ಸರ್ವನಿಯಾಮಕನಾಗಿದ್ದಾನೆ. ಪರಮ್ - ಉತ್ತಮವಾದ, ಪದಂ - ಸಜ್ಜನರಿಂದ ಹೊಂದಲ್ಪಡುವ ಬ್ರಹ್ಮನನ್ನು ನಾನು ಧ್ಯಾನಿಸಿದೆನು'' - ಎಂದು. ಭಾಷ್ಯದಲ್ಲಿ 'ಭಾಗವತೇ' ಎಂಬ ಪದದ ನಂತರ 'ಪ್ರಯೋಗಾತ್' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ ಹಿಂದಿನ ಭಾಷ್ಯವಾಕ್ಯದಲ್ಲಿರುವ 'ಅಂತರ್ಯಾಮಿ' ಎಂಬ ಪದದಿಂದ ಅನ್ವಯವಾಗುವುದು.

(೧) 'ನಾಮರೂಪಕ್ರಿಯಾವೃತ್ತಿಃ' ಎಂಬ ಪದ ಶಯ್ಯಾಪದಕ್ಕೆ ವಿಶೇಷಣವಾಗಿದೆ ಎಂದು ಗ್ರಹಿಸಿ ಇಲ್ಲಿ ವ್ಯಾಖ್ಯಾನಮಾಡಲಾಗಿದೆ. ಭಾಗವತದ ಇತರ ವ್ಯಾಖ್ಯಾನ-ಗಳಲ್ಲಿ 'ಆಭಾಸ'ಪದಕ್ಕೆ ಇದು ವಿಶೇಷಣವೆಂಬ ದೃಷ್ಟಿಯಿಂದ ವ್ಯಾಖ್ಯಾನ-ಮಾಡಲಾಗಿದೆ.

(೨) ಭಾಗವತಶ್ಲೋಕದಲ್ಲಿರುವ 'ಆತ್ಮನಃ' ಎಂಬ ಪದಕ್ಕೆ ಆವೃತ್ತಿ ಮಾಡಿಕೊಂಡು ಷಷ್ಠೀವಿಭಕ್ತ್ಯಂತವಾದ ಒಂದು ಪದಕ್ಕೆ 'ಜೀವನಿಗೆ' ಎಂಬ ಅರ್ಥ, ಪಂಚಮ್ಯಂತ-ವಾದ ಇನ್ನೊಂದು ಪದಕ್ಕೆ 'ಪರಮಾತ್ಮನ ದೆಸೆಯಿಂದ' ಎಂಬ ಅರ್ಥ ಇರುವು-ದೆಂದು ಭಾವಿಸಿ ವ್ಯಾಖ್ಯಾನ ಮಾಡಲಾಗಿದೆ.

ಭಾ – 'ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತ್ರಪ್ರವೃತ್ತಿಹೇತುತಃ।
ನ ಕ್ವಾಪಿ ಕಿಂಚಿನ್ನಾಮಾಸ್ತಿ ತಮೃತೇ ಪುರುಷೋತ್ತಮಮ್ ॥'
ಇತಿ ಪಾದ್ಮೇ।

ಶಾಸ್ತ್ರ ಎಂದರೆ ಸರ್ವನಿಯಾಮಕ ಎಂಬ ಅರ್ಥದಲ್ಲಿ ಪ್ರಯೋಗವಿರುವುದರಿಂದ ಶಾಸ್ತ್ರನೆಂದರೆ ಅಂತರ್ಯಾಮಿ ಎಂದು ಅರ್ಥವಾಗುವುದು.

(ಭಾ.ದೀ.) ಅಂತರ್ಯಾಮಿಣೋ ವಿಷ್ಣೋಃ ಶಾಸ್ತ್ರಪದವಾಚ್ಯತ್ವೇ ಪ್ರಮಾಣಮಾಹ – **ಸಂವಿದಿತಿ** ॥ ಪ್ರಥಮಸ್ಕಂಧೇ ವ್ಯಾಸಂ ಪ್ರತಿ ನಾರದವಾಕ್ಯಮಿದಮ್;

ಸ್ವಪ್ನೋ ಮಾಯಾಽಗ್ರಹಃ ಶಯ್ಯಾ ಜಾಗ್ರದಾಭಾಸ ಆತ್ಮನಃ ।
ನಾಮರೂಪಕ್ರಿಯಾವೃತ್ತಿಃ ಸಂವಿಚ್ಛಾಸ್ತ್ರಂ ಪರಂ ಪದಮ್ ॥ ಇತಿ ।

ಅಸ್ಯಾರ್ಥಃ – ಆತ್ಮನೋ ಜೀವಸ್ಯ ಮಾಯಾ ವಾಸನಾಖ್ಯಸಂಸ್ಕಾರೋಪಾದಾನಕವಸ್ತುಜ್ಞಾನರೂಪಃ ಸ್ವಪ್ನಃ, ಅಗ್ರಹಃ ಜಾಗ್ರತ್ಸ್ವಪ್ನವಿಷಯಜ್ಞಾನರಹಿತಾ ಶಯ್ಯಾ ಸುಷುಪ್ತಿಃ ನಾಮರೂಪಕ್ರಿಯಾಸು ಶಬ್ದಾರ್ಥಕರ್ಮಸು ವೃತ್ತಿರ್ವ್ಯಾವೃತ್ತಿರ್ಯಸ್ಯಾಃ ಸಾ । ಆಭಾಸಃ ಪ್ರತ್ಯಯಃ ಸಂಜ್ಞಾದಿವಿಷಯಜ್ಞಾನರೂಪೋ ಜಾಗ್ರಚ್ಚ ಆಹತ್ಯ ಏತದವಸ್ಥಾತ್ರಯಂ ಯಸ್ಮಾದಾತ್ಮನಃ ಪರಬ್ರಹ್ಮಣೋ ಭವತಿ ತತ್ಸಂವಿತ್ ಸರ್ವವಿಷಯಕಯಥಾರ್ಥಜ್ಞಾನರೂಪಂ ಸರ್ವಜ್ಞಂ ವಾ । ಶಾಸ್ತ್ರಂ ಸರ್ವನಿಯಂತೃ, ಪರಮ್ ಉತ್ತಮಂ ಪದಂ ಸದ್ಭಿಃ ಪ್ರಾಪ್ಯಂ ಬ್ರಹ್ಮ ಅಹಮ್ ಅಚಿಂತಯಮಿತಿ । 'ಭಾಗವತೇ' ಇತ್ಯನಂತರಂ 'ಪ್ರಯೋಗಾತ್' ಇತಿ ಶೇಷಃ । ಅಸ್ಯ 'ಅಂತರ್ಯಾಮೀ' ಇತ್ಯನೇನಾನ್ವಯಃ ।

ಅಂತರ್ಯಾಮಿಯಾದ ವಿಷ್ಣುವು ಶಾಸ್ತ್ರಪದವಾಚ್ಯನಾಗಿದ್ದಾನೆ ಎಂಬ ವಿಷಯದಲ್ಲಿ 'ಸಂವಿತ್' ಎಂಬುದಾಗಿ ಪ್ರಮಾಣವನ್ನು ಹೇಳುತ್ತಿದ್ದಾರೆ. ಭಾಗವತಪ್ರಥಮಸ್ಕಂಧದಲ್ಲಿ ವ್ಯಾಸರನ್ನು ಕುರಿತು ನಾರದರು ಹೇಳುವ ವಾಕ್ಯವಿದು –

ಸ್ವಪ್ನೋ ಮಾಯಾಽಗ್ರಹಃ ಶಯ್ಯಾ ಜಾಗ್ರದಾಭಾಸ ಆತ್ಮನಃ ।
ನಾಮರೂಪಕ್ರಿಯಾವೃತ್ತಿಃ ಸಂವಿಚ್ಛಾಸ್ತ್ರಂ ಪರಂ ಪದಮ್ ॥

ಈ ಶ್ಲೋಕಕ್ಕೆ ಅರ್ಥ ಹೀಗಿದೆ – ''ಆತ್ಮನಃ - ಜೀವನಿಗೆ, ಮಾಯಾ- ವಾಸನಾ ಎಂದು ಹೇಳಲಾಗುವ ಸಂಸ್ಕಾರವೇ ಉಪಾದಾನಕಾರಣವಾಗಿರುವ ವಸ್ತುವಿನ ಜ್ಞಾನ-

ರೂಪವಾದ ಸ್ವಪ್ನಃ - ಸ್ವಪ್ನ, ಅಗ್ರಹಃ - ಜಾಗ್ರತ್ ಮತ್ತು ಸ್ವಪ್ನಕಾಲದ ವಿಷಯಗಳ ಜ್ಞಾನರಹಿತವಾದ, (೧)ನಾಮರೂಪಕ್ರಿಯಾವೃತ್ತಿಃ- ನಾಮರೂಪಕ್ರಿಯೆಗಳಲ್ಲಿ ಅಂದರೆ ಶಬ್ದ, ಅರ್ಥ ಮತ್ತು ಕರ್ಮಗಳಲ್ಲಿ ಯಾವುದಕ್ಕೆ ವೃತ್ತಿ ಅಂದರೆ ವ್ಯಾವೃತ್ತಿಯು ಯಾವುದಕ್ಕಿರುವುದೋ ಅಂತಹ, ಶಯ್ಯಾ - ಸುಷುಪ್ತಿ ಮತ್ತು ಆಭಾಸಃ ಅಂದರೆ ಪ್ರತ್ಯಯ ಅಂದರೆ ಹೆಸರು ಮೊದಲಾದವುಗಳ ಜ್ಞಾನರೂಪವಾದ ಜಾಗ್ರತ್ ಜಾಗ್ರದವಸ್ಥೆ – ಹೀಗೆ ಒಟ್ಟಿನಲ್ಲಿ ಈ ಮೂರು ಅವಸ್ಥೆಗಳು ಯಾವ (೨)ಆತ್ಮನಿಂದ ಅಂದರೆ ಪರಮಾತ್ಮನಿಂದ ಉಂಟಾಗುವವೋ ಆ ಪರಬ್ರಹ್ಮನು, ಸಂವಿತ್ - ಸರ್ವ-ವಿಷಯಕವಾದ ಯಥಾರ್ಥಜ್ಞಾನಸ್ವರೂಪನಾಗಿದ್ದಾನೆ. ಅಥವಾ ಸರ್ವಜ್ಞನಾಗಿದ್ದಾನೆ; ಶಾಸ್ತ್ರಂ - ಸರ್ವನಿಯಾಮಕನಾಗಿದ್ದಾನೆ. ಪರಮ್ - ಉತ್ತಮವಾದ, ಪದಂ - ಸಜ್ಜನರಿಂದ ಹೊಂದಲ್ಪಡುವ ಬ್ರಹ್ಮನನ್ನು ನಾನು ಧ್ಯಾನಿಸಿದೆನು'' - ಎಂದು. ಭಾಷ್ಯದಲ್ಲಿ 'ಭಾಗವತೇ' ಎಂಬ ಪದದ ನಂತರ 'ಪ್ರಯೋಗಾತ್' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ ಹಿಂದಿನ ಭಾಷ್ಯವಾಕ್ಯದಲ್ಲಿರುವ 'ಅಂತರ್ಯಾಮಿ' ಎಂಬ ಪದದಿಂದ ಅನ್ವಯವಾಗುವುದು.

(೧) 'ನಾಮರೂಪಕ್ರಿಯಾವೃತ್ತಿಃ' ಎಂಬ ಪದ ಶಯ್ಯಾಪದಕ್ಕೆ ವಿಶೇಷಣವಾಗಿದೆ ಎಂದು ಗ್ರಹಿಸಿ ಇಲ್ಲಿ ವ್ಯಾಖ್ಯಾನಮಾಡಲಾಗಿದೆ. ಭಾಗವತದ ಇತರ ವ್ಯಾಖ್ಯಾನ-ಗಳಲ್ಲಿ 'ಆಭಾಸ'ಪದಕ್ಕೆ ಇದು ವಿಶೇಷಣವೆಂಬ ದೃಷ್ಟಿಯಿಂದ ವ್ಯಾಖ್ಯಾನ-ಮಾಡಲಾಗಿದೆ.

(೨) ಭಾಗವತಶ್ಲೋಕದಲ್ಲಿರುವ 'ಆತ್ಮನಃ' ಎಂಬ ಪದಕ್ಕೆ ಆವೃತ್ತಿ ಮಾಡಿಕೊಂಡು ಷಷ್ಠೀವಿಭಕ್ತ್ಯಂತವಾದ ಒಂದು ಪದಕ್ಕೆ 'ಜೀವನಿಗೆ' ಎಂಬ ಅರ್ಥ, ಪಂಚಮ್ಯಂತ-ವಾದ ಇನ್ನೊಂದು ಪದಕ್ಕೆ 'ಪರಮಾತ್ಮನ ದೆಸೆಯಿಂದ' ಎಂಬ ಅರ್ಥ ಇರುವು-ದೆಂದು ಭಾವಿಸಿ ವ್ಯಾಖ್ಯಾನ ಮಾಡಲಾಗಿದೆ.

ಭಾ – 'ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತೃತ್ವಹೇತುತಃ ।
ನ ಕ್ವಾಪಿ ಕಿಂಚಿನ್ನಾಮಾಸ್ತಿ ತಮೃತೇ ಪುರುಷೋತ್ತಮಮ್ ॥'
ಇತಿ ಪಾದ್ಮೇ ।

ಎಲ್ಲರಿಗೂ ಶಾಸಕನಾಗಿದ್ದಾನೆ ಎಂಬ ಕಾರಣದಿಂದ ವಿಷ್ಣುವು ಆಯಾಯಾ ವಸ್ತುಗಳನ್ನು ಹೇಳುವ ಎಲ್ಲ ಶಬ್ದಗಳಿಂದ ವಾಚ್ಯನಾಗಿ-ದ್ದಾನೆ. ಪುರುಷೋತ್ತಮನಾದ ಅಂತರ್ಯಾಮಿಯಾದ ವಿಷ್ಣುವನ್ನು ಬಿಟ್ಟು ಜೀವ ಮೊದಲಾದ ಯಾರಲ್ಲೂ ಅಹಮಿತ್ಯಾದಿ ಯಾವ ಶಬ್ದ-ವೂ ವಾಚಕವಾಗಿರುವುದಿಲ್ಲ - ಎಂದು ಪಾದ್ಮಪುರಾಣದಲ್ಲಿ ಹೇಳಿದೆ.

(ಭಾ.ದೀ.) ನನು ಅಂತರ್ಯಾಮಿಣಿ ಅಹಮಾದಿಪ್ರಯೋಗಃ ಕಥಂ ಸಂಭವತಿ? ಇತ್ಯಾಶಂಕಾಯಾಂ ತತ್ರ ತುಶಬ್ದಸೂಚಿತಾಂ ಸ್ಮೃತಿಮೇವ ಆಹ – **ತತ್ತದಿತಿ** ॥ ವಿಷ್ಣುಃ **ತತ್ತನ್ನಾಮ್ನಾ** ಅನ್ಯಪರತ್ವೇನ ಪ್ರಸಿದ್ಧ ಅಹಮಾದಿನಾಮ್ನೋಚ್ಯತ ಇತಿ । ಅನೇನ ತಸ್ಯ ಅಂತರ್ಯಾಮಿಣಿ ವಿಷ್ಣೌ ವಿದ್ವದ್ರೂಢಿರ್ದರ್ಶಿತಾ । **ಸರ್ವಶಾಸ್ತೃತ್ವಹೇತುತಃ** - ಸರ್ವ-ನಿಯಂತೃತ್ವನಿಮಿತ್ತೇನೇತಿ । ಅನೇನ ಮಹಾಯೋಗೋ ದರ್ಶಿತಃ । ತತ್ರ ತಸ್ಯ ಸ್ವಾತಂತ್ರ್ಯನಿಮಿತ್ತೋಕ್ತೇಃ । ಅನೇನ ಪರಮತ ಇವಾಸ್ಮನ್ಮತೇಽಪಿ ಲಾಕ್ಷಣಿಕತ್ವಂ ಪರಿ-ಹೃತಮ್; **ಪುರುಷೋತ್ತಮಮ್** ಅಂತರ್ಯಾಮಿಣಂ ವಿಷ್ಣುಮ್ **ಋತೇ** ವಿನಾ, ಅನ್ಯತ್ರ **ಕ್ವಾಪಿ** ಜೀವಾದೌ **ಕಿಂಚಿತ್** ಅಹಮಾದಿರೂಪಂ **ನಾಮ** ವಾಚಕತಯಾ ನಾಸ್ತೀತಿ । ಅನೇನ ಹರೌ ಪರಮಮುಖ್ಯತಾಽನ್ಯತ್ರ ಕೇವಲಮುಖ್ಯತಾ ಚೋಕ್ತಾ । ಅನ್ಯಥಾ ನ ಕ್ವಾಪೀತಿ ಸಾಮಾನ್ಯನಿಷೇಧಾಯೋಗಾತ್ । ಅತ್ರ ಅಹಮಾದಿಶಬ್ದಾಃ ಪ್ರತ್ಯಗಾದಿವಾಚಿತ್ವೇನ ಪ್ರಸಿದ್ಧಾಃ, ಪ್ರತ್ಯಗಾದಯಶ್ಚ ಸರ್ವದಾ ಪಿಂಡೀಭೂತಾಃ, ತಾನವಿವೇಕೇನ ಅಜ್ಞಾಃ ಕೇವಲಜೀವಾದೌ ಪ್ರಯುಂಜತೇ ದಹತಿ ಶಬ್ದಮಿವ ಕಾಷ್ಠೇ । ಪ್ರಾಜ್ಞಾಸ್ತು ಮುಖ್ಯಾಮುಖ್ಯವಿವೇಕವಂತೋ ಹ್ಯಮುಖ್ಯಮರ್ಥಮನಾದೃತ್ಯ ಮುಖ್ಯಾರ್ಥೇ ಹರೌ ಪ್ರಯುಂಜತ ಇತಿ **ತತ್ವನಿರ್ಣಯಟೀಕೋಕ್ತಮ್** ಅನು-ಸಂಧೇಯಮ್ । **ಪಾದ್ಮೇ** ಇತ್ಯನಂತರಮ್ 'ಅಂತರ್ಯಾಮಿಣಿ ಅಹಮಾದಿಪದಾನಾಂ ಮುಖ್ಯತ್ವೋಕ್ತೇಃ ಶಾಸ್ತ್ರದೃಷ್ಟ್ಯಾ ಅಹಮಾದ್ಯುಪದೇಶೋ ಯುಕ್ತ ಏವ' ಇತಿ ವಾಕ್ಯಶೇಷಃ ।

ಅಂತರ್ಯಾಮಿಯನ್ನು ಕುರಿತು 'ಅಹಂ' ಇತ್ಯಾದಿ ಶಬ್ದಗಳ ಪ್ರಯೋಗವು ಹೇಗೆ ಯುಕ್ತವಾಗುವುದು? ಎಂದು ಆಶಂಕಿಸಿದಾಗ, ಆ ವಿಷಯದಲ್ಲಿ ಸೂತ್ರದ ತುಶಬ್ದವು

ಸೂಚಿಸುವ ಸ್ಮೃತಿಯನ್ನೇ ತತ್ತತ್ ಎಂಬುದಾಗಿ ಭಾಷ್ಯದಲ್ಲಿ ಉದಾಹರಿಸುತ್ತಿದ್ದಾರೆ. ವಿಷ್ಣುಃ ತತ್ತನ್ನಾಮ್ನಾ ಉಚ್ಯತೇ - ಅನ್ಯಪರವೆಂದು ಪ್ರಸಿದ್ಧವಾದ 'ಅಹಮ್' ಇತ್ಯಾದಿ ಶಬ್ದಗಳಿಂದ ಹೇಳಲ್ಪಡುತ್ತಾನೆ ಎಂದು. ಇದರಿಂದ ಆ ಶಬ್ದಗಳಿಗೆ ಅಂತರ್ಯಾಮಿಯಾದ ವಿಷ್ಣುವಿನ ವಿಷಯದಲ್ಲಿ ವಿದ್ವದ್ರೂಢಿ ಇರುವುದೆಂದು ತೋರಿಸಿದಂತಾಗುವುದು. ಈ ವಿಷಯದಲ್ಲಿ ಹೇತು 'ಸರ್ವಶಾಸ್ತೃತ್ವಹೇತುತಃ'- ಸರ್ವರನ್ನೂ ನಿಯಂತ್ರಣ ಮಾಡುವ ನಿಮಿತ್ತದಿಂದ ಎಂದು. ಇದರಿಂದ ಶಬ್ದಗಳಿಗೆ ವಿಷ್ಣುವಿಗೆ ಮಹಾಯೋಗವು ಪ್ರದರ್ಶಿಸಲ್ಪಟ್ಟಿದೆ. ಏಕೆಂದರೆ ಇದರಿಂದ ಆ ಶಬ್ದಗಳಿಗೆ ವಿಷ್ಣುವಿನಲ್ಲಿ ಪ್ರವೃತ್ತಿಯಾಗಲು ಸ್ವಾತಂತ್ರ್ಯವು ನಿಮಿತ್ತವಾಗಿದೆ ಎಂದು ಹೇಳಿದಂತಾಗುವುದು. ಇದರಿಂದ ಪರಮತದಲ್ಲಿ ಹೇಗೋ ಹಾಗೆ ನಮ್ಮ ಮತದಲ್ಲೂ ಪದಗಳಿಗೆ ಬ್ರಹ್ಮನ ವಿಷಯದಲ್ಲಿ ಲಕ್ಷಣಾವೃತ್ತಿ-ಯಿರುವುದು ಎಂಬ ಶಂಕೆಯು ನಿರಾಕರಿಸಲ್ಪಡುವುದು. ಏಕೆಂದರೆ, ಪುರುಷೋ-ತ್ತಮಮ್ - ಅಂತರ್ಯಾಮಿಯಾದ ವಿಷ್ಣುವನ್ನು, ಋತೇ - ಬಿಟ್ಟು, 'ಕ್ವಾಪಿ' - ಜೀವನೇ ಮೊದಲಾದ ಯಾರಲ್ಲೂ ಕಿಂಚಿತ್ - ಅಹಂ ಮೊದಲಾದ , ನಾಮ ನಾಸ್ತಿ -ಯಾವುದೇ ಶಬ್ದವು ವಾಚಕವಾಗಿ ಇರುವುದಿಲ್ಲ. ಇದರಿಂದ ಶಬ್ದಗಳು ಶ್ರೀಹರಿಯಲ್ಲಿ ಪರಮಮುಖ್ಯವೆಂದೂ ಅನ್ಯತ್ರ ಕೇವಲಮುಖ್ಯವೆಂದೂ ಹೇಳಿದಂತಾಗುವುದು. ಆ ಅಭಿಪ್ರಾಯವಿಲ್ಲದಿದ್ದಲ್ಲಿ ನ ಕ್ವಾಪಿ - ಬೇರೆಲ್ಲೂ ಈ ಶಬ್ದಗಳು ವಾಚಕವಲ್ಲ ಎಂದು ಸಾಮಾನ್ಯಾಕಾರದಿಂದ ನಿಷೇಧವು ಯುಕ್ತವಾಗುವುದಿಲ್ಲ. ಈ ಸಂದರ್ಭದಲ್ಲಿ - ಅಹಂ ಮೊದಲಾದ ಶಬ್ದಗಳು ಪ್ರತ್ಯಕ್ ಚೈತನ್ಯ ಅಂದರೆ ಶರೀರದ ಒಳಗಿರುವ ಜೀವನೇ ಮೊದಲಾದವರನ್ನು ಹೇಳುವ ಶಬ್ದಗಳೆಂದು ಪ್ರಸಿದ್ಧವಾಗಿವೆ; ಪ್ರತ್ಯಕ್‌ಚೇತನವೇ ಮೊದಲಾದ ವಸ್ತುಗಳು ಯಾವಾಗಲೂ ಭಗವಂತನೊಂದಿಗೆ ಮಿಶ್ರಿತವಾಗಿಯೇ ಇರುತ್ತವೆ; ಅವರನ್ನು ಪೃಥಕ್ಕರಿಸಲು ಅಸಮರ್ಥರಾದ ಅಜ್ಞರು ಕೇವಲ ಜೀವರ ವಿಷಯದಲ್ಲೇ, ಕಟ್ಟಿಗೆಯನ್ನು ಉದ್ದೇಶಿಸಿ 'ದಹತಿ' ಸುಡುತ್ತದೆ ಎಂಬ ಶಬ್ದವನ್ನು ಪ್ರಯೋಗಿಸುವಂತೆ, ಪ್ರಯೋಗಮಾಡುತ್ತಾರೆ. ಪ್ರಾಜ್ಞರಾದರೋ ಯಾವುದು ಮುಖ್ಯ ಯಾವುದು ಅಮುಖ್ಯ ಎಂಬ ವಿವೇಕವನ್ನು ಪಡೆದವರಾಗಿ ಅಮುಖ್ಯಾರ್ಥವನ್ನು ಆದರಿಸದೇ ಮುಖ್ಯಾರ್ಥನಾದ ಹರಿಯ ವಿಷಯದಲ್ಲಿ ಆ ಶಬ್ದಗಳನ್ನು ಪ್ರಯೋಗಿ-ಸುತ್ತಾರೆ ಎಂದು ತತ್ವನಿರ್ಣಯಟೀಕೆಯಲ್ಲಿ ಹೇಳಲಾಗಿರುವ ವಿಷಯಗಳನ್ನು ಅನು-

ಸಂಧಾನಮಾಡಬೇಕು. 'ಪಾದ್ಮೇ' ಎಂಬ ಪದದ ನಂತರ "ಅಂತರ್ಯಾಮಿಣಿ ಅಹಮಾದಿಪದಾನಾಂ ಮುಖ್ಯತ್ವೋಕ್ತೇಃ ಶಾಸ್ತ್ರದೃಷ್ಟ್ಯಾ ಅಹಮಾದ್ಯುಪದೇಶೋ ಯುಕ್ತ ಏವ" 'ಅಂತರ್ಯಾಮಿಯ ವಿಷಯದಲ್ಲಿ ಅಹಂ ಮೊದಲಾದ ಪದಗಳು ಮುಖ್ಯ-ವಾಗಿವೆ ಎಂದು ಹೇಳಿರುವುದರಿಂದ ಅಂತರ್ಯಾಮಿಯ ದೃಷ್ಟಿಯಿಂದ ಅಹಂ ಇತ್ಯಾದಿ ಪದಗಳ ಪ್ರಯೋಗವು ಯುಕ್ತವೇ ಆಗಿದೆ' – ಎಂಬ ವಾಕ್ಯಭಾಗವು ಶೇಷವಾಗಿದೆ.

ಭಾ– **'ಅಹಂ ಮನುರಭವಂ ಸೂರ್ಯಶ್ಚ'** (ಋ.೪-೨೩-೧) **ಇತ್ಯಾದಿವತ್ ॥**

'ಅಹಂ ಮನುರಭವಂ ಸೂರ್ಯಶ್ಚ' ಎಂದು ವಾಮದೇವ ಋಷಿಯು ಅಂತರ್ಯಾಮಿದೃಷ್ಟಿಯಿಂದ ವಾಕ್ಯಪ್ರಯೋಗ ಮಾಡಿದಂತೆ 'ಪ್ರಾಣೋ ವಾ ಅಹಮಸ್ಮಿ' ಎಂಬ ವಾಕ್ಯವನ್ನೂ ಕೂಡ ಅಂತರ್ಯಾಮಿ ದೃಷ್ಟಿ-ಯಿಂದ ಪ್ರಯೋಗಿಸಲಾಗಿದೆ.

(ಭಾ.ದೀ.) ನನು ಅಂತರ್ಯಾಮಿಣಿ ಅಹಮಾದಿಪ್ರಯೋಗಾದರ್ಶನಾತ್ ತದ-ಯೋಗಃ, ಇತ್ಯಾಶಂಕಾಂ ಸೂತ್ರೋಕ್ತದೃಷ್ಟಾಂತವಿವರಣೇನ ಪರಿಹರತಿ **ಅಹಮಿತಿ ॥** ಅಹಂ ವಾಮದೇವಸಂಜ್ಞಕಋಷ್ಯಂತರ್ಯಾಮೀ ತತ್ತದಂತರ್ಯಾಮಿತಯಾ 'ಮನುಃ ಸೂರ್ಯಶ್ಚ ಅಭವಮ್' ಇತಿ ಋಙ್ಮಂತ್ರಾರ್ಥಃ । ಆದಿಪದೇನ 'ಅಹಂ ಕಕ್ಷೀವಾನ್ ಋಷಿರಸ್ಮಿ ವಿಪ್ರೋಽಹಂ ಕುತ್ಸಮ್'(ಋ.೪-೨೬-೧) ಇತ್ಯಾದಿಕಂ ಗೃಹ್ಯತೇ । **ಇತ್ಯಾದಿವತ್** ಏವಮಾದಿಪ್ರಯೋಗವತ್ ಇತ್ಯಸ್ಯ **ಶಾಸ್ತ್ರದೃಷ್ಟ್ಯೋಪದೇಶಃ** ಇತ್ಯನೇ-ನಾನ್ವಯಃ।

ಅಂತರ್ಯಾಮಿಯನ್ನು ಉದ್ದೇಶಿಸಿ ಅಹಂ ಇತ್ಯಾದಿ ಶಬ್ದಗಳ ಪ್ರಯೋಗವು ಎಲ್ಲೂ ಕಾಣಿಸದಿರುವುದರಿಂದ ಆ ದೃಷ್ಟಿಯಿಂದ ಪ್ರಾಣೋಽಹಂ ಎಂಬ ವಾಕ್ಯಪ್ರಯೋಗವನ್ನು ಮಾಡಲಾಗಿದೆ ಎನ್ನುವುದು ಯುಕ್ತವಲ್ಲ ಎಂಬ ಆಶಂಕೆಯನ್ನು ಸೂತ್ರದಲ್ಲಿ ಹೇಳ-ಲಾಗಿರುವ ದೃಷ್ಟಾಂತವನ್ನು ವಿವರಿಸುವ ಮೂಲಕ ಅಹಂ ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಿದ್ದಾರೆ. ಅಹಂ - ವಾಮದೇವ ಎಂಬ ಹೆಸರಿನ ಋಷಿಯ ಅಂತ-ರ್ಯಾಮಿಯಾದ ನಾನು 'ಮನುಃ ಸೂರ್ಯಶ್ಚ ಅಭವಂ' ಮನು ಸೂರ್ಯ ಇವರ

ಅಂತರ್ಯಾಮಿಯೂ ಆಗಿರುವೆನೆಂದು ಈ ಋಙ್ಮಂತ್ರದ ಅರ್ಥ. ಇತ್ಯಾದಿವತ್ ಎಂಬಲ್ಲಿರುವ ಆದಿಪದದಿಂದ 'ಅಹಂ ಕಕ್ಷೀವಾನ್ ಋಷಿರಸ್ಮಿ ವಿಪ್ರೋಽಹಂ ಕುತ್ಸಮ್' ಇತ್ಯಾದಿ ವಾಕ್ಯಗಳು ಗ್ರಹಿಸಲ್ಪಡುತ್ತವೆ. ಇತ್ಯಾದಿವತ್- ಇದೇ ಮೊದಲಾದ ಪ್ರಯೋಗ -ದಂತೆ ಎಂಬ ಈ ವಾಕ್ಯಕ್ಕೆ 'ಶಾಸ್ತ್ರದೃಷ್ಟ್ಯಾ ಉಪದೇಶಃ' ಎಂಬ ವಾಕ್ಯದೊಂದಿಗೆ ಅನ್ವಯವಾಗುವುದು.

**॥ ಓಂ ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋ-**
**ಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ಓಂ ॥ ೩೧ ॥**

ಶತಾಯುಷ್ಟ್ವವೆಂಬ ಜೀವಲಿಂಗ, ಪ್ರಾಣಸಂವಾದ ಮೊದಲಾದ ಮುಖ್ಯಪ್ರಾಣಲಿಂಗಗಳು ಈ ಪ್ರಕರಣದಲ್ಲಿರುವುದರಿಂದ ಈ ಪ್ರಾಣನು ವಿಷ್ಣುವಲ್ಲ ಎಂದರೆ ಅದು ಸರಿಯಲ್ಲ. ಏಕೆಂದರೆ, ಮೂರು-ವಿಧವಾದ ಭಗವದುಪಾಸನೆಯು ಇರುವುದರಿಂದ ಮತ್ತು ಆ ಉಪಾಸನೆಯು ಇಲ್ಲಿ ಉಕ್ತವಾಗಿರುವುದರಿಂದ - ಆ ಮೂರುವಿಧ-ವಾದ ಉಪಾಸನೆಗಳಲ್ಲಿ ಒಂದಾದ ಅಂತರುಪಾಸನೆಗೋಸ್ಕರವಾಗಿ ಅಂತರ್ಯಾಮಿಯೆಂದು ಹೇಳಿರುವುದು ಯುಕ್ತವಾಗಿದೆ.

**ಭಾ– 'ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ' ಇತಿ ಜೀವ-ಲಿಂಗಮ್ । ಪ್ರಾಣಸಂವಾದಾದಿ ಮುಖ್ಯಪ್ರಾಣಲಿಂಗಮ್ । ತಸ್ಮಾತ್ ನೇತಿ ಚೇತ್ –**

'ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ' ಎಂಬ ವಾಕ್ಯದಲ್ಲಿ ಜೀವ-ಲಿಂಗವಿದೆ. ಪ್ರಾಣಸಂವಾದ ಮೊದಲಾದವು ಮುಖ್ಯಪ್ರಾಣನ ಲಿಂಗವಾಗಿವೆ. ಆದ್ದರಿಂದ ಪ್ರಾಣನು ವಿಷ್ಣುವಲ್ಲ ಎಂದು ಹೇಳಿದರೆ,

(ಭಾ.ದೀ.) ಪುನರುಕ್ತಮಾಕ್ಷಿಪ್ಯ ಸಮಾದಧತ್ ಸೂತ್ರಮುಪನ್ಯಸ್ಯ ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – **ಜೀವೇತಿ** ॥ 'ಅನುಸಂಧೀಯತ ಉಕ್ತಮ್' ಇತಿ ಶೇಷಃ ।

ಸಂವಾದೋ ವಿವಾದಃ ಕಲಹಃ ಪ್ರಾಣಸ್ಯ ಪ್ರಾಣೈಃ ಸಹ ಸಂವಾದ ಇತಿ ವಿಗ್ರಹಃ । ತಥಾ ಚ ಯಸ್ಮಾದತ್ರ ಪ್ರಕರಣೇ 'ತಂ ಶತಂ ವರ್ಷಾಣ್ಯಭ್ಯಾರ್ಚತ್ ತಸ್ಮಾತ್ ಶತಂ ವರ್ಷಾಣಿ ಪುರುಷಾಯುಷೋ ಭವಂತಿ' (ಐ.ಆ.೨.೨.೧) ಇತ್ಯನೇನ ಯಚ್ಛತಸಂವತ್ಸರ-ಪರ್ಯಂತಂ ಪ್ರಾಣಸ್ಯ ಜೀವದೇಹೇ ಅವಸ್ಥಾನಹೇತುಕಂ ಶತಾಯುಷ್ಟ್ವರೂಪಂ ಜೀವಲಿಂಗಮಿತ್ಯುಕ್ತಂ ತತ್ 'ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ' ಇತ್ಯಾದಿನಾ ಬಹುಷು ಸ್ಥಲೇಷು ಅನುಸಂಧೀಯತೇ । ಯಸ್ಮಾಚ್ಚ 'ತಾ ಅಹಿಂಸಂತಾಹಮುಕ್ಥಮಹಮುಕ್ಥಮಸ್ಮಿ' (ಐ.ಆ.೨-೧-೪) ಇತಿ ವಾಕ್ಯೇನ ಪ್ರಾಣಸ್ಯ ಪ್ರಾಣೈರಿಂದ್ರಿಯೈಃ ಸಹ ಸಂವಾದರೂಪಮುಖ್ಯಪ್ರಾಣಲಿಂಗಮುಕ್ತಮ್ । ಯಸ್ಮಾಚ್ಚ ಆದಿಪದಗೃಹೀತಂ 'ಪ್ರಾಣೋ ವಂಶ ಇತಿ ಸ್ಥವಿರಃ ಶಾಕಲ್ಯಸ್ತದ್ ಯಥಾ ಶಾಲಾವಂಶೇ ಸರ್ವೇಽನ್ಯೇ ವಂಶಾಃ ಸಮಾಹಿತಾಃ ಸ್ಯುರೇವಮಸ್ಮಿನ್ ಪ್ರಾಣೇ ಚಕ್ಷುಃಶ್ರೋತ್ರಂ ಮನೋ ವಾಗಿಂದ್ರಿಯಾಣಿ ಶರೀರಂ ಸರ್ವ ಆತ್ಮಾ ಸಮಾಹಿತಃ' (ಐ.ಆ.೩-೨-೧-೧) ಇತಿ ವಾಕ್ಯೇನ ಸರ್ವಜೀವೇಂದ್ರಿಯದೇಹಧಾರಕತ್ವರೂಪಲಿಂಗಂ ಚ ಉಕ್ತಮಸ್ತಿ ತಸ್ಮಾದಯಂ ಪ್ರಾಣೋ ನ ವಿಷ್ಣುಃ, ಕಿಂತು ಜೀವಮುಖ್ಯಪ್ರಾಣಾವೇವ ಇತಿ ಯೋಜನಾ ।

ಪುನಃ ಹಿಂದೆ ಹೇಳಿದ ವಿಷಯವನ್ನು ಆಕ್ಷೇಪಿಸಿ ಸಮಾಧಾನವನ್ನು ಹೇಳುವ ಸೂತ್ರವನ್ನು ಉಪನ್ಯಾಸಮಾಡಿ ಭಾಷ್ಯಕಾರರು ಆಕ್ಷೇಪಾಂಶವನ್ನು ''ಜೀವ'' ಎಂಬು-ದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಇಲ್ಲಿ 'ಅನುಸಂಧೀಯತೇ ಉಕ್ತಮ್' ಎಂಬ ಪದಗಳು ಶೇಷವಾಗಿವೆ. ಸಂವಾದ ಅಂದರೆ ವಿವಾದ ಅಥವಾ ಕಲಹ. ಪ್ರಾಣ-ಸಂವಾದವೆಂದರೆ ಪ್ರಾಣಸ್ಯ ಪ್ರಾಣೈಃ ಸಹ ಸಂವಾದಃ - ಮುಖ್ಯಪ್ರಾಣನಿಗೆ ಇಂದ್ರಿಯಗಳೊಂದಿಗೆ ನಡೆದ ಸಂವಾದ ಎಂದು ಪ್ರಾಣಸಂವಾದಶಬ್ದದ ವಿಗ್ರಹ. ತಥಾ-ಚ ಯಾವ ಕಾರಣದಿಂದಾಗಿ ಈ ಪ್ರಕರಣದಲ್ಲಿ ತಂ ಶತಂ ವರ್ಷಾಣಿ ಅಭ್ಯಾರ್ಚತ್ ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ - 'ಆ ಜೀವನ ದೇಹದಲ್ಲಿ ನೂರು ವರ್ಷಗಳ ಕಾಲ ಮುಖ್ಯಪ್ರಾಣನು ಇದ್ದನು. ಆದ್ದರಿಂದ ನೂರುವರ್ಷಗಳು ಪುರುಷನ ಆಯುಸ್ಸಾಗಿರುವುದು' ಎಂಬ ಈ ವಾಕ್ಯದಿಂದ ಜೀವದೇಹದಲ್ಲಿ ನೂರು

ಸಂವತ್ಸರಗಳ ಕಾಲ ಪ್ರಾಣನು ಇರುವ ಕಾರಣ ಜೀವನಿಗೆ ನೂರು ವರ್ಷ ಆಯುಸ್ಸು ಎಂಬುದಾಗಿ ಜೀವಲಿಂಗವು ಹೇಳಲ್ಪಟ್ಟಿದೆಯೋ ಅದು 'ತಾವಂತಿ ಶತಸಂವತ್ಸರಸ್ಯ ಅಹ್ನಾಂ ಸಹಸ್ರಾಣಿ ಭವಂತಿ' - 'ಆ ನೂರು ಸಂವತ್ಸರದಲ್ಲಿ ಅಷ್ಟು ಸಾವಿರ ದಿನಗಳು ಇರುವವು' ಇತ್ಯಾದಿ ವಾಕ್ಯಗಳಿಂದ ಅನೇಕ ಸ್ಥಳಗಳಲ್ಲಿ ಸ್ಮರಿಸಲ್ಪಟ್ಟಿದೆ. ಅದರಂತೆ 'ತಾ ಅಹಿಂಸಂತಾಹಮ್ ಉಕ್ಥಮ್ ಅಹಂ ಉಕ್ಥಮಸ್ಮಿ' 'ಆ ಇಂದ್ರಿಯಾಭಿಮಾನಿದೇವತೆಗಳು ನಾನು ಈ ಚತುರ್ಮುಖನ ಶರೀರದ ಉತ್ಥಾಪಕನಾಗಿದ್ದೇನೆ, ನಾನು ಈ ಚತುರ್ಮುಖ ಶರೀರದ ಉತ್ಥಾಪಕನಾಗಿದ್ದೇನೆ ಎಂಬುದಾಗಿ ಕಲಹ ಮಾಡಿದರು' ಎಂಬ ವಾಕ್ಯದಿಂದ ಪ್ರಾಣಸ್ಯ - ಮುಖ್ಯಪ್ರಾಣನಿಗೆ ಪ್ರಾಣೈಃ ಸಹ - ಇಂದ್ರಿಯಗಳೊಂದಿಗೆ ಸಂವಾದವೆಂಬ ಮುಖ್ಯಪ್ರಾಣಲಿಂಗವು ಹೇಳಲ್ಪಟ್ಟಿದೆ. ಹಾಗೆಯೇ ಪ್ರಾಣಸಂವಾದಾದಿ ಎಂಬ ಭಾಷ್ಯ-ದಲ್ಲಿರುವ ಆದಿಪದದಿಂದ ಗ್ರಹಿಸಲ್ಪಡುವ 'ಪ್ರಾಣೋ ವಂಶ ಇತಿ ಸ್ಥವಿರಃ ಶಾಕಲ್ಯಸ್ತದ್ ಯಥಾ ಶಾಲಾವಂಶೇ ಸರ್ವೇಽನ್ಯೇ ವಂಶಾಃ ಸಮಾಹಿತಾಃ ಸ್ಯುರೇವಮಸ್ಮಿನ್ ಪ್ರಾಣೇ ಚಕ್ಷುಃಶ್ರೋತ್ರಂ ಮನೋ ವಾಗಿಂದ್ರಿಯಾಣಿ ಶರೀರಂ ಸರ್ವ ಆತ್ಮಾ ಸಮಾಹಿತಃ' - 'ಮುಖ್ಯಪ್ರಾಣನೇ ದೇಹದಲ್ಲಿ ಮುಖ್ಯ ಆಧಾರವಾದ ಸ್ತಂಭವಾಗಿರುವನು. ಹೇಗೆ ಒಂದು ಗೃಹದ ಆಧಾರಸ್ತಂಭವನ್ನು ಇತರ ಎಲ್ಲಾ ಸ್ತಂಭ-ಗಳು ಆಧರಿಸಿಕೊಂಡು ಇರುತ್ತವೋ ಹಾಗೆ ಈ ಮುಖ್ಯಪ್ರಾಣನನ್ನು ಚಕ್ಷುಸ್ಸು ಶ್ರೋತ್ರ ಮನಸ್ಸು ವಾಕ್ ಮೊದಲಾದ ಇಂದ್ರಿಯಗಳು ಶರೀರ ಮತ್ತು ಜೀವ ಎಲ್ಲರೂ ಆಶ್ರಯಿಸಿಕೊಂಡು ಇರುವರು -(ಎಂದು ವೃದ್ಧಶಾಕಲ್ಯನು ಹೇಳಿದನು) ಎಂಬ ವಾಕ್ಯದಿಂದ ಸರ್ವಜೀವರೂ ಇಂದ್ರಿಯಗಳೂ ಮತ್ತು ದೇಹ ಇವುಗಳ ಧಾರಕತ್ವವೆಂಬ ಮುಖ್ಯಪ್ರಾಣನ ಲಿಂಗವು ಹೇಳಲ್ಪಟ್ಟಿದೆ. ಆದ್ದರಿಂದ ಈ ಪ್ರಾಣನು ವಿಷ್ಣುವಲ್ಲ. ಕಿಂತು ಜೀವ ಅಥವಾ ಮುಖ್ಯಪ್ರಾಣನೇ ಆಗಿರುವನು ಎಂದು ಭಾಷ್ಯವಾಕ್ಯದ ಯೋಜನೆ-ಯಾಗಿದೆ.

(ಭಾ.ದೀ.) ಯದ್ಯಪಿ 'ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ' (ಐ.ಆ.೨-೨-೧) ಇತಿ ಶತಾಯುಷ್ಟ್ವಲಿಂಗಪ್ರತಿಪಾದಕವಾಕ್ಯಮೇವ ಉದಾ-ಹರಣೀಯಂ, ನ ತು 'ತಾವಂತಿ' ಇತಿ ವಾಕ್ಯಮ್ । ತಥಾಪಿ ಲಿಂಗಸ್ಯ ಬಹುಷು ಸ್ಥಲೇಷು

ಅನುಗಮೋಽಸ್ತೀತಿ ಜ್ಞಾಪನಾಯ ಉಪನಿಷದೋ ಜೀವಲಿಂಗೇ ತಾತ್ಪರ್ಯಮಸ್ತಿ ಇತಿ ಜ್ಞಾಪಯಿತುಮ್ ಅನುಸಂಧಿವಾಕ್ಯಮೇವೋದಾಹೃತಮ್ ।

ಯದ್ಯಪಿ 'ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ' ಎಂಬ ಜೀವನ ಶತಾಯುಷ್ಟ್ವವೆಂಬ ಲಿಂಗವನ್ನು ಪ್ರತಿಪಾದಿಸುವ ವಾಕ್ಯವನ್ನೇ ಭಾಷ್ಯದಲ್ಲಿ ಉದಾಹರಿಸಬೇಕಾಗಿದ್ದಿತು ಹೊರತು 'ತಾವಂತಿ' ಎಂಬ ವಾಕ್ಯವನ್ನಲ್ಲ. ಆದರೂ ಈ ಲಿಂಗಕ್ಕೆ ಅನೇಕ ಸ್ಥಳಗಳಲ್ಲಿ ಅನುಗಮ ಎಂದರೆ ಅಭ್ಯಾಸವಿದೆ ಎಂದು ತಿಳಿಸಲು ಹಾಗೆಯೇ ಉಪನಿಷತ್ತಿಗೆ ಜೀವಲಿಂಗದಲ್ಲಿ ತಾತ್ಪರ್ಯವಿದೆ ಎಂಬುದನ್ನೂ ತಿಳಿಸಲು ಆ ಜೀವಲಿಂಗವನ್ನು ಸ್ಮರಿಸುವ ವಾಕ್ಯವೇ ಭಾಷ್ಯದಲ್ಲಿ ಉದಾಹರಿಸಲ್ಪಟ್ಟಿದೆ.

**(ಭಾ.ದೀ.) ಸಿದ್ಧಾಂತೇ ಶ್ರುತ್ಯರ್ಥಸ್ತು – ಪುರುಷಾಯುಷಃ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಶತಸಂವತ್ಸರಾಂತಃಪ್ರವಿಷ್ಟಾಹರ್ನಿಯಾಮಕಸೂರ್ಯಗತಭಗವತ್ಪುರುಷ-ರೂಪಾಣಿ ತಾವಂತಿ ಸಹಸ್ರಾಣಿ । ಕಿಯಂತಿ? ಬೃಹತೀಸಹಸ್ರಗತಾಕ್ಷರಾಣಾಂ ವಾಚ್ಯಾನಿ ಪುಂರೂಪಾಣಿ ಯಾವಂತಿ ಸಹಸ್ರಾಣಿ ತಾವಂತಿ । ತಥಾ ಚ ತಾನಿ ಷಟ್‌ತ್ರಿಂಶತ್ ಸಹಸ್ರಾಣಿ ಸಂಪನ್ನಾನಿ ಭವಂತಿ । 'ತಾಃ' ಚಕ್ಷುರಾದಿದೇವತಾಃ 'ಅಹಿಂಸಂತ' ವಿವಾದ-ಮಕುರ್ವನ್ । ಕಿಮಿತಿ ಅಹಮಸ್ಯ ಚತುರ್ಮುಖದೇಹಸ್ಥೋಕ್ಥೋಽಸ್ಮಿ ಉತ್ಥಾಪಕೋ-ಽಸ್ಮೀತಿ ।**

ಸಿದ್ಧಾಂತದಲ್ಲಿ ಈ ಶ್ರುತ್ಯರ್ಥವಾದರೋ– ಪುರುಷನ ಆಯುಷ್ಯವಾಗಿರುವ ನೂರು ಸಂವತ್ಸರಗಳಲ್ಲಿ ಇರುವ ದಿನಗಳ ಸಹಸ್ರಗಳು (೩೬,೦೦೦ ದಿನಗಳು) ಅಂದರೆ ನೂರು ಸಂವತ್ಸರಗಳಲ್ಲಿ ಅಂತರ್ಗತವಾಗಿರುವ ದಿನಗಳಿಗೆ ನಿಯಾಮಕವಾದ ಸೂರ್ಯ-ನಲ್ಲಿರುವ ಪುರುಷ ಭಗವದ್ರೂಪಗಳು ಅಷ್ಟು ಸಹಸ್ರಸಂಖ್ಯೆಯ ರೂಪಗಳಾಗಿವೆ. ಎಷ್ಟು? ಬೃಹತೀಸಹಸ್ರದಲ್ಲಿರುವ ಅಕ್ಷರಗಳಿಂದ ವಾಚ್ಯವಾದ ಪುರುಷರೂಪಗಳು ಎಷ್ಟು ಸಹಸ್ರ ಸಂಖ್ಯಾಕವಾಗಿರುವವೋ ಅಷ್ಟು ಎಂದು. ತಥಾಚ ಆ ರೂಪಗಳು ೩೬,೦೦೦ ರೂಪಗಳೆಂದಾಗುವುದು. ತಾಃ ಅಹಿಂಸಂತ ಇತ್ಯಾದಿ ವಾಕ್ಯಕ್ಕೆ ತಾಃ - ಚಕ್ಷುರಾದ್ಯ-ಭಿಮಾನಿ ದೇವತೆಗಳು ಅಹಿಂಸಂತ - ವಿವಾದವನ್ನು ಮಾಡಿದರು. ಏನೆಂದು? ನಾನು

ಈ ಚತುರ್ಮುಖದೇಹಕ್ಕೆ ಉಕ್ಥೋಽಸ್ಮಿ - ಉತ್ಥಾಪಕ ಎಂದರೆ ಆ ಶರೀರವನ್ನು ನನ್ನ ಪ್ರವೇಶದಿಂದ ಎಬ್ಬಿಸುವವನು ಆಗಿದ್ದೇನೆ ಎಂದು – ಎಂಬುದಾಗಿದೆ.

**ಭಾಷ್ಯಮ್ – ನ; ಅಂತರ್ಬಹಿಃ ಸರ್ವಗತತ್ವೇನೇತಿ ಉಪಾಸಾತ್ರೈವಿಧ್ಯಾತ್ ಇಹಾಶ್ರಿತತ್ವಾಚ್ಚ ।**

ಈ ಆಕ್ಷೇಪವು ಸರಿಯಲ್ಲ. ಏಕೆಂದರೆ, ಅಂತಃ ಉಪಾಸನೆ, ಬಹಿರು-ಪಾಸನೆ, ಸರ್ವಗತತ್ವೇನ ಉಪಾಸನೆ ಎಂಬುದಾಗಿ ಈ ಉಪಾಸನೆಯು ಮೂರುವಿಧವಾಗಿದೆ. ಮತ್ತು ಆ ಮೂರುವಿಧ ಉಪಾಸನೆಯು ಈ ಪ್ರಕರಣದಲ್ಲಿ ಉಕ್ತವಾಗಿದೆ.

(ಭಾ.ದೀ.) ಪರಿಹಾರಾಂಶಂ ವ್ಯಾಚಷ್ಟೇ – **ನೇತಿ ॥** 'ಪ್ರಾಣೋ ವಿಷ್ಣುರ್ನೇತಿ ನ, ಕಿಂತು ವಿಷ್ಣುರೇವಾಯಂ, ನ ಜೀವಾದಿಃ' ಇತ್ಯರ್ಥಃ । ಕುತೋ ನ? ಇತ್ಯತಃ ತತ್ರ ಪ್ರಾಗುಕ್ತಾನುಗಮಹೇತ್ವನುಷಂಗಂ, ನ ಚೋಕ್ತಜೀವಮುಖ್ಯಪ್ರಾಣಲಿಂಗವಿರೋಧ ಇತ್ಯತಸ್ತತ್ರ ಹೇತುತ್ವೇನ ಯತಃ ಶಾಸ್ತ್ರದೃಷ್ಟ್ಯಾ ತ್ವಯಮುಪದೇಶಃ ಇತ್ಯಸ್ಯಾನುಷಂಗಂ, ಕಿಮರ್ಥಮಂತರ್ಯಾಮೀತಿ ಪ್ರಶ್ನಸ್ಯಾಂತರುಪಾಸ್ತ್ಯರ್ಥಮಿತಿ ಪರಿಹಾರಂ ಚಾಭಿಪ್ರೇತ್ಯ ನ ಚೋಪಾಸನೇ ಅವಾಂತರಭೇದಾಭಾವ ಇತಿ ಚೋದ್ಯೋತ್ತರತ್ವೇನ ಪ್ರವೃತ್ತಮ್ 'ಉಪಾಸಾ' ಇತಿ ಸೂತ್ರಾಂಶಂ ವ್ಯಾಚಷ್ಟೇ – **ಅಂತರಿತಿ ॥** ಗತತ್ವೇನ ಇತ್ಯಸ್ಯಾಂತರ್ಬಹಿಃ ಸರ್ವಶಬ್ದೈಃ ಪ್ರತ್ಯೇಕಂ ಸಂಬಂಧಃ । 'ಇತಿ'ಶಬ್ದಃ ಪ್ರಕಾರಾರ್ಥಃ । ತಥಾಚ 'ದೇಹಾಂತರ್ಗತತ್ವೇನ ತದ್ಬಹಿರ್ಗತತ್ವೇನ ಸರ್ವಗತತ್ವೇನ' ಇತಿ ಪ್ರಕಾರೇಣ **'ಉಪಾಸಾತ್ರೈವಿಧ್ಯಾತ್'** ಭಗವದುಪಾಸನಸ್ಯ ತ್ರಿವಿಧತ್ವಾದಿತ್ಯರ್ಥಃ । ನನು ತಥಾಽಪಿ ಕಥನಂ ವ್ಯರ್ಥಂ ವಸ್ತುತ ಉಪಾಸನಾತ್ರೈವಿಧ್ಯಸ್ಯೇಹಾನುಕ್ತಾಂತರ್ಯಾಮಿಕಥನಾ-ಪ್ರಯೋಜಕತ್ವಾದಿತ್ಯತಃ ಪ್ರವೃತ್ತಮ್ 'ಆಶ್ರಿತತ್ವಾತ್' ಇತ್ಯಂಶಂ ಚಶಬ್ದಾಧ್ಯಾಹಾರೇಣ ವ್ಯಾಚಷ್ಟೇ – **ಇಹೇತಿ ॥** 'ಏತತ್ ಪ್ರಕರಣೇ ಉಕ್ತತ್ವಾತ್' ಇತ್ಯರ್ಥಃ । 'ಉಪಾಸಾ-ತ್ರೈವಿಧ್ಯಸ್ಯ' ಇತಿ ವಿಪರಿಣಾಮೇನ ಅತ್ರಾನ್ವೀಯತೇ । ಚೋ ಹೇತೂಪಪಾದಕಹೇತು-

**ಸಮುಚ್ಚಯೇ । ತಥಾ ಚ ಅತ್ರೋಕ್ತತ್ರೈವಿಧ್ಯಾಂತರ್ಗತಾಂತರೋಪಾಸನಾರ್ಥಮಂತರ್ಯಾಮಿಕಥನಂ ಯುಕ್ತಮಿತಿ ಭಾವಃ।**

ಈ ಮೇಲಿನ ಆಕ್ಷೇಪವನ್ನು ಪರಿಹರಿಸುವ ಸೂತ್ರದ ಅಂಶವನ್ನು ''ನ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಪ್ರಾಣನು ವಿಷ್ಣುವಲ್ಲ ಎಂಬುದು ಸರಿಯಲ್ಲ. ಕಿಂತು ಈ ಪ್ರಾಣನು ವಿಷ್ಣುವೇ, ಜೀವ ಮೊದಲಾದವರಲ್ಲ ಎಂದು ಅರ್ಥ. ಏಕಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಈ ವಿಷಯದಲ್ಲಿ ಹಿಂದೆ ಹೇಳಲಾದ ಅನುಗಮ ಎಂಬ ಹೇತುವಿನ ಅನುವೃತ್ತಿಯನ್ನು, ಅನಂತರ ಬಂದ ಆಕ್ಷೇಪದ ಪರಿಹಾರಕ್ಕಾಗಿ ಹೇಳಲಾದ ''ಯಾವ ಕಾರಣದಿಂದಾಗಿ ಅಂತರ್ಯಾಮಿ ದೃಷ್ಟಿಯಿಂದ ಈ ಉಪದೇಶವಿದೆಯೋ ಆದ್ದರಿಂದ'' ಎಂಬ ಹೇತುವಿನ ಅನುವೃತ್ತಿಯನ್ನು ಮತ್ತು ಅಂತರ್ಯಾಮಿದೃಷ್ಟಿಯಿಂದ 'ಅಹಂ ಪ್ರಾಣಃ' ಎಂದು ಹೇಳಿರುವುದೇಕೆ ಎಂಬ ಪ್ರಶ್ನೆಗೆ 'ಶರೀರದ ಒಳಗೆ ಇರುವವನೆಂದು ಉಪಾಸನೆಗೋಸ್ಕರವಾಗಿ' ಎಂಬ ಸಮಾಧಾನವನ್ನು ಅಭಿಪ್ರಾಯಪಟ್ಟು 'ಉಪಾಸನೆಯಲ್ಲಿ ಅವಾಂತರಭೇದವಿಲ್ಲ' ಎಂಬ ಆಕ್ಷೇಪಕ್ಕೆ ಉತ್ತರವಾಗಿ ಹೊರಟಿರುವ 'ಉಪಾಸಾ' ಎಂಬ ಸೂತ್ರಾಂಶವನ್ನು ''ಅಂತಃ'' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಭಾಷ್ಯದಲ್ಲಿ 'ಗತತ್ವೇನ' ಎಂಬ ಪದಕ್ಕೆ ಅಂತಃ ಬಹಿಃ ಸರ್ವ ಎಂಬ ಶಬ್ದಗಳಿಂದ ಪ್ರತ್ಯೇಕವಾಗಿ ಸಂಬಂಧವಿದೆ. ಇತಿ ಎಂಬ ಭಾಷ್ಯದಲ್ಲಿರುವ ಪದವು ಪ್ರಕಾರವೆಂಬ ಅರ್ಥವುಳ್ಳದ್ದು. ತಥಾಚ – ದೇಹಾಂತರ್ಗತನಾಗಿರುವನೆಂದು, ಅದರ ಬಹಿರ್ಗತನಾಗಿರುವನೆಂದು ಮತ್ತು ಸರ್ವಗತನಾಗಿರುವನೆಂದು, ಇತಿ - ಈ ಪ್ರಕಾರದಿಂದ ಉಪಾಸಾತ್ರೈವಿಧ್ಯಾತ್ - ಭಗವದುಪಾಸನೆಯು ಮೂರುವಿಧವಾಗಿರುವುದರಿಂದ ಎಂದು ಅರ್ಥ. ಉಪಾಸನೆಯು ಮೂರುವಿಧವಾಗಿದ್ದರೂ ಸೂತ್ರದಲ್ಲಿ ಅದನ್ನು ಹೇಳಿರುವುದು ವ್ಯರ್ಥ; ಏಕೆಂದರೆ, ಉಪಾಸನೆಯ ತ್ರೈವಿಧ್ಯವು ವಸ್ತುತಃ ಇರುವುದಾದರೂ ಈ ಪ್ರಕರಣದಲ್ಲಿ ಹೇಳದಿರುವ ಆ ತ್ರೈವಿಧ್ಯವು 'ಪ್ರಾಣೋ ವಾ' ಎಂಬಲ್ಲಿ ಅಂತರ್ಯಾಮಿದೃಷ್ಟಿಯಿಂದ ಹೇಳಿರುವುದಕ್ಕೆ ಪ್ರಯೋಜಕವಾಗುವುದಿಲ್ಲ ಎಂಬ ಶಂಕೆಗೆ ಪರಿಹಾರವಾಗಿ ಹೊರಟಿರುವ 'ಆಶ್ರಿತತ್ವಾತ್' ಎಂಬ ಸೂತ್ರದ ಪದವನ್ನು ಚಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಭಾಷ್ಯದಲ್ಲಿ ಇಹ ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಇಹ ಆಶ್ರಿತತ್ವಾತ್ ಎಂದರೆ ಈ ಪ್ರಕರಣದಲ್ಲಿ ಉಕ್ತವಾಗಿರು-

ವುದರಿಂದ ಎಂದು ಅರ್ಥ. 'ಉಪಾಸಾತ್ರೈವಿಧ್ಯಾತ್' ಎಂಬ ಪದವನ್ನು 'ಉಪಾಸಾತ್ರೈವಿಧ್ಯಸ್ಯ' ಎಂದು ವ್ಯತ್ಯಾಸ ಮಾಡಿಕೊಂಡು ಇಲ್ಲಿ ಅನ್ವಯ ಮಾಡಬೇಕು. ಚಕಾರವು ಈಗಾಗಲೇ ಹೇಳಿರುವ ಹೇತುವನ್ನು ಸಮರ್ಥಿಸುವ ಹೇತುವಿನ ಸಮುಚ್ಚಯವನ್ನು ಹೇಳುವುದು. ತಥಾಚ – ಈ ಪ್ರಕರಣದಲ್ಲಿ ಹೇಳಲಾಗಿರುವ ಮೂರುವಿಧವಾದ ಉಪಾಸನೆಗಳಲ್ಲಿ ಸೇರಿರುವ ಅಂತರುಪಾಸನೆಗಾಗಿ ಅಂತರ್ಯಾಮಿಕಥನವು ಯುಕ್ತವಾಗಿದೆ ಎಂದು ಭಾವ.

**ಭಾ– 'ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ'** (ಐ.ಆ.೨-೪-೩)

**'ಸ ಏತಮೇವ ಪುರುಷಂ ಬ್ರಹ್ಮ ತತಮಮಪಶ್ಯತ್'** (ಐ.ಆ.೨-೪-೩)

**'ಏತದ್ಧ ಸ್ಮ ವೈ ತದ್ವಿದ್ವಾನಾಹ ಮಹಿದಾಸ ಐತರೇಯಃ'** (ಐ.ಆ. ೨-೧-೮)

**ಇತ್ಯಾದಿನಾ ।**

'ಸ ಏತಮೇವ' ಇತ್ಯಾದಿ ವಾಕ್ಯಗಳಿಂದ ಉಪಾಸನಾತ್ರೈವಿಧ್ಯವು ಇಲ್ಲಿ ಹೇಳಲ್ಪಟ್ಟಿದೆ.

(ಭಾ.ದೀ.) ಅತ್ರ 'ಉಪಾಸನಾತ್ರೈವಿಧ್ಯಮುಚ್ಯತೇ' ಇತ್ಯತ್ರಾಪಿ ಕಿಂ ಲಿಂಗಮಿತ್ಯತ ಆಹ – **ಸ ಇತಿ ॥** ಸ ವಾಸುದೇವೋ ಭಗವಾನ್ **ಏತಮೇವ ಸೀಮಾನಂ** ಶಿರೋಮಧ್ಯಂ **ವಿದಾರ್ಯೈವ ಏತಯಾ ದ್ವಾರಾ** ಸುಷುಮ್ನಾನಾಡ್ಯಾ **ಪ್ರಾಪದ್ಯತ** ಪ್ರಾಪ್ತಃ । 'ಚತುರ್ಮುಖಹೃದಯಮ್' ಇತಿ ಶೇಷಃ । ಅನೇನ ಭಗವತೋ ದೇಹಾಂತಃಪ್ರವೇಶೋಕ್ತೇಶ್ಚ ಉಪಾಸನಾರ್ಥತ್ವಾದ್ ಅಂತರುಪಾಸ್ತಿರುಕ್ತಾ ಭವತಿ ।

ಈ ಪ್ರಕರಣದಲ್ಲಿ ಉಪಾಸನಾತ್ರೈವಿಧ್ಯವು ಹೇಳಲ್ಪಟ್ಟಿದೆ ಎಂಬ ವಿಷಯದಲ್ಲಿ ಜ್ಞಾಪಕವೇನು? ಎಂಬ ಪ್ರಶ್ನೆಗೆ ಉತ್ತರವಾಗಿ ''ಸ ಏತಮೇವ'' ಎಂಬ ಭಾಷ್ಯವಾಕ್ಯವು ಹೊರಟಿದೆ. ಸಃ - ಭಗವಾನ್ ವಾಸುದೇವನು, ಏತಮೇವ ಸೀಮಾನಂ - ಚತುರ್ಮುಖನ ಶಿರಸ್ಸಿನ ಮಧ್ಯವನ್ನು, ವಿದಾರ್ಯೈವ - ಸೀಳಿಕೊಂಡೇ, ಏತಯಾ ದ್ವಾರಾ

- ಈ ಸುಷುಮ್ನಾ ನಾಡಿಯ ಮೂಲಕ, ಪ್ರಾಪದ್ಯತ - ಸೇರಿದನು. 'ಚತುರ್ಮುಖನ' 'ಹೃದಯವನ್ನು' ಎಂಬ ಪದಗಳು ಇಲ್ಲಿ ಶೇಷವಾಗಿವೆ. ಇದರಿಂದ ಭಗವಂತನಿಗೆ ಚತುರ್ಮುಖನ ದೇಹದ ಒಳಗೆ ಪ್ರವೇಶವನ್ನು ಹೇಳಿರುವುದರಿಂದ ಹಾಗೆ ಹೇಳಿರುವುದು ಉಪಾಸನೆಯ ಉದ್ದೇಶವಾದ್ದರಿಂದ ಅಂತರುಪಾಸನೆಯು ಇಲ್ಲಿ ಹೇಳಲ್ಪಟ್ಟಿದೆ.

(ಭಾ.ದೀ.) **ಸಃ** ಚತುರ್ಮುಖದೇಹೇ ಪ್ರಾಕ್ ಪ್ರಪದಾಭ್ಯಾಮಂತಃಪ್ರವಿಷ್ಟೋ ನಾರಾಯಣಃ **ಏತಮೇವ ಪುರುಷಂ** ವ್ಯಾಸಕೃಷ್ಣಕಪಿಲಾದಿರೂಪಮ್ **ಆತ್ಮಾನಮ್** ಆತತಗುಣಂ ಸ್ವಸ್ವರೂಪಭೂತಮಾದಾನಾದಿಕರ್ತಾರಂ ವಾ । **ತತಮಂ** 'ಲೋಪಃ ಸಮಾನೇ' ಇತಿ ಸೂತ್ರಾತ್ ತಲೋಪಃ । ತಮಬರ್ಥೇ ಮಪ್ರತ್ಯಯೋ ವಾ । ತಥಾಚ '**ತತಮಮ್** ಅತಿಶಯೇನ ವ್ಯಾಪ್ತಂ ನಿರವಧಿಕವ್ಯಾಪ್ತಿಮಂತಂ **ಬ್ರಹ್ಮ** ಗುಣಪೂರ್ಣಮ್ **ಅಪಶ್ಯತ್** ತದ್ಗುಣಕತಯಾ ತದ್ರೂಪಂ ದದರ್ಶ' ಇತ್ಯರ್ಥಃ । ಕೇಚಿತ್ತು – ತಕಾರ ಏವ ವ್ಯಾಪ್ತ್ಯಭಿಧಾಯಕ ಇತ್ಯಾಹುಃ । ಅನೇನ ಸರ್ವಗತತ್ವಂ ತಥೋಪಾಸನಾರ್ಥಮುಕ್ತಮ್ ।

ಸಃ ಆ ಚತುರ್ಮುಖದೇಹದ ಒಳಗೆ ಮುಂಚೆ ಪಾದಗಳ ಅಗ್ರಭಾಗದಿಂದ ಪ್ರವೇಶ ಮಾಡಿದ ನಾರಾಯಣನು, ಏತಮೇವ ಪುರುಷಂ- ವ್ಯಾಸ, ಕೃಷ್ಣ, ಕಪಿಲ ಮೊದಲಾದ ರೂಪವುಳ್ಳ, ಆತ್ಮಾನಂ - ವ್ಯಾಪ್ತಿ ಎಂಬ ಗುಣವನ್ನು ಪಡೆದ ತನ್ನನ್ನು, ಅಥವಾ ಆದಾನಾದಿಕರ್ತೃವಾದ ತನ್ನನ್ನು, **ತತಮಮ್** - 'ಲೋಪಃ ಸಮಾನೇ' ಎಂಬ ಸೂತ್ರದಿಂದ ಇಲ್ಲಿ ಒಂದು ತಕಾರದ ಲೋಪವಾಗಿದೆ. ಅಥವಾ ತತಶಬ್ದದ ಮುಂದೆ ತಮಪ್ ಪ್ರತ್ಯಯದ ಅರ್ಥವನ್ನು ಹೇಳುವ 'ಮ' ಎಂಬ ಪ್ರತ್ಯಯವು ಸೇರಿ ತತಮ ಎಂದು ರೂಪವಾಗಿದೆ. ತಥಾಚ - **ತತಮಮ್** ಅತಿಶಯವಾಗಿ ವ್ಯಾಪ್ತಿಯನ್ನು ಹೊಂದಿರುವ ಅಂದರೆ ಮಿತಿಯಿಲ್ಲದ ವ್ಯಾಪ್ತಿಯನ್ನು ಪಡೆದವನೆಂದು , ಬ್ರಹ್ಮ - ಗುಣಪೂರ್ಣನೆಂದು, **ಅಪಶ್ಯತ್** - ಆ ಗುಣಗಳನ್ನು ಹೊಂದಿರುವಂತೆ ಆ ರೂಪವನ್ನು ನೋಡಿದನು ಎಂದು ಅರ್ಥ. ಕೆಲವರು 'ತತಮ' ಪದದಲ್ಲಿ ಮೊದಲನೆಯ ತಕಾರವೇ ವ್ಯಾಪ್ತಿಯನ್ನು ಹೇಳುವುದೆಂದು ಹೇಳುವರು. ಈ ವಾಕ್ಯದಿಂದ ಸರ್ವಗತತ್ವವು ಹಾಗೆ ಉಪಾಸನೆ ಮಾಡಬೇಕೆನ್ನುವ ಅಭಿಪ್ರಾಯದಿಂದ ಹೇಳಲ್ಪಟ್ಟಿದೆ.

(ಭಾ.ದೀ.) **ತದೇತತ್** ಪ್ರಕೃತಂ ಸರ್ವಂ **ವಿದ್ವಾನ್** ಜಾನನ್ **ಐತರೇಯ** ಇತರಾಯಾ ಅಪತ್ಯಂ ಪುಮಾನ್ ವಿಶಾಲಸಂಜ್ಞಾತ್ ಋಷೇರುತ್ಪನ್ನ ಐತರೇಯಃ **ಮಹಿದಾಸಃ** ಮಹಿತೋ ಮಹಾತ್ಮಾನೋ ದೇವಾಃ ದಾಸಭೂತಾಃ ಯಸ್ಯಾಸೌ ಭಗವಾನ್ ಆಹ ಇತ್ಯರ್ಥಃ। ಹಸ್ಮವೈಶಬ್ದಾಃ ಪ್ರಸಿದ್ಧಿದ್ಯೋತಕಾಃ।

ತದೇತತ್ - ಪ್ರಸ್ತುತವಾದ ಈ ಎಲ್ಲವನ್ನೂ, ವಿದ್ವಾನ್ - ತಿಳಿದ ಐತರೇಯಃ ವಿಶಾಲನಾಮಕನಾದ ಋಷಿಯಿಂದ ಇತರೆಯ ಪುತ್ರನಾಗಿ ಉತ್ಪನ್ನನಾಗಿ ಐತರೇಯ-ನೆಂದೆನಿಸಿದ ಮಹಿದಾಸಃ - ಮಹಿನಃ - ಅಂದರೆ ಮಹಾತ್ಮರಾದ ದೇವತೆಗಳು ಯಾರಿಗೆ ದಾಸರಾಗಿರುವರೋ ಅಂತಹ ಭಗವಂತನು, ಆಹ - ಹೇಳಿದನು ಎಂದು ಅರ್ಥ. ಇಲ್ಲಿ ಹ,ಸ್ಮ,ವೈ ಎಂಬ ಶಬ್ದಗಳು ಪ್ರಸಿದ್ಧಿಯನ್ನು ಸೂಚಿಸುತ್ತವೆ.

(ಭಾ.ದೀ.) ಅತ್ರ 'ಬಹಿರುಪಾಸ್ತ್ಯರ್ಥಂ ಮಹಿದಾಸ ಆಹ' ಇತಿ ಬಹಿರುಪಾಸ್ತಿ-ರುಕ್ತಾ ಭವತಿ। ನ ಚ ವಾಚ್ಯಮತ್ರ ಸ್ವರೂಪಮಾತ್ರಮುಚ್ಯತೇ, ನೋಪಾಸನಾರ್ಥಮ್ ಇತಿ । ಉಪಾಸನಾಂ ವಿನೋಕ್ತಿಪ್ರಯೋಜನಾಭಾವಾತ್ । 'ಇತ್ಯಾದಿನಾ' ಇತ್ಯಸ್ಯ 'ಇತ್ಯಾದಿನಾ ವಾಕ್ಯೇನೋಪಾಸಾತ್ರೈವಿಧ್ಯಸ್ಯ ಆಶ್ರಿತತ್ವಾತ್ ಅರ್ಥಾದುಕ್ತತ್ವಾತ್' ಇತ್ಯನ್ವಯಃ । ಆದಿಶಬ್ದೇನ 'ತಂ ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ ಪುರುಷ-ಮೇತಸ್ಯಾಮೇತಮ್' (ಐ.ಆ.೨-೧-೪) ಇತ್ಯಾದಿಕಂ ಗೃಹ್ಯತೇ।

ಈ ವಾಕ್ಯದಲ್ಲಿ ಬಹಿರುಪಾಸನೆಗಾಗಿ 'ಮಹಿದಾಸ ಆಹ' ಎಂದು ಬಹಿರು-ಪಾಸನೆಯು ಹೇಳಲ್ಪಟ್ಟಿದೆ. ಇಲ್ಲಿ ಕೇವಲ ಭಗವಂತನ ಸ್ವರೂಪವನ್ನು ಹೇಳಲಾಗಿದೆ, ಉಪಾಸನೆಗೋಸ್ಕರವಾಗಿ ಅದು ಹೇಳಲ್ಪಟ್ಟಿಲ್ಲ ಎಂದರೆ ಅದು ಸರಿಯಲ್ಲ. ಏಕೆಂದರೆ ಉಪಾಸನೆಯನ್ನು ಬಿಟ್ಟು ಆ ಭಗವತ್ಸ್ವರೂಪವನ್ನು ಹೇಳಲು ಬೇರೆ ಪ್ರಯೋಜನವಿಲ್ಲ. ಭಾಷ್ಯದಲ್ಲಿ 'ಇತ್ಯಾದಿನಾ' ಎಂಬ ಪದಕ್ಕೆ 'ಇತ್ಯಾದಿವಾಕ್ಯದಿಂದ ಉಪಾಸನಾತ್ರೈವಿಧ್ಯವು ಆಶ್ರಿತವಾಗಿರುವುದರಿಂದ ಅಂದರೆ, ಅರ್ಥಾತ್ ಹೇಳಲ್ಪಟ್ಟಿರುವುದರಿಂದ ಎಂದು ಅನ್ವಯ. ಭಾಷ್ಯದಲ್ಲಿ 'ಆದಿ'ಪದದಿಂದ 'ತಂ ಪ್ರಪಾದಾಭ್ಯಾಂ ಪ್ರಾಪದ್ಯತ ಬ್ರಹ್ಮೇ-ಮಂ ಪುರುಷಮೇತಸ್ಯಾಮೇತಮ್' ಇತ್ಯಾದಿವಾಕ್ಯವು ಗ್ರಹಿಸಲ್ಪಡುವುದು.

(ಭಾ.ದೀ.) ನನು 'ಏತದ್ಧಸ್ಮ ವೈ ತದ್ವಿದ್ವಾನಾಹ ಹಿರಣ್ಯದನ್ ಬೈದಃ' (ಐ.ಆ.೨-೧-೫) ಇತಿವನ್ಮಹಿದಾಸೋऽಪಿ ಋಷಿತ್ವೇನೋಚ್ಯತಾಮಿತಿ ಚೇನ್ನ। ಅಸ್ಯಾ ಉಪನಿಷದಃ ಐತರೇಯಸಂಜ್ಞಯೈವ ಇತರಾಪುತ್ರಸ್ಯ ಮಹಿದಾಸಸ್ಯ ಋಷಿತ್ವಸಿದ್ಧ್ಯಾ ತದುಕ್ತೇಃ ವ್ಯರ್ಥತ್ವಾತ್।

'ಏತದ್ಧಸ್ಮ ವೈ ತದ್ವಿದ್ವಾನಾಹ ಹಿರಣ್ಯದನ್ ಬೈದಃ' ಎಂಬ ಇದೇ ಪ್ರಕರಣದಲ್ಲಿ ಬರುವ ವಾಕ್ಯದಲ್ಲಿ ಹಿರಣ್ಯದನ್ ಎಂಬ ಒಬ್ಬ ಋಷಿಯನ್ನು ಹೇಳಿರುವಂತೆ ಈ ವಾಕ್ಯದಲ್ಲೂ ಕೂಡ ಮಹಿದಾಸನು ಒಬ್ಬ ಋಷಿಯೆಂದು ಹೇಳಲ್ಪಟ್ಟಿದ್ದಾನೆ ಎಂದು ಹೇಳಬಾರದೇಕೆ? ಎಂದರೆ ಅದು ಸರಿಯಲ್ಲ. ಏಕೆಂದರೆ, ಈ ಉಪನಿಷತ್ತಿಗೆ ಐತರೇಯವೆಂಬ ಹೆಸರಿನಿಂದಲೇ ಇತರಾಪುತ್ರನಾದ ಮಹಿದಾಸನು ಋಷಿಯೆಂದು ಸಿದ್ಧವಾಗಿರುವಾಗ ಪುನಃ ಅವನನ್ನು ಋಷಿಯೆಂದು ಹೇಳುವುದು ವ್ಯರ್ಥ.

ಭಾ– 'ಮಹಿದಾಸಾಭಿಧೋ ಜಜ್ಞೇ ಇತರಾಯಾಸ್ತಪೋಬಲಾತ್।
ಸಾಕ್ಷಾತ್ ಸ ಭಗವಾನ್ವಿಷ್ಣುರ್ಯಸ್ತಂತ್ರಂ ವೈಷ್ಣವಂ ವ್ಯಧಾತ್'
ಇತಿ ಬ್ರಹ್ಮಾಂಡೇ।

ಯಾರು ವೈಷ್ಣವತಂತ್ರವೆನಿಸಿದ ಗ್ರಂಥವನ್ನು ರಚಿಸಿದರೋ ಅಂತಹ ಭಗವಾನ್ ವಿಷ್ಣುವೇ ಸಾಕ್ಷಾತ್ತಾಗಿ ಇತರಾದೇವಿಯ ತಪೋಬಲದಿಂದ ಮಹಿದಾಸನೆಂಬ ಹೆಸರಿನಿಂದ ಅವತರಿಸಿದನು ಎಂದು ಬ್ರಹ್ಮಾಂಡ-ಪುರಾಣದಲ್ಲಿ ಹೇಳಿದೆ.

(ಭಾ.ದೀ.) ತಥಾಪಿ ಮಹಿದಾಸಸ್ಯ ವಿಷ್ಣುತ್ವಂ ಕುತೋ ಜ್ಞಾಯತೇ? ಇತ್ಯತ ಆಹ – **ಮಹಿದಾಸೇತಿ** ॥ ಜಜ್ಞೇ – ವ್ಯಕ್ತೋ ಬಭೂವ। ಸ ಚ – ಮಹಿದಾಸಃ।

ಮಹಿದಾಸಸ್ತ್ವೈತರೇಯೋ ಬಹ್ವೃಚೋಪನಿಷದ್ಗತಃ।
ಸಾಕ್ಷಾತ್ ಸ ಭಗವಾನ್ ವಿಷ್ಣುಸ್ತನ್ನಾಮ್ನೈಕೋ ಮುನಿರ್ಹ್ಯಭೂತ್ ॥

ಇತಿ ಛಾಂದೋಗ್ಯಭಾಷ್ಯೇऽನಂತರೋಕ್ತಭಗವದನ್ಯಃ ತತ್ಸಂಜ್ಞಕೇತರಾಪುತ್ರಃ

ಋಷಿರತ್ರ ನ ವಿವಕ್ಷಿತಃ, ಕಿಂತು **ಯೋ ವೈಷ್ಣವಂ** ವಿಷ್ಣುವಿಷಯಂ **ತಂತ್ರಂ** ಗ್ರಂಥಂ **ವ್ಯಧಾತ್** ನಿರ್ಮಮೇ ॥

ಯದ್ವಾ 'ತಂತ್ರಂ' ಪಂಚರಾತ್ರಂ ವ್ಯಧಾತ್ - ನಾರದಾದಿಭ್ಯೋ ವ್ಯಾಚಖ್ಯೌ । ಯಶ್ಚ **ಸಾಕ್ಷಾತ್** ಸ್ವಯಂ ಭಗವಾನ್ - ಪೂರ್ಣಜ್ಞಾನಾದಿಮಾನ್ ವಿಷ್ಣುಃ ತದವತಾರಭೂತಃ ಪೂರ್ವೋಕ್ತಃ ಸ ಏವಾತ್ರ ವಿವಕ್ಷಿತ ಇತ್ಯಾಹ – **ಸಾಕ್ಷಾದಿತಿ** ॥ ಬ್ರಹ್ಮಾಂಡೇ ಪುರಾಣೇ ಇತ್ಯಸ್ಯಾಶ್ರಿತತ್ವಾದಿತ್ಯನೇನಾನ್ವಯಃ । ಮಹಿದಾಸಸ್ಯ ವಿಷ್ಣುತ್ವೋಕ್ತಿರಿತಿ ತದರ್ಥಃ । ತೇನ ಚಶಬ್ದಾನ್ವಯಃ ।

ಆದರೂ ಮಹಿದಾಸನು ವಿಷ್ಣುವೆಂದು ಯಾವ ಆಧಾರದಿಂದ ತಿಳಿಯುವುದು ಎಂಬ ಪ್ರಶ್ನೆಗೆ ಉತ್ತರವಾಗಿ 'ಮಹಿದಾಸ' ಎಂಬ ಶ್ಲೋಕದಿಂದ ಉತ್ತರಿಸುತ್ತಿದ್ದಾರೆ. ಜಜ್ಞೇ ಎಂದರೆ ಪ್ರಕಟನಾದನು ಎಂದು ಅರ್ಥ. ಆ ಮಹಿದಾಸನಾದರೋ -

ಮಹಿದಾಸಸ್ತ್ವೈತರೇಯೋ ಬಹ್ವೃಚೋಪನಿಷದ್ಗತಃ ।
ಸಾಕ್ಷಾತ್ ಸ ಭಗವಾನ್ ವಿಷ್ಣುಸ್ತನ್ನಾಮೈಕೋ ಮುನಿರ್ಹ್ಯಭೂತ್ ॥

'ಋಗ್ವೇದಕ್ಕೆ ಸಂಬಂಧಪಟ್ಟ ಐತರೇಯೋಪನಿಷತ್ತಿನಲ್ಲಿ ಬರುವ ಮಹಿದಾಸನು ಸಾಕ್ಷಾತ್ ಆ ಭಗವಾನ್ ವಿಷ್ಣುವೇ ಆಗಿದ್ದಾನೆ. ಅದೇ ಹೆಸರಿನ ಒಬ್ಬ ಮುನಿಯೂ ಇದ್ದನು' ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಲಾದ ಭಗವಂತನಿಗಿಂತ ಭಿನ್ನನಾದ ಅದೇ ಹೆಸರಿನ ಇತರಾಪುತ್ರನಾದ ಋಷಿಯು ಇಲ್ಲಿ ವಿವಕ್ಷಿತನಲ್ಲ; ಕಿಂತು - ಯಾರು 'ವೈಷ್ಣವಂ' - ವಿಷ್ಣುವಿಷಯಕವಾದ ತಂತ್ರಂ - ಗ್ರಂಥವನ್ನು, ವ್ಯಧಾತ್ - ನಿರ್ಮಿಸಿದನೋ ಅವನು ವಿವಕ್ಷಿತನು.

ಅಥವಾ - ತಂತ್ರಂ ಅಂದರೆ ಪಂಚರಾತ್ರವನ್ನು ವ್ಯಧಾತ್ - ನಾರದ ಮೊದಲಾದವರನ್ನು ಕುರಿತು ವ್ಯಾಖ್ಯಾನ ಮಾಡಿದನೋ ಮತ್ತು ಯಾರು ಸಾಕ್ಷಾತ್ ಸ್ವಯಂ ಭಗವಾನ್ - ಪೂರ್ಣವಾದ ಜ್ಞಾನಾದಿಗಳನ್ನು ಪಡೆದ, ವಿಷ್ಣುಃ - ವಿಷ್ಣುವಿನ ಅವತಾರವೆಂದು ಹಿಂದೆ ಹೇಳಲ್ಪಟ್ಟಿರುವನೋ ಅವನೇ ಇಲ್ಲಿ ವಿವಕ್ಷಿತನೆಂದು ಸಾಕ್ಷಾತ್ ಎಂಬ ಪದದಿಂದ ಹೇಳಿದೆ. 'ಬ್ರಹ್ಮಾಂಡೇ ಪುರಾಣೇ' ಎಂಬ ಪದಗಳಿಗೆ 'ಆಶ್ರಿತತ್ವಾತ್'

ಎಂಬ ಪದದೊಂದಿಗೆ ಅನ್ವಯವಿರುವುದು. ಮಹಿದಾಸನು ವಿಷ್ಣುವೆಂದು ಹೇಳಲಾಗಿದೆ ಎಂದು ಅದರ ಅರ್ಥ. ಚಶಬ್ದವು ಆ ಪದದೊಂದಿಗೆ ಅನ್ವಯವಾಗುವುದು.

**ಭಾ– ತತ್ತದುಪಾಸನಾಯೋಗ್ಯತಯಾ ಚ ಪುರುಷಾಣಾಮ್ ।**

ಅಧಿಕಾರಿಗಳು ಆಯಾಯಾ ಉಪಾಸನೆಗೆ ಯೋಗ್ಯತೆಯುಳ್ಳವರಾಗಿರುವುದರಿಂದ ಉಪಾಸನಾತ್ರೈವಿಧ್ಯವು ಅವಶ್ಯಕವಾಗಿದೆ.

(ಭಾ.ದೀ.) ನನ್ವೇಕವಿಧೋಪಾಸನಯಾ ಸರ್ವೇಷಾಂ ಬ್ರಹ್ಮಾಪರೋಕ್ಷಸಂಭವಾತ್ ಕಿಮುಪಾಸಾತ್ರೈವಿಧ್ಯೇನ ಇತ್ಯತಃ ಪ್ರವೃತ್ತಂ **ತದ್ಯೋಗಾತ್** ಇತಿ ಸೂತ್ರಶೇಷಂ ವ್ಯಾಚಷ್ಟೇ – **ತತ್ತದಿತಿ** ॥ 'ಉಪಾಸನಾ' ಇತ್ಯನೇನ 'ಪುರುಷಾಣಾಮ್' ಇತ್ಯನೇನ ಚ 'ತತ್' ಇತ್ಯಸ್ಯಾಽವೃತ್ತಿಃ ಸೂಚಿತಾ । ಚಃ ಸಮುಚ್ಚಯೇ । ತಥಾ ಚ ತೇಷಾಂ ಪುರುಷಾಣಾಂ ಮನುಷ್ಯರ್ಷಿಗಂಧರ್ವದೇವಾಖ್ಯಾಧಿಕಾರಿಣಾಂ ತೇಷು ತ್ರಿವಿಧೋಪಾಸನೇಷು ಮಧ್ಯೇ ತತ್ತದುಪಾಸನೇ ಯಥಾಕ್ರಮಂ ಬಹಿರಂತರ್ವ್ಯಾಪ್ತಿರೂಪೈಕೈಕೋಪಾಸನ ಏವ ಯೋಗ್ಯತಯಾ ಯೋಗ್ಯತ್ವೇನ ಹೇತುನಾ ಇತ್ಯರ್ಥಃ। ಅಸ್ಯ 'ಉಪಾಸನಾತ್ರೈವಿಧ್ಯಾತ್' ಇತ್ಯನೇನ ಅನ್ವಯಃ । ತಥಾಚ ಅನೇಕವಿಧೋಪಾಸ್ತಿಯೋಗ್ಯತಾವತಾಮಧಿಕಾರಿಣಾಂ ನೈಕವಿಧೋಪಾಸನಯಾ ಬ್ರಹ್ಮಜ್ಞಾನಮ್ ಇತಿ ತತ್ ತ್ರೈವಿಧ್ಯಮಾವಶ್ಯಕಮಿತಿ ಭಾವಃ।

ಏಕವಿಧವಾದ ಉಪಾಸನೆಯಿಂದಲೇ ಎಲ್ಲರಿಗೂ ಬ್ರಹ್ಮಾಪರೋಕ್ಷವು ಆಗಲು ಸಾಧ್ಯವಿರುವುದರಿಂದ ಉಪಾಸಾತ್ರೈವಿಧ್ಯದಿಂದ ಪ್ರಯೋಜನವೇನು? ಎಂಬ ಶಂಕೆಗೆ ಉತ್ತರವಾಗಿ ಪ್ರವೃತ್ತವಾಗಿರುವ 'ತದ್ಯೋಗಾತ್'- ಎಂಬ ಸೂತ್ರದ ಶೇಷಭಾಗವನ್ನು ತತ್ತತ್ ಎಂಬ ವಾಕ್ಯದಿಂದ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ. ಉಪಾಸನಾ ಎಂಬ ಪದದಿಂದ, **ಪುರುಷಾಣಾಮ್** ಎಂಬ ಪದದಿಂದಲೂ ತತ್ ಎಂಬ ಪದಕ್ಕೆ ಆವೃತ್ತಿ ಇರುವುದು ಎಂದು ಸೂಚಿತವಾಗುತ್ತದೆ. ಚಕಾರವು ಸಮುಚ್ಚಯವನ್ನು ಹೇಳುವುದು. ತಥಾಚ – **ತೇಷಾಂ ಪುರುಷಾಣಾಮ್** - ಮನುಷ್ಯರು ಋಷಿಗಳು, ಗಂಧರ್ವರು, ದೇವತೆಗಳು ಎಂಬ ಆ ಅಧಿಕಾರಿಗಳಿಗೆ, ತೇಷು - ತ್ರಿವಿಧವಾದ ಉಪಾಸನೆಗಳ

ಮಧ್ಯದಲ್ಲಿ, ತತ್ತದುಪಾಸನೇ - ಕ್ರಮವಾಗಿ ಬಹಿರುಪಾಸನೆ, ಅಂತರುಪಾಸನೆ, ವ್ಯಾಪ್ತ್ಯೋಪಾಸನೆ ಎಂಬ ಒಂದೊಂದು ಉಪಾಸನೆಯಲ್ಲೇ, ಯೋಗ್ಯತಯಾ - ಯೋಗ್ಯತೆ ಇರುವ ಕಾರಣದಿಂದ ಎಂದು ಅರ್ಥ. ಈ ಪದಕ್ಕೆ 'ಉಪಾಸಾತ್ರೈವಿಧ್ಯಾತ್' ಎಂಬ ಪದದೊಂದಿಗೆ ಅನ್ವಯ. ತಥಾಚ - ಅನೇಕವಿಧವಾದ ಉಪಾಸನೆ ಮಾಡುವ ಯೋಗ್ಯತೆಯುಳ್ಳ ಅಧಿಕಾರಿಗಳಿಗೆ ಏಕವಿಧವಾದ ಉಪಾಸನೆಯಿಂದ ಬ್ರಹ್ಮಜ್ಞಾನವು ಆಗಲಾರದು ಆದ್ದರಿಂದ ಉಪಾಸನೆಯ ತ್ರೈವಿಧ್ಯವು ಆವಶ್ಯಕವೆಂದು ಭಾವ.

**ಭಾ–** **'ಕೇಷಾಂಚಿತ್ ಸರ್ವಗತ್ವೇನ ಕೇಷಾಂಚಿದ್ಧೃದಯೇ ಹರಿಃ।**
**ಕೇಷಾಂಚಿದ್ಬಹಿರೇವಾಸೌ ಉಪಾಸ್ಯಃ ಪುರುಷೋತ್ತಮಃ॥' ಇತಿ ಬ್ರಾಹ್ಮೇ।**

ಕೆಲವರಿಗೆ ಸರ್ವಗತನೆಂದು, ಕೆಲವರಿಗೆ ತಮ್ಮ ಹೃದಯದಲ್ಲಿ, ಮತ್ತೆ ಕೆಲವರಿಗೆ ಬಾಹ್ಯದಲ್ಲೇ ಪುರುಷೋತ್ತಮನಾದ ಶ್ರೀಹರಿಯು ಉಪಾಸ್ಯ -ನೆಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.

(ಭಾ.ದೀ.) ಪುರುಷಾಣಾಮುಕ್ತಾನೇಕವಿಧೋಪಾಸನಯೋಗ್ಯತಾ ಕುತೋ ಜ್ಞಾಯತೇ? ಇತ್ಯತಃ ಕರ್ತೃವಿಶೇಷಾನನುಪಾದಾಯ ಸಾಮಾನ್ಯತಃ ಉಪಾಸಕ-ತ್ರೈವಿಧ್ಯಪ್ರತಿಪಾದಿಕಾಂ ಸ್ಮೃತಿಂ ಪಠತಿ – **ಕೇಷಾಂಚಿದಿತಿ ॥ ಪುರುಷೋತ್ತಮೋ** ಹರಿಃ **ಕೇಷಾಂಚಿತ್** ದೇವಾನಾಂ ದೇವೈಃ ಸರ್ವಗತತ್ವೇನ ಪ್ರಕಾರೇಣೋಪಾಸ್ಯಃ । **'ಕೇಷಾಂ -ಚಿತ್'** ಋಷಿಗಂಧರ್ವಾದೀನಾಂ **'ಹೃದಯೇ'** ಸ್ವಸ್ವಹೃದಯಾಕಾಶೇ ಉಪಾಸ್ಯಃ । **ಕೇಷಾಂಚಿತ್** ಮನುಷ್ಯೋತ್ತಮಾನಾಂ ತು ಬಹಿರೇವೋಪಾಸ್ಯ ಇತ್ಯರ್ಥಃ । ಪ್ರಾಚು-ರ್ಯಾದೇವಮುಕ್ತಿಃ॥

ಪುರುಷರಿಗೆ ಇಲ್ಲಿ ಹೇಳಲಾದ ಅನೇಕವಿಧವಾದ ಉಪಾಸನೆಗಳಲ್ಲಿ ಯೋಗ್ಯತೆ ಇರುವುದೆಂದು ಯಾವ ಪ್ರಮಾಣದಿಂದ ತಿಳಿಯುವುದು? ಎಂಬ ಪ್ರಶ್ನೆಗೆ ಉತ್ತರವಾಗಿ ಕರ್ತೃವಿಶೇಷಗಳನ್ನು ನಿರ್ದೇಶಿಸದೇ ಸಾಮಾನ್ಯತಃ ಉಪಾಸನೆಯು ತ್ರಿವಿಧವಾಗಿರು-ವುದೆಂದು ಹೇಳುವ ಸ್ಮೃತಿಯನ್ನು **ಕೇಷಾಂಚಿತ್** ಎಂಬ ವಾಕ್ಯದ ಮೂಲಕ ಆಚಾರ್ಯರು ಪಠಿಸುತ್ತಿದ್ದಾರೆ. ಪುರುಷೋತ್ತಮನಾದ ಹರಿಯು **ಕೇಷಾಂಚಿತ್** -

ಕೆಲವು ದೇವತೆಗಳಿಗೆ ಅಂದರೆ ದೇವತೆಗಳಿಂದ ಸರ್ವಗತನೆಂದು ಉಪಾಸ್ಯನಾಗಿದ್ದಾನೆ. **ಕೇಷಾಂಚಿತ್** ಋಷಿಗಳು ಗಂಧರ್ವರು ಮೊದಲಾದ ಕೆಲವರಿಗೆ ಹೃದಯೇ ತಮ್ಮ ತಮ್ಮ ಹೃದಯಾಕಾಶದಲ್ಲಿ ಅವನು ಉಪಾಸ್ಯನಾಗಿದ್ದಾನೆ. **ಕೇಷಾಂಚಿತ್** ಮನುಷ್ಯೋ-ತ್ತಮರಿಗಾದರೋ ಅವನು ಬಾಹ್ಯದಲ್ಲೇ ಉಪಾಸ್ಯನಾಗಿದ್ದಾನೆ ಎಂದು ಅರ್ಥ. ಪ್ರಾಚು-ರ್ಯೇಣ ಈ ರೀತಿ ಉಪಾಸಕರಿರುವುದರಿಂದ ಹೀಗೆ ಹೇಳಲಾಗಿದೆ.

**(ಭಾ.ದೀ.) 'ಇತಿ ಬ್ರಾಹ್ಮೇ' ಇತ್ಯಸ್ಯ 'ತತ್ತದುಪಾಸನಯೋಗ್ಯತಯಾ ತದ್ವಿಶಿಷ್ಟತ್ವೇನ ಪುರುಷಾಣಾಮಾಶ್ರಿತತ್ವಾದುಕ್ತತ್ವಾತ್' ಇತಿ ಪೂರ್ವೇಣಾನ್ವಯಃ॥**

ಭಾಷ್ಯದಲ್ಲಿ 'ಇತಿ ಬ್ರಾಹ್ಮೇ' ಎಂಬ ಪದಗಳಿಗೆ 'ಆಯಾಯಾ ಉಪಾಸನೆಗೆ ಯೋಗ್ಯ-ರಾಗುವುದರಿಂದ ಆಯಾಯ ಉಪಾಸನೆಯಿಂದ ವಿಶಿಷ್ಟರಾದವರೆಂದು ಅಧಿಕಾರಿಗ-ಳನ್ನು ಆಶ್ರಿತತ್ವಾತ್ ಅಂದರೆ ಹೇಳಲಾಗಿದೆ. 'ಆದ್ದರಿಂದ' ಎಂಬುದಾಗಿ ಹಿಂದಿನ ವಾಕ್ಯ-ದೊಂದಿಗೆ ಅನ್ವಯ.

**ಭಾ– 'ಅಗ್ನೌ ಕ್ರಿಯಾವತಾಂ ವಿಷ್ಣುರ್ಯೋಗಿನಾಂ ಹೃದಯೇ ಹರಿಃ।**
**ಪ್ರತಿಮಾಸ್ವಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಮ್' ಇತಿ ಚ॥ ೩೧॥**

॥ ಇತಿ ಪಾದಾಂತ್ಯಪ್ರಾಣಾಧಿಕರಣಮ್ ॥ ೧೨ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಬ್ರಹ್ಮಸೂತ್ರಭಾಷ್ಯೇ ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ ॥೧॥

ಯಜ್ಞಾದಿಕ್ರಿಯೆಗಳನ್ನು ಅನುಷ್ಠಾನ ಮಾಡುವವರಿಗೆ ಗಾರ್ಹಪತ್ಯ ಮೊದ-ಲಾದ ಅಗ್ನಿಗಳಲ್ಲಿ ವಿಷ್ಣುವು ಉಪಾಸ್ಯನಾಗಿದ್ದಾನೆ. ಋಷಿಗಳಿಗೆ ತಮ್ಮ ತಮ್ಮ ಹೃದಯದಲ್ಲಿ ಅವನು ಉಪಾಸ್ಯನಾಗಿದ್ದಾನೆ. ಅಪ್ರಬುದ್ಧರಾದ ಮಂದ-ಮತಿಗಳಿಗೆ, ಪ್ರತಿಮಾಸು - ಕೃಷ್ಣ, ರಾಮ ಮೊದಲಾದ ಪ್ರತಿಮೆಗಳಲ್ಲಿ ಅವನು ಉಪಾಸ್ಯನಾಗಿದ್ದಾನೆ. ವಿಶೇಷವಾಗಿ ಭಗವತ್ಸ್ವರೂಪವನ್ನು ತಿಳಿದ ದೇವತೆಗಳಿಗಾದರೋ ಎಲ್ಲ ಸ್ಥಳಗಳಲ್ಲೂ ಭಗವಂತನು ಉಪಾಸ್ಯನಾಗಿದ್ದಾನೆ - ಎಂದೂ ಬ್ರಾಹ್ಮಪುರಾಣದಲ್ಲಿ ಹೇಳಿದೆ.

(ಭಾ.ದೀ.) ಅತ್ರೈವಾಧಿಕರಣೇ ಕರ್ತೃವಿಶೇಷಪ್ರತಿಪಾದಕಂ ವಿಶೇಷಪ್ರಮಾಣಮಾಹ – **ಅಗ್ನಾವಿತಿ** ॥ ವಿಷ್ಣುಃ '**ಕ್ರಿಯಾವತಾಂ**' ಯಜ್ಞಾದಿಕ್ರಿಯಾನುಷ್ಠಾತ್ರ್ಯಣಾಮ್ '**ಅಗ್ನೌ**' ಗಾರ್ಹಪತ್ಯಾದಾವುಪಾಸ್ಯಃ ಹರಿಃ । **ಯೋಗಿನಾಮ್** ಋಷೀಣಾಂ ಹೃದಯೇ ಉಪಾಸ್ಯಃ । '**ಅಪ್ರಬುದ್ಧಾನಾಂ**' ಮಂದಮತೀನಾಮ್ ಅತ್ಯಲ್ಪಪ್ರತಿಭಾನಾಂ ಮನುಷ್ಯೋತ್ತಮಾನಾಂ '**ಪ್ರತಿಮಾಸು**' ಕೃಷ್ಣರಾಮಾದಿವಿಗ್ರಹೇಷು ಉಪಾಸ್ಯಃ । '**ವಿದಿತಾತ್ಮನಾಂ**' ವಿಶೇಷತೋ ಜ್ಞಾತಭಗವದ್ರೂಪಾಣಾಮ್ ಅಶ್ರುತಪ್ರತಿಭಾನಾಂ ದೇವಾನಾಂ ತು '**ಸರ್ವತ್ರ**,' ಸರ್ವಸ್ಥಾನೇಷೂಪಾಸ್ಯ ಇತ್ಯರ್ಥಃ । ಅತ್ರ 'ಅಗ್ನೌ' 'ಪ್ರತಿಮಾಸು' ಇತಿ ವಾಕ್ಯದ್ವಯೇನ ಬಹಿರ್ಮಾತ್ರೋಪಾಸನಾ ಉಪಲಕ್ಷ್ಯತೇ । ಅತ ಏವ ಸ್ಥಾನದ್ವಯೋಕ್ತಿಃ । ಯಥಾಶ್ರುತೇ ಸೂರ್ಯಾದೌ ವಿಷ್ಣೂಪಾಸ್ತೇರ್ಬಹಿರುಪಾಸಿತತ್ವಂ ನ ಸ್ಯಾತ್ । '**ಯೋಗಿನಾಮ್**' ಇತ್ಯನೇನಾಂತರುಪಾಸ್ತಿರುಕ್ತಾ । 'ಋಷಯೋಽಂತಃಪ್ರಕಾಶಾಃ' ಇತಿ ಶ್ರುತೇಃ । '**ಸರ್ವತ್ರ**' ಇತಿ 'ಸರ್ವತ್ರೋಪಾಸ್ತಿಃ' ಇತಿ ಜ್ಞಾತವ್ಯಮ್ ।

ನ ಚಾತ್ರ 'ಯೇಷಾಂ ಬಹಿರುಪಾಸನೇನ ಮೋಕ್ಷಃ ತೇಷಾಮಪಿ ಹೃದ್ಯುಪಾಸನಂ ಕಿಂಚಿತ್ ಕಾರ್ಯಮೇವ' ಇತಿ ಬೃಹದ್ಭಾಷ್ಯೇಣ 'ಭಗವಾನ್ ಬಿಂಬದರ್ಶನೇನೈನಂ ಮೋಚಯತಿ' ಇತಿ ನ್ಯಾಯವಿವರಣೇನ ಚ ವಿರೋಧಃ ಶಂಕ್ಯಃ । 'ಅಗ್ನೌ' ಇತಿ ವಾಕ್ಯೇ ಅನ್ಯನಿಷೇಧಾಭಾವೇನ ಬಿಂಬಶಬ್ದಿತಸ್ವಸ್ವಯೋಗ್ಯಾತ್ಮಾಪರೋಕ್ಷಾರ್ಥಂ ಹೃದ್ಯುಪಾಸನಸ್ಯಾಪಿ ಸರ್ವೈಃ ಕಾರ್ಯತ್ವಾಭ್ಯುಪಗಮಾತ್ । ಮೋಚಕಯೋಗ್ಯಾಪರೋಕ್ಷದ್ವಾರಭೂತಾವತಾರಾದ್ಯಪರೋಕ್ಷಸಾಧನೋಪಾಸನಾಯಾ ಏವ ತೈಸ್ತೈಃ ಪ್ರಾಚುರ್ಯೇಣ ಪ್ರಕರಣಸ್ಯ 'ಅಗ್ನೌ' ಇತಿ ವಾಕ್ಯೇನ ವ್ಯವಸ್ಥಯಾ ಪ್ರತಿಪಾದನಾಚ್ಚ । **ಇತಿ ಚೇತಿ** ॥ ಚಃ ಸಮುಚ್ಚಯೇ । ವಚನದ್ವಯಸ್ಯಾಪ್ಯೇಕಾರ್ಥಸಾಧಕತ್ವಾತ್ 'ಅಸ್ಯಾಪಿ ಬ್ರಾಹ್ಮೇ ಆಶ್ರಿತತ್ವಾತ್' ಇತಿ ಪೂರ್ವೇಣಾನ್ವಯಃ । ತತ್ತದುಪಾಸನಯೋಗ್ಯತಾವತ್ತ್ವೇನ ಪುರುಷವಿಶೇಷಾಣಾಮ್ ಉಕ್ತತ್ವಾದಿತಿ ತದರ್ಥಃ । ಅತೋ ನ ತದ್ಯೋಗಾತ್ ಇತಿ ಹೇತ್ವಸಿದ್ಧಿಃ ಶಂಕ್ಯಾ ಇತಿ ಭಾವಃ ।

ಇದೇ ಅಧಿಕರಣದಲ್ಲಿ, ಉಪಾಸನಾಯೋಗ್ಯತೆಯುಳ್ಳ ವಿಶಿಷ್ಟಕರ್ತೃಗಳನ್ನು ಪ್ರತಿಪಾದಿಸುವ ವಿಶೇಷಪ್ರಮಾಣವನ್ನು ಭಾಷ್ಯದಲ್ಲಿ '**ಅಗ್ನೌ**' ಎಂಬುದಾಗಿ ಉದಾಹರಿಸುತ್ತಿದ್ದಾರೆ. ವಿಷ್ಣುವು ಕ್ರಿಯಾವತಾಂ -ಯಜ್ಞಾದಿಕ್ರಿಯೆಗಳನ್ನು ಅನುಷ್ಠಾನ ಮಾಡುವವರಿಗೆ '**ಅಗ್ನೌ**' - ಗಾರ್ಹಪತ್ಯಾದಿ ಅಗ್ನಿಗಳಲ್ಲಿ ಉಪಾಸ್ಯನಾಗಿದ್ದಾನೆ. **ಹರಿಃ** - ಹರಿಯು, **ಯೋಗಿನಾಂ** - ಋಷಿಗಳಿಗೆ **ಹೃದಯೇ** - ತಮ್ಮ ಹೃದಯದಲ್ಲಿ ಉಪಾಸ್ಯನಾಗಿದ್ದಾನೆ. **ಅಪ್ರಬುದ್ಧಾನಾಂ** - ಮಂದಮತಿಗಳಿಗೆ ಅತ್ಯಲ್ಪಪ್ರತಿಭೆಯುಳ್ಳ ಮನುಷ್ಯೋತ್ತಮರಿಗೆ, '**ಪ್ರತಿಮಾಸು**' ಕೃಷ್ಣರಾಮ ಮೊದಲಾದ ವಿಗ್ರಹಗಳಲ್ಲಿ ಹರಿಯು ಉಪಾಸ್ಯನಾಗಿದ್ದಾನೆ. **ವಿದಿತಾತ್ಮನಾಂ** - ವಿಶೇಷತಃ ಭಗವದ್ರೂಪಗಳನ್ನು ತಿಳಿದ, ತಾವು ಕೇಳದಿರುವುದನ್ನೂ ಪ್ರತಿಭೆಯಿಂದ ತಿಳಿಯಬಲ್ಲ ದೇವತೆಗಳಿಗಾದರೋ, **ಸರ್ವತ್ರ**- ಸರ್ವಸ್ಥಾನಗಳಲ್ಲಿ, ಹರಿಯು ಉಪಾಸ್ಯನಾಗಿದ್ದಾನೆ ಎಂದು ಅರ್ಥ. ಇಲ್ಲಿ 'ಅಗ್ನೌ ಉಪಾಸ್ಯಃ', 'ಪ್ರತಿಮಾಸು ಉಪಾಸ್ಯಃ' ಎಂಬ ಎರಡು ವಾಕ್ಯಗಳಿಂದ ಕೇವಲ ಬಹಿರುಪಾಸನೆಯು ಉಪಲಕ್ಷಿತವಾಗುವುದು. ಆದ್ದರಿಂದಲೇ ಎರಡು ಸ್ಥಾನಗಳನ್ನು ಹೇಳಲಾಗಿದೆ. 'ಅಗ್ನಿಯಲ್ಲಿ ಉಪಾಸ್ಯನು' 'ಪ್ರತಿಮೆಯಲ್ಲಿ ಉಪಾಸ್ಯನು' ಎಂಬುದಾಗಿ ಯಥಾಶ್ರುತವಾದ ಅರ್ಥವನ್ನು ಗ್ರಹಿಸುವುದಾದರೆ ಸೂರ್ಯ ಮೊದಲಾದವರಲ್ಲಿ ಮಾಡುವ ವಿಷ್ಣುವಿನ ಉಪಾಸನೆಯು ಬಹಿರುಪಾಸನೆಯಾಗದೇ ಇರಬೇಕಾದೀತು. '**ಯೋಗಿನಾಂ**' ಎಂಬ ವಾಕ್ಯದಿಂದ ಅಂತರುಪಾಸನೆಯು ಹೇಳಲ್ಪಟ್ಟಿದೆ. ಏಕೆಂದರೆ '**ಋಷಯಃ ಅಂತಃಪ್ರಕಾಶಾಃ**' 'ಋಷಿಗಳು ತಮ್ಮ ಹೃದಯದಲ್ಲಿ ಭಗವಂತನನ್ನು ನೋಡುವವರು' ಎಂದು ಶ್ರುತಿಯಿರುವುದು. **ಸರ್ವತ್ರ** ಎಂಬ ವಾಕ್ಯದಿಂದ ಸರ್ವಗತತ್ವೇನ ಉಪಾಸನೆಯು ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

**ಶಂಕೆ** – 'ಯೇಷಾಂ ಬಹಿರುಪಾಸನೇನ ಮೋಕ್ಷಃ ತೇಷಾಮಪಿ ಹೃದ್ಯುಪಾಸನಂ ಕಿಂಚಿತ್ ಕಾರ್ಯಮೇವ' - 'ಯಾರಿಗೆ ಬಹಿರುಪಾಸನೆಯಿಂದ ಮೋಕ್ಷವಾಗುವುದೋ ಅವರಿಗೂ ಹೃದಯದಲ್ಲಿ ಭಗವಂತನ ಉಪಾಸನೆ ಸ್ವಲ್ಪ ಅವಶ್ಯಕರ್ತವ್ಯವಾಗಿದೆ' ಎಂಬ ಬೃಹದ್ಭಾಷ್ಯದಿಂದ ಹಾಗೂ 'ಭಗವಾನ್ ಬಿಂಬದರ್ಶನೇನೈನಂ ಮೋಚಯತಿ' 'ಭಗವಂತನು ಬಿಂಬದರ್ಶನದಿಂದಲೇ ಉಪಾಸಕನನ್ನು ಮುಕ್ತನನ್ನಾಗಿ ಮಾಡುವನು' ಎಂಬ ನ್ಯಾಯವಿವರಣವಾಕ್ಯದಿಂದಲೂ ಮೇಲೆ ಹೇಳಿದ ಪ್ರಮಾಣಕ್ಕೆ ವಿರೋಧ ಬರುವುದು.

**ಸಮಾಧಾನ** – 'ಅಗ್ನೌ ಕ್ರಿಯಾವತಾಂ' ಎಂಬ ವಾಕ್ಯದಲ್ಲಿ ಅಗ್ನ್ಯಾದಿಗಳಲ್ಲಿ ಆಯಾಯಾ ಅಧಿಕಾರಿಗಳು ಉಪಾಸನೆ ಮಾಡುವರು ಎಂದು ಹೇಳಲಾಗಿದೆಯೇ ಹೊರತು ಬೇರೆ ಉಪಾಸನೆಯನ್ನು ನಿಷೇಧಿಸಿಲ್ಲವಾದ್ದರಿಂದ, ಬಿಂಬಶಬ್ದವು ಹೇಳುವ ತಮಗೆ ಯೋಗ್ಯವಾದ ಭಗವದ್ರೂಪದ ಅಪರೋಕ್ಷಕ್ಕಾಗಿ ಹೃದಯದಲ್ಲಿ ಉಪಾಸನೆಯನ್ನು ಎಲ್ಲರೂ ಮಾಡತಕ್ಕದ್ದೆಂದು ಅಂಗೀಕರಿಸಲಾಗಿದೆ. ಮತ್ತು ಮುಕ್ತಿಪ್ರದವಾದ ಯೋಗ್ಯಭಗವದ್ರೂಪದ ಅಪರೋಕ್ಷಕ್ಕೆ ದ್ವಾರವಾದದ್ದು ಅವತಾರ ಮೊದಲಾದ ಭಗವದ್ರೂಪದ ಅಪರೋಕ್ಷಗಳು. ಅದಕ್ಕೆ ಸಾಧನವಾದ ಉಪಾಸನೆಯನ್ನು ಆಯಾ ಅಧಿಕಾರಿಗಳು ಪ್ರಚುರವಾಗಿ ಮಾಡಬೇಕೆನ್ನುವುದನ್ನೇ 'ಅಗ್ನೌ ಕ್ರಿಯಾವತಾಂ' ಎಂಬ ವಾಕ್ಯದಿಂದ ವ್ಯವಸ್ಥೆ ಮಾಡಿ ಪ್ರತಿಪಾದಿಸಿರುವುದರಿಂದ ಯಾವುದೇ ವಿರೋಧವಿಲ್ಲ. ಭಾಷ್ಯದಲ್ಲಿ 'ಇತಿ ಚ' ಎಂಬಲ್ಲಿರುವ ಚಕಾರವು ಸಮುಚ್ಚಯವನ್ನು ಹೇಳುವುದು. ಹಿಂದೆ ಉದಾಹರಿಸಿದ ಬ್ರಾಹ್ಮವಚನ ಮತ್ತು ಈಗ ಉದಾಹರಿಸುವ ವಚನ ಇವೆರಡೂ ಒಂದೇ ವಿಷಯದ ಸಾಧಕವಾಗಿರುವುದರಿಂದ ಈ ವಾಕ್ಯಕ್ಕೂ 'ಬ್ರಾಹ್ಮೇ ಆಶ್ರಿತತ್ವಾತ್' ಎಂಬ ಹಿಂದಿನ ವಾಕ್ಯದಿಂದ ಅನ್ವಯವಾಗುವುದು. 'ಆಯಾಯಾ ಉಪಾಸನಾಯೋಗ್ಯತೆಯುಳ್ಳವರೆಂದು ಅಧಿಕಾರಿಪುರುಷವಿಶೇಷರನ್ನು ಹೇಳಿರುವುದರಿಂದ' ಎಂದು ಆ ವಾಕ್ಯದ ಅರ್ಥ. ಆದ್ದರಿಂದ 'ತದ್ಯೋಗಾತ್' ಎಂಬುದಾಗಿ ಸೂತ್ರದಲ್ಲಿ ಹೇಳಿದ ಹೇತುವು ಅಸಿದ್ಧಿದೋಷವನ್ನು ಪಡೆದಿದೆ ಎಂದು ಶಂಕಿಸತಕ್ಕದ್ದಲ್ಲ ಎಂದು ಭಾವ.

(ಭಾ.ದೀ.) ಅನೇನ ನ ಅತ್ರೋಕ್ತಪ್ರಾಣೋ ವಿಷ್ಣುಃ, ಕಿಂತು ಜೀವಮುಖ್ಯಪ್ರಾಣಾವೇವ । ಕುತಃ? 'ಜೀವಮುಖ್ಯಪ್ರಾಣಲಿಂಗಾತ್' ಶತಾಯುಷ್ಟ್ವರೂಪಜೀವಲಿಂಗಸ್ಯ, ಪ್ರಾಣಸಂವಾದಾದಿರೂಪಮುಖ್ಯಪ್ರಾಣಲಿಂಗಸ್ಯ ಚ ಇಹ ಶ್ರವಣಾತ್ ಇತಿ ಚೇತ್; ನ, ವಿಷ್ಣುರೇವಾಯಂ ಪ್ರಾಣಃ, ನ ಜೀವಾದಿಃ । ಕುತಃ? **ಅನುಗಮಾತ್** ಹೇತೋರೇವ, ನ ಚಾನ್ಯಶ್ರುತಿಲಿಂಗವಿರೋಧಃ । ಉಕ್ತರೀತ್ಯಾ 'ತದ್ಯೋಗಾತ್' ತೇಷಾಮಂತರ್ಯಾಮಿವಿಷಯತ್ವೋಪಪತ್ತೇಃ । ಯತಃ ಶಾಸ್ತ್ರದೃಷ್ಟ್ಯಾಽಯಮ್ ಉಪದೇಶಃ ಇತಿ ವಾ । ಕಿಮರ್ಥಮತ್ರ ಅಂತರ್ಯಾಮಿಕಥನಮ್? ಇತಿ ಚೇತ್, ಅಂತರುಪಾಸ್ತ್ಯರ್ಥಮಿತಿ ಬ್ರೂಮಃ । ನ ಚ ಉಪಾಸನೇ ಅವಾಂತರಭೇದಾಭಾವಃ ।

'ಉಪಾಸಾತ್ರೈವಿಧ್ಯಾತ್' ಅಂತರಾದಿಭೇದೇನ ಭಗವದುಪಾಸನಸ್ಯ ತ್ರಿವಿಧತ್ವಾತ್ । ನ ಚ ತಥಾಽಪಿ ಕಥನಮಯುಕ್ತಮ್ । ವಾಸ್ತವತ್ರೈವಿಧ್ಯಸ್ಯ ಇಹಾನುಕ್ತಸ್ಯ ಕಥನಾಪ್ರಯೋಜಕತ್ವಾದಿತಿ ವಾಚ್ಯಮ್ । 'ಇಹ' - ಪ್ರಕರಣೇ ತತ್ತ್ರೈವಿಧ್ಯಸ್ಯ ಆಶ್ರಿತತ್ವಾತ್ ಉಕ್ತತ್ವಾತ್ ।

ನ ಚೈಕವಿಧೋಪಾಸನಯಾ ಸರ್ವೇಷಾಂ ಬ್ರಹ್ಮಾಪರೋಕ್ಷಸಂಭವಾತ್ ಕಿಮುಪಾಸಾತ್ರೈವಿಧ್ಯೇನೇತಿ ವಾಚ್ಯಮ್ । 'ತದ್ಯೋಗಾತ್' ತೇಷಾಂ ಪುರುಷಾಣಾಂ ತಸ್ಮಿನ್ ತದುಪಾಸನ ಏವ ಯೋಗ್ಯತ್ವಾತ್ । ಅನೇಕವಿಧೋಪಾಸ್ತಿಯೋಗ್ಯತಾವತಾಂ ಚ ಪುರುಷಾಣಾಮ್ ಏಕವಿಧೋಪಾಸನಯಾಽಪರೋಕ್ಷಾಸಂಭವೇನ ಯೋಗ್ಯತಾಭೇದಾದುಪಾಸಾತ್ರೈವಿಧ್ಯಸ್ಯ ಆವಶ್ಯಕತ್ವಾತ್ ಇತಿ ಸೂತ್ರಾರ್ಥ ಉಕ್ತೋ ಭವತಿ । ನ ಚ ವಿವಾದಕರ್ತೃತ್ವಲಿಂಗಸ್ಯ ಅಂತರ್ಯಾಮಿವಿಷಯತ್ವೇ 'ಉದಾಸೀನೌ ಚ ತಾವಾಸ್ತಾಂ ಕೇಶವಶ್ಚಾಬ್ಜಸಂಭವಃ' ಇತಿ ವಚನವಿರೋಧಃ ಶಂಕ್ಯಃ । ತಸ್ಯ ಅಂತರ್ಯಾಮಿವಿಷಯಭಿನ್ನಬಾಹ್ಯರೂಪವಿಷಯತ್ವಾತ್ । ಅತೋಽನ್ಯಲಿಂಗಾನಾಂ ತತ್ತದಂತರ್ಯಾಮಿವಿಷಯತ್ವೋಪಪತ್ತೇಃ ತದ್ವಿರೋಧಾಭಾವಾತ್ ವಿಷ್ಣುರೇವಾಯಂ ಪ್ರಾಣಃ ಅನಂದಮಯಶ್ಚೇತಿ ಯುಕ್ತಾ ತಜ್ಜಿಜ್ಞಾಸಾ ಇತಿ ಸಿದ್ಧಮ್ ॥

॥ ಇತಿ ಭಾಷ್ಯದೀಪಿಕಾಯಾಂ ಪಾದಾಂತ್ಯಪ್ರಾಣಾಧಿಕರಣಮ್ ॥೧೨॥

॥ ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯಾಣಾಂ ಸರ್ವತಂತ್ರಸ್ವತಂತ್ರಾಣಾಂ
ಶ್ರೀಮದ್ರಘುನಾಥತೀರ್ಥಪೂಜ್ಯಪಾದಾನಾಂ ಶಿಷ್ಯೇಣ ಶ್ರೀಮಜ್ಜಗನ್ನಾಥಯತಿನಾ
ಕೃತಾಯಾಂ ಶ್ರೀಮದ್ಬ್ರಹ್ಮಸೂತ್ರಭಾಷ್ಯದೀಪಿಕಾಯಾಂ
ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ ॥೧॥

ಇದರಿಂದ – ಈ ಐತರೇಯಪ್ರಕರಣದಲ್ಲಿ ಹೇಳಿರುವ ಪ್ರಾಣನು ವಿಷ್ಣುವಲ್ಲ; ಕಿಂತು ಜೀವ ಮುಖ್ಯಪ್ರಾಣರೇ ಆಗಿರುವರು. ಏಕೆಂದರೆ, 'ಜೀವಮುಖ್ಯಪ್ರಾಣಲಿಂಗಾತ್' ನೂರು ವರ್ಷ ಆಯುಸ್ಸನ್ನು ಹೊಂದಿರುವಿಕೆ ಎಂಬ ಜೀವಲಿಂಗ, ಹಾಗೂ ಇಂದ್ರಿಯಗಳೊಂದಿಗೆ ಸಂವಾದರೂಪವಾದ ಮುಖ್ಯಪ್ರಾಣಲಿಂಗವು ಇಲ್ಲಿ ಶ್ರುತವಾಗಿರುವುದರಿಂದ ಎಂದು ಶಂಕಿಸಿದರೆ ನ - ಅದು ಸರಿಯಲ್ಲ. ಈ ಪ್ರಾಣನು ವಿಷ್ಣುವೇ ಆಗಿದ್ದಾನೆ. ಹೊರತು ಜೀವ ಮೊದಲಾದವರಲ್ಲ. ಏಕೆಂದರೆ, 'ಅನುಗಮಾತ್'

ಅನೇಕ ವಿಷ್ಣುಲಿಂಗಗಳ ಅಭ್ಯಾಸವಿರುವ ಕಾರಣದಿಂದ. ಹೀಗೆ ಹೇಳಿದಾಗ ಇತರರನ್ನು ಹೇಳುವ ಶ್ರುತಿ ಲಿಂಗಗಳ ವಿರೋಧ ಬರುವುದೆಂದರೆ, ಅದು ಸರಿಯಲ್ಲ. ಏಕೆಂದರೆ ಈಗ ಹೇಳಿದ ರೀತಿಯಿಂದ '**ತದ್ಯೋಗಾತ್**' - ಆ ಶ್ರುತಿಲಿಂಗಗಳು ಅಂತರ್ಯಾಮಿಗೆ ಸಂಬಂಧಪಟ್ಟಿದ್ದೆಂದು ಹೇಳುವುದು ಯುಕ್ತವಾಗಿದೆ. ಅಥವಾ ಆ ಉಪದೇಶವು ಅಂತರ್ಯಾಮಿದೃಷ್ಟಿಯಿಂದ ಮಾಡಲಾಗಿದೆ ಎಂದು ಅರ್ಥ. ಇಲ್ಲಿ ಅಂತರ್ಯಾಮಿ-ಯನ್ನು ಹೇಳಿರುವುದು ಯಾವ ಉದ್ದೇಶದಿಂದ ಎಂದು ಕೇಳಿದರೆ ಅಂತಃ ಉಪಾಸನೆಗಾಗಿ ಎಂದು ಉತ್ತರವನ್ನು ಹೇಳುವೆವು. ಉಪಾಸನೆಗಳಲ್ಲಿ ಅವಾಂತರಭೇದವಿಲ್ಲವಾದ್ದರಿಂದ ಈ ಸಮಾಧಾನವು ಸರಿಯಲ್ಲ ಎಂದೂ ಶಂಕಿಸತಕ್ಕದ್ದಲ್ಲ. ಏಕೆಂದರೆ, **ಉಪಾಸಾ-ತ್ರೈವಿಧ್ಯಾತ್** - ಅಂತಃ ಉಪಾಸನೆ ಇತ್ಯಾದಿಯಾಗಿ ಭಗವದುಪಾಸನೆಯು ಮೂರು-ವಿಧವಾಗಿದೆ. ಆದರೂ ಅಂತರ್ಯಾಮಿಕಥನವು ಇಲ್ಲಿ ಅಯುಕ್ತವೇ ಆಗಿದೆ. ಏಕೆಂದರೆ ಈ ಪ್ರಕರಣದಲ್ಲಿ ಹೇಳದಿರುವ ಆದರೆ ವಾಸ್ತವಿಕವಾಗಿ ಇರುವ ಉಪಾಸನೆಯ ತ್ರೈವಿಧ್ಯವು ಇಲ್ಲಿ ಅಂತರ್ಯಾಮಿಯನ್ನು ಹೇಳುವುದಕ್ಕೆ ಕಾರಣವಾಗುವುದಿಲ್ಲ ಎಂದರೆ ಅದು ಸರಿಯಲ್ಲ. ಇಹ - ಈ ಪ್ರಕರಣದಲ್ಲಿ ಆ ತ್ರೈವಿಧ್ಯವು, **ಆಶ್ರಿತತ್ವಾತ್** ಅಂದರೆ ಉಕ್ತವಾಗಿದೆ. ಏಕವಿಧವಾದ ಉಪಾಸನೆಯಿಂದಲೇ ಎಲ್ಲರಿಗೂ ಬ್ರಹ್ಮಾಪರೋಕ್ಷ-ವಾಗುವುದು ಸಾಧ್ಯವಿರುವುದರಿಂದ ಉಪಾಸನೆಯ ತ್ರೈವಿಧ್ಯವು ಏಕೆ? ಎಂದು ಶಂಕಿಸಿ-ದರೆ ಅದು ಸರಿಯಲ್ಲ.

ಏಕೆಂದರೆ '**ತದ್ಯೋಗಾತ್**' ಆ ಅಧಿಕಾರಿಪುರುಷರಿಗೆ ತಸ್ಮಿನ್ - ಆ ಉಪಾಸನೆ-ಯಲ್ಲೇ ಯೋಗ್ಯತೆ ಇರುವುದರಿಂದ ಉಪಾಸನೆಯ ತ್ರೈವಿಧ್ಯವು ಅವಶ್ಯಕವಾಗಿದೆ. ಅನೇಕವಿಧವಾದ ಉಪಾಸನೆ ಮಾಡುವ ಪುರುಷರಿಗೆ ಏಕವಿಧವಾದ ಉಪಾಸನೆಯಿಂದ ಅಪರೋಕ್ಷವಾಗುವುದು ಸಾಧ್ಯವಿಲ್ಲವಾದ್ದರಿಂದ ಅಧಿಕಾರಿಗಳಲ್ಲಿರುವ ಯೋಗ್ಯತಾ-ಭೇದವನ್ನು ಅನುಸರಿಸಿ ಉಪಾಸಾತ್ರೈವಿಧ್ಯವು ಆವಶ್ಯಕವಾಗಿದೆ ಎಂದು ಜೀವಮುಖ್ಯ-ಪ್ರಾಣ ಇತ್ಯಾದಿ ಸೂತ್ರದ ಅರ್ಥವನ್ನು ಹೇಳಿದಂತಾಗುವುದು.

ಶಂಕೆ – ವಿವಾದಕರ್ತೃತ್ವವೆಂಬ ಲಿಂಗವೂ ಅಂತರ್ಯಾಮಿಗೆ ಸಂಬಂಧಪಟ್ಟಿ-ರುವುದು ಎಂದಾದ ಪಕ್ಷದಲ್ಲಿ '**ಉದಾಸೀನೌ ಚ ತಾವಾಸ್ತಾಂ ಕೇಶವಶ್ಚಾಬ್ಜ-**

ಸಂಭವಃ' - 'ಈ ಇಂದ್ರಿಯಗಳ ವಿವಾದದ ಸಂದರ್ಭದಲ್ಲಿ ಕೇಶವ ಮತ್ತು ಚತುರ್ಮುಖಬ್ರಹ್ಮ ಇವರಿಬ್ಬರೂ ಉದಾಸೀನರಾಗಿದ್ದರು' ಎಂಬ ವಚನವಿರೋಧ ಬರುವುದು.

**ಉತ್ತರ** – ಈ ಶಂಕೆಯು ಸರಿಯಲ್ಲ; ಏಕೆಂದರೆ, ಈ ವಚನವು ಅಂತರ್ಯಾಮಿಭಿನ್ನವಾದ ಬಾಹ್ಯರೂಪಕ್ಕೆ ಸಂಬಂಧಪಟ್ಟ ವಚನವಾಗಿದೆ. ಆದ್ದರಿಂದ ಜೀವ ಮುಖ್ಯಪ್ರಾಣ ಮೊದಲಾದವರಿಗೆ ಸಂಬಂಧಪಟ್ಟಿದ್ದೆಂದು ಹೇಳಲಾದ ಲಿಂಗಗಳು ಅವರ ಅಂತರ್ಯಾಮಿಗೆ ಸಂಬಂಧಪಟ್ಟಿರುವುದರಿಂದ ಅವುಗಳ ವಿರೋಧವಿಲ್ಲ. ಆದ್ದರಿಂದ ಈ ಪ್ರಾಣನು ವಿಷ್ಣುವೇ ಆಗಿದ್ದಾನೆ; ಆನಂದಮಯನೂ ಆಗಿದ್ದಾನೆ. ಆದ್ದರಿಂದ ಅವನ ಜಿಜ್ಞಾಸೆಯು ಯುಕ್ತವಾಗಿದೆ ಎಂದು ಸಿದ್ಧವಾಯಿತು.

**॥ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯರಾದ ಸರ್ವತಂತ್ರಸ್ವತಂತ್ರರಾದ ಶ್ರೀಮದ್ರಘುನಾಥತೀರ್ಥ ಶ್ರೀಪಾದರ ಶಿಷ್ಯರಾದ ಜಗನ್ನಾಥಯತಿಗಳಿಂದ ರಚಿತವಾದ ಶ್ರೀಮದ್ಬ್ರಹ್ಮಸೂತ್ರಭಾಷ್ಯದೀಪಿಕಾ ಗ್ರಂಥದ ಕನ್ನಡಾನುವಾದದಲ್ಲಿ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದ ಮುಗಿಯಿತು ॥**

* * * * * *

## ಅಥ ದ್ವಿತೀಯಃ ಪಾದಃ

## ೧. ಅಥ ಸರ್ವಗತತ್ವಾಧಿಕರಣಮ್

ಭಾ– ಲಿಂಗಾತ್ಮಕಾನಾಂ ಶಬ್ದಾನಾಂ ವಿಷ್ಣೌ ಪ್ರವೃತ್ತಿಂ ಪ್ರದರ್ಶಯತ್ಯಸ್ಮಿನ್ ಪಾದೇ ಪ್ರಾಧಾನ್ಯೇನ।

ಲಿಂಗ ಅಂದರೆ ಅಸಾಧಾರಣಧರ್ಮವು ಪ್ರವೃತ್ತಿನಿಮಿತ್ತವಾಗಿ ಉಳ್ಳ ಶಬ್ದಗಳಿಗೆ ಮಹಾಯೋಗ-ವಿದ್ವದ್ರೂಢಿಗಳಿಂದ ವಿಷ್ಣುವಿನಲ್ಲೇ ತಾತ್ಪ-ರ್ಯವಿರುವುದನ್ನು ಈ ಪಾದದಲ್ಲಿ ಸೂತ್ರಕಾರರು ಪ್ರಧಾನವಾಗಿ ತೋರಿಸುವರು.

(ಭಾ.ದೀ.) ಪೂರ್ವೋತ್ತರಪಾದಭೇದಸ್ಯ ಸ್ವಸ್ಮಿನ್ನೇಕವಾಕ್ಯತಾಯಾಶ್ಚ ಸಿದ್ಧಯೇ ಏತತ್ಪಾದಪ್ರತಿಪಾದ್ಯಂ ದರ್ಶಯತಿ – **ಲಿಂಗೇತಿ** ॥ ಲಿಂಗಮ್ ಅನುಮಾಪಕೋ ಧರ್ಮಃ । ಸ ಆತ್ಮೇವಾऽತ್ಮಾ ಪ್ರವೃತ್ತಿನಿಮಿತ್ತಂ ಯೇಷಾಂ ತೇ ತಥೋಕ್ತಾಃ । 'ನಿಮಿತ್ತನಿಮಿತ್ತಿನೋರಭೇದೋಪಚಾರಾತ್' ಇತಿ **ಸುಧೋಕ್ತೇಃ** । ಸ್ವರೂಪಾರ್ಥೋ ವಾ ಆತ್ಮಶಬ್ದಃ । ಪೂರ್ವಯೋಜನಾಯಾಮ್ ಆತ್ಮಪ್ರತಿಪಾದಕೇ ಗೌಣೀ ವೃತ್ತಿಃ । ದ್ವಿತೀಯಾಯಾಂ ತು ಸಾಮಾನಾಧಿಕರಣ್ಯಮಿತಿ ಭೇದಃ । ಸ್ವಾರ್ಥೇ ಕಃ । ತಥಾಚ ವ್ಯಾಪ್ಯಧರ್ಮದ್ವಾರಾ ಧರ್ಮಿಬೋಧಕಾನಾಮ್ ಆಪಾತತೋ ಯೌಗಿಕಾನಾಮ್ ಇತ್ಯರ್ಥಃ । 'ವಿಷ್ಣೋರನ್ಯತ್ರ ಪ್ರಸಿದ್ಧಾನಾಮ್' ಇತಿ ಚ ಸಂಯೋಜ್ಯಮ್ । **ಶಬ್ದಾ-ನಾಮಿತಿ** ॥ ಏಕಪ್ರಾತಿಪಾದಿಕರೂಪಾಣಾಮನೇಕಪದಸಮಭಿವ್ಯಾಹಾರರೂಪಾಣಾಂ ಚ ಇತ್ಯರ್ಥಃ । ವಿಷ್ಣೌ ಪ್ರವೃತ್ತಿಂ – ಪ್ರಕರ್ಷೇಣ ವೃತ್ತಿಂ ಮಹಾಯೋಗವಿದ್ವದ್ರೂ-ಢಿಭ್ಯಾಂ ವಿಷ್ಣುಪರತ್ವಮಿತಿ ಯಾವತ್ । **ಪ್ರದರ್ಶಯತಿ** ॥ 'ಪ್ರಕರ್ಷೇಣ ಸಾಧಯತಿ ಸೂತ್ರಕಾರಃ' ಇತ್ಯರ್ಥಃ। ವೈಶ್ವಾನರಾಧಿಕರಣೇ ನಾಮಸಮನ್ವಯಕರಣಾತ್ ಅವ್ಯಾಪ್ತಿ-

**ನಿರಾಸಾಯ ಪ್ರಾಧಾನ್ಯೇನ ಇತ್ಯುಕ್ತಮ್ । ತಥಾಚ ತತ್ರಾಪಿ ನಾಮಸಮನ್ವಯ-ಮುಖೇನ ಪ್ರಾಧಾನ್ಯೇನ ಫಲತೋ ಬಹುಲಿಂಗಸಮನ್ವಯಸ್ಯೈವ ಕರಣಾತ್ ನಾವ್ಯಾಪ್ತಿರಿತಿ ಭಾವಃ।**

ಹಿಂದಿನ ಪಾದ ಮತ್ತು ಮುಂದಿನ ಪಾದಗಳಿಗೆ ಇರುವ ಭೇದವನ್ನು ಮತ್ತು ಈ ಪಾದದಲ್ಲಿ ಏಕವಾಕ್ಯತೆ ಇರುವುದನ್ನು ತೋರಿಸಲು ಈ ಪಾದಪ್ರತಿಪಾದ್ಯವಾದ ವಿಷಯವನ್ನು 'ಲಿಂಗ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಲಿಂಗವೆಂದರೆ ಅನು-ಮಾಪಕ ಅಂದರೆ ಅನುಮಿತಿಗೆ ಕಾರಣವಾಗುವ ಧರ್ಮ(೧). ಆ ಧರ್ಮವೇ ಆತ್ಮನಂತಿ-ರುವ ಆತ್ಮಾ ಎಂದರೆ ಪ್ರವೃತ್ತಿನಿಮಿತ್ತ. ಅಂತಹ ಪ್ರವೃತ್ತಿನಿಮಿತ್ತವನ್ನು ಹೊಂದಿರುವ ಶಬ್ದಗಳು ಲಿಂಗಾತ್ಮಕಶಬ್ದಗಳು. ಅಥವಾ **'ನಿಮಿತ್ತ-ನಿಮಿತ್ತಿನೋಃ ಅಭೇದೋಪ-ಚಾರಾತ್'** - 'ಕಾರ್ಯ ಮತ್ತು ಕಾರಣಗಳಿಗೆ ಅಭೇದವನ್ನು ಔಪಚಾರಿಕವಾಗಿ ಹೇಳ-ಲಾಗಿದೆ' ಎಂಬ ಸುಧಾವಾಕ್ಯವನ್ನು ಅನುಸರಿಸಿ, ಇಲ್ಲಿ ಆತ್ಮಶಬ್ದವು ಸ್ವರೂಪಾರ್ಥಕ-ವಾದದ್ದು. ಮೊದಲು ಮಾಡಿದ ಯೋಜನೆಯಲ್ಲಿ ಆತ್ಮಾ ಎಂಬ ಪ್ರಾತಿಪದಿಕವು ಗೌಣೀವೃತ್ತಿಯಿಂದ ಪ್ರವೃತ್ತಿನಿಮಿತ್ತವನ್ನು ಹೇಳುವುದು. ಎರಡನೆಯ ಯೋಜನೆಯ-ಲ್ಲಾದರೋ ಆತ್ಮಶಬ್ದವು ಔಪಚಾರಿಕವಾದ ಅಭೇದವನ್ನೇ ಹೇಳುವುದು. ಹೀಗೆ ಎರಡೂ ಯೋಜನೆಗಳಲ್ಲಿ ಭೇದವಿರುವುದು. ಆತ್ಮಕ ಎಂಬಲ್ಲಿ 'ಕ'ಪ್ರತ್ಯಯವು ಸ್ವಾರ್ಥ ಅಂದರೆ ಲಿಂಗಾತ್ಮಕಶಬ್ದದ ಅರ್ಥವನ್ನು ಬಿಟ್ಟು ಬೇರೆಯ ಅರ್ಥವನ್ನು ಹೇಳುವುದಿಲ್ಲ. ತಥಾಚ – ವ್ಯಾಪ್ಯಧರ್ಮಗಳನ್ನು ಹೇಳುವ ಮೂಲಕ ಧರ್ಮಿಯನ್ನು ತಿಳಿಸುವ, ಸ್ಥೂಲದೃಷ್ಟಿಯಿಂದ ಯೌಗಿಕವಾಗಿರುವ ಶಬ್ದಗಳಿಗೆ ಎಂದು ಅರ್ಥ. **'ವಿಷ್ಣೋರನ್ಯತ್ರಪ್ರಸಿದ್ಧಾನಾಮ್'** 'ವಿಷ್ಣುವನ್ನು ಬಿಟ್ಟು ಇತರವಸ್ತುವನ್ನು ಹೇಳುವುದೆಂದು ಪ್ರಸಿದ್ಧವಾಗಿರುವ ಎಂಬ ಪದಗಳನ್ನೂ ಇಲ್ಲಿ ಸಂಯೋಜಿಸಬೇಕು. 'ಶಬ್ದಾನಾಮ್' ಎಂದರೆ ಒಂದು ಪ್ರಾತಿ-ಪದಿಕರೂಪವಾದ, ಹಾಗೆಯೇ ಅನೇಕ ಪದಗಳ ಸಮೂಹರೂಪವಾದ ಶಬ್ದಗಳಿಗೆ ಎಂದು ಅರ್ಥ. 'ವಿಷ್ಣೌ ಪ್ರವೃತ್ತಿಂ' ವಿಷ್ಣುವಿನಲ್ಲಿ ಅತಿಶಯವಾದ ವೃತ್ತಿಯನ್ನು ಅಂದರೆ ಮಹಾಯೋಗ-ವಿದ್ವದ್ರೂಢಿಗಳಿಂದ ವಿಷ್ಣುಪರತ್ವವನ್ನು ಎಂದು ಭಾವ. 'ಪ್ರದರ್ಶ-ಯತಿ' – ವಿಶೇಷವಾಗಿ ಸೂತ್ರಕಾರರು ಸಾಧಿಸುತ್ತಾರೆ ಎಂದು ಅರ್ಥ. ವೈಶ್ವಾನರಾಧಿ-

ಕರಣದಲ್ಲಿ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡುವುದರಿಂದ ಈ ಪಾದದ ಲಕ್ಷಣಕ್ಕೆ ಅವ್ಯಾಪ್ತಿದೋಷ ಬರುವುದನ್ನು ಪರಿಹರಿಸಲು ಪ್ರಾಧಾನ್ಯೇನ ಎಂದು ಹೇಳಲಾಗಿದೆ. ತಥಾಚ - ಆ ಅಧಿಕರಣದಲ್ಲೂ ನಾಮಾತ್ಮಕಶಬ್ದದ ಸಮನ್ವಯದ ಮೂಲಕ ಪ್ರಾಧಾನ್ಯೇನ ಅಂದರೆ ಅದರ ಫಲವಾಗಿ ಅನೇಕ ಲಿಂಗಗಳ ಸಮನ್ವಯ-ವನ್ನೇ ಮಾಡುವುದರಿಂದ ಅವ್ಯಾಪ್ತಿ ಇಲ್ಲ ಎಂದು ಭಾವ.

(೧) 'ಧರ್ಮಿಯು ಇತರ ಪದಾರ್ಥಗಳಿಗಿಂತ ಭಿನ್ನವಾಗಿದೆ' ಎಂಬ ಅನುಮಿತಿಗೆ ಕಾರಣವಾದ ಅಸಾಧಾರಣಧರ್ಮ.

**ಭಾ– 'ಬ್ರಹ್ಮ ತತಮಮ್' ಇತಿ ಸರ್ವಗತತ್ವಮುಕ್ತಂ ವಿಷ್ಣೋಃ। ತಚ್ಚ 'ತಸ್ಯೈತಸ್ಯಾಸಾವಾದಿತ್ಯೋ ರಸಃ' ಇತ್ಯಾದಿನಾಽಽದಿತ್ಯಸ್ಯ ಪ್ರತೀಯತೇ।**

'ಬ್ರಹ್ಮ ತತಮಮ್' ಎಂಬ ಶ್ರುತಿಯಲ್ಲಿ ವಿಷ್ಣುವಿಗೆ ಸರ್ವಗತತ್ವವನ್ನು ಹೇಳಿದೆ. ಆ ಸರ್ವಗತತ್ವವಾದರೋ 'ತಸ್ಯೈತಸ್ಯಾಸಾವಾದಿತ್ಯೋ ರಸಃ' ಇತ್ಯಾದಿ ಶ್ರುತಿಯಿಂದ ಆದಿತ್ಯನಿಗೆ ಇರುವುದೆಂದು ತಿಳಿದು ಬರುವುದು.

(ಭಾ.ದೀ.) ಯದ್ಯಪಿ ಪೂರ್ವಪಾದಾಂತ್ಯಾಧಿಕರಣೇನ ಏತತ್ ಪಾದಸ್ಯ ನಾವಾಂತರಸಂಗತ್ಯಪೇಕ್ಷಾ ಇತಿ ನ ಸಾ ಪ್ರದರ್ಶನೀಯಾ । ತಥಾಪಿ ಇಹ ತಸ್ಯಾಃ ಸಂಭವಾತ್ ಫಲಸ್ಯಾವಶ್ಯವಕ್ತವ್ಯತ್ವಾಚ್ಚ ಸಾ ಪ್ರದರ್ಶ್ಯತ ಇತ್ಯಾಶಯೇನ ಪೂರ್ವಾಧಿ-ಕರಣಸಂಗತಿಂ ವಿಷಯಾದಿಕಂ ಚ ದರ್ಶಯತಿ – **ಬ್ರಹ್ಮೇತಿ** ॥ ಇತಿ ವಾಕ್ಯೇ ವಿಷ್ಣೋಃ ನಿರವಧಿಕಸರ್ವಗತತ್ವಮುಕ್ತಮ್ ಇತ್ಯರ್ಥಃ । ತತಃ ಕಿಮ್? ಇತ್ಯತ ಆಹ – **ತಚ್ಚೇತಿ** ॥ **'ತತ್'** ಇತ್ಯಾವರ್ತತೇ, **'ಉಕ್ತಮ್'** ಇತಿ ಚ ವರ್ತತೇ । ತಥಾ ಚ 'ಬ್ರಹ್ಮ ತತಮಮ್' (ಐ.ಆ.೨.೪.೩) ಇತಿ ಯತ್ ತತಮತ್ವಮುಕ್ತಂ ಪ್ರಾಣಾಖ್ಯವಿಷ್ಣೋಃ ತತ್ತದೇಕದೇಶ-ಭೂತಂ ಸರ್ವಗತತ್ವಾಂತರ್ಗತಂ ಸರ್ವಪ್ರಾಣಿಹೃದಯಸ್ಥತ್ವಂ ತತ್ರೈವ ಐತರೇಯಕೇ 'ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತ ಏತಮಗ್ನಾವಧ್ವರ್ಯವ ಏತಂ ಮಹಾವ್ರತೇ ಛಂದೋಗಾಃ ಏತಮಸ್ಯಾಮೇತಂ ದಿವ್ಯೇತಂ ವಾಯಾವೇತಮಾಕಾಶ

ಏತಮಪ್ಸು ಏತಮೋಷಧೀಷ್ವೇತಂ ವನಸ್ಪತಿಷ್ವೇತಂ ಚಂದ್ರಮಸ್ಯೇತಂ ನಕ್ಷತ್ರೇಷ್ವೇತಂ ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ' (ಐ.ಆ.೨.೪.೪) ಇತ್ಯಾದೌ 'ಏತಮ್' ಇತ್ಯುತ್ತರವಾಕ್ಯೇನ ಉಕ್ತಮ್ ಇತ್ಯರ್ಥಃ।

ಯದ್ಯಪಿ ಹಿಂದಿನ ಪಾದದ ಕೊನೆಯ ಅಧಿಕರಣದಿಂದ ಈ ಪಾದದ ಮೊದಲನೆಯ ಅಧಿಕರಣಕ್ಕೆ ಅವಾಂತರಸಂಗತಿ ಇರುವ ಆವಶ್ಯಕತೆ ಇಲ್ಲವಾದ್ದರಿಂದ ಇಲ್ಲಿ ಆ ಸಂಗತಿಯನ್ನು ತೋರಿಸಬೇಕಾದದ್ದಿಲ್ಲ. ಆದರೂ ಈ ಅಧಿಕರಣಕ್ಕೆ ಆ ಸಂಗತಿಯೂ ಇರುವ ಕಾರಣದಿಂದ ಮತ್ತು ಈ ಅಧಿಕರಣಸಿದ್ಧಾಂತದ ಫಲವನ್ನು ಅವಶ್ಯವಾಗಿ ಹೇಳಬೇಕಾದ್ದರಿಂದ ಆ ಸಂಗತಿಯನ್ನು ಇಲ್ಲಿ ತೋರಿಸಲಾಗುವುದು ಎಂಬ ಅಭಿಪ್ರಾಯದಿಂದ ಈ ಅಧಿಕರಣಕ್ಕಿರುವ ಪೂರ್ವಾಧಿಕರಣಸಂಗತಿಯನ್ನು ಮತ್ತು ಈ ಅಧಿಕರಣದ ವಿಷಯ ಮೊದಲಾದವುಗಳನ್ನು ಬ್ರಹ್ಮ ಇತ್ಯಾದಿವಾಕ್ಯದಿಂದ ಭಾಷ್ಯಕಾರರು ತೋರಿಸುತ್ತಿದ್ದಾರೆ. 'ಬ್ರಹ್ಮ ತತಮಮ್' ಎಂಬ ವಾಕ್ಯದಲ್ಲಿ ವಿಷ್ಣುವಿಗೆ ನಿರವಧಿಕವಾದ ಸರ್ವಗತತ್ವವನ್ನು ಹೇಳಿದೆ ಎಂದು ಅರ್ಥ. ಮುಂದೇನು ಎಂಬ ಪ್ರಶ್ನೆಗೆ ಉತ್ತರವಾಗಿ 'ತಚ್ಚ ಎಂಬ ವಾಕ್ಯ ಹೊರಟಿದೆ. ತತ್ ಎಂಬ ಪದವು ಆವೃತ್ತಿಯನ್ನು ಪಡೆಯುವುದು. 'ಉಕ್ತಮ್' ಎಂಬ ಪದವು ಅನುವೃತ್ತಿಯನ್ನು ಹೊಂದುವುದು. ತಥಾಚ – ಬ್ರಹ್ಮ ತತಮಮ್ ಎಂಬುದಾಗಿ ಯಾವ ತತಮತ್ವವು ಪ್ರಾಣಾಖ್ಯವಿಷ್ಣುವಿಗೆ ಹೇಳಲ್ಪಟ್ಟಿದೆಯೋ ಆದರ ಏಕದೇಶವಾದ, ಸರ್ವಗತತ್ವದಲ್ಲಿ ಅಂತರ್ಗತವಾಗುವ ಸರ್ವಪ್ರಾಣಿ-ಹೃದಯಸ್ಥತ್ವವು ಅದೇ ಐತರೇಯೋಪನಿಷತ್ತಿನಲ್ಲಿ ''ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತ ಏತಮಗ್ನಾವಧ್ವರ್ಯವ ಏತಂ ಮಹಾವ್ರತೇ ಛಂದೋಗಾಃ ಏತಮಸ್ಯಾಮೇತಂ ದಿವ್ಯೇತಂ ವಾಯಾವೇತಮಾಕಾಶ ಏತಮಪ್ಸು ಏತಮೋಷಧೀಷ್ವೇತಂ ವನಸ್ಪತಿಷ್ವೇತಂ ಚಂದ್ರಮಸ್ಯೇತಂ ನಕ್ಷತ್ರೇಷ್ವೇತಂ ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ'' ಇತ್ಯಾದಿಯಾದ 'ಏತಮ್' ಎಂಬ ಮುಂದಿನ ವಾಕ್ಯದಿಂದ ಹೇಳಲ್ಪಟ್ಟಿದೆ ಎಂದು ಅರ್ಥ.

(ಭಾ.ದೀ.) ತತೋಽಪಿ ಕಿಮ್? ಇತ್ಯತಃ ಸಯುಕ್ತಿಕಂ ಪೂರ್ವಪಕ್ಷಮಾಹ – **ತಚ್ಚೇತಿ ॥** ಚೋಽವಧಾರಣೇ । ಆದಿಶಬ್ದೇನ 'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ

ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್ ತಸ್ಮಾತ್ ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ .... ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ... ಏತಂ ಸರ್ವೇಷು ಭೂತೇಷು' (ಐ. ೩.೨.೩) ಇತ್ಯಾದಿ ವಾಕ್ಯಂ ಗೃಹ್ಯತೇ । ಅತ್ರ 'ತಸ್ಯ' ಇತ್ಯಾದೇರುಪನ್ಯಾಸಃ 'ಏತಮ್' ಇತಿ ಪರಾಮರ್ಶನೀಯಸಮರ್ಪಕತಯಾऽऽವಶ್ಯಕತ್ವಾತ್ ಪೂರ್ವಪಕ್ಷಯುಕ್ತಿಪ್ರದರ್ಶನಾರ್ಥಂ ಚ ಕೃತಃ । ತಥಾಚ – ಯತಃ 'ಏತಮ್' ಇತ್ಯುತ್ತರವಾಕ್ಯೇನೋಕ್ತಮ್ ಸರ್ವಪ್ರಾಣಿಹೃದಯಸ್ಥತ್ವಂ 'ತಸ್ಯ' ಇತ್ಯಾದಿನಾ ಪೂರ್ವವಾಕ್ಯೇನ ಪ್ರಕೃತತ್ವಾತ್ ತಸ್ಯ ಆದಿತ್ಯಸ್ಯೈವ ಪ್ರತೀಯತೇ ಅತಃ ತಸ್ಯೈವ ತತ್ಪೂರ್ವೋಕ್ತ ತತಮತ್ವಮಪಿ ಭವೇತ್ । ನ ವಿಷ್ಣೋಃ – ಇತಿ ಯೋಜನಾ ।

ಅದರಿಂದೇನು ಎಂಬ ಪ್ರಶ್ನೆಗೆ ಉತ್ತರವಾಗಿ ಯುಕ್ತಿಸಹಿತವಾಗಿ ಪೂರ್ವಪಕ್ಷವನ್ನು 'ತಚ್ಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಚಕಾರವು ಅವಧಾರಣಾರ್ಥಕವಾಗಿದೆ. ಇತ್ಯಾದಿನಾ ಎಂಬಲ್ಲಿರುವ ಆದಿಶಬ್ದದಿಂದ ''ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್ ತಸ್ಮಾತ್ ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ .... ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ... ಏತಂ ಸರ್ವೇಷು ಭೂತೇಷು'' ಇತ್ಯಾದಿ ವಾಕ್ಯವು ಗ್ರಹಿಸಲ್ಪಡುವುದು. ಇಲ್ಲಿ 'ತಸ್ಯೈತಸ್ಯ' ಎಂಬ ವಾಕ್ಯವನ್ನು 'ಏತಮ್' ಎಂಬ ಶಬ್ದದಿಂದ ಪರಾಮರ್ಶಿಸಬೇಕಾದ ವಿಷಯವನ್ನು ತಿಳಿಸುವ ಸಲುವಾಗಿ ಆವಶ್ಯಕವಾದದ್ದರಿಂದ ಹಾಗೂ ಪೂರ್ವಪಕ್ಷಯುಕ್ತಿಯನ್ನು ಪ್ರದರ್ಶಿಸುವ ಸಲುವಾಗಿ ಉದಾಹರಿಸಲಾಗಿದೆ. ತಥಾಚ – ಯಾವ ಕಾರಣದಿಂದ ಏತಮ್ ಎಂಬ ಮುಂದಿನ ವಾಕ್ಯದಿಂದ ಹೇಳಿದ ಸರ್ವಪ್ರಾಣಿಹೃದಯಸ್ಥತ್ವವು 'ತಸ್ಯ' ಇತ್ಯಾದಿ ಪೂರ್ವವಾಕ್ಯದಿಂದ ಪ್ರಸ್ತುತನಾದ ಕಾರಣ 'ತಸ್ಯ' ಎಂದರೆ ಆದಿತ್ಯನಿಗೇ ಇರುವುದೆಂದು ತಿಳಿದುಬರುವುದೋ, ಆದ್ದರಿಂದಲೇ ತತ್ - ಹಿಂದೆ ಹೇಳಲ್ಪಟ್ಟ ತತಮತ್ವವೂ ಅವನಿಗೇ ಇರಬೇಕಾಗುವುದು. ವಿಷ್ಣುವಿಗಲ್ಲ ಎಂದು ಯೋಜನೆ.

(ಭಾ.ದೀ.)ಅತ್ರ ಪೂರ್ವಪಕ್ಷೇ ತತಮತ್ವಂ ಸಂಕುಚಿತಂ ಸರ್ವಭೂತಗತತ್ವರೂಪಂ ವಿವಕ್ಷಿತಮ್ । ನ ಚೈವಂ ಸಿದ್ಧಾಂತ್ಯಭಿಮತನಿರವಧಿಕಸರ್ವಗತತ್ವಾಕ್ಷೇಪಾಪ್ರಾಪ್ತಿಃ ಇತಿ ವಾಚ್ಯಮ್ । ಪೂರ್ವಪಕ್ಷೇ 'ಏತಮೇವ' ಇತ್ಯವಧಾರಣೇನ ವಿಷ್ಣೋರನ್ಯಸ್ಯೈವ

**ಸರ್ವಭೂತಗತತ್ವಾದ್ ವಿಷ್ಣೋರ್ಭೂತಾದನ್ಯತ್ರ ಸತ್ತ್ವೇಽಪಿ ಸರ್ವಭೂತಗತತ್ವಾ-ಪ್ರಾಪ್ತ್ಯಾ ಆಕ್ಷೇಪೋಪಪತ್ತೇಃ।**

**ಅನೇನ ಪೂರ್ವೋಕ್ತತತಮತ್ವಾಂತರ್ಗತಸರ್ವಭೂತಗತತ್ವಸ್ಯ ವಿಷ್ಣೋರನ್ಯತ್ರ ಆಕ್ಷೇಪಾತ್ ತೇನ ಅಸ್ಯಾಕ್ಷೇಪಿಕೀಸಂಗತಿಃ, ವಿಷಯಸಂಶಯೌ, ವಿಷ್ಣೋರನ್ಯಸ್ಯೈವ ಸರ್ವಪ್ರಾಣಿಗತತ್ವಮಿತಿ ಸಯುಕ್ತಿಕಪೂರ್ವಪಕ್ಷಶ್ಚ ದರ್ಶಿತೋ ಭವತಿ॥**

ಇಲ್ಲಿ, ಪೂರ್ವಪಕ್ಷದಲ್ಲಿ ತತಮತ್ವವೆಂದರೆ ಸರ್ವಪ್ರಾಣಿಗತತ್ವರೂಪವಾದ ಸಂಕುಚಿತವಾದ ಸರ್ವಗತತ್ವವೆಂದು ವಿವಕ್ಷಿತವಾಗಿದೆ. ಹಾಗಿದ್ದ ಪಕ್ಷದಲ್ಲಿ ಸಿದ್ಧಾಂತಿಗೆ ಅಭಿಮತವಾದ ನಿರವಧಿಕಸರ್ವಗತತ್ವದ ಆಕ್ಷೇಪವು ಇಲ್ಲಿ ಪ್ರಾಪ್ತವಾಗುವುದಿಲ್ಲ ಎಂದರೆ ಅದು ಸರಿಯಲ್ಲ. ಪೂರ್ವಪಕ್ಷದಲ್ಲಿ 'ಏತಮೇವ' ಎಂಬ ಅವಧಾರಣದಿಂದ ವಿಷ್ಣು-ಭಿನ್ನನಿಗೆ ಸರ್ವಪ್ರಾಣಿಗತತ್ವವು ಇರುವುದರಿಂದ ವಿಷ್ಣುವಿಗೆ ಪ್ರಾಣಿಗಳನ್ನು ಬಿಟ್ಟು ಉಳಿದ ಸ್ಥಳಗಳಲ್ಲಿ ಅಸ್ತಿತ್ವವು ಇರುವುದಾದರೂ ಸರ್ವಭೂತಗತತ್ವವು ಇಲ್ಲವಾಗುವುದರಿಂದ ಪೂರ್ವಪಕ್ಷದ ಆಕ್ಷೇಪವು ಯುಕ್ತವಾಗುವುದು.

ಇದರಿಂದ, ಹಿಂದೆ ಹೇಳಲಾದ ತತಮತ್ವದಲ್ಲಿ ಅಂತರ್ಗತವಾಗಿರುವ ಸರ್ವ-ಭೂತಗತತ್ವವು ವಿಷ್ಣುಭಿನ್ನನಿಗೆ ಇರುವುದು ಹೊರತು ವಿಷ್ಣುವಿಗಲ್ಲ ಎಂದು ಆಕ್ಷೇಪಿಸಿ-ರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿ; ಮತ್ತು ಈ ಅಧಿಕರಣದ ವಿಷಯ-ಸಂಶಯಗಳು ಹಾಗೆಯೇ ವಿಷ್ಣುಭಿನ್ನನಿಗೆ ಸರ್ವಪ್ರಾಣಿಗತತ್ವ-ವಿರುವುದೆಂದು ಯುಕ್ತಿಸಹಿತವಾದ ಪೂರ್ವಪಕ್ಷವು ಪ್ರದರ್ಶಿತವಾಗುವುದು.

(ಭಾ.ದೀ.) ಸಿದ್ಧಾಂತೇ ಶ್ರುತ್ಯರ್ಥಸ್ತು – **ತಸ್ಯ** – ಪ್ರಕೃತಸ್ಯ, **ಏತಸ್ಯ**– ಸಂವತ್ಸರ-ನಾಮಕಸ್ಯ ಚತುರ್ಮುಖಸ್ಯ ಸರ್ವಾದಿತ್ವ-ತತಮತ್ವ-ನಿಯಾಮಕತ್ವನಿಮಿತ್ತೈರಾದಿತ್ಯ-ನಾಮಾ ಪ್ರದ್ಯುಮ್ನೋ ರಸಃ । **ಸ ಯಶ್ಚಾಯಂ** ಪುರುಷದೇಹಗತಃ ಪ್ರಾಕೃತದೇಹ-ವರ್ಜನಾತ್ ಅಶರೀರಃ, **ಪ್ರಜ್ಞಾತ್ಮಾ** – ಜ್ಞಾನರೂಪೋಽನಿರುದ್ಧಃ, ಯಶ್ಚಾಸಾವಾದಿತ್ಯೇ ಸ್ಥಿತಃ ಪ್ರದ್ಯುಮ್ನ ಏತತ್ ಸ್ಥಾನದ್ವಯಗತಂ ರೂಪಮೇಕಮ್ ಇತಿ ವಿದ್ಯಾತ್ । ತಸ್ಮಾತ್ ಪುರುಷಾದಿತ್ಯಗತಾನಿರುದ್ಧಪ್ರದ್ಯುಮ್ನಯೋರೈಕ್ಯಾತ್ ಆದಿತ್ಯಃ **'ಪುರುಷಂ ಪುರುಷಂ**

**ಪ್ರತಿ**' - ಪ್ರತಿಪುರುಷಂ, **ಭವತಿ** - ಅಭಿಮುಖೋ ಭವತಿ । 'ಪ್ರತಿಗೃಹಂ ಕೂಪ ಇತಿವತ್‌ಸರ್ವಪುರುಷಗತೋ ಭವತೀತಿ ಚ' ಇತಿ । **ಜಗತಃ** - ಜಂಗಮಸ್ಯ , **ತಸ್ಥುಷಃ**- ಸ್ಥಾವರಸ್ಯ , **ಆತ್ಮಾ** - ಆದಾನಾದಿಕರ್ತಾ, **ಸೂರ್ಯಃ** - ಸೂರಿಪ್ರಾಪ್ಯೋ ವಿಷ್ಣುರ್ದಿವಂ **ಪೃಥಿವೀಮಂತರಿಕ್ಷಂ ಚ 'ಆಽಪ್ರಾಃ'** ಆ ಸಮಂತಾತ್ ಆಪೂರಯತ್ ಇತ್ಯರ್ಥಃ । ಏತಮ್ ಇತ್ಯಾದೀನಾಂ ಸಪ್ತಮ್ಯಂತಪದೈಃ ಪ್ರತ್ಯೇಕಂ ಸಂಬಂಧಃ । ತಥಾಚ ಬಹ್ವೃಚಾಃ - ಋಗ್ವೇದಿನಃ, **ಏತಂ ಹ್ಯೇವ** - ಏತಮೇವ ಪುರುಷಾದಿತ್ಯಗತಮೇವ ಹಿ ವಿಷ್ಣುಂ, **ಮಹತ್ಯುಕ್ಥೇ**- ಮಹದುಕ್ಥನಾಮಕಬೃಹತೀಸಹಸ್ರೇ ತದ್ದೇವತಾವಿಷಯೇ ತದ್ದೇವತಾ-ಮಿತಿ ಯಾವತ್, **ಮೀಮಾಂಸಂತೇ** - ಜಾನಂತಿ । **ಅಧ್ವರ್ಯವಃ** - ಯಜುರ್ವೇದಿನಃ, **ಅಗ್ನೌ** - ಚಯನಸಾಧನೇಷ್ಟಕಾದೇವತಾವಿಷಯೇ ತದ್ದೇವತಾಂ ಮೀಮಾಂಸಂತೇ । **ಛಂದೋಗಾಃ** - ಸಾಮವೇದಿನಃ **ಮಹಾವ್ರತೇ** - ತದಾಖ್ಯಕರ್ಮಾಂಗಭೂತೇ ದೇವತಾಸ್ತೋತ್ರೇ ಮೀಮಾಂಸಂತೇ । ಅಸ್ಯಾಂ ಪೃಥಿವ್ಯಾಮ್ ಏತಂ ದಿವಿ ಅಂತರಿಕ್ಷೇ ವಾಯ್ವಾದೌ ಚೈವಂ ಏತಮೇವ ಸರ್ವೇಷು ಭೂತೇಷು ಸರ್ವಪ್ರಾಣಿಷ್ವಂತ-ರ್ಯಾಮಿತ್ವಾರ್ಯಾಪ್ತಮಾಚಕ್ಷತೇ ವಿದ್ವಾಂಸ ಇತ್ಯರ್ಥಃ । 'ಸರ್ವೇಷು' ಇತ್ಯೇವ ಪೂರ್ತೇಃ ಪುನಃ 'ಭೂತೇಷು' ಇತ್ಯುಕ್ತಿರತ್ರ ಭೂತವೃತ್ತಿತ್ವಮಾತ್ರಂ ಪ್ರತಿಪಾದ್ಯತಯಾ ಅಭಿ-ಪ್ರೇತಮ್ ಇತಿ ಜ್ಞಾಪಯಿತುಮ್ । 'ಏತಂ ಸರ್ವಭೂತಗತಮೇವ ವಿಷ್ಣುಂ ಗುಣ-ಪೂರ್ಣತ್ವಾದ್ ವ್ಯಾಪ್ತತ್ವಾಚ್ಚ ಏತಂ ಮುಖ್ಯತೋ ಬ್ರಹ್ಮ ಇತ್ಯಾಚಕ್ಷತೇ' ಇತಿ ವಾಕ್ಯ-ಶೇಷಾರ್ಥಃ।

ನಸ್ಥಾನಾಧಿಕರಣಟೀಕಾಯಾಂ(೩-೩-೮) ತು – ಸರ್ವೇಷು ಭೂತೇಷು ಚಕ್ಷು-ರಾದಿಸ್ಥಾನೇಷು ಏತಮ್ ಏಕಮೇವ ಬ್ರಹ್ಮ ಗುಣಪೂರ್ಣಮ್ ಆಚಕ್ಷತೇ ಇತಿ ವ್ಯಾಖ್ಯಾತಮ್ । ಪೂರ್ವಪಕ್ಷೀ ತು 'ತಸ್ಯೈತಸ್ಯ ಪ್ರಕೃತಪ್ರಸಿದ್ಧಸಂವತ್ಸರಸ್ಯಾಸೌ ಪ್ರಸಿದ್ಧ ಆದಿತ್ಯಃ ಸೂರ್ಯೋ ರಸಃ ಸಾರಭೂತೋಽಧಿಪತಿಃ' ಇತ್ಯರ್ಥಂ ಮನ್ಯತೇ ॥

ಸಿದ್ಧಾಂತದಲ್ಲಿ 'ತಸ್ಯೈತಸ್ಯ' ಇತ್ಯಾದಿ ಶ್ರುತ್ಯರ್ಥವು ಹೀಗಿರುವುದು – ತಸ್ಯ-ಪ್ರಕೃತನಾದ, ಏತಸ್ಯ- ಸಂವತ್ಸರನಾಮಕನಾದ ಚತುರ್ಮುಖನಿಗೆ, ಅಸೌ ಆದಿತ್ಯಃ -

ಸರ್ವಾದಿತ್ವ ಎಲ್ಲಕ್ಕೂ ಆದಿಯಾಗಿರುವುದು, ತತಮತ್ವ ಅಂದರೆ ನಿರವಧಿಕವ್ಯಾಪ್ತಿಯನ್ನು ಹೊಂದಿರುವುದು, ಮತ್ತು ನಿಯಾಮಕತ್ವ ಈ ನಿಮಿತ್ತಗಳಿಂದ ಆದಿತ್ಯ ಎಂದು ಹೆಸರುಳ್ಳ ಪ್ರದ್ಯುಮ್ನರೂಪೀ ಭಗವಂತನು ರಸಃ - ಸಾರಭೂತನಾಗಿರುವನು. 'ಸ ಯಶ್ಚಾಯಂ' - ಯಾವ ಈ ಪುರುಷದೇಹದಲ್ಲಿರುವ, ಅಶರೀರಃ - ಪ್ರಾಕೃತದೇಹರಹಿತನಾದ್ದರಿಂದ ಅಶರೀರನೆಂದೆನಿಸುವ, ಪ್ರಜ್ಞಾತ್ಮಾ - ಜ್ಞಾನಸ್ವರೂಪನಾದ ಅನಿರುದ್ಧನಿರುವನೋ, ಮತ್ತು ಯಶ್ಚಾಸಾವಾದಿತ್ಯೇ ಸ್ಥಿತಃ - ಮತ್ತು ಆದಿತ್ಯನಲ್ಲಿರುವ ಪ್ರದ್ಯುಮ್ನನಿರುವನೋ, ಏಕಂ ಏತತ್ ಇತಿ ವಿದ್ಯಾತ್ - ಈ ಎರಡೂ ಸ್ಥಾನಗಳಲ್ಲಿರುವ ರೂಪಗಳು ಒಂದೇ ಎಂದು ತಿಳಿಯಬೇಕು. ಆದ್ದರಿಂದ ಅಂದರೆ ಪುರುಷ ಮತ್ತು ಆದಿತ್ಯನಲ್ಲಿರುವ ಅನಿರುದ್ಧಪ್ರದ್ಯುಮ್ನರು ಒಂದೇ ಆಗಿರುವುದರಿಂದ ಆದಿತ್ಯನು ಪುರುಷಂ ಪುರುಷಂ ಪ್ರತಿ - ಪ್ರತಿಪುರುಷನನ್ನು ಕುರಿತು, ಭವತಿ - ಅಭಿಮುಖನಾಗಿರುವನು. ಪ್ರತಿಗೃಹಂ ಕೂಪಃ - ಎಂದು ಹೇಳಿದರೆ ಹೇಗೆ ಎಲ್ಲ ಗೃಹಗಳಲ್ಲೂ ಕೂಪವಿ(ಭಾವಿಯಿ)ರುವುದು ಎಂದು ಅರ್ಥವಾಗುವುದೋ ಹಾಗೆ, ಪುರುಷಂ ಪುರುಷಂ ಪ್ರತಿ ಆದಿತ್ಯಃ ಎಂದು ಹೇಳಿದರೆ ಆದಿತ್ಯನಲ್ಲಿರುವ ಪರಮಾತ್ಮನು ಸರ್ವಪುರುಷರಲ್ಲೂ ಇರುವನು ಎಂದು ಹೇಳಿದಂತಾಗುವುದು. ಜಗತಃ - ಚಲನಶೀಲವಾದ, ತಸ್ಥುಷಃ - ಚಲನೆಯಿಲ್ಲದೇ ಸ್ಥಿರವಾಗಿರುವ, ಎಲ್ಲದಕ್ಕೂ ಆತ್ಮಾ - ಆದಾನಾದಿ ಕಾರಣನಾದ ಪ್ರಯುಕ್ತ ಆತ್ಮಾ ಎಂದೆನಿಸುವ, ಸೂರ್ಯಃ – ಸೂರಿಗಳಿಂದ ಅಂದರೆ ಜ್ಞಾನಿಗಳಿಂದ ಹೊಂದಲ್ಪಡುವ ವಿಷ್ಣುವು, ದಿವಂ ಪೃಥಿವೀಂ ಅಂತರಿಕ್ಷಂ ಚ - ದ್ಯುಲೋಕ ಮತ್ತು ಪೃಥಿವೀ ಅಂತರಿಕ್ಷ-ಲೋಕಗಳನ್ನೂ ಕೂಡ, ಅಪ್ರಾಃ - ಆ ಸಮಂತಾತ್ – ಚೆನ್ನಾಗಿ ತುಂಬಿರುವನು ಎಂದು ಅರ್ಥ. 'ಏತಮ್' ಮೊದಲಾದ ಶಬ್ದಗಳಿಗೆ ಸಪ್ತಮ್ಯಂತವಾದ ಪದಗಳೊಂದಿಗೆ ಪ್ರತ್ಯೇಕವಾಗಿ ಸಂಬಂಧವಿರುವುದು. ತಥಾಚ - ಬಹ್ವೃಚಾಃ - ಋಗ್ವೇದಿಗಳು, 'ಏತಂ ಹ್ಯೇವ'– ಇದೇ ಪುರುಷ ಮತ್ತು ಆದಿತ್ಯರಲ್ಲಿರುವ ವಿಷ್ಣುವನ್ನು, ಮಹತ್ಯುಕ್ಥೇ - ಮಹದುಕ್ಥ ಎಂದು ಹೇಳಲ್ಪಡುವ ಬೃಹತೀಸಹಸ್ರದಲ್ಲಿ ಅಂದರೆ, ಅದರ ದೇವತಾ-ವಿಷಯದಲ್ಲಿ, ಅದರಿಂದ ಪ್ರತಿಪಾದ್ಯವಾದ ದೇವತೆಯೆಂದು ಭಾವ, ಮೀಮಾಂಸಂತೇ ತಿಳಿಯುವರು. ಅಧ್ವರ್ಯವಃ - ಯಜುರ್ವೇದಿಗಳು, ಅಗ್ನೌ - ಅಂದರೆ ಚಯನ-ಕರ್ಮಕ್ಕೆ ಸಾಧನವಾದ ಇಷ್ಟಕಾದೇವತಾ ವಿಷಯದಲ್ಲಿ - ಅಂದರೆ ಅದರ ದೇವತೆ-

ಯೆಂದು, ಮೀಮಾಂಸಂತೇ - ತಿಳಿಯುವರು. ಛಂದೋಗಾಃ - ಸಾಮವೇದಿಗಳು, ಮಹಾವ್ರತೇ - ಮಹಾವ್ರತವೆಂದು ಕರೆಯಲ್ಪಡುವ ಸ್ತೋತ್ರದ ಪ್ರತಿಪಾದ್ಯದೇವತೆ-ಯೆಂದು, ಮೀಮಾಂಸಂತೇ - ತಿಳಿಯುವರು. ಅಸ್ಯಾಂ - ಈ ಪೃಥಿವಿಯಲ್ಲಿ ಇರುವವನೆಂದು, ಏತಂ - ಇವನನ್ನು, ದಿವಿ ಅಂತರಿಕ್ಷೇ ವಾಯ್ವಾದೌ ಚ- ದ್ಯುಲೋಕ ಅಂತರಿಕ್ಷಲೋಕ ವಾಯ್ವಾದಿಗಳಲ್ಲೂ ಇರುವವನೆಂದು, ಏತಮೇವ - ಇವನನ್ನೇ, ಸರ್ವೇಷು ಭೂತೇಷು - ಸರ್ವಪ್ರಾಣಿಗಳ ಒಳಗೆ ವ್ಯಾಪ್ತನಾಗಿರುವನೆಂದು ಆಚಕ್ಷತೇ - ವಿದ್ವಾಂಸರು ಹೇಳುವರು ಎಂದು ಅರ್ಥ. 'ಸರ್ವೇಷು' ಎಂಬ ಪದದಿಂದಲೇ ಪೂರ್ಣಾರ್ಥವು ಲಭಿಸುವುದಾದರೂ, ಪುನಃ 'ಭೂತೇಷು' ಎಂದು ಹೇಳಿರುವುದು ಈ ವಾಕ್ಯದಲ್ಲಿ ಕೇವಲ ಭೂತವೃತ್ತಿತ್ವವು ಪ್ರತಿಪಾದ್ಯವಾಗಿದೆ ಎಂಬ ಅಭಿಪ್ರಾಯವಿದೆ ಎಂದು ತಿಳಿಸಲು. ಏತಮ್ - ಈ ಸರ್ವಭೂತಗತನಾದ ವಿಷ್ಣುವನ್ನು ಗುಣಪೂರ್ಣ-ನಾದ ಕಾರಣ, ಹಾಗೂ ವ್ಯಾಪ್ತನಾದ ಕಾರಣ, ಮುಖ್ಯತಃ ಬ್ರಹ್ಮನೆಂದು ಹೇಳುವರು ಎಂದು ವಾಕ್ಯಶೇಷದ ಅರ್ಥವಾಗಿದೆ.

ನಸ್ಥಾನಾಧಿಕರಣ ಟೀಕೆಯಲ್ಲಾದರೋ 'ಎಲ್ಲ ಪ್ರಾಣಿಗಳಲ್ಲಿ ಚಕ್ಷುರಾದಿಸ್ಥಾನಗಳಲ್ಲಿ ಇವನೊಬ್ಬನನ್ನೇ ಬ್ರಹ್ಮ ಅಂದರೆ ಗುಣಪೂರ್ಣನೆಂದು ಹೇಳುವರು' ಎಂದು ವ್ಯಾಖ್ಯಾನ ಮಾಡಲಾಗಿದೆ. ಪೂರ್ವಪಕ್ಷಿಯಾದರೋ, ತಸ್ಯ ಏತಸ್ಯ ಅಂದರೆ ಪ್ರಕೃತವಾದ ಪ್ರಸಿದ್ಧ ಸಂವತ್ಸರರೂಪವಾದ ಕಾಲಕ್ಕೆ, ಅಸೌ - ಪ್ರಸಿದ್ಧನಾದ ಆದಿತ್ಯನು ಅಂದರೆ ಸೂರ್ಯನು ರಸಃ - ಸಾರಭೂತನು ಅಂದರೆ ಅಧಿಪತಿಯಾಗಿರುವನು ಎಂದು ಈ ವಾಕ್ಯದ ಅರ್ಥ-ವೆಂದು ತಿಳಿಯುವನು.

ಭಾ– ಅತೋಽಬ್ರವೀತ್ ।

॥ ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ ॥ ೧ ॥

ಆದ್ದರಿಂದ ಈ ಪೂರ್ವಪಕ್ಷದ ಪರಿಹಾರಕ್ಕಾಗಿ ಸೂತ್ರಕಾರರು 'ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ' ಎಂದು ಹೇಳುತ್ತಿದ್ದಾರೆ.

(ಭಾ.ದೀ.) ಅಥ ಸಿದ್ಧಾಂತಯತ್ ಸೂತ್ರಮವತಾರಯತಿ – **ಅತ ಇತಿ** ॥ ಇತಿ

ಸಂಗತಿಸಂಭವಾದಾಕ್ಷೇಪಸದ್ಭಾವಾಚ್ಚ ಅತಃ ತತ್ಪರಿಹಾರಾಯ ಉತ್ತರಮಬ್ರವೀದ್ ಬಾದರಾಯಣ ಇತ್ಯರ್ಥಃ। ತದೇವ ಸೂತ್ರಂ ಪಠತಿ – **ಸರ್ವತ್ರೇತಿ ॥**

ಅನಂತರ ಅತಃ ಎಂಬ ವಾಕ್ಯದಿಂದ ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅವತಾರಿಕೆಯನ್ನು ನೀಡುತ್ತಿದ್ದಾರೆ. ಹೀಗೆ ಸಂಗತಿ ಇರುವುದರಿಂದ ಮತ್ತು ಆಕ್ಷೇಪ ಇರುವುದರಿಂದ, ಅತಃ - ಈ ಆಕ್ಷೇಪದ ಪರಿಹಾರಕ್ಕಾಗಿ ಬಾದರಾಯಣರು ಉತ್ತರವನ್ನು ಹೇಳಿದರೆಂದು ಅರ್ಥ. ಆ ಸೂತ್ರವನ್ನೇ 'ಸರ್ವತ್ರ' ಎಂಬುದಾಗಿ ಭಾಷ್ಯಕಾರರು ಪಠಿಸುತ್ತಿದ್ದಾರೆ.

ಭಾ– 'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ' (ಐ.ಆ.೩-೨-೪)ಇತ್ಯಾದಿನಾ ಸರ್ವತ್ರೋಚ್ಯಮಾನೋ ನಾರಾಯಣ ಏವ।

'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ' ಇತ್ಯಾದಿ ವಾಕ್ಯದಿಂದ ಸರ್ವ-ಪ್ರಾಣಿ ಹೃದಯಸ್ಥನೆಂದು ಹೇಳಲ್ಪಟ್ಟವನು ನಾರಾಯಣನೇ ಆಗಿದ್ದಾನೆ.

(ಭಾ.ದೀ.) ಅತ್ರ ಸಮನ್ವಯಸೂತ್ರಾತ್ 'ತತ್ತು' ಇತ್ಯಸ್ಯಾನುವೃತ್ತಿಂ ಲಿಂಗ-ವ್ಯತ್ಯಯಮ್ 'ಉಚ್ಯಮಾನಃ' ಇತ್ಯಧ್ಯಾಹಾರಂ ಚಾಭಿಪ್ರೇತ್ಯ ಪ್ರತಿಜ್ಞಾಂಶಂ ವ್ಯಾಚಷ್ಟೇ – **ಸ ಯಶ್ಚೇತಿ ॥** 'ವಾಕ್ಯೇನ' ಇತಿ ಶೇಷಃ। ಯದ್ಯಪಿ 'ತಸ್ಯೈತಸ್ಯಾಸೌ ಇತ್ಯಾದಿನಾ' ಇತಿ ವಕ್ತವ್ಯಮ್ । ಪೂರ್ವವಾಕ್ಯತ್ವಾತ್ । ತಥಾಽಪಿ ತಸ್ಯ ಪೂರ್ವಪಕ್ಷಯುಕ್ತಿಪ್ರದರ್ಶ-ನಾರ್ಥತ್ವೇನೋಪನ್ಯಸ್ತತ್ವಾತ್ ತದ್ ವಿಹಾಯ ಸಿದ್ಧಾಂತಯುಕ್ತಿಪ್ರದರ್ಶಕವಾಕ್ಯ-ಜ್ಞಾಪನಾಯ 'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಇತ್ಯಾದಿನಾ' ಇತ್ಯೇವ ಉಕ್ತಮ್ । ವಸ್ತುತಸ್ತು – ನ 'ತಸ್ಯೈತಸ್ಯಾಸೌ' ಇತ್ಯಸ್ಯೈವ 'ಸ ಯಶ್ಚ' ಇತ್ಯಸ್ಯ ಯುಕ್ತಿಪ್ರದರ್ಶನ-ಮಾತ್ರತಾತ್ಪರ್ಯೇಣೋಪನ್ಯಾಸಃ, ನಾಪಿ ವಿಷಯಮಾತ್ರಪ್ರದರ್ಶನತಾತ್ಪರ್ಯೇಣ । ಅಪಿ ತು ಪೂರ್ವಂ ವಿಷಯವಾಕ್ಯಸ್ಯಾನುದಾಹೃತತ್ವಾತ್ ತದರ್ಥತಯಾ ತದ್ಗತೈತಚ್ಛ-ಬ್ದಪರಾಮರ್ಶನೀಯಸಮರ್ಪಣಾರ್ಥಮನನ್ಯಸಾಧಾರಣಸ್ವತೋಽಶರೀರತ್ವಯುಕ್ತಿ-ಪ್ರದರ್ಶನಾರ್ಥಂ ಚ ಇತಿ ಧ್ಯೇಯಮ್ ।

'ಸರ್ವತ್ರ ಸರ್ವಪ್ರಾಣಿಹೃದಯೇಷ್ವಂತರ್ಗತತಯಾ ಉಚ್ಯಮಾನೋ ನಾರಾಯಣ ಏವ' ಇತಿ **ನಾರಾಯಣಶಬ್ದಪ್ರಯೋಗೇಣ** –

'ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥

ಇತಿ ವಾಕ್ಯಮಪಿ ಸಂಗೃಹೀತಂ ಭವತಿ । ತೇನ ಚ ಸೂತ್ರೇ ಸಂಕುಚಿತವೃತ್ತಿನಾ 'ಸರ್ವತ್ರ' ಇತ್ಯನೇನ ಸರ್ವಭೂತಹೃದ್ಗತತ್ವಸ್ಯೈವ ಅಭಿಪ್ರೇತತ್ವೇನಾನ್ಯತ್ರ ಬಹಿರ್ನೇತಿ ಪ್ರಾಪ್ತಶಂಕಾ ನಿರಸ್ತಾ ಭವತಿ ।

ಇಲ್ಲಿ ತತ್ತುಸಮನ್ವಯಾತ್ ಎಂಬ ಸೂತ್ರದಿಂದ 'ತತ್ ತು' ಎಂಬ ಪದಗಳ ಅನುವೃತ್ತಿ ಇರುವುದು ಆ ಪದಗಳಿಗೆ ಪುಲ್ಲಿಂಗರೂಪವಾದ ವ್ಯತ್ಯಾಸವಿರುವುದು ಮತ್ತು 'ಉಚ್ಯಮಾನಃ' ಎಂಬ ಪದದ ಅಧ್ಯಾಹಾರವಿರುವುದು ಎಂಬ ಅಭಿಪ್ರಾಯದಿಂದ 'ಸರ್ವತ್ರ' ಎಂಬ ಸೂತ್ರದಲ್ಲಿರುವ ಪ್ರತಿಜ್ಞಾಭಾಗವನ್ನು - 'ಸ ಯಶ್ಚ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ವಾಕ್ಯೇನ ಎಂಬ ಪದವು ಇಲ್ಲಿ ಶೇಷವಾಗಿದೆ. ಯದ್ಯಪಿ - ಇದಕ್ಕೂ ಪೂರ್ವವಾಕ್ಯವಾಗಿರುವುದರಿಂದ 'ತಸ್ಯ ಏತಸ್ಯಾಸೌ ಇತ್ಯಾದಿನಾ' ಎಂದು ಹೇಳಬೇಕಾಗಿತ್ತು. ತಥಾಪಿ - ಆ ವಾಕ್ಯವನ್ನು ಹಿಂದೆ ಪೂರ್ವಪಕ್ಷಯುಕ್ತಿಯ ಪ್ರದರ್ಶನ-ಕ್ಕಾಗಿ ಉದಾಹರಿಸಿದ್ದರಿಂದ ಅದನ್ನು ಬಿಟ್ಟು ಸಿದ್ಧಾಂತಯುಕ್ತಿಯನ್ನು ತೋರಿಸುವ ವಾಕ್ಯವನ್ನು ಜ್ಞಾಪಿಸಲು 'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಇತ್ಯಾದಿನಾ' ಎಂದೇ ಹೇಳಲಾಗಿದೆ. ವಸ್ತುತಸ್ತು- ಸ ಯಶ್ಚ ಎಂಬ ವಾಕ್ಯವನ್ನು ತಸ್ಯೈತಸ್ಯಾಸೌ ಎಂಬ ವಾಕ್ಯದಂತೆ ಕೇವಲ ಯುಕ್ತಿಪ್ರದರ್ಶನ ಮಾಡುವ ತಾತ್ಪರ್ಯದಿಂದ ಉದಾಹರಿಸಲಾಗಿಲ್ಲ. ಅಂತೆಯೇ ಕೇವಲ ಈ ಅಧಿಕರಣದ ವಿಷಯಪ್ರದರ್ಶನದ ತಾತ್ಪರ್ಯ-ದಿಂದಲೂ ಉದಾಹರಿಸಲಾಗಿಲ್ಲ. ಕಿಂತು - ಹಿಂದೆ ಈ ಅಧಿಕರಣದ ವಿಷಯವಾಕ್ಯವನ್ನು ಉದಾಹರಿಸದಿರುವುದರಿಂದ ಅದನ್ನು ಉದಾಹರಿಸಲು ಮತ್ತು ಆ ವಾಕ್ಯದಲ್ಲಿರುವ ಏತಚ್ಛಬ್ದದಿಂದ ಪರಾಮರ್ಶಿಸಬೇಕಾದ ವಿಷಯವನ್ನು ತಿಳಿಸಲು ಹಾಗೆಯೇ 'ಬೇರೆ ಯಾರಲ್ಲೂ ಇಲ್ಲದಿರುವ ಸ್ವತಃ ಅಶರೀರತ್ವ' ಎಂಬ ವಿಷ್ಣುವಿನ ಧರ್ಮವೆಂಬ ಸಿದ್ಧಾಂತ-ಯುಕ್ತಿಯನ್ನು ಪ್ರದರ್ಶಿಸುವ ಉದ್ದೇಶದಿಂದಲೂ 'ಸ ಯಶ್ಚಾಯಂ' ಎಂಬ ವಾಕ್ಯವನ್ನು ಇಲ್ಲಿ ಉದಾಹರಿಸಲಾಗಿದೆ ಎಂದು ತಿಳಿಯಬೇಕು.

'ಸರ್ವತ್ರ'- ಸರ್ವಪ್ರಾಣಿಗಳ ಹೃದಯದಲ್ಲಿ ಅಂತರ್ಗತನಾಗಿರುವವನೆಂದು ಹೇಳಲ್ಪಟ್ಟಿರುವವನು, ನಾರಾಯಣ ಏವ - ನಾರಾಯಣನೇ ಆಗಿದ್ದಾನೆ ಎಂದು ಭಾಷ್ಯದಲ್ಲಿ ನಾರಾಯಣಶಬ್ದ ಪ್ರಯೋಗದಿಂದ

'ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥

ಎಂಬ ವಾಕ್ಯವು ಸಂಗ್ರಹಿಸಲ್ಪಡುವುದು. ಆದರಿಂದ ಸೂತ್ರದಲ್ಲಿ ಸಂಕುಚಿತಾರ್ಥ-ವನ್ನು ಹೊಂದಿರುವ ಸರ್ವತ್ರ ಎಂಬ ಪದದಿಂದ ಸರ್ವಪ್ರಾಣಿಗಳ ಹೃದ್ಗತತ್ವವೇ ಅಭಿ-ಪ್ರೇತವಾಗಿರುವುದಿಂದ ನಾರಾಯಣನು ಬೇರೆಡೆಯಲ್ಲಿ ಬಾಹ್ಯದಲ್ಲಿ ಇಲ್ಲವೆಂದು ಹಿಂದೆ ಪ್ರಾಪ್ತವಾಗಿದ್ದ ಶಂಕೆಯು ನಿರಾಕೃತವಾಗುವುದು.

**ಭಾ– 'ತದೇವ ಬ್ರಹ್ಮ ಪರಮಂ ಕವೀನಾಮ್'।** (ಮಹಾನಾ.೧-೬);
**'ಪರಮಂ ಯೋ ಮಹದ್ ಬ್ರಹ್ಮ'।**(ವಿ.ಸ.ನಾ)

**'ವಾಸುದೇವಾತ್ಪರಃ ಕೋ ನು ಬ್ರಹ್ಮಶಬ್ದೋದಿತೋ ಭವೇತ್।**
**ಸ ಹಿ ಸರ್ವಗುಣೈಃ ಪೂರ್ಣಸ್ತದನ್ಯೇ ತೂಪಚಾರತಃ' ॥**

**ಇತಿ ತಸ್ಮಿನ್ನೇವ ಪ್ರಸಿದ್ಧಬ್ರಹ್ಮಶಬ್ದೋಪದೇಶಾತ್ ॥ ೧ ॥**

'ತದೇವ ಬ್ರಹ್ಮ ಪರಮಂ ಕವೀನಾಂ', 'ಪರಮಂ ಯೋ ಮಹದ್ಬ್ರಹ್ಮ', 'ವಾಸುದೇವಾತ್ಪರಃ ಕೋ ನು ಬ್ರಹ್ಮಶಬ್ದೋದಿತೋ ಭವೇತ್ । ಸ ಹಿ ಸರ್ವಗುಣೈಃ ಪೂರ್ಣಸ್ತದನ್ಯೇ ತೂಪಚಾರತಃ ॥' ಎಂದು ನಾರಾ-ಯಣನಲ್ಲೇ ಪ್ರಸಿದ್ಧವಾಗಿರುವ ಬ್ರಹ್ಮಶಬ್ದವು ಶ್ರುತವಾಗಿರುವುದರಿಂದ ಇಲ್ಲಿ ಉಕ್ತನಾಗಿರುವ ಸರ್ವಗತನು ವಿಷ್ಣುವೇ ಆಗಿದ್ದಾನೆ.

(ಭಾ.ದೀ.) ಹೇತ್ವಂಶಂ ವ್ಯಾಚಷ್ಟೇ – ತದೇವೇತಿ ॥ ವ್ಯಾಖ್ಯಾತಮೇತತ್ ಜಿಜ್ಞಾಸಾನಯೇ । ಈಶ್ವರಬ್ರಹ್ಮಣೋರಭೇದಬೋಧನಾರ್ಥಂ ಪ್ರವೃತ್ತಸ್ಯ 'ಪರಮಂ

ಯೋ ಮಹದ್‌ಬ್ರಹ್ಮ ಪರಮಂ ಯಃ ಪರಾಯಣಮ್' ಇತಿ ಭಾರತವಾಕ್ಯಸ್ಯ 'ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ ........ ನಾಮ್ನಾಮ್' ಇತ್ಯುಕ್ತರವಾಕ್ಯೇನಾನ್ವಯಃ।

'ವಾಸುದೇವಾತ್' ಇತ್ಯಪರಾ ಸ್ಮೃತಿಃ। 'ವಾಸುದೇವಾತ್' ಕೃಷ್ಣಾದನ್ಯಃ ಕೋ ವಾ ಬ್ರಹ್ಮಶಬ್ದಮುಖ್ಯವಾಚ್ಯೋ ಭವೇತ್, ನ ಕೋಽಪಿ। ಕಿಂತು ಸ ಏವ ಮುಖ್ಯವಾಚ್ಯಃ। ಕುತಃ? **ಹಿ** - ಯಸ್ಮಾತ್, **ಸಃ** - ವಾಸುದೇವಃ, **ಸರ್ವಗುಣೈಃ ಪೂರ್ಣಃ** ತದನ್ಯೇ ತು ಅಪೂರ್ಣಾಃ ತಸ್ಮಾತ್। ತರ್ಹಿ 'ಬ್ರಹ್ಮಾಣಿ ಜೀವಾಃ ಸರ್ವೇಽಪಿ' ಇತ್ಯಾದಿ ಕಥಮ್? ಇತ್ಯತ ಆಹ – **ತದನ್ಯ ಇತಿ** ॥ ವಾಸುದೇವಾದನ್ಯೇ ಜೀವಾಃ **ಉಪಚಾರತಃ** - ಅಮುಖ್ಯತ ಏವ ಬ್ರಹ್ಮಶಬ್ದೋದಿತಾಃ, ನ ತು ಮುಖ್ಯತ ಇತ್ಯರ್ಥಃ।

**ಇತೀತಿ** ॥ 'ವಾಕ್ಯೇಷು' ಇತಿ ಶೇಷಃ। ಅನೇನ 'ಸರ್ವತ್ರ' ಇತ್ಯಸ್ಯ ಹೇತಾವಪಿ ಅನ್ವಯೋ ದರ್ಶಿತಃ। ತಥಾ ಚ ಸರ್ವತ್ರೋದಾಹೃತವಾಕ್ಯೇಷು **ತಸ್ಮಿನ್ನೇವ** - ವಿಷ್ಣಾವೇವ, **ಪ್ರಸಿದ್ಧಸ್ಯ**- ರೂಢತ್ವೇನಾವಗತಸ್ಯ 'ಬ್ರಹ್ಮಶಬ್ದಸ್ಯೋಪದೇಶಾತ್' ಸರ್ವ-ಗತೇ ವಸ್ತುನಿ ಶ್ರವಣಾದಿತ್ಯರ್ಥಃ। 'ತಸ್ಮಿನ್ನೇವ' ಇತ್ಯನೇನ ಶ್ರುತೇರ್ನಿರವಕಾಶತ್ವ-ಮುಕ್ತಂ ಭವತಿ।

ಅನೇನ 'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ' ಇತ್ಯಾದಿನಾ 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಇತಿ ಶಾಖಾಶೇಷೇಣ ಸರ್ವತ್ರ ಸರ್ವೇಷು ಭೂತೇಷು ಅಂತರ್ಗತತಯಾ ಉಚ್ಯಮಾನೋ ನಾರಾಯಣ ಏವ ನ ತು ಆದಿತ್ಯಾದಿಃ। ಕುತಃ? 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಇತಿ ಸರ್ವಭೂತಗತೇ ವಸ್ತುನಿ ನಾರಾಯಣೈಕ-ನಿಷ್ಠತ್ವೇನ ಶ್ರುತ್ಯಾದಿಪ್ರಸಿದ್ಧಬ್ರಹ್ಮಶಬ್ದೋಪದೇಶಾತ್ ಶ್ರುತೇರಿತಿ ಸೂತ್ರಾರ್ಥ ಉಕ್ತೋ ಭವತಿ॥

ಸೂತ್ರದಲ್ಲಿರುವ 'ಪ್ರಸಿದ್ಧೋಪದೇಶಾತ್' ಎಂಬ ಹೇತುಭಾಗವನ್ನು 'ತದೇವ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ತದೇವ ಎಂಬ ಈ ಉಪನಿಷ-ದ್ವಾಕ್ಯವು ಜಿಜ್ಞಾಸಾಧಿಕರಣದಲ್ಲಿ ವ್ಯಾಖ್ಯಾನಿಸಲ್ಪಟ್ಟಿದೆ. ವಿಷ್ಣುವಿಗೂ ಪರಬ್ರಹ್ಮನಿಗೂ

ಅಭೇದವನ್ನು ಬೋಧಿಸುವ ಸಲುವಾಗಿ ಹೊರಟಿರುವ 'ಪರಮಂ ಯೋ ಮಹದ್ಬ್ರಹ್ಮ ಪರಮಂ ಯಃ ಪರಾಯಣಮ್' ಎಂಬ ಮಹಾಭಾರತವಾಕ್ಯಕ್ಕೆ 'ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ.... ನಾಮ್ನಾಂ' ಎಂಬ ಮುಂದಿನ ವಾಕ್ಯದೊಂದಿಗೆ ಅನ್ವಯವಾಗುವುದು.

'ವಾಸುದೇವಾತ್' ಎಂಬ ಶ್ಲೋಕವು ಮತ್ತೊಂದು ಸ್ಮೃತಿವಾಕ್ಯವಾಗಿದೆ. 'ವಾಸುದೇವಾತ್ ಪರಃ ಕೋ ನು' ಕೃಷ್ಣನಿಂದ ಅನ್ಯನಾದವನು ಯಾರು ತಾನೇ, ಬ್ರಹ್ಮಶಬ್ದೋದಿತೋ ಭವೇತ್ - ಬ್ರಹ್ಮಶಬ್ದದ ಮುಖ್ಯವಾಚ್ಯನಾಗುವನು. ಯಾರೂ ಆಗಲಾರರು! ಕಿಂತು - ಅವನೇ ಮುಖ್ಯವಾಚ್ಯನು. ಏಕೆಂದರೆ ಹಿ - ಯಾವ ಕಾರಣ-ದಿಂದ, ಸಃ - ಆ ವಾಸುದೇವನು, ಸರ್ವಗುಣೈಃ ಪೂರ್ಣಃ ಎಲ್ಲ ಗುಣಗಳಿಂದ ಪೂರ್ಣನಾಗಿರುವನು; ತದನ್ಯೇ ತು - ಅವನಿಗಿಂತ ಭಿನ್ನರಾದವರು ಅಪೂರ್ಣ-ರಾಗಿರುವರು, ಆದ್ದರಿಂದ. ಹಾಗಿದ್ದಲ್ಲಿ 'ಬ್ರಹ್ಮಾಣಿ ಜೀವಾಃ ಸರ್ವೇಽಪಿ' ಎಲ್ಲ ಜೀವರೂ ಬ್ರಹ್ಮಶಬ್ದವಾಚ್ಯರು ಇತ್ಯಾದಿ ವಾಕ್ಯಗಳಿಗೆ ಏನರ್ಥ? ಎಂಬ ಪ್ರಶ್ನೆಗೆ ''ತದನ್ಯೇ'' ಎಂಬುದಾಗಿ ಉತ್ತರಿಸಲಾಗಿದೆ. ವಾಸುದೇವನಿಗಿಂತ ಭಿನ್ನರಾದ ಜೀವರು ಉಪಚಾರತಃ - ಅಮುಖ್ಯವಾಗಿಯೇ ಬ್ರಹ್ಮಶಬ್ದವಾಚ್ಯರಾಗಿದ್ದಾರೆ ಹೊರತು ಮುಖ್ಯವಾಗಲ್ಲ ಎಂದು ಅರ್ಥ.

'ಇತಿ' ಎಂಬ ಭಾಷ್ಯವಾಕ್ಯದಲ್ಲಿ 'ವಾಕ್ಯೇಷು' ಎಂಬ ಪದವು ಶೇಷವಾಗುವುದು. ಇದರಿಂದ 'ಸರ್ವತ್ರ' ಎಂಬ ಪದಕ್ಕೆ ಹೇತುವಿನಲ್ಲೂ ಅನ್ವಯವಿದೆ ಎಂದು ಸೂಚಿತ-ವಾಗುವುದು. ತಥಾಚ- ಸರ್ವತ್ರ- ಎಲ್ಲಾ ಉದಾಹೃತವಾದ ವಾಕ್ಯಗಳಲ್ಲಿ, ತಸ್ಮಿನ್ನೇವ ವಿಷ್ಣುವಿನಲ್ಲೇ, ಪ್ರಸಿದ್ಧಸ್ಯ- ರೂಢವೆಂದು ತಿಳಿಯಲ್ಪಟ್ಟಿರುವ, 'ಬ್ರಹ್ಮಶಬ್ದೋಪ-ದೇಶಾತ್'- ಬ್ರಹ್ಮಶಬ್ದಕ್ಕೆ ಸರ್ವಗತವಸ್ತುವಿನಲ್ಲಿ ಶ್ರವಣವಿರುವುದರಿಂದ ಎಂದು ಅರ್ಥ. 'ತಸ್ಮಿನ್ನೇವ' ಎಂಬ ಏವಕಾರದಿಂದ ಶ್ರುತಿಯು ನಿರವಕಾಶವಾಗಿರುವುದೆಂದು ಉಕ್ತವಾಗುವುದು.

ಇದರಿಂದ, 'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ' ಎಂದು ಪ್ರಾರಂಭಿಸಿ 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ವಾಕ್ಯಶೇಷದಿಂದ ಸರ್ವತ್ರ - ಸರ್ವಪ್ರಾಣಿಗಳಲ್ಲಿ ಅಂತರ್ಗತನಾಗಿರುವನೆಂದು ಹೇಳಲ್ಪಟ್ಟಿರುವವನು ನಾರಾಯಣನೇ,

ಆದಿತ್ಯ ಮೊದಲಾದವರಲ್ಲ. ಏಕೆಂದರೆ, 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂದು ಸರ್ವಭೂತಗಳಲ್ಲಿ ಇರುವ ವಸ್ತುವಿನ ವಿಷಯದಲ್ಲಿ ನಾರಾಯಣನಲ್ಲಿ ಮಾತ್ರವೇ ಇರುವುದೆಂದು ಶ್ರುತಿ ಮೊದಲಾದವುಗಳಿಂದ ಪ್ರಸಿದ್ಧವಾಗಿರುವ ಬ್ರಹ್ಮಶಬ್ದೋಪ-ದೇಶಾತ್ - ಬ್ರಹ್ಮಶಬ್ದವು ಶ್ರುತವಾಗಿರುವುದರಿಂದ – ಎಂದು ಸೂತ್ರಾರ್ಥವು ಉಕ್ತವಾಗುವುದು.

ಭಾ– ॥ ಓಂ ವಿವಕ್ಷಿತಗುಣೋಪಪತ್ತೇಶ್ಚ ಓಂ ॥ ೨ ॥

'ಸ ಯೋಽತೋಽಶ್ರುತಃ'(ಐ.ಆ.೩-೨-೪) ಇತ್ಯಾದಿ ।

ಸರ್ವಗತನಲ್ಲಿ ಇರುವವೆಂದು ಹೇಳಲು ಯೋಗ್ಯವಾದ ಗುಣಗಳು ವಿಷ್ಣುವಿಗೆ ಉಪಪನ್ನವಾಗುವುದರಿಂದ ಸರ್ವಪ್ರಾಣಿಹೃದಯಸ್ಥನೆಂದು ಹೇಳಲ್ಪಟ್ಟಿರುವವನು ನಾರಾಯಣನೇ ಆಗಿದ್ದಾನೆ.

'ಸ ಯೋಽತೋಽಶ್ರುತಃ' ಇವೇ ಮೊದಲಾದ ವಾಕ್ಯಗಳಿಂದ ವಿವ-ಕ್ಷಿತವಾದ ಗುಣಗಳು ವಿಷ್ಣುವಿಗೇ ಯುಕ್ತವಾಗಿರುವುದರಿಂದ ಸರ್ವತ್ರ ಸ್ಥಿತನೆಂದು ಹೇಳಲ್ಪಟ್ಟಿರುವವನು ನಾರಾಯಣನೇ ಆಗಿದ್ದಾನೆ.

(ಭಾ.ದೀ.) ಯುಕ್ತ್ಯಂತರೇಣ ವಿಷ್ಣೋರೇವ ಅತ್ರೋಕ್ತಸರ್ವಗತತ್ವಂ ಪ್ರತಿಪಾದ-ಯತ್ ಸೂತ್ರಮುಪನ್ಯಸ್ಯ ತದುಪಾತ್ತಶ್ರುತಿಮೇವೋದಾಹರತಿ – **ವಿವಕ್ಷಿತೇತಿ** ॥ ಆದಿಪದೇನ 'ಅಗತೋಽಮತೋಽನತೋಽದೃಷ್ಟೋಽವಿಜ್ಞಾತೋ ಅನಾದಿಷ್ಟಃ । ಶ್ರೋತಾ ಮಂತಾ ದ್ರಷ್ಟಾಽಽದೇಷ್ಟಾ ಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾನಾಮಂತರಪುರುಷಃ ಸಮ ಆತ್ಮೇತಿ ವಿದ್ಯಾತ್' (ಐ.ಆ. ೩.೨.೪) ಇತಿ ವಾಕ್ಯಶೇಷೋ ಗೃಹ್ಯತೇ । 'ಇತ್ಯಾದಿ' ಇತಿ ಲುಪ್ತತೃತೀಯಾವಿಭಕ್ತಿಕಂ ಪದಮ್ । ಅಸ್ಯ 'ವಿವಕ್ಷಿತ' ಇತಿ ಸೂತ್ರಪದೇನಾನ್ವಯಃ । ಅತ ಏವ ಸೂತ್ರಭಾಷ್ಯಯೋರೇಕೀಭಾವ ಇತಿ ತತ್ವಪ್ರದೀಪೋಕ್ತಿಃ । ಅನೇನ ಸೂತ್ರೇ 'ಶ್ರುತ್ಯಾ' ಇತಿ ಶೇಷಃ ಸೂಚಿತಃ । ಚಃ ಪೂರ್ವೋಕ್ತಹೇತುಸಮುಚ್ಚಯೇಽವಧಾರಣೇ ಚ । ಯತೋ ವಕ್ತುಂ ಯೋಗ್ಯೇ

ವಿವಕ್ಷಾ ಭವತಿ ಅತೋ ವಿವಕ್ಷಿತಾಃ ವಕ್ತುಂ ಯೋಗ್ಯಾಃ ವಕ್ಷ್ಯಮಾಣಾ ಇತಿ ವಾ। 'ಯೇ ತು ಶ್ರುತೀನಾಂ ಬ್ರಹ್ಮಗುಣೇಷು ತಾತ್ಪರ್ಯಾಭಾವಂ ವದಂತಿ, ತನ್ನಿರಾಸಾಯ ವಿವಕ್ಷಿತ-ಪದಮುಪನಿಬಬಂಧ ಸೂತ್ರಕೃತ್' ಇತಿ ತತ್ವಪ್ರದೀಪೋಕ್ತೇಃ ಶ್ರುತಿತಾತ್ಪರ್ಯ-ವಿಷಯಭೂತಾ ಇತಿ ವಾ। 'ಸರ್ವತ್ರ' ಇತ್ಯನುವರ್ತತೇ। 'ಗತೇ' ಇತಿ ಶೇಷಃ।

ತಥಾ ಚ ಸರ್ವತ್ರ ಗತೇ ವಿವಕ್ಷಿತಾನಾಂ ಶ್ರುತ್ಯಾ ಸರ್ವತ್ರ ಗತನಿಷ್ಠತಯಾ ವಕ್ತುಂ ಯೋಗ್ಯಾನಾಂ ಇತಃಪರಂ ಶ್ರುತ್ಯಾ ಸರ್ವಗತನಿಷ್ಠತಯಾ ವಕ್ಷ್ಯಮಾಣಾನಾಂ ಶ್ರುತಿತಾತ್ಪರ್ಯವಿಷಯೀಭೂತಾನಾಂ ವಾ ಗುಣಾನಾಮುಪಸಂಹಾರಗತಾಶ್ರುತತ್ವಾ-ದೀನಾಂ ವಿಷ್ಣೋರೇವ ಯೋಗ್ಯತ್ವೇನ ತಸ್ಮಿನ್ನೇವ ಉಪಪತ್ತೇಃ ಅನ್ಯತ್ರ ಅನುಪಪತ್ತೇಶ್ಚ ಸರ್ವತ್ರ ಉಚ್ಯಮಾನೋ ನಾರಾಯಣ ಏವ ಇತಿ ಸೂತ್ರಾರ್ಥ ಉಕ್ತೋ ಭವತಿ।

ಮತ್ತೊಂದು ಯುಕ್ತಿಯಿಂದ, ವಿಷ್ಣುವಿಗೇ ಈ ಉಪನಿಷತ್ತಿನಲ್ಲಿ ಹೇಳಿರುವ ಸರ್ವಗತತ್ವವು ಇರುವುದು ಎಂದು ಪ್ರತಿಪಾದಿಸುವ ಸೂತ್ರವನ್ನು ಉಲ್ಲೇಖಿಸಿ ಆ ಸೂತ್ರವು ಗ್ರಹಿಸಿರುವ ಶ್ರುತಿಯನ್ನೇ ಭಾಷ್ಯಕಾರರು ಉದಾಹರಿಸುತ್ತಿದ್ದಾರೆ. ಭಾಷ್ಯದಲ್ಲಿ ಇತ್ಯಾದಿ ಎಂಬಲ್ಲಿರುವ ಆದಿಪದದಿಂದ ''ಅಗತೋಽಮತೋಽನತೋಽ-ದೃಷ್ಟೋಽವಿಜ್ಞಾತೋ ಅನಾದಿಷ್ಟಃ । ಶ್ರೋತಾ ಮಂತಾ ದ್ರಷ್ಟಾಽದೇಷ್ಟಾ ಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾನಾಮಂತರಪುರುಷಃ ಸಮ ಆತ್ಮೇತಿ ವಿದ್ಯಾತ್'' ಎಂಬ ವಾಕ್ಯಶೇಷವು ಗ್ರಹಿಸಲ್ಪಡುವುದು. ಭಾಷ್ಯದಲ್ಲಿರುವ ಇತ್ಯಾದಿ ಎಂಬ ಪದವು ತೃತೀಯಾ ವಿಭಕ್ತಿಯ ಲೋಪವನ್ನು ಪಡೆದ ಪದವಾಗಿದೆ. ಈ ಪದಕ್ಕೆ 'ವಿವಕ್ಷಿತ' ಎಂಬ ಸೂತ್ರದ ಪದದೊಂದಿಗೆ ಅನ್ವಯವಾಗುವುದು. ಆದ್ದರಿಂದಲೇ ಸೂತ್ರಭಾಷ್ಯಗಳಿಗೆ ಏಕೀಭಾವವಿರುವುದು ಎಂದು ತತ್ವಪ್ರದೀಪದಲ್ಲಿ ಹೇಳಿದೆ. ಇದರಿಂದ ಸೂತ್ರದಲ್ಲಿ 'ಶ್ರುತ್ಯಾ' ಎಂಬ ಪದವು ಶೇಷವಾಗಿರುವುದು ಎಂದು ಸೂಚಿತ-ವಾಗುವುದು. ಚಕಾರವು ಹಿಂದೆ ಹೇಳಿದ ಹೇತುವಿನ ಸಮುಚ್ಚಯವನ್ನು ಹಾಗೂ ಅವಧಾರಣವನ್ನು ಹೇಳುವುದು. ಯಾವ ಕಾರಣದಿಂದಾಗಿ ಹೇಳಲು ಯೋಗ್ಯವಾದ ವಿಷಯದಲ್ಲೇ ವಿವಕ್ಷೆ ಅಂದರೆ ಹೇಳುವ ಇಚ್ಛೆಯು ಉಂಟಾಗುವುದೋ ಆದ್ದರಿಂದ

ವಿವಕ್ಷಿತ ಎಂದರೆ ಹೇಳಲು ಯೋಗ್ಯವಾದ ಎಂದು ಅರ್ಥ. ಅಥವಾ ಮುಂದೆ ಹೇಳ-ಲಾಗುವ ಎಂದು ಅರ್ಥ. ಅಥವಾ "ಯೇ ತು ಶ್ರುತೀನಾಂ ಬ್ರಹ್ಮಗುಣೇಷು ತಾತ್ಪರ್ಯಾಭಾವಂ ವದಂತಿ, ತನ್ನಿರಾಸಾಯ ವಿವಕ್ಷಿತಪದಮುಪನಿಬಬಂಧ ಸೂತ್ರಕೃತ್" 'ಯಾರು ಶ್ರುತಿಗಳಿಗೆ ಬ್ರಹ್ಮನ ಗುಣಗಳಲ್ಲಿ ತಾತ್ಪರ್ಯವಿಲ್ಲ ಎಂದು ಹೇಳುವರೋ ಅವರನ್ನು ನಿರಾಕರಿಸಲು ಸೂತ್ರಕಾರರು ಸೂತ್ರದಲ್ಲಿ ವಿವಕ್ಷಿತ ಎಂಬ ಪದವನ್ನು ರಚಿಸಿದ್ದಾರೆ' ಎಂದು ತತ್ವಪ್ರದೀಪದಲ್ಲಿ ಹೇಳಿರುವುದರಿಂದ ವಿವಕ್ಷಿತ ಎಂದರೆ ಶ್ರುತಿ-ತಾತ್ಪರ್ಯವಿಷಯವಾದ ಎಂದು ಅರ್ಥ. ಸರ್ವತ್ರ ಎಂಬ ಪದವು ಹಿಂದಿನ ಸೂತ್ರದಿಂದ ಅನುವೃತ್ತಿಯನ್ನು ಪಡೆಯುವುದು. 'ಗತೇ' ಎಂಬ ಪದವು ಶೇಷವಾಗಿದೆ.

ತಥಾಚ - ಸರ್ವತ್ರ ಗತೇ - ಸರ್ವಪ್ರಾಣಿಹೃದಯಸ್ಥನೆಂದು ಹೇಳಲಾದವನಲ್ಲಿ, ವಿವಕ್ಷಿತಾನಾಂ- ಶ್ರುತಿಯಿಂದ ಸರ್ವಗತನಲ್ಲಿ ಇರುವವೆಂದು ಹೇಳಲು ಯೋಗ್ಯವಾದ ಅಥವಾ ಇನ್ನು ಮುಂದೆ ಶ್ರುತಿಯಿಂದ ಸರ್ವಗತನಿಷ್ಠವೆಂದು ಹೇಳಲ್ಪಡುವ ಅಥವಾ ಶ್ರುತಿಯ ತಾತ್ಪರ್ಯವಿಷಯವಾಗಿರುವ, **ಗುಣಾನಾಂ** - ಉಪಸಂಹಾರಭಾಗದಲ್ಲಿರುವ ಅಶ್ರುತತ್ವ ಮೊದಲಾದ ಗುಣಗಳು ವಿಷ್ಣುವಿಗೇ ಯೋಗ್ಯವಾಗಿರುವುದರಿಂದ ಅವನಲ್ಲೇ ಅವು ಉಪಪನ್ನವಾಗುವುದರಿಂದ ಮತ್ತು ಅನ್ಯತ್ರ ಅನುಪಪನ್ನವಾಗಿರುವುದರಿಂದ ಸರ್ವ-ಗತನೆಂದು ಹೇಳಲ್ಪಟ್ಟಿರುವವನು ನಾರಾಯಣನೇ ಆಗಿದ್ದಾನೆ ಎಂದು ಸೂತ್ರಾರ್ಥವು ಉಕ್ತವಾಗಿದೆ.

(ಭಾ.ದೀ.) ಯಃ ಪ್ರಕೃತೋ ವಿಷ್ಣುಃ ಸಃ 'ಅತಃ' ದೇಶಕಾಲಗುಣೈರ್ವ್ಯಾಪ್ತಃ। 'ಅತ ಸಾತತ್ಯಗಮನೇ' ಇತಿ ಧಾತುವ್ಯಾಖ್ಯಾನಾತ್ 'ಸಂತತೋ ಹ್ಯತ ಉಚ್ಯತೇ' ಇತಿ ವಚನಾಚ್ಚ। ಯದ್ವಾ – ಅತೋಽತಿಃ। ತೃತೀಯೋಽತಿಶಯೇ। ಅಧಿಕ ಇತ್ಯರ್ಥಃ। **ಅಶ್ರುತಃ** - ಸರ್ವಾತ್ಮನಾ ಶ್ರೋತುಮಶಕ್ಯಃ। ಸ್ವಯಮೇವ ಸ್ವಾತ್ಮಾನಂ ಸ್ವಾತಂತ್ರ್ಯೇಣ ಶೃಣೋತಿ। 'ನರ್ತೇ ತ್ವತ್' (ಋ.೧೦-೧೧೨-೯) ಇತಿ ಶ್ರುತೇಃ। **ಅಗತಃ** - ಅಪ್ರಾಪ್ತಃ ಪೂರ್ಣತ್ವಾತ್ ಸರ್ವಾತ್ಮನಾಽಜ್ಞಾತ ಇತಿ ವಾ। ಸರ್ವಾತ್ಮನಾ ಮನನವಿಷಯೋ ನ ಭವತಿ ಇತಿ - **ಅಮತಃ**। ಅನತೋ ನೇತೃರಹಿತಃ ಸ್ವತಂತ್ರ ಇತಿ ಯಾವತ್। ಅದೃಷ್ಟಃ

ವಿವಕ್ಷಾ ಭವತಿ ಅತೋ ವಿವಕ್ಷಿತಾಃ ವಕ್ತುಂ ಯೋಗ್ಯಾಃ ವಕ್ಷ್ಯಮಾಣಾ ಇತಿ ವಾ । 'ಯೇ ತು ಶ್ರುತೀನಾಂ ಬ್ರಹ್ಮಗುಣೇಷು ತಾತ್ಪರ್ಯಾಭಾವಂ ವದಂತಿ, ತನ್ನಿರಾಸಾಯ ವಿವಕ್ಷಿತ-ಪದಮುಪನಿಬಬಂಧ ಸೂತ್ರಕೃತ್' ಇತಿ ತತ್ವಪ್ರದೀಪೋಕ್ತೇಃ ಶ್ರುತಿತಾತ್ಪರ್ಯ-ವಿಷಯಭೂತಾ ಇತಿ ವಾ । 'ಸರ್ವತ್ರ' ಇತ್ಯನುವರ್ತತೇ । 'ಗತೇ' ಇತಿ ಶೇಷಃ ।

ತಥಾ ಚ ಸರ್ವತ್ರ ಗತೇ ವಿವಕ್ಷಿತಾನಾಂ ಶ್ರುತ್ಯಾ ಸರ್ವತ್ರ ಗತನಿಷ್ಠತಯಾ ವಕ್ತುಂ ಯೋಗ್ಯಾನಾಂ ಇತಃಪರಂ ಶ್ರುತ್ಯಾ ಸರ್ವಗತನಿಷ್ಠತಯಾ ವಕ್ಷ್ಯಮಾಣಾನಾಂ ಶ್ರುತಿತಾತ್ಪರ್ಯವಿಷಯೀಭೂತಾನಾಂ ವಾ ಗುಣಾನಾಮುಪಸಂಹಾರಗತಾಶ್ರುತತ್ವಾ-ದೀನಾಂ ವಿಷ್ಣೋರೇವ ಯೋಗ್ಯತ್ವೇನ ತಸ್ಮಿನ್ನೇವ ಉಪಪತ್ತೇಃ ಅನ್ಯತ್ರ ಅನುಪಪತ್ತೇಶ್ಚ ಸರ್ವತ್ರ ಉಚ್ಯಮಾನೋ ನಾರಾಯಣ ಏವ ಇತಿ ಸೂತ್ರಾರ್ಥ ಉಕ್ತೋ ಭವತಿ ।

ಮತ್ತೊಂದು ಯುಕ್ತಿಯಿಂದ, ವಿಷ್ಣುವಿಗೇ ಈ ಉಪನಿಷತ್ತಿನಲ್ಲಿ ಹೇಳಿರುವ ಸರ್ವಗತತ್ವವು ಇರುವುದು ಎಂದು ಪ್ರತಿಪಾದಿಸುವ ಸೂತ್ರವನ್ನು ಉಲ್ಲೇಖಿಸಿ ಆ ಸೂತ್ರವು ಗ್ರಹಿಸಿರುವ ಶ್ರುತಿಯನ್ನೇ ಭಾಷ್ಯಕಾರರು ಉದಾಹರಿಸುತ್ತಿದ್ದಾರೆ. ಭಾಷ್ಯದಲ್ಲಿ ಇತ್ಯಾದಿ ಎಂಬಲ್ಲಿರುವ ಆದಿಪದದಿಂದ ''ಅಗತೋಽಮತೋಽನತೋಽ-ದೃಷ್ಟೋಽವಿಜ್ಞಾತೋ ಅನಾದಿಷ್ಟಃ । ಶ್ರೋತಾ ಮಂತಾ ದ್ರಷ್ಟಾಽಽದೇಷ್ಟಾ ಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾನಾಮಂತರಪುರುಷಃ ಸಮ ಆತ್ಮೇತಿ ವಿದ್ಯಾತ್'' ಎಂಬ ವಾಕ್ಯಶೇಷವು ಗ್ರಹಿಸಲ್ಪಡುವುದು. ಭಾಷ್ಯದಲ್ಲಿರುವ ಇತ್ಯಾದಿ ಎಂಬ ಪದವು ತೃತೀಯಾ ವಿಭಕ್ತಿಯ ಲೋಪವನ್ನು ಪಡೆದ ಪದವಾಗಿದೆ. ಈ ಪದಕ್ಕೆ 'ವಿವಕ್ಷಿತ' ಎಂಬ ಸೂತ್ರದ ಪದದೊಂದಿಗೆ ಅನ್ವಯವಾಗುವುದು. ಆದ್ದರಿಂದಲೇ ಸೂತ್ರಭಾಷ್ಯಗಳಿಗೆ ಏಕೀಭಾವವಿರುವುದು ಎಂದು ತತ್ವಪ್ರದೀಪದಲ್ಲಿ ಹೇಳಿದೆ. ಇದರಿಂದ ಸೂತ್ರದಲ್ಲಿ 'ಶ್ರುತ್ಯಾ' ಎಂಬ ಪದವು ಶೇಷವಾಗಿರುವುದು ಎಂದು ಸೂಚಿತ-ವಾಗುವುದು. ಚಕಾರವು ಹಿಂದೆ ಹೇಳಿದ ಹೇತುವಿನ ಸಮುಚ್ಚಯವನ್ನು ಹಾಗೂ ಅವಧಾರಣವನ್ನು ಹೇಳುವುದು. ಯಾವ ಕಾರಣದಿಂದಾಗಿ ಹೇಳಲು ಯೋಗ್ಯವಾದ ವಿಷಯದಲ್ಲೇ ವಿವಕ್ಷೆ ಅಂದರೆ ಹೇಳುವ ಇಚ್ಛೆಯು ಉಂಟಾಗುವುದೋ ಆದ್ದರಿಂದ

ವಿವಕ್ಷಿತ ಎಂದರೆ ಹೇಳಲು ಯೋಗ್ಯವಾದ ಎಂದು ಅರ್ಥ. ಅಥವಾ ಮುಂದೆ ಹೇಳ-ಲಾಗುವ ಎಂದು ಅರ್ಥ. ಅಥವಾ "ಯೇ ತು ಶ್ರುತೀನಾಂ ಬ್ರಹ್ಮಗುಣೇಷು ತಾತ್ಪರ್ಯಾಭಾವಂ ವದಂತಿ, ತನ್ನಿರಾಸಾಯ ವಿವಕ್ಷಿತಪದಮುಪನಿಬಬಂಧ ಸೂತ್ರಕೃತ್" 'ಯಾರು ಶ್ರುತಿಗಳಿಗೆ ಬ್ರಹ್ಮನ ಗುಣಗಳಲ್ಲಿ ತಾತ್ಪರ್ಯವಿಲ್ಲ ಎಂದು ಹೇಳುವರೋ ಅವರನ್ನು ನಿರಾಕರಿಸಲು ಸೂತ್ರಕಾರರು ಸೂತ್ರದಲ್ಲಿ ವಿವಕ್ಷಿತ ಎಂಬ ಪದವನ್ನು ರಚಿಸಿದ್ದಾರೆ' ಎಂದು ತತ್ವಪ್ರದೀಪದಲ್ಲಿ ಹೇಳಿರುವುದರಿಂದ ವಿವಕ್ಷಿತ ಎಂದರೆ ಶ್ರುತಿ-ತಾತ್ಪರ್ಯವಿಷಯವಾದ ಎಂದು ಅರ್ಥ. ಸರ್ವತ್ರ ಎಂಬ ಪದವು ಹಿಂದಿನ ಸೂತ್ರದಿಂದ ಅನುವೃತ್ತಿಯನ್ನು ಪಡೆಯುವುದು. 'ಗತೇ' ಎಂಬ ಪದವು ಶೇಷವಾಗಿದೆ.

ತಥಾಚ - ಸರ್ವತ್ರ ಗತೇ - ಸರ್ವಪ್ರಾಣಿಹೃದಯಸ್ಥನೆಂದು ಹೇಳಲಾದವನಲ್ಲಿ, ವಿವಕ್ಷಿತಾನಾಂ- ಶ್ರುತಿಯಿಂದ ಸರ್ವಗತನಲ್ಲಿ ಇರುವವೆಂದು ಹೇಳಲು ಯೋಗ್ಯವಾದ ಅಥವಾ ಇನ್ನು ಮುಂದೆ ಶ್ರುತಿಯಿಂದ ಸರ್ವಗತನಿಷ್ಠವೆಂದು ಹೇಳಲ್ಪಡುವ ಅಥವಾ ಶ್ರುತಿಯ ತಾತ್ಪರ್ಯವಿಷಯವಾಗಿರುವ, **ಗುಣಾನಾಂ** - ಉಪಸಂಹಾರಭಾಗದಲ್ಲಿರುವ ಅಶ್ರುತತ್ವ ಮೊದಲಾದ ಗುಣಗಳು ವಿಷ್ಣುವಿಗೇ ಯೋಗ್ಯವಾಗಿರುವುದರಿಂದ ಅವನಲ್ಲೇ ಅವು ಉಪಪನ್ನವಾಗುವುದರಿಂದ ಮತ್ತು ಅನ್ಯತ್ರ ಅನುಪಪನ್ನವಾಗಿರುವುದರಿಂದ ಸರ್ವ-ಗತನೆಂದು ಹೇಳಲ್ಪಟ್ಟಿರುವವನು ನಾರಾಯಣನೇ ಆಗಿದ್ದಾನೆ ಎಂದು ಸೂತ್ರಾರ್ಥವು ಉಕ್ತವಾಗಿದೆ.

(ಭಾ.ದೀ.) ಯಃ ಪ್ರಕೃತೋ ವಿಷ್ಣುಃ ಸಃ 'ಅತಃ' ದೇಶಕಾಲಗುಣೈರ್ವ್ಯಾಪ್ತಃ। 'ಅತ ಸಾತತ್ಯಗಮನೇ' ಇತಿ ಧಾತುವ್ಯಾಖ್ಯಾನಾತ್ 'ಸಂತತೋ ಹ್ಯತ ಉಚ್ಯತೇ' ಇತಿ ವಚನಾಚ್ಚ। ಯದ್ವಾ – ಅತೋऽತಿಃ। ತೃತೀಯೋऽತಿಶಯೇ। ಅಧಿಕ ಇತ್ಯರ್ಥಃ। **ಅಶ್ರುತಃ** - ಸರ್ವಾತ್ಮನಾ ಶ್ರೋತುಮಶಕ್ಯಃ। ಸ್ವಯಮೇವ ಸ್ವಾತ್ಮಾನಂ ಸ್ವಾತಂತ್ರ್ಯೇಣ ಶೃಣೋತಿ। 'ನರ್ತೇ ತ್ವತ್' (ಋ.೧೦-೧೧೨-೯) ಇತಿ ಶ್ರುತೇಃ। **ಅಗತಃ** - ಅಪ್ರಾಪ್ತಃ ಪೂರ್ಣತ್ವಾತ್ ಸರ್ವಾತ್ಮನಾऽಜ್ಞಾತ ಇತಿ ವಾ। ಸರ್ವಾತ್ಮನಾ ಮನನವಿಷಯೋ ನ ಭವತಿ ಇತಿ - **ಅಮತಃ**। ಅನತೋ ನೇತ್ರರಹಿತಃ ಸ್ವತಂತ್ರ ಇತಿ ಯಾವತ್। ಅದೃಷ್ಟಃ

ಪ್ರತ್ಯಕ್ಷೇಣ ಕೇನಚಿತ್ ಸರ್ವಾತ್ಮನಾ ಪೂರ್ಣತ್ವಾತ್ । ಅತ ಏವ ಸರ್ವಾತ್ಮನಾ ಅವಿಜ್ಞಾತಃ ವಿಶೇಷತೋ ನ ಜ್ಞಾತಃ । ಅನಾದಿಷ್ಟಃ ನಿಯೋಜಕಶೂನ್ಯೋಽನ್ಯೈರನಾಜ್ಞಪ್ತ ಇತಿ ವಾ ।

ಯಥಾಽನ್ಯೈಃ ಸ್ವಯಮಶ್ರುತಾದಿರ್ನ ತಥಾಽನ್ಯೇ ಸರ್ವಾತ್ಮನಾಽಶ್ರುತಾದ್ಯಾ ಇತ್ಯಾಹ– **ಶ್ರೋತೇತಿ ॥ ಶ್ರೋತಾ** ಯುಗಪತ್ಸ್ವಾತಂತ್ರ್ಯೇಣ ಶ್ರವಣಕರ್ತಾ । **ಮಂತಾ** ಸ್ವಾತಂತ್ರ್ಯೇಣ ಸರ್ವಮನನಕರ್ತಾ । ಸ್ವಾತಂತ್ರ್ಯೇಣ ಸರ್ವದ್ರಷ್ಟಾ । **ಆದೇಷ್ಟಾ** - ನಿಯೋಜನಕರ್ತಾ । **ಆಘೋಷ್ಟಾ** - ಸಮ್ಯಗ್ವಕ್ತಾ । **ವಿಜ್ಞಾತಾ** - ವಿಶೇಷೇಣ ಜ್ಞಾತಾ । ಪ್ರಕರ್ಷೇಣ ಜ್ಞಾತಾ । ಸರ್ವೇಷಾಂ ಭೂತಾನಾಂ ಜೀವಾನಾಮ್, **ಅಂತರಃ** - ಅಂತಃಸ್ಥಃ, **ಪುರುಷಃ** - ಪೂರ್ಣಃ, **ಸಮಃ** - ಸಮಾನಃ ಸರ್ವರೂಪೇಣ **ಆತ್ಮಾ** - ಆದಾನಾದಿಕರ್ತಾ ಇತಿ ವಿದ್ಯಾತ್ - ಇತ್ಯೈತರೇಯಭಾಷ್ಯ-ತತ್ತ್ವಪ್ರದೀಪ-ವಿಶ್ವೇಶ್ವರ-ತೀರ್ಥೀಯದಿಶಾ ಶ್ರುತ್ಯರ್ಥಃ ।

ಯಃ - ಯಾವ ವಿಷ್ಣುವು ಪ್ರಕೃತನಾಗಿರುವನೋ, ಸಃ - ಅವನು, ಅತಃ - ಅತ ಸಾತತ್ಯಗಮನೇ ಎಂದು ಅತ ಧಾತುವಿಗೆ ಸಾತತ್ಯ ಅಂದರೆ ವ್ಯಾಪ್ತಿ ಎಂಬ ಅರ್ಥವಿರುವುದು ಎಂದು ಧಾತುವಿನ ವ್ಯಾಖ್ಯಾನವಿರುವುದರಿಂದ ಮತ್ತು 'ಸಂತತೋ ಹ್ಯತ ಉಚ್ಯತೇ' 'ವ್ಯಾಪ್ತನು ಅತನೆಂದು ಹೇಳಲ್ಪಡುವನು' ಎಂಬ ವಚನವಿರುವುದರಿಂದಲೂ ಅತಃ ಎಂದರೆ ದೇಶ ಕಾಲ ಗುಣಗಳಿಂದ ವ್ಯಾಪ್ತನು ಎಂದು ಅರ್ಥ. ಅಥವಾ ಅತಃ ಎಂದರೆ ಅತಿ ಎಂದು ಅರ್ಥ. ಇಲ್ಲಿ ಇಕಾರವು ಅತಿಶಯವನ್ನು ಹೇಳುವುದು. ಅತಿಶಯವಾದ ಆಧಿಕ್ಯವುಳ್ಳವನು ಎಂದು ಅರ್ಥ. ಅಶ್ರುತಃ ಎಂದರೆ ಸಾಕಲ್ಯೇನ ಶ್ರವಣಮಾಡಲ್ಪಡಲು ಅಶಕ್ಯನು. 'ನರ್ತೇ ತ್ವತ್' ಎಂಬ ಶ್ರುತಿಯಿರುವುದರಿಂದ ಅವನು ತನ್ನನ್ನು ತಾನೇ ಸ್ವಾತಂತ್ರ್ಯೇಣ ಶ್ರವಣ ಮಾಡತಕ್ಕವನು. ಅಗತಃ - ಪೂರ್ಣನಾದುದರಿಂದ ಹೊಂದಬೇಕಾದ ವಸ್ತುವಿಲ್ಲದವನು. ಅಥವಾ ಸರ್ವಾತ್ಮನಾ ಜ್ಞಾತನಾಗದಿರುವವನು. ಅಮತ ಎಂದರೆ ಸಂಪೂರ್ಣವಾಗಿ ಮನನ ವಿಷಯನಾಗದಿರುವನು. ಅನತಃ - ನೇತಾರನಿಲ್ಲದಿರುವವನು. ಸ್ವತಂತ್ರನೆಂದು ಭಾವ. ಅದೃಷ್ಟಃ - ಪೂರ್ಣನಾದುದರಿಂದ ಸರ್ವಾತ್ಮನಾ ಯಾರಿಗೂ ಪ್ರತ್ಯಕ್ಷವಿಷಯನಾಗದಿರುವವನು. ಆದ್ದರಿಂದಲೇ

ಅವಿಜ್ಞಾತಃ ಅಂದರೆ ಸರ್ವಾತ್ಮನಾ ವಿಶೇಷರೀತಿಯಿಂದ ಜ್ಞಾತನಾಗದಿರುವವನು. ಅನಾದಿಷ್ಟಃ -ತನಗೆ ಮತ್ತೊಬ್ಬ ನಿಯೋಜಕನಿಲ್ಲದಿರುವವನು ಅಥವಾ ಅನ್ಯರಿಂದ ಆಜ್ಞಪ್ತನಾಗದಿರುವವನು.

ಹೇಗೆ ಇತರರಿಂದ ತಾನು ಅಶ್ರುತ ಮೊದಲಾದವು ಆಗಿರುವನೋ, ಹಾಗೆ ಇತರರು ಸರ್ವಾತ್ಮನಾ (ಅವನಿಂದ) ಅಶ್ರುತರೇ ಮೊದಲಾದವರಲ್ಲ ಎಂದು 'ಶ್ರೋತಾ' ಇತ್ಯಾದಿವಾಕ್ಯದಿಂದ ಶ್ರುತಿಯು ಹೇಳುತ್ತಿದೆ. ಶ್ರೋತಾ - ಏಕಕಾಲದಲ್ಲಿ ಸ್ವಾತಂತ್ರ್ಯೇಣ ಎಲ್ಲವನ್ನೂ ಶ್ರವಣ ಮಾಡತಕ್ಕವನು. ಮಂತಾ - ಸ್ವಾತಂತ್ರ್ಯೇಣ ಸರ್ವವನ್ನೂ ಮನನ ಮಾಡತಕ್ಕವನು. ದ್ರಷ್ಟಾ - ಸ್ವಾತಂತ್ರ್ಯೇಣ ಸರ್ವವನ್ನೂ ನೋಡತಕ್ಕವನು. ಆದೇಷ್ಟಾ - ಎಲ್ಲರನ್ನೂ ನಿಯೋಜನ ಮಾಡತಕ್ಕವನು. ಆಘೋಷ್ಟಾ - ಸಮ್ಯಗ್ ವಕ್ತಾರನಾಗಿ-ರುವವನು; ವಿಜ್ಞಾತಾ - ವಿಶೇಷ ರೂಪದಿಂದ ಎಲ್ಲವನ್ನೂ ತಿಳಿದಿರುವವನು. ಪ್ರಜ್ಞಾತಾ - ಅತಿಶಯವಾಗಿ ತಿಳಿದಿರುವವನು. ಸರ್ವೇಷಾಂ ಭೂತಾನಾಂ - ಎಲ್ಲ ಜೀವರ, ಅಂತರಃ - ಒಳಗಿರುವವನು, ಪುರುಷಃ - ಪೂರ್ಣನಾದವನು, ಸಮಃ - ಎಲ್ಲಾ ರೂಪಗಳಲ್ಲಿಯೂ ಸಮಾನನಾಗಿರುವವನು, ಆತ್ಮಾ - ಎಲ್ಲರಿಗೂ ಆದಾನಾದಿ-ಕರ್ತೃವಾಗಿ ಸ್ವಾಮಿಯಾಗಿರುವವನು ಎಂದು ಆ ವಿಷ್ಣುವನ್ನು, ವಿದ್ಯಾತ್ - ತಿಳಿಯ-ತಕ್ಕದ್ದು ಎಂದು ಐತರೇಯಭಾಷ್ಯ , ತತ್ತ್ವಪ್ರದೀಪ ಮತ್ತು ವಿಶ್ವೇಶ್ವರತೀರ್ಥರ ರೀತ್ಯಾ ಈ ಶ್ರುತಿಯ ಅರ್ಥವಿದೆ.

**ಭಾ– ಸ ಹಿ 'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವಃ'**

**(ಋ.೭-೯೯-೨) ಇತ್ಯಾದಿನಾऽಶ್ರುತತ್ವಾದಿಗುಣಕಃ ।**

ಆ ವಿಷ್ಣುವು 'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವಃ' ಇತ್ಯಾದಿ ಶ್ರುತಿಗಳಿಂದ ಅಶ್ರುತತ್ವಾದಿಗುಣಗಳನ್ನು ಹೊಂದಿದವನೆಂದು ಪ್ರಸಿದ್ಧನಾಗಿದ್ದಾನೆ.

(ಭಾ.ದೀ.) ನನು ಏತಚ್ಛ್ರುತ್ಯುಕ್ತಾನಾಮ್ ಅಶ್ರುತತ್ವಾದಿಗುಣಾನಾಂ ಕುತೋ ವಿಷ್ಣುನಿಷ್ಠತ್ವಮ್? ಇತ್ಯತ ಆಹ – **ಸ ಹೀತಿ ॥ ಹಿಶಬ್ದಃ ಪ್ರಸಿದ್ಧೌ । ಸಃ ವಿಷ್ಣುಃ ನ ತೇ**

ಇತ್ಯಾದಿನಾ ವಾಕ್ಯೇನ ಅಶ್ರುತತ್ವಾದಿಗುಣಃ ತದ್ವತ್ತಯಾ ಪ್ರಸಿದ್ಧ ಇತ್ಯರ್ಥಃ । ಶ್ರುತೌ 'ಶ್ರೋತ್ರಾದಿನಾ ಇತಿ ಪದಾಧ್ಯಾಹಾರೇಣೇತಿ ಭಾವಃ । ಯದ್ಯಪಿ ಶ್ರುತಾವತತ್ವಸ್ಯ ಪ್ರಥಮೋಕ್ತತ್ವಾತ್ ಅತತ್ವಾದಿಗುಣ ಇತಿ ವಕ್ತವ್ಯಮ್ । ತಥಾಽಪಿ ತಸ್ಯ ಸರ್ವಗತತ್ವ-ರೂಪತ್ವೇನ ವಿಷ್ಣುನಿಷ್ಠತಯಾ ಸಾಧ್ಯತ್ವಾದಸಿದ್ಧತ್ವಾತ್ ಸ ವಿಷ್ಣುರತತ್ವಾದಿಗುಣಕಃ ಪ್ರಸಿದ್ಧ ಇತಿ ಸಿದ್ಧನಿರ್ದೇಶಾಯೋಗಾದ್ ಅಶ್ರುತತ್ವಾದೀತ್ಯುಕ್ತಮ್ । ಯದ್ವಾ, ವಿಷ್ಣುರತತ್ವಾದಿ-ಗುಣಕಃ 'ನ ತೇ ವಿಷ್ಣೋ'(ಋ. ೭-೯೯-೨) ಇತ್ಯಾದಿ ಶ್ರುತೇರಿತಿ ಪ್ರಯೋಗೇ ಸರ್ವ-ಗತತ್ವರೂಪಸ್ಯಾತತ್ವಸ್ಯ ಸಾಧ್ಯತ್ವಾತ್ ತಸ್ಯ ಚ 'ನ ತೇ ವಿಷ್ಣೋ' ಇತ್ಯಾದಾವನುಕ್ತೇ-ರ್ಹೇತ್ವನನ್ವಯಾದಶ್ರುತತ್ವಾದೀತ್ಯುಕ್ತಮ್ ।

ಈ ಮೇಲೆ ಉದಾಹರಿಸಲಾದ ಶ್ರುತಿಯಲ್ಲಿ ಹೇಳಿರುವ ಅಶ್ರುತತ್ವಾದಿಗುಣಗಳು ವಿಷ್ಣುವಿನಲ್ಲಿವೆ ಎಂಬ ವಿಷಯದಲ್ಲಿ ಪ್ರಮಾಣವೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ಸ ಹಿ' ಎಂಬ ವಾಕ್ಯವು ಹೊರಟಿದೆ. ಹಿಶಬ್ದವು ಪ್ರಸಿದ್ಧಿಯನ್ನು ಹೇಳುವುದು. ಸಃ - ಆ ವಿಷ್ಣುವು, ನ ತೇ ಇತ್ಯಾದಿ ಶ್ರುತಿವಾಕ್ಯದಿಂದ ಅಶ್ರುತತ್ವಾದಿಗುಣಕಃ ಆ ಗುಣಗಳನ್ನು ಹೊಂದಿರುವವನೆಂದು ಪ್ರಸಿದ್ಧನಾಗಿದ್ದಾನೆ ಎಂದು ಅರ್ಥ. ಆ ಶ್ರುತಿಯಲ್ಲಿ 'ಶ್ರೋತ್ರಾ-ದಿನಾ' 'ಶ್ರೋತ್ರಾದಿ ಇಂದ್ರಿಯಗಳಿಂದ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳು-ವುದರಿಂದ ಈ ಅರ್ಥವು ಲಭಿಸುವುದೆಂದು ಭಾವ. ಯದ್ಯಪಿ 'ಸ ಯೋಽತತೋ-ಽಶ್ರುತಃ' ಎಂಬ ಶ್ರುತಿಯಲ್ಲಿ ಅತತ್ವವನ್ನು ಮೊದಲು ಹೇಳಿರುವುದರಿಂದ ಈ ಭಾಷ್ಯ-ವಾಕ್ಯದಲ್ಲಿ 'ಅತತ್ವಾದಿಗುಣಕಃ' ಎಂದು ಹೇಳಬೇಕಾಗಿತ್ತು. ಆದರೂ ಅತತ್ವವು ಸರ್ವ-ಗತತ್ವವೇ ಆಗಿರುವುದರಿಂದ ಅದು ವಿಷ್ಣುವಿನಲ್ಲಿ ಇರುವುದೆಂದು ಸಾಧಿಸಬೇಕಾದ ವಿಷಯವಾಗಿದೆ. ಹೀಗೆ ಅದು ಅಸಿದ್ಧವಾದುದರಿಂದ ''ಆ ವಿಷ್ಣುವು ಅತತ್ವಾದಿ ಗುಣ-ವುಳ್ಳವನೆಂದು ಪ್ರಸಿದ್ಧನಾಗಿದ್ದಾನೆ'' ಎಂದು ಸಿದ್ಧವಾಗಿರುವ ವಿಷಯದಂತೆ ಹೇಳಲು ಸಾಧ್ಯವಿಲ್ಲದಿರುವುದರಿಂದ ಅಶ್ರುತತ್ವಾದಿಗುಣಕಃ ಎಂದು ಹೇಳಲಾಗಿದೆ. ಅಥವಾ 'ವಿಷ್ಣುವು ಅತತ್ವಾದಿಗುಣವುಳ್ಳವನು, ನ ತೇ ವಿಷ್ಣೋಃ ಇತ್ಯಾದಿ ಶ್ರುತಿ ಇರುವುದರಿಂದ' ಎಂಬ ಪ್ರಯೋಗದಲ್ಲಿ ಸರ್ವಗತತ್ವರೂಪವಾದ ಅತತ್ವವು ಸಾಧ್ಯವಾಗಿದೆ. ಆದರೆ ಆ ಅತತ್ವವು ನ ತೇ ವಿಷ್ಣೋ ಎಂಬ ಶ್ರುತಿಯಲ್ಲಿ ಉಕ್ತವಾಗದಿರುವುದರಿಂದ ಹೇತುವಿಗೂ

ಸಾಧ್ಯಕ್ಕೂ ಅನ್ವಯವಿಲ್ಲವೆಂದಾಗುವುದು. ಆದ್ದರಿಂದ ಅತತ್ವಾದಿಗುಣಕಃ ಎಂದು ಹೇಳದೇ ಅಶ್ರುತತ್ವಾದಿಗುಣಕಃ ಎಂದು ಹೇಳಲಾಗಿದೆ.

**ಭಾ– 'ಸ ಸವಿತಾ ಸ ವಾಯುಃ ಸ ಇಂದ್ರಃ, ಸೋಽಶ್ರುತಃ ಸೋಽದೃಷ್ಟೋ ಯೋ ಹರಿರ್ಯಃ ಪರಮೋ ಯೋ ವಿಷ್ಣುರ್ಯೋಽನಂತಃ' ಇತ್ಯಾದಿ ಚತುರ್ವೇದಶಿಖಾಯಾಮ್ ॥ ೨ ॥**

'ಸ ಸವಿತಾ ಸ ವಾಯುಃ ಸ ಇಂದ್ರಃ, ಸೋಽಶ್ರುತಃ ಸೋಽದೃಷ್ಟೋ ಯೋ ಹರಿರ್ಯಃ ಪರಮೋ ಯೋ ವಿಷ್ಣುರ್ಯೋಽನಂತಃ' ಇತ್ಯಾದಿ ಚತುರ್ವೇದಶಿಖಾಶ್ರುತಿಯಲ್ಲಿ ಹರಿಯೇ ಅಶ್ರುತತ್ವಾದಿ-ಗುಣವುಳ್ಳವನೆಂದು ಹೇಳಿರುವುದರಿಂದ ವಿಷ್ಣುವೇ ಮುಖ್ಯವಾಗಿ ಅಶ್ರುತತ್ವಾದಿಗುಣವುಳ್ಳವನು.

(ಭಾ.ದೀ.) ನ ತೇ ಇತ್ಯಾದಿಶ್ರುತೌ ಮುಖತೋಽಶ್ರುತತ್ವಾದಿಕಂ ವಿಷ್ಣೋರ್ನ ಪ್ರತೀಯತೇ ಇತ್ಯತಃ ಅತ್ರೈವಾರ್ಥೇ ಸ್ಪಷ್ಟಶ್ರುತಿಂ ಚಾಽಹ – **ಸ ಇತಿ ॥ ಯಃ ಸವಿತಾ** ಜಗದುತ್ಪಾದಕಃ ಸ ಹರಿರೇವ । **ಯೋ ವಾಯುಃ** ಬಲಜ್ಞಾನರೂಪೋ ದೇವಃ ಸ **ಪರಮಃ** ಪರಮಾತ್ಮೈವ । ಯಃ **ಇಂದ್ರಃ** ಪರಮೈಶ್ವರ್ಯವಾನ್ ಸ ವಿಷ್ಣುರೇವ, ನ ಪ್ರಸಿದ್ಧಾದಿತ್ಯಃ । ಯೋಽಶ್ರುತೋಽದೃಷ್ಟಃ ಸೋಽನಂತೋಽಪರಿಮಿತೋ ಹರಿರೇವ ನಾನ್ಯ ಇತ್ಯರ್ಥಃ । ಯದ್ವಾ – ಯೋ ಹರ್ಯಾದಿಶಬ್ದವಾಚ್ಯಃ ಪ್ರಸಿದ್ಧಃ, ಸ ಏವ ಸವಿತೃತ್ವಾದಿಗುಣವಾಚಿಶಬ್ದವಾಚ್ಯ ಇತ್ಯರ್ಥಃ । **ಇತ್ಯಾದೀತಿ ॥** ಯತಃ ಚತುರ್ವೇದ-ಶಿಖಾಯಾಮ್ ಇತ್ಯಾದ್ಯುಕ್ತಮ್ ಅತೋಽಪಿ ಸ ಏವ ಅಶ್ರುತತ್ವಾದಿಗುಣ ಇತ್ಯನ್ವಯಃ ।

'ನ ತೇ' ಇತ್ಯಾದಿ ಶ್ರುತಿಯಲ್ಲಿ ಅಶ್ರುತ ಮೊದಲಾದ ಪದಗಳಿಂದಲೇ ವಿಷ್ಣುವಿಗೆ ಅಶ್ರುತತ್ವಾದಿಗುಣಗಳು ಇರುವವೆಂದು ತಿಳಿದುಬರುವುದಿಲ್ಲ. ಆದ್ದರಿಂದ ಇದೇ ವಿಷಯದಲ್ಲಿ 'ಸ ಸವಿತಾ' ಎಂಬುದಾಗಿ ಸ್ಪಷ್ಟಶ್ರುತಿಯನ್ನೂ ಭಾಷ್ಯಕಾರರು ಉದಾ-ಹರಿಸುತ್ತಿದ್ದಾರೆ. ಯಃ ಸವಿತಾ - ಯಾರು ಜಗದುತ್ಪತ್ತಿಕಾರಣನೋ, ಸಃ ಹರಿರೇವ -

ಅವನು ಹರಿಯೇ ಆಗಿದ್ದಾನೆ. ಯೋ ವಾಯುಃ - ಯಾರು ಬಲಜ್ಞಾನರೂಪನಾದ ದೇವನೋ, ಸಃ ಪರಮಃ - ಅವನು ಪರಮಾತ್ಮನೇ ಆಗಿರುವನು. ಯಃ ಇಂದ್ರಃ - ಯಾರು ಪರಮೈಶ್ವರ್ಯವುಳ್ಳವನೋ, ಸಃ ವಿಷ್ಣುರೇವ - ಅವನು ವಿಷ್ಣುವೇ ಹೊರತು ಪ್ರಸಿದ್ಧರಾದ ಇಂದ್ರಾದಿಗಳಲ್ಲ. ಯಃ ಅಶ್ರುತಃ ಅದೃಷ್ಟಃ - ಯಾರು ಸಾಕಲ್ಯೇನ ಅಶ್ರುತನೂ ಅದೃಷ್ಟನೂ ಆಗಿರುವನೋ, ಸಃ ಅನಂತಃ ಹರಿರೇವ - ಅವನು ಅಪರಿಮಿತನಾದ ಹರಿಯೇ ಆಗಿರುವನು ಇನ್ನೊಬ್ಬರಲ್ಲ ಎಂದು ಶ್ರುತಿಯ ಅರ್ಥ. ಅಥವಾ – ಯಾರು ಹರಿ ಮೊದಲಾದ ಶಬ್ದಗಳಿಂದ ವಾಚ್ಯನೆಂದು ಪ್ರಸಿದ್ಧನೋ ಅವನೇ ಸವಿತೃತ್ವಾದಿ ಗುಣವಾಚಕವಾದ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆ ಎಂದು ಅರ್ಥ. ಇತ್ಯಾದಿ ಅಂದರೆ ಯಾವ ಕಾರಣದಿಂದಾಗಿ ಚತುರ್ವೇದಶಿಖಾಶ್ರುತಿಯಲ್ಲಿ ಇದೇ ಮೊದಲಾದ ರೀತಿಯಿಂದ ಹೇಳಲ್ಪಟ್ಟಿದೆಯೋ ಆದ್ದರಿಂದಲೂ ಶ್ರೀಹರಿಯೇ ಅಶ್ರುತ-ತ್ವಾದಿಗುಣವುಳ್ಳವನು ಎಂದು ಅನ್ವಯ.

**ಭಾ– ನ ಚಾದಿತ್ಯಶಬ್ದಾತ್ ಚಕ್ಷುರ್ಮಯತ್ವಾದೇಶ್ಚ ಜೀವ ಇತಿ ವಾಚ್ಯಮ್।**

ಈ ವಾಕ್ಯದಲ್ಲಿ ಆದಿತ್ಯಶಬ್ದವಿರುವುದರಿಂದ ಚಕ್ಷುರ್ಮಯತ್ವ ಮೊದ-ಲಾದ ಜೀವಲಿಂಗಗಳೂ ಶ್ರುತವಾಗಿರುವುದರಿಂದ ಆದಿತ್ಯ ಅಥವಾ ಸರ್ವಜೀವರು ಸರ್ವಗತರೆಂದು ಇಲ್ಲಿ ಹೇಳಲಾಗಿದೆ ಎಂದು ಹೇಳ-ತಕ್ಕದ್ದಲ್ಲ.

(ಭಾ.ದೀ.) ನನು ಯಥಾ ಬ್ರಹ್ಮಶಬ್ದಾದಶ್ರುತತ್ವಾದಿಲಿಂಗೈಶ್ಚ ವಿಷ್ಣುಃ ಸರ್ವಗತ ಇತ್ಯುಚ್ಯತೇ ತಥಾಽದಿತ್ಯಾದಿಶಬ್ದಾತ್ ಸರ್ವಜೀವಲಿಂಗಾಚ್ಚ ಆದಿತ್ಯಃ ಸರ್ವಜೀವಾ ವಾ ಸರ್ವಗತಾಃ ಕಿಂ ನ ಸ್ಯುಃ? ಇತ್ಯತ ಆಹ – ನ ಚೇತಿ ॥ 'ಆದಿತ್ಯೋ ರಸಃ' ಇತ್ಯಾ-ದಿತ್ಯಶಬ್ದಾತ್ ಸರ್ವಗತತ್ವಪ್ರಕರಣೇ 'ಚಕ್ಷುರ್ಮಯಃ ಶ್ರೋತ್ರಮಯಃ ಛಂದೋ-ಮಯೋ ಮನೋಮಯೋ ವಾಙ್ಮಯ ಆತ್ಮಾ' (ಐ.ಆ.೩-೨-೧) ಇತಿ ಶ್ರುತೌ ಜ್ಞಾನಕರಣಚಕ್ಷುರಾದ್ಯಾತ್ಮಕದೇಹಾಭಿಮಾನಿತ್ವೇನ ಜೀವೇ ಪ್ರಸಿದ್ಧಾತ್ ಚಕ್ಷುರ್ಮಯ-ತ್ವಾದೇಶ್ಚ ಇತ್ಯರ್ಥಃ । ಹೇತುಸಮುಚ್ಚಯೇ ಚಶಬ್ದಃ । 'ಜೀವಃ' ಇತ್ಯನೇನ ಸೂತ್ರಗತಂ

**ಶಾರೀರಪದಂ ವ್ಯಾಖ್ಯಾತಮ್ । 'ಶಾರೀರೌ ತಾವುಭೌ ಪ್ರೋಕ್ತೌ ಜೀವಶ್ಚ ಪರಮಸ್ತಥಾ' ಇತಿ ಸ್ಮೃತೇಃ । ಶರೀರಾಭಿಮಾನಿತ್ವಾಚ್ಚ ಜೀವಸ್ಯ ಶಾರೀರತ್ವಂ ಯುಕ್ತಮ್ । ಜೀವ ಇತ್ಯೇಕವಚನಂ ಸಮುದಾಯಾಭಿಪ್ರಾಯಮ್ । 'ಜೀವಶ್ಚ' ಇತ್ಯಪಿ ಚಶಬ್ದಾನ್ವಯಃ । ತೇನ ಆದಿತ್ಯಪ್ರತಿಜ್ಞಾ ಸಮುಚ್ಚೀಯತೇ । 'ಸರ್ವತ್ರ ಗತಃ' ಇತಿ ಶೇಷಃ । 'ಇತಿ ನ ವಾಚ್ಯಮ್' ಇತಿ ಸಂಬಂಧಃ ॥**

ಹೇಗೆ ಬ್ರಹ್ಮಶಬ್ದವಿರುವುದರಿಂದ ಮತ್ತು ಅಶ್ರುತತ್ವಾದಿ ಲಿಂಗಗಳಿಂದಲೂ ವಿಷ್ಣುವು ಸರ್ವಗತನಾಗಿದ್ದಾನೆ ಎಂದು ಹೇಳಲಾಗುವುದೋ ಹಾಗೆಯೇ ಆದಿತ್ಯಶಬ್ದವಿರುವುದರಿಂದ, ಸರ್ವಜೀವರ ಲಿಂಗಗಳಿರುವುದರಿಂದಲೂ ಆದಿತ್ಯ ಅಥವಾ ಸರ್ವಜೀವರು ಇಲ್ಲಿ ಸರ್ವಗತರೆಂದು ವಿವಕ್ಷಿತರಾಗಿದ್ದಾರೆ ಎಂದು ಏಕಾಗಬಾರದು? ಎಂಬ ಪ್ರಶ್ನೆಗೆ ಉತ್ತರವಾಗಿ 'ನ ಚ' ಎಂದು ಹೇಳುತ್ತಿದ್ದಾರೆ. 'ಆದಿತ್ಯೋ ರಸಃ' ಎಂದು ಆದಿತ್ಯಶಬ್ದವಿರುವುದರಿಂದ ಹಾಗೂ ಸರ್ವಗತನನ್ನು ಹೇಳುವ ಪ್ರಕರಣದಲ್ಲಿ 'ಚಕ್ಷುರ್ಮಯಃ ಶ್ರೋತ್ರಮಯಃ ಛಂದೋಮಯೋ ಮನೋಮಯೋ ವಾಙ್ಮಯ ಆತ್ಮಾ' ಎಂಬ ಶ್ರುತಿಯಲ್ಲಿ ಜ್ಞಾನಸಾಧನವಾದ ಚಕ್ಷುರಾದಿಗಳಿಂದ ಕೂಡಿದ ದೇಹಕ್ಕೆ ಅಭಿಮಾನಿಯಾಗಿರುವುದರಿಂದ ಜೀವನಲ್ಲಿ ಪ್ರಸಿದ್ಧವಾಗಿರುವ ಚಕ್ಷುರ್ಮಯತ್ವಾದಿ ಲಿಂಗಗಳಿಂದಲೂ ಎಂದು ಅರ್ಥ. ಚಕ್ಷುರ್ಮಯತ್ವಾದೇಶ್ಚ ಎಂಬಲ್ಲಿ ಚಕಾರವು ಹೇತುಗಳ ಸಮುಚ್ಚಯವನ್ನು ಹೇಳುವುದು. ಜೀವ ಎಂಬ ಪದದಿಂದ ಅನುಪಪತ್ತೇಸ್ತು ನ ಶಾರೀರಃ ಎಂಬ ಸೂತ್ರದಲ್ಲಿರುವ ಶಾರೀರಪದದ ವ್ಯಾಖ್ಯಾನವನ್ನು ಮಾಡಲಾಗಿದೆ. ಏಕೆಂದರೆ 'ಶಾರೀರೌ ತಾವುಭೌ ಪ್ರೋಕ್ತೌ ಜೀವಶ್ಚ ಪರಮಸ್ತಥಾ' 'ಜೀವ ಮತ್ತು ಪರಮಾತ್ಮ ಇವರಿಬ್ಬರೂ ಶಾರೀರರೆಂದು ಹೇಳಲ್ಪಡುವರು' ಎಂದು ಸ್ಮೃತಿವಾಕ್ಯವಿದೆ. ಹಾಗೆಯೇ ಶರೀರಕ್ಕೆ ಅಭಿಮಾನಿಯಾಗಿರುವ ಕಾರಣ ಜೀವನಿಗೆ ಶಾರೀರತ್ವವು ಯುಕ್ತವೇ ಆಗಿದೆ. ಭಾಷ್ಯದಲ್ಲಿ 'ಜೀವಃ' ಎಂದು ಏಕವಚನವು ಜೀವಸಮುದಾಯದ ಏಕತ್ವವನ್ನು ಹೇಳುವ ಅಭಿಪ್ರಾಯವುಳ್ಳದ್ದು. ಚಕಾರವನ್ನು ಜೀವಶ್ಚ ಎಂದೂ ಅನ್ವಯಿಸಬೇಕು. ಈ ಚಕಾರದಿಂದ ಆದಿತ್ಯನೂ ಸರ್ವಗತನು ಎಂಬ ಪ್ರತಿಜ್ಞೆಯ ಸಮುಚ್ಚಯವು ಹೇಳಲ್ಪಡುವುದು. 'ಸರ್ವತ್ರ ಗತಃ' ಎಂಬ ಪದಗಳು ಇಲ್ಲಿ ಶೇಷವಾಗಿವೆ. 'ಇತಿ ನ ವಾಚ್ಯಮ್' 'ಹೀಗೆ ಹೇಳತಕ್ಕದ್ದಲ್ಲ' ಎಂದು ಪದಗಳಿಗೆ ಅನ್ವಯ.

**ಸೂತ್ರ – ॥ ಓಂ ಅನುಪಪತ್ತೇಸ್ತು ನ ಶಾರೀರಃ ಓಂ ॥ ೩ ॥**

ಸರ್ವಶರೀರಸ್ಥತ್ವವು ಜೀವರಿಗೆ ಅನುಪಪನ್ನವಾದ ಕಾರಣದಿಂದಲೇ ಇಲ್ಲಿ ಸರ್ವಗತನು ಶಾರೀರನಲ್ಲ.

ಭಾ– ಏಕಸ್ಯ ಸರ್ವಶರೀರಸ್ಥತ್ವಾನುಪಪತ್ತೇರೇವ ॥ ೩ ॥

ಒಬ್ಬೊಬ್ಬ ಜೀವನಿಗೂ ಸರ್ವಶರೀರಗಳಲ್ಲಿ ಇರುವಿಕೆಯು ಉಪಪತ್ತಿ ವಿರುದ್ಧವಾದ ಕಾರಣದಿಂದಲೇ ಜೀವನು ಸರ್ವಗತನಲ್ಲ.

(ಭಾ.ದೀ.) ಕುತೋ ನ ವಾಚ್ಯಮ್? ಇತ್ಯತ್ರ ಹೇತ್ವಾಶಂಕಾಯಾಂ ಸೂತ್ರಮುಪನ್ಯಸ್ಯ ಪ್ರತಿಜ್ಞಾಭಾಗಸ್ಯಾವತಾರಿಕಾಭಾಷ್ಯೇಣೈವ ವ್ಯಾಖ್ಯಾತತ್ವಾತ್ ಹೇತ್ವಂಶಮೇವ ವ್ಯಾಚಷ್ಟೇ – **ಅನುಪಪತ್ತೇರಿತಿ ॥** 'ಏಕಸ್ಯೈಕೈಕಸ್ಯ ಜೀವಸ್ಯ' ಇತಿ ವಿಪರಿಣಾಮೇನ ಅನುವರ್ತತೇ । **ಸರ್ವಶರೀರೇತಿ ॥** ಸರ್ವಶರೀರಸ್ಥತ್ವಸ್ಯ ಅನುಪಪತ್ತೇಃ ಸರ್ವಜೀವಸ್ಯ ಸಮಾನಭೋಗಪ್ರಾಪ್ತಿರೂಪೋಪಪತ್ತಿವಿರುದ್ಧತ್ವಾದೇವ ಇತ್ಯರ್ಥಃ । ನ ತ್ವನ್ಯಪ್ರಾಪಕಾಭಾವಾದಿತಿ ಹೇತ್ವಂತರಮನ್ವೇಷಣೀಯಮ್ ಇತಿ ಏವಶಬ್ದಾರ್ಥಃ । 'ಏವ' ಇತ್ಯನೇನ ಸೌತ್ರತುಶಬ್ದೋ ವ್ಯಾಖ್ಯಾತಃ । ಅನುಪಪತ್ತಿಸ್ತು ಟೀಕಾಯಾಮೇವ ಸಹೇತುಕಮುಪಪಾದಿತಾ ॥

ಜೀವನೇ ಸರ್ವಗತನೆಂದು ಏಕೆ ಹೇಳತಕ್ಕದ್ದಲ್ಲ? ಎಂದು ಹೇತುವಿನ ಜಿಜ್ಞಾಸೆಯು ಪ್ರಾಪ್ತವಾಗಲು, ಸೂತ್ರವನ್ನು ಉದಾಹರಿಸಿ ಆ ಸೂತ್ರ ಸೂಚಿಸುವ [೧]ಅನುಮಾನದಲ್ಲಿ ಪ್ರತಿಜ್ಞಾಭಾಗವು ಈ ಸೂತ್ರಕ್ಕೆ ಅವತಾರಿಕಾರೂಪವಾದ ಭಾಷ್ಯದಿಂದಲೇ ವ್ಯಾಖ್ಯಾನಿಸಲ್ಪಟ್ಟಿರುವುದರಿಂದ ಆಚಾರ್ಯರು ಹೇತುಭಾಗವನ್ನು ಮಾತ್ರ ವ್ಯಾಖ್ಯಾನ ಮಾಡುತ್ತಿದ್ದಾರೆ. ಏಕಸ್ಯ – ಅಂದರೆ ಏಕೈಕಸ್ಯ ಜೀವಸ್ಯ ಒಬ್ಬೊಬ್ಬ ಜೀವನಿಗೂ ಎಂದು ಅರ್ಥ. ಹಿಂದಿನ ಭಾಷ್ಯವಾಕ್ಯದಲ್ಲಿರುವ ಜೀವಃ ಎಂಬ ಶಬ್ದವು ಷಷ್ಠ್ಯಂತವಾಗಿ ವ್ಯತ್ಯಾಸವನ್ನು ಪಡೆದು ಇಲ್ಲಿ ಅನುವೃತ್ತಿಯನ್ನು ಹೊಂದುತ್ತದೆ. ಸರ್ವಶರೀರಸ್ಥತ್ವ ಅನುಪಪತ್ತೇಃ ಎಂದರೆ ಸರ್ವಜೀವರಿಗೆ ಸಮಾನವಾದ ಭೋಗಪ್ರಾಪ್ತಿ ರೂಪವಾದ ಯುಕ್ತಿವಿರುದ್ಧವಾಗಿರುವುದರಿಂದಲೇ ಎಂದು ಅರ್ಥ. ಏವ ಶಬ್ದವು ವಿಷ್ಣುಭಿನ್ನರು ಇಲ್ಲಿ ಸರ್ವಗತ-

ರೆಂದು ಹೇಳಲು ಸಾಧಕವಿಲ್ಲ ಎಂಬ ಹೇತ್ವಂತರವನ್ನು ಅನ್ವೇಷಿಸುವ ಆವಶ್ಯಕತೆಯಿಲ್ಲ ಎಂಬ ಅರ್ಥವನ್ನು ಹೇಳುವುದು. ಭಾಷ್ಯದಲ್ಲಿ ಏವಪದದಿಂದ ಸೂತ್ರದಲ್ಲಿರುವ ತು-ಶಬ್ದವು ವ್ಯಾಖ್ಯಾತವಾಗಿದೆ. ಅನುಪಪತ್ತಿಯಾದರೋ ತತ್ವಪ್ರಕಾಶಿಕೆಯಲ್ಲೇ ಸಯುಕ್ತಿಕ-ವಾಗಿ ಉಪಪಾದಿತವಾಗಿದೆ.

(೧) 'ಜೀವಃ ಸರ್ವಗತಃ ನ ಭವತಿ, ಅನುಪಪತ್ತೇಃ' ಎಂಬ ಅನುಮಾನ 'ಅನು-ಪಪತ್ತೇಸ್ತು ನ ಶಾರೀರಃ' ಎಂಬ ಸೂತ್ರದಿಂದ ಸೂಚಿತವಾಗಿದೆ. ಈ ಅನುಮಾನ-ದಲ್ಲಿ 'ಜೀವಃ ಸರ್ವಗತೋ ನ ಭವತಿ' ಎಂಬ ಪ್ರತಿಜ್ಞಾಭಾಗವು 'ನ ಚ ಆದಿತ್ಯ-ಶಬ್ದಾತ್' ಇತ್ಯಾದಿ ಭಾಷ್ಯವಾಕ್ಯದಿಂದ ವ್ಯಾಖ್ಯಾತವಾಗುವುದರಿಂದ 'ಅನು-ಪಪತ್ತೇಃ' ಎಂಬ ಹೇತುಭಾಗವನ್ನು ಮಾತ್ರ ಭಾಷ್ಯಕಾರರು ವ್ಯಾಖ್ಯಾನ ಮಾಡು-ತ್ತಿದ್ದಾರೆ ಎಂದು ಭಾವ.

**ಸೂ– ॥ ಓಂ ಕರ್ಮಕರ್ತೃವ್ಯಪದೇಶಾಚ್ಚ ಓಂ ॥ ೪ ॥**

ಸರ್ವಗತನನ್ನು ಶಂಸನಕ್ರಿಯೆಗೆ ಕರ್ಮನೆಂದೂ, ಜೀವನನ್ನು ಕರ್ತೃ-ವೆಂದೂ ಹೇಳಿರುವುದರಿಂದಲೂ ಸರ್ವಗತನೆಂದು ಹೇಳಲ್ಪಟ್ಟಿರು-ವವನು ಶಾರೀರನಲ್ಲ.

**ಭಾ– 'ಆತ್ಮಾನಂ ಪರಸ್ಮೈ ಶಂಸತಿ'(ಐ.ಆ.೩-೨-೩) ಇತ್ಯಾದಿ ॥ ೪ ॥**

'ಏತಮಾತ್ಮಾನಂ ಪರಸ್ಮೈ ಶಂಸತಿ' ಎಂಬ ಐತರೇಯಶ್ರುತಿಯಲ್ಲಿ ವಿಷ್ಣುವನ್ನು ಶಂಸನಕ್ರಿಯೆಗೆ ಕರ್ಮನೆಂದು ಜೀವನು ಕರ್ತೃವೆಂದು ಹೇಳಿರುವುದರಿಂದ ಸರ್ವಗತನೆಂದು ಹೇಳಲ್ಪಟ್ಟಿರುವವನು ಶಾರೀರ-ನಲ್ಲ.

(ಭಾ.ದೀ.) ಯುಕ್ತ್ಯಂತರೇಣ ಶಾರೀರಸ್ಯ ಸರ್ವಗತತ್ವಂ ನಿರಾಕುರ್ವತ್ ಸೂತ್ರ-ಮುಪನ್ಯಸ್ಯ ತದುಪಾತ್ತಶ್ರುತಿಮೇವೋದಾಹರತಿ – **ಕರ್ಮೇತಿ ॥** ಭಾವಪ್ರಧಾನೋ-ಽಯಮ್ । ಚಃ ಸಮುಚ್ಚಯೇ । 'ಸರ್ವತ್ರೋಕ್ತಃ ಶಾರೀರಃ' ಇತಿ ಪದತ್ರಯಂ ವಿಪರಿಣಾಮೇನಾನುವರ್ತತೇ । ತಥಾಚ ಸರ್ವತ್ರೋಕ್ತಸ್ಯ ಸರ್ವಗತಸ್ಯ ಪ್ರಕೃತಸ್ಯ

**'ಏತಮಾತ್ಮಾನಂ ಪರಸ್ಮೈ ಶಂಸತಿ' ಇತ್ಯೈತರೇಯಶ್ರುತೌ ಶಂಸನಕ್ರಿಯಾಯಾಂ ಸ ಏತಮಾತ್ಮಾನಮ್ ಇತಿ ಕರ್ಮತ್ವೇನ ಶಾರೀರಸ್ಯ ಜೀವಸ್ಯ ಚ ತಸ್ಯಾಮೇವ ಕರ್ತೃತ್ವೇನ ವ್ಯಪದೇಶಾದ್ ಏಕಸ್ಯಾಂ ಕ್ರಿಯಾಯಾಂ ತಯೋರುತ್ಸರ್ಗತೋ ಭಿನ್ನತ್ವನಿಯಮಾದ್ ಅಪವಾದಕಾರಣಾಭಾವಾಚ್ಚ ನ ಸರ್ವತ್ರೋಚ್ಯಮಾನಃ ಶಾರೀರ ಇತ್ಯರ್ಥಃ।**

ಮತ್ತೊಂದು ಯುಕ್ತಿಯಿಂದ ಜೀವನಿಗೆ ಸರ್ವಗತತ್ವವನ್ನು ನಿರಾಕರಿಸುವ ಸೂತ್ರ-ವನ್ನು ಉಲ್ಲೇಖಿಸಿ, ಆ ಸೂತ್ರವು ಸ್ವೀಕರಿಸಿರುವ ಶ್ರುತಿಯನ್ನೇ ''ಕರ್ಮ'' ಎಂದು ಉದಾಹರಿಸುತ್ತಿದ್ದಾರೆ. ಇಲ್ಲಿ ಕರ್ಮಕರ್ತೃ ಶಬ್ದಗಳು ಕರ್ಮತ್ವ, ಕರ್ತೃತ್ವ ಎಂಬ ಧರ್ಮಗಳನ್ನು ಪ್ರಧಾನವಾಗಿ ಹೇಳುವ ಶಬ್ದಗಳಾಗಿವೆ. ಚಕಾರವು ಸಮುಚ್ಚಯಾ-ರ್ಥಕವಾಗಿದೆ. 'ಸರ್ವತ್ರ, ಉಕ್ತಃ, ಶಾರೀರಃ' ಎಂಬ ಮೂರು ಪದಗಳು ವಿಭಕ್ತಿ-ವ್ಯತ್ಯಾಸದೊಂದಿಗೆ ಅನುವೃತ್ತಿಯನ್ನು ಪಡೆಯುತ್ತವೆ. ತಥಾಚ – ಸರ್ವತ್ರೋಕ್ತಸ್ಯ ಪ್ರಕೃತನಾದ ಸರ್ವಗತನಿಗೆ, ಏತಮಾತ್ಮಾನಂ ಪರಸ್ಮೈ ಶಂಸತಿ - ಎಂಬ ಐತರೇಯ-ಶ್ರುತಿಯಲ್ಲಿ ಹೇಳಿರುವ ಉಪದೇಶರೂಪವಾದ ಕ್ರಿಯೆಗೆ ಏತಮಾತ್ಮಾನಂ ಎಂಬ ಪದಗಳಿಂದ ಕರ್ಮನಾಗಿರುವನೆಂದು, ಶಾರೀರಸ್ಯ ಚ - ಜೀವನಿಗಾದರೋ ಅದೇ ಕ್ರಿಯೆಯಲ್ಲಿ ಕರ್ತೃವೆಂದೂ ವ್ಯವಹಾರವಿರುವುದರಿಂದ, ಒಂದು ಕ್ರಿಯೆಯನ್ನು ಕುರಿತು ಕರ್ಮಕರ್ತೃಗಳು ಸಾಮಾನ್ಯವಾಗಿ ಭಿನ್ನವೇ ಆಗಿರುತ್ತವೆ ಎಂಬ ನಿಯಮವಿರುವುದ-ರಿಂದ, ಆ ನಿಯಮಕ್ಕೆ ಇಲ್ಲಿ ಅಪವಾದವಿರಲು ಕಾರಣವಿಲ್ಲದಿರುವುದರಿಂದಲೂ ಇಲ್ಲಿ ಸರ್ವಗತನೆಂದು ಹೇಳಲ್ಪಟ್ಟಿರುವವನು ಜೀವನಲ್ಲ ಎಂದು ಅರ್ಥ.

(ಭಾ.ದೀ.) **ತತ್ವಪ್ರದೀಪೇ ತು** – ಚಕಾರಾತ್ ಪರಸ್ಮೈ ಇತಿ ಸಂಪ್ರದಾನವ್ಯಪ-ದೇಶಾಚ್ಚ ಇತ್ಯಭಿಪ್ರಾಯಃ ಇತ್ಯುಕ್ತಮ್ । ಯಃ **'ಏತಮಾತ್ಮಾನಂ'** ಚಕ್ಷುರ್ಮಯ-ತ್ವಾದಿಗುಣಕಂ ಪರಮಾತ್ಮಾನಮ್, ಅನ್ಯ(ಪರ)ಸ್ಮೈ -ಅಯೋಗ್ಯಾಯ, ಶಂಸತಿ - ಉಪದಿಶತಿ, ತಸ್ಯ ವೇದಾಃ ದುಗ್ಧದೋಹಾಃ - ಫಲವಿದುರಾ ಭವಂತಿ ಇತ್ಯರ್ಥಃ । **'ಇತ್ಯಾದಿ'** ಇತ್ಯಸ್ಯ ಪೂರ್ವವತ್ ಸೂತ್ರೇಣಾನ್ವಯಃ। ಆದಿಪದೇನ 'ಆತ್ಮಾನಂ ವೇದ' ಇತಿ **ಟೀಕೋಕ್ತಂ** 'ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋಽಸ್ತಿ' (ಐ.ಆ. ೩-೨-೪) ಇತಿ **ತತ್ವಪ್ರದೀಪೋದಾಹೃತವಾಕ್ಯಂ** ಚ ಗೃಹ್ಯತೇ। ಸಚಿವಿದಂ -

ಕರ್ಮಸಂಚಯವೇತ್ತಾರಂ ಪ್ರೀತ್ಯಾ ಏಕದೇಶಸ್ಥತ್ವಾತ್ ಸಖಾಯಂ - ಹರಿಂ, ಯಸ್ತಿತ್ಯಾಜ - ತತ್ಯಾಜ ಅನ್ಯಥಾ ವೇದ, ತಸ್ಯ ವಾಚಿ - ವೇದಾಧ್ಯಯನಾದೌ ತಸ್ಮಾತ್ ಭಾಗಃ - ಫಲಂ ನಾಸ್ತಿ ನರಕಂ ಚ ಸ್ಯಾದಿತ್ಯರ್ಥಃ।

ತತ್ತ್ವಪ್ರದೀಪದಲ್ಲಾದರೋ, ಸೂತ್ರದಲ್ಲಿ ಚಕಾರದಿಂದ 'ಪರಸ್ಮೈ' ಎಂಬುದಾಗಿ ಜೀವನನ್ನು ಶಂಸನಕ್ರಿಯೆಗೆ ಸಂಪ್ರದಾನನೆಂದು ವ್ಯವಹಾರವಿರುವುದರಿಂದಲೂ ಎಂದು ಅಭಿಪ್ರಾಯ ಎಂದು ಹೇಳಿರುವರು. ಯಃ ಏತಮಾತ್ಮಾನಂ - ಯಾರು ಚಕ್ಷುರ್ಮಯತ್ವಾದಿ ಗುಣವುಳ್ಳ ಈ ಪರಮಾತ್ಮನನ್ನು, ಪರಸ್ಮೈ - ಅಯೋಗ್ಯನಿಗೆ ಶಂಸತಿ - ಉಪದೇಶಿಸುವನೋ, ತಸ್ಯ ವೇದಾಃ ದುಗ್ಧದೋಹಾಃ ಭವಂತಿ - ಅವನು ಅಧ್ಯಯನ ಮಾಡಿದ ವೇದಗಳು ನಿಷ್ಫಲವಾಗುವವು ಎಂದು ಅರ್ಥ. ಭಾಷ್ಯದಲ್ಲಿ 'ಇತ್ಯಾದಿ' ಎಂಬ ಪದಕ್ಕೆ ಹಿಂದಿನ ಭಾಷ್ಯವಾಕ್ಯದಂತೆ ಸೂತ್ರದೊಂದಿಗೆ ಅನ್ವಯವಾಗುವುದು. ಇಲ್ಲಿ ಆದಿಶಬ್ದದಿಂದ 'ಆತ್ಮಾನಂ ವೇದ' ಎಂದು ತತ್ತ್ವಪ್ರಕಾಶಿಕೆಯಲ್ಲಿ ಹೇಳಿರುವ ವಾಕ್ಯವು, ಹಾಗೆಯೇ 'ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋಽಸ್ತಿ' ಎಂದು ತತ್ತ್ವಪ್ರದೀಪದಲ್ಲಿ ಉದಾಹರಿಸಲ್ಪಟ್ಟಿರುವ ವಾಕ್ಯವು ಗ್ರಹಿಸಲ್ಪಡುವುದು. ಸಚಿವಿದಂ - ಜೀವರ ಕರ್ಮಸಂಗ್ರಹವನ್ನು ತಿಳಿದಿರುವ, ಸಖಾಯಂ - ಜೀವನಲ್ಲಿರುವ ಪ್ರೀತಿಯಿಂದ ಅವನೊಂದಿಗೆ ಹೃದಯವೆಂಬ ಒಂದೇ ಸ್ಥಳದಲ್ಲಿ ಇರುವ ಕಾರಣ ಸಖನೆಂದೆನಿಸುವ ಹರಿಯನ್ನು, ಯಃ ತಿತ್ಯಾಜ - ಅಂದರೆ ಯಃ ತತ್ಯಾಜ - ಯಾರು ಅನ್ಯಥಾ ತಿಳಿಯುವನೋ, ತಸ್ಯ ಅವನಿಗೆ, 'ವಾಚಿ' - ವೇದಾಧ್ಯಯನಾದಿಗಳಲ್ಲಿ, ಅಂದರೆ ವೇದಾಧ್ಯಯನಾದಿಗಳಿಂದ, 'ಭಾಗೋ ನಾಸ್ತಿ' ಯಾವುದೇ ಫಲವಿಲ್ಲ. ನರಕವೂ ಆಗುವುದು ಎಂದು ಅರ್ಥ.

ಸೂ– ॥ ಓಂ ಶಬ್ದವಿಶೇಷಾತ್ ಓಂ ॥ ೫ ॥

'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ಶ್ರುತಿಯಲ್ಲಿ ವಿಷ್ಣುವೇ ಸರ್ವಗತನೆಂದು ಇಲ್ಲಿ ಹೇಳಲ್ಪಟ್ಟಿದ್ದಾನೆ ಎಂದು ಸಾಧಿಸಲು ಹೇತುವಾಗಿ ಉಕ್ತವಾಗಿರುವ ಬ್ರಹ್ಮಶಬ್ದಕ್ಕೆ ಸಾವಧಾರಣತ್ವವೆಂಬ ವಿಶೇಷವಿರುವುದರಿಂದ ಇಲ್ಲಿ ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುವುದು.

ಭಾ– 'ಏತಮೇವ ಬ್ರಹ್ಮೇತ್ಯಾಚಕ್ಷತೇ' (ಐ.ಆ. ೩-೨-೩) ಇತಿ।

'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬುದಾಗಿ ಶ್ರುತಿಯಲ್ಲಿ ವಿಷ್ಣುವಿಗೆ ಸರ್ವಗತತ್ವಸಾಧಕವಾದ ಬ್ರಹ್ಮಶಬ್ದವೆಂಬ ಹೇತುವಿಗೆ ಸಾವಧಾರಣತ್ವ ಎಂಬ ವಿಶೇಷವಿರುವುದರಿಂದ ಪ್ರಕೃತ ಬ್ರಹ್ಮಶಬ್ದವು ವಿಷ್ಣುವಾಚಕವೇ ಆಗಿದೆ.

(ಭಾ.ದೀ.) ಯದುಕ್ತಂ ಬ್ರಹ್ಮಶಬ್ದಾದ್ ವಿಷ್ಣುರೇವ ಸರ್ವಗತ ಇತಿ; ತದಯುಕ್ತಮ್, ಬ್ರಹ್ಮಶಬ್ದಸ್ಯ ಜೀವೇಽಪಿ ವೃತ್ತೇಃ । ನ ಚಾಸೌ ಜೀವೇಽಮುಖ್ಯ ಇತಿ ತದಗ್ರಹಃ । ಚಕ್ಷುರ್ಮಯತ್ವಾದಿಬಾಧಕಬಲೇನಾಮುಖ್ಯಾರ್ಥಸ್ಯಾಪಿ ಗ್ರಹಣೋಪಪತ್ತೇಃ । ನ ಚ ದ್ವಿತೀಯಸೂತ್ರೋಕ್ತಬಾಧಕಾನ್ನ ಜೀವಃ 'ಶ್ರುತ್ವಾಽಪ್ಯೇನಂ ವೇದ ನ ಚೈವ ಕಶ್ಚಿತ್' ಇತಿ ಗೀತಾಯಾಂ ಜೀವಸ್ಯ ಅಶ್ರುತತ್ವಾದಿಶ್ರವಣಾತ್, ತೃತೀಯೋಕ್ತಸ್ಯ ಚ ವಿಷ್ಣಾವಪಿ ಸಾಮ್ಯಾತ್ । ನಾಪಿ 'ತುರೀಯೋಕ್ತಚಕ್ಷುರ್ಮಯತ್ವಾದಿಬಾಧಕೇನ, ಏಕಸ್ಯೈವ ಕರ್ಮತ್ವಕರ್ತೃತ್ವಯೋರುಪಪತ್ತೇಃ ಇತ್ಯಾಶಂಕಾಂ ಪರಿಹರತ್ ಸೂತ್ರಮುಪನ್ಯಸ್ಯ ತದುಪಾತ್ತಶ್ರುತಿಮೇವೋದಾಹರತಿ – **ಶಬ್ದೇತಿ** ॥ ಭಾಷ್ಯಸ್ಯ ಸೂತ್ರೇಣಾನ್ವಯಃ । ತಥಾಚ – 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಇತಿ ವಾಕ್ಯೇ ಹೇತುತ್ವೇನ ಪ್ರಕೃತಬ್ರಹ್ಮಶಬ್ದಸ್ಯ 'ವಿಶೇಷಾತ್' ಸಾವಧಾರಣತ್ವರೂಪವಿಶೇಷವತ್ತ್ವಾತ್ ಇತ್ಯರ್ಥಃ।

ಅಸ್ಯ ನಾನೇನ ಬ್ರಹ್ಮಶಬ್ದೇನ ಶಾರೀರ ಉಚ್ಯತೇ ಇತಿ ಲಬ್ಧಸಾಧ್ಯೇನಾನ್ವಯಃ । ಅನೇನೈವಕಾರೋ ವಿಧೇಯಪದಸಂಗತಃ, ತಚ್ಚಿರಸ್ಕಬ್ರಹ್ಮಶಬ್ದಶ್ಚ ಮುಖ್ಯಬ್ರಹ್ಮತ್ವಾರ್ಥಕಃ, ಸ ಚ ಜೀವೇ ನ ಯುಕ್ತ ಇತ್ಯುಕ್ತಂ ಭವತಿ।

ಯದ್ವಾ– ಏವಕಾರ ಏತಮಿತ್ಯುದ್ದೇಶ್ಯವಾಚಿಪದೇನೈವ ಸಂಗತೋಽನ್ಯಯೋಗವ್ಯವಚ್ಛೇದಾರ್ಥಕಃ। ನ ಚೈವಂ ಬ್ರಹ್ಮಶಬ್ದಸ್ಯ ಸಾವಧಾರಣತ್ವಾಪ್ರಾಪ್ತಿರಿತಿ ವಾಚ್ಯಮ್ । ಏವಕಾರಾರ್ಥಾವಧಾರಣಸ್ಯ ಅನ್ಯಯೋಗವ್ಯವಚ್ಛೇದಸ್ಯ ಅನ್ಯಸ್ಮಿನ್ ಬ್ರಹ್ಮತ್ವಯೋಗವ್ಯವಚ್ಛೇದ ಇತಿ ವಿವರಣೇ ಬ್ರಹ್ಮಶಬ್ದಾರ್ಥಬ್ರಹ್ಮತ್ವಸಂಬಂಧಾದ್ ಬ್ರಹ್ಮಶಬ್ದಸ್ಯ ಸಾವಧಾರಣತ್ವಪ್ರಾಪ್ತೇಃ।

ಯದ್ಯಪಿ ನ ಶಾರೀರ ಏತಚ್ಛಬ್ದಾರ್ಥಃ । ಕುತಃ? ತಸ್ಯ ಏವಕಾರಾರ್ಥಪ್ರತಿಯೋಗಿ-ವಾಚಕಬ್ರಹ್ಮಶಬ್ದೇನೈವ ವಿಶೇಷಿತತ್ವಾತ್ ಇತಿ ಸೂತ್ರವೃತ್ತಿಃ ಸಂಭವತಿ । ತಥಾऽಪಿ ನ ಸಾ ಟೀಕೋಕ್ತಾ ಇತಿ ನ ಕೈರಪಿ ಪ್ರದರ್ಶಿತಾ ।

ಸರ್ವಗತನನ್ನು ಕುರಿತು ಈ ಶ್ರುತಿಯಲ್ಲಿ ಬ್ರಹ್ಮಶಬ್ದವನ್ನು ಪ್ರಯೋಗಿಸಿರುವು-ದರಿಂದ ವಿಷ್ಣುವೇ ಸರ್ವಗತನು ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ, ಬ್ರಹ್ಮ-ಶಬ್ದಕ್ಕೆ ಜೀವನೆಂಬ ಅರ್ಥವೂ ಇದೆ. ಜೀವನ ವಿಷಯದಲ್ಲಿ ಬ್ರಹ್ಮಶಬ್ದವು ಅಮುಖ್ಯ-ವಾಗಿರುವುದರಿಂದ ಬ್ರಹ್ಮಶಬ್ದದಿಂದ ಇಲ್ಲಿ ಜೀವನನ್ನು ಗ್ರಹಿಸಲಾಗದು ಎಂದು ಹೇಳ-ಲಾಗದು. ಏಕೆಂದರೆ ಚಕ್ಷುರ್ಮಯತ್ವವೇ ಮೊದಲಾದ ಜೀವಲಿಂಗಗಳೆಂಬ ಬಾಧಕವಿ-ರುವುದರಿಂದ ಬ್ರಹ್ಮಶಬ್ದದಿಂದ ಅದರ ಅಮುಖ್ಯಾರ್ಥನಾಗಿದ್ದರೂ ಜೀವನನ್ನೇ ಗ್ರಹಿಸು-ವುದು ಯುಕ್ತವಾಗಿದೆ. ಇಲ್ಲಿ ಈ ಅಧಿಕರಣದ [೧]ಎರಡನೆಯ ಸೂತ್ರದಲ್ಲಿ ಹೇಳಿರುವ ಬಾಧಕದಿಂದಾಗಿ ಜೀವನನ್ನು ಗ್ರಹಿಸಲಾಗದು ಎಂದರೆ ಅದೂ ಸರಿಯಲ್ಲ. ಏಕೆಂದರೆ 'ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್' ಎಂಬ ಗೀತಾಶ್ಲೋಕದಲ್ಲಿ ಜೀವನಿಗೂ ಅಶ್ರುತತ್ವಾದಿ ಗುಣಗಳು ಶ್ರುತವಾಗಿವೆ. ಈ ಅಧಿಕರಣದ [೨]ಮೂರನೆಯ ಸೂತ್ರದಲ್ಲಿ ಹೇಳಿರುವ ಬಾಧಕವಾದರೋ ವಿಷ್ಣುವಿಗೂ ಸಮಾನವಾಗಿದೆ. ಜೀವನು ಸರ್ವಗತ-ನೆಂದು ಹೇಳಲು [೩]ನಾಲ್ಕನೆಯ ಸೂತ್ರದಲ್ಲಿ ಹೇಳಿರುವ ಅನುಪಪತ್ತಿಯೂ ಸರಿಯಲ್ಲ. ಏಕೆಂದರೆ, ಈ ಪ್ರಕರಣದಲ್ಲಿ ಚಕ್ಷುರ್ಮಯತ್ವ ಮೊದಲಾದ ಜೀವಲಿಂಗಗಳು ವಿಷ್ಣು-ವನ್ನು ಸರ್ವಗತನೆಂದು ಗ್ರಹಿಸಲು ಬಾಧಕವಾಗಿರುವುದರಿಂದ ಒಬ್ಬನಿಗೇ ಕರ್ಮತ್ವ ಕರ್ತೃತ್ವಗಳನ್ನು ಹೇಳುವುದು ಯುಕ್ತವಾಗುವುದು ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಉಪನ್ಯಾಸಮಾಡಿ ಆ ಸೂತ್ರವು ಗ್ರಹಿಸಿರುವ 'ಏತಮೇವ ಬ್ರಹ್ಮ' ಎಂಬ ಶ್ರುತಿಯನ್ನು ಭಾಷ್ಯಕಾರರು ಉದಾಹರಿಸುತ್ತಿದ್ದಾರೆ. 'ಏತಮೇವ ಬ್ರಹ್ಮೇತ್ಯಾಚಕ್ಷತೇ ಇತಿ' ಎಂಬ ಭಾಷ್ಯವಾಕ್ಯಕ್ಕೆ ಸೂತ್ರದೊಂದಿಗೆ ಅನ್ವಯವಾಗುವುದು. ತಥಾಚ 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ವಾಕ್ಯದಲ್ಲಿ ವಿಷ್ಣುವಿಗೆ ಸರ್ವಗತತ್ವವನ್ನು ಸಾಧಿಸಲು ಹೇತು-ವಾಗಿ ಪ್ರಸ್ತುತವಾಗಿರುವ ಬ್ರಹ್ಮಶಬ್ದಕ್ಕೆ ವಿಶೇಷಾತ್ - ಸಾವಧಾರಣತ್ವವೆಂಬ ವಿಶೇಷವಿ-ರುವುದರಿಂದ ಎಂದು ಸೂತ್ರದ ಅರ್ಥ.

ಈ ಹೇತುವಿಗೆ 'ನ ಅನೇನ ಬ್ರಹ್ಮಶಬ್ದೇನ ಶಾರೀರ ಉಚ್ಯತೇ' - 'ಇಲ್ಲಿರುವ ಬ್ರಹ್ಮಶಬ್ದದಿಂದ ಜೀವನು ಹೇಳಲ್ಪಡುವುದಿಲ್ಲ' ಎಂಬ ಸಾಧ್ಯದೊಂದಿಗೆ ಅನ್ವಯವಿರುವುದು. [೪]ಇದರಿಂದ ಶ್ರುತಿಯಲ್ಲಿ ಏವಕಾರವು ವಿಧೇಯವಾದ ಬ್ರಹ್ಮಶಬ್ದದೊಂದಿಗೆ ಸಂಬಂಧವನ್ನು ಪಡೆಯುವುದು. ಆ ಏವಶಬ್ದವನ್ನು ತನ್ನ ಮುಂದೆ ಹೊಂದಿರುವ ಬ್ರಹ್ಮಶಬ್ದವು ಮುಖ್ಯಬ್ರಹ್ಮನನ್ನೇ ಹೇಳುವುದು. ಅಂತಹ ಬ್ರಹ್ಮಶಬ್ದವು ಜೀವನ ವಿಷಯದಲ್ಲಿ ಯುಕ್ತವಲ್ಲ - ಎಂದು ಹೇಳಿದಂತಾಗುವುದು.

ಅಥವಾ [೫]ಏವಕಾರವು ಏತಂ ಎಂಬ ಉದ್ದೇಶ್ಯವಾಚಕಪದದೊಂದಿಗೆ ಅನ್ವಿತವಾಗಿದ್ದು ಅನ್ಯಯೋಗವ್ಯವಚ್ಛೇದ ಎಂಬ ಅರ್ಥವನ್ನು ಹೊಂದಿದೆ. ಹೀಗೆ ಅನ್ವಯಮಾಡಿದ ಪಕ್ಷದಲ್ಲಿ ಬ್ರಹ್ಮಶಬ್ದಕ್ಕೆ ಸಾವಧಾರಣತ್ವವು ಲಭಿಸಲಾರದು ಎಂದರೆ ಅದು ಸರಿಯಲ್ಲ. ಏವಕಾರದ ಅರ್ಥವಾದ ಅವಧಾರಣಕ್ಕೆ ಅಂದರೆ ಅನ್ಯಯೋಗವ್ಯವಚ್ಛೇದಕ್ಕೆ ಅನ್ಯಸ್ಮಿನ್ ಇತರರಲ್ಲಿ ಯೋಗದ ಅಂದರೆ ಬ್ರಹ್ಮತ್ವಸಂಬಂಧದ, ವ್ಯವಚ್ಛೇದ ಅಂದರೆ ರಾಹಿತ್ಯ ಎಂದು ವಿವರಣೆಯನ್ನು ನೀಡಿದಾಗ ಬ್ರಹ್ಮಶಬ್ದಾರ್ಥವಾದ ಬ್ರಹ್ಮತ್ವದ ಸಂಬಂಧವನ್ನು ಹೇಳಿದಲ್ಲಿ ಬ್ರಹ್ಮಶಬ್ದವು ಸಾವಧಾರಣವೆಂದು ಲಭಿಸುವುದು.

ಯದ್ಯಪಿ 'ನ ಶಾರೀರಃ ಏತಚ್ಛಬ್ದಾರ್ಥಃ' - ಏತಮೇವ ಎಂಬ ಶ್ರುತಿಯಲ್ಲಿ ಜೀವನು ಏತಚ್ಛಬ್ದದ ಅರ್ಥವಲ್ಲ. ಏಕೆಂದರೆ, ಏತಚ್ಛಬ್ದವು ಏವಕಾರದ ಅರ್ಥವಾದ ಅನ್ಯಯೋಗವ್ಯವಚ್ಛೇದದ ಪ್ರತಿಯೋಗಿಯನ್ನು ಹೇಳುವ ಬ್ರಹ್ಮಶಬ್ದವೆಂಬ ವಿಶೇಷಣವನ್ನು ಪಡೆದಿರುವುದರಿಂದ ಎಂಬುದಾಗಿ ಸೂತ್ರವ್ಯಾಖ್ಯಾನವನ್ನು ಮಾಡಲು ಸಾಧ್ಯವಿದೆ. ಆದರೂ ತತ್ತ್ವಪ್ರಕಾಶಿಕೆಯಲ್ಲಿ ಹೇಳದಿರುವುದರಿಂದ ಯಾರೂ ಆ ವ್ಯಾಖ್ಯಾನವನ್ನು ತೋರಿಸಿಲ್ಲ.

(೧) 'ವಿವಕ್ಷಿತಗುಣೋಪಪತ್ತೇಶ್ಚ' ಎಂದು ಎರಡನೆಯ ಸೂತ್ರ. 'ಸ ಯೋಽತೋಽಶ್ರುತಃ' ಎಂಬ ಶ್ರುತಿಯಲ್ಲಿ ಹೇಳಿರುವ ಅಶ್ರುತತ್ವಾದಿಗುಣಗಳು ಸರ್ವಗತನು ಜೀವನೆಂದು ಗ್ರಹಿಸಲು ಬಾಧಕವೆಂದು ಹೇಳಿದೆ.

(೨) 'ಅನುಪಪತ್ತೇಸ್ತು ನ ಶಾರೀರಃ' – ಇದು ಈ ಅಧಿಕರಣದ ಮೂರನೆಯ ಸೂತ್ರ. ಒಬ್ಬನಿಗೆ ಸರ್ವಶರೀರಸ್ಥತ್ವವು ಅನುಪಪನ್ನವೆಂದು ಜೀವನನ್ನು ಸರ್ವಗತ–

ನೆಂದು ಗ್ರಹಿಸಲು ಬಾಧಕವೆಂದು ಹೇಳಿದಲ್ಲಿ ಆ ಬಾಧಕವು ವಿಷ್ಣುವಿನ ವಿಷಯ–ದಲ್ಲೂ ಸಮಾನವೆಂದು ಪೂರ್ವಪಕ್ಷಿಯ ಆಶಯ.

(೩) 'ಕರ್ಮಕರ್ತೃವ್ಯಪದೇಶಾಚ್ಚ' ಎಂಬ ನಾಲ್ಕನೆಯ ಸೂತ್ರದಲ್ಲಿ

(೪) 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ಶ್ರುತಿಯಲ್ಲಿ 'ಏತತ್' ಶಬ್ದವಾಚ್ಯ–ನನ್ನು ಉದ್ದೇಶಿಸಿ ಅವನು ಬ್ರಹ್ಮನೆಂದು ವಿಧಾನ ಮಾಡಲಾಗಿದೆ. ಆದ್ದರಿಂದ ಏತಚ್ಛಬ್ದವು ಉದ್ದೇಶ್ಯವಾಚಕಪದ ಮತ್ತು ಬ್ರಹ್ಮಶಬ್ದವು ವಿಧೇಯವಾಚಕ ಪದ. ಏವಕಾರಕ್ಕೆ ವಿಧೇಯವಾಚಕಪದದೊಂದಿಗೆ ಅನ್ವಯ ಮಾಡಿದಾಗ 'ಏತಂ ಬ್ರಹ್ಮೈವ ಇತ್ಯಾಚಕ್ಷತೇ' 'ಇವನನ್ನು ಬ್ರಹ್ಮನೇ ಆಗಿರುವನೆಂದು ಹೇಳುವರು' ಎಂದು ವಾಕ್ಯವು ಲಭಿಸುವುದು. ಏವಶಬ್ದವನ್ನು ತನ್ನ ಮುಂದೆ ಹೊಂದಿರುವ ಬ್ರಹ್ಮಶಬ್ದವು ಏತಚ್ಛಬ್ದವಾಚ್ಯನು ಮುಖ್ಯಬ್ರಹ್ಮನಾಗಿರುವನೆಂದು ಹೇಳುವುದೆಂದು ಭಾವ.

(೫) ಈ ಪಕ್ಷದ ಪ್ರಕಾರ ಶ್ರುತಿಯಲ್ಲಿ ಕೇಳಿಬರುವಂತೆ ಏವಕಾರವು ಏತಚ್ಛಬ್ದ–ದೊಂದಿಗೆ ಅನ್ವಯವನ್ನು ಪಡೆದಿದೆ. ಏವಕಾರವು ಬ್ರಹ್ಮಶಬ್ದದೊಂದಿಗೆ ಅನ್ವಯ–ವನ್ನು ಹೊಂದಿಲ್ಲವಾದರೆ ಬ್ರಹ್ಮಶಬ್ದವು ಸಾವಧಾರಣವಾಗುವುದು ಹೇಗೆ? ಎಂದು ಶಂಕೆ. ಉದ್ದೇಶ್ಯವಾಚಕವಾದ ಏತಚ್ಛಬ್ದದ ಅನ್ವಯವನ್ನು ಹೊಂದಿರುವ ಏವಕಾರಕ್ಕೆ ಅನ್ಯಯೋಗವ್ಯವಚ್ಛೇದವು ಅರ್ಥವಾಗಿದೆ. ಏತಚ್ಛಬ್ದವಾಚ್ಯನಿಗಿಂತ ಭಿನ್ನನಾದವನಲ್ಲಿ ಬ್ರಹ್ಮತ್ವಯೋಗ ಅಂದರೆ ಬ್ರಹ್ಮತ್ವಸಂಬಂಧದ ರಾಹಿತ್ಯ ಅಂದರೆ ಅಭಾವವಿದೆ ಎಂದು 'ಏತಮೇವ' ಎಂಬ ಪದಗಳಿಂದ ಅರ್ಥವು ಲಭಿಸುವುದು. ಈ ಪದಗಳ ಮುಂದಿರುವ ಬ್ರಹ್ಮಶಬ್ದವು ಏತಚ್ಛಬ್ದವಾಚ್ಯನಲ್ಲಿ ಬ್ರಹ್ಮತ್ವದ ಸಂಬಂಧವನ್ನು ತಿಳಿಸುವುದು. ಹೀಗೆ ಏವಶಬ್ದ – ಬ್ರಹ್ಮಶಬ್ದಗಳಿಂದ ಏತಚ್ಛಬ್ದ–ವಾಚ್ಯನಿಗಿಂತ ಭಿನ್ನನಲ್ಲಿ ಬ್ರಹ್ಮತ್ವದ ಅಭಾವ ಮತ್ತು ಏತಚ್ಛಬ್ದವಾಚ್ಯನಲ್ಲಿ ಬ್ರಹ್ಮತ್ವದ ಸಂಬಂಧ ತಿಳಿದು ಬರುವುದು. ಇದೇ ಬ್ರಹ್ಮಶಬ್ದವು ಸಾವಧಾರಣವೆನ್ನುವುದರ ಆಶಯವೆಂದು ಭಾವ.

**ಭಾ– ನ ಹಿ ಜೀವಮೇವ ಬ್ರಹ್ಮೇತ್ಯಾಚಕ್ಷತೇ ।**

ಜೀವನನ್ನೇ ಬ್ರಹ್ಮನೆಂದು ಹೇಳುವುದಿಲ್ಲವಷ್ಟೇ .

(ಭಾ.ದೀ.) ಸಾವಧಾರಣತ್ವೇಽಪಿ ಬ್ರಹ್ಮಶಬ್ದಸ್ಯ ಕುತೋ ನ ಜೀವೇ ವೃತ್ತಿರಿತ್ಯತ ಆಹ – **ನ ಹೀತಿ ।। ಹಿಶಬ್ದಃ ಪ್ರಸಿದ್ಧೌ ಹೇತೌ ಚ।** 'ಕವಯಃ' ಇತಿ ಶೇಷಃ। ಕುತಃ? ಇತಿ ಚೇದ್ ಏವಕಾರಶಿರಸ್ಕಬ್ರಹ್ಮಶಬ್ದವಾಚ್ಯತ್ವೇ ಜೀವಸ್ಯ ಮುಖ್ಯಬ್ರಹ್ಮತ್ವಂ ಸ್ಯಾತ್, ತಚ್ಚ ನೋಪಪದ್ಯತೇ । ತಸ್ಯ ಅಮುಖ್ಯಬ್ರಹ್ಮತ್ವೇನ ಪ್ರಸಿದ್ಧತ್ವಾತ್ ಇತಿ ಭಾವಃ । ಏವಮ್ ಏವಕಾರಸ್ಯ ಉದ್ದೇಶ್ಯಸಂಬಂಧೇನಾನ್ಯಯೋಗವ್ಯವಚ್ಛೇದಕತ್ವೇಽಪಿ ಪೂರ್ವಪಕ್ಷೇ ಏತಚ್ಛಬ್ದಾರ್ಥತ್ವೇನ ಅಭಿಮತಜೀವಾದನ್ಯಸ್ಯ ಬ್ರಹ್ಮತ್ವಂ ನಿಷಿದ್ಧಂ ಸ್ಯಾತ್ । ತಚ್ಚ ನೋಪಪದ್ಯತೇ । ಜೀವಾದನ್ಯಸ್ಯ ಪರಮಾತ್ಮನೋ ಮುಖ್ಯಬ್ರಹ್ಮಣೋ ಜಾತ್ಯಾದೇರಮುಖ್ಯಬ್ರಹ್ಮಣಶ್ಚ ಸತ್ತ್ವೇನಾನ್ಯಸ್ಯ ಬ್ರಹ್ಮತ್ವಸಂಬಂಧನಿಷೇಧಾಯೋಗಾತ್ ಇತ್ಯಪಿ ದ್ರಷ್ಟವ್ಯಮ್ । **ತತ್ತ್ವಪ್ರದೀಪೇ** ತು – ಜೀವಸ್ಯ ಬ್ರಹ್ಮತ್ವೇ ತಸ್ಯ ಭೂತತ್ವೇನ ಭೂತೇಷು ಇತ್ಯುಕ್ತಂ ಭೂತಸ್ಥತ್ವಂ ನ ಯುಜ್ಯತೇ - ಇತ್ಯುಕ್ತಮ್ ।

ಏತಮೇವ ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದವು ಏವಕಾರಸಹಿತವಾಗಿದ್ದರೂ ಅದು ಜೀವವಾಚಕವೇಕಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ 'ನ ಹಿ' ಎಂದು ಹೇಳುತ್ತಿದ್ದಾರೆ. ಇಲ್ಲಿ ಹಿಶಬ್ದವು ಪ್ರಸಿದ್ಧಿ ಮತ್ತು ಹೇತು ಎಂಬ ಎರಡೂ ಅರ್ಥಗಳನ್ನು ಹೇಳುವುದು. **'ಕವಯಃ'** - 'ಜ್ಞಾನಿಗಳು' ಎಂಬ ಪದವು ಇಲ್ಲಿ ಶೇಷವಾಗಿದೆ. ಬ್ರಹ್ಮಶಬ್ದಕ್ಕೆ ಇಲ್ಲಿ ಜೀವವಾಚಕತ್ವವಿಲ್ಲ ಏಕೆಂದರೆ ಏವಕಾರವನ್ನು ತನ್ನ ಮುಂದೆ ಹೊಂದಿರುವ ಬ್ರಹ್ಮಶಬ್ದದಿಂದ ಜೀವನು ವಾಚ್ಯನಾಗಿದ್ದ ಪಕ್ಷದಲ್ಲಿ ಅವನಿಗೆ ಮುಖ್ಯಬ್ರಹ್ಮತ್ವವು ಇರುವುದೆಂದು ಹೇಳಬೇಕಾಗುವುದು. ಆದರೆ ಅದು ಯುಕ್ತವಲ್ಲ. ಏಕೆಂದರೆ, ಅವನು ಅಮುಖ್ಯಬ್ರಹ್ಮನೆಂದು ಪ್ರಸಿದ್ಧನಾಗಿದ್ದಾನೆ ಎಂದು ಭಾವ. ಇದೇ ರೀತಿಯಾಗಿ ಏವಕಾರವು ಉದ್ದೇಶ್ಯಪದವಾದ ಏತಚ್ಛಬ್ದದಿಂದ ಸಂಬಂಧವನ್ನು ಪಡೆದು ಅನ್ಯಯೋಗವ್ಯವಚ್ಛೇದವನ್ನು ಹೇಳುವುದೆಂದು ಒಪ್ಪಿದರೂ, ಪೂರ್ವಪಕ್ಷದ ಪ್ರಕಾರ ಏತಚ್ಛಬ್ದಾರ್ಥವೆಂದು ಸಮ್ಮತನಾದ ಜೀವನಿಗಿಂತ ಭಿನ್ನರಾದವರಿಗೆ ಬ್ರಹ್ಮತ್ವವು ನಿಷಿದ್ಧವಾಗುವುದು. ಆದರೆ ಅದು ಯುಕ್ತವಲ್ಲ. ಜೀವನಿಗಿಂತ ಭಿನ್ನನಾದ ಪರಮಾತ್ಮನೆಂಬ ಮುಖ್ಯಬ್ರಹ್ಮನಿರುವಾಗ, ಹಾಗೆಯೇ ಬ್ರಾಹ್ಮಣಜಾತಿ ಮೊದಲಾದ ಅಮುಖ್ಯಬ್ರಹ್ಮವು ಇರುವಾಗ ಅನ್ಯರಿಗೆ ಬ್ರಹ್ಮತ್ವದ ಸಂಬಂಧವೇ ಇಲ್ಲವೆಂದು ನಿಷೇಧವನ್ನು ಮಾಡಲು ಸಾಧ್ಯವಿಲ್ಲ

ಎಂದು ತಿಳಿಯಬೇಕು. ತತ್ತ್ವಪ್ರದೀಪದಲ್ಲಾದರೋ – 'ಜೀವನಿಗೆ ಬ್ರಹ್ಮತ್ವವಿರುವುದಾದರೆ ಅವನೂ ಒಬ್ಬ ಭೂತ, ಅಂದರೆ ಪ್ರಾಣಿಯಾಗಿರುವುದರಿಂದ 'ಏತಂ ಭೂತೇಷು' ಎಂಬ ವಾಕ್ಯದಿಂದ ಹೇಳಲಾದ ಭೂತಸ್ಥತ್ವವು ಯುಕ್ತವಾಗುವುದಿಲ್ಲ' ಎಂದು ಹೇಳಲಾಗಿದೆ.

**ಭಾ– 'ಏಷ ಉ ಏವ ಬ್ರಹ್ಮೈಷ ಉ ಏವಾತ್ಮೈಷ ಉ ಏವ ಸವಿತೈಷ ಉ ಏವೇಂದ್ರ ಏಷ ಉ ಏವ ಹರಿರ್ಹರತಿ ಪರಃ ಪರಾನಂದಃ' ಇತಿ ಚೇಂದ್ರದ್ಯುಮ್ನಶಾಖಾಯಾಮ್ ॥೫॥**

'ಏಷ ಉ ಏವ ಬ್ರಹ್ಮೈಷ ಉ ಏವಾತ್ಮೈಷ ಉ ಏವ ಸವಿತೈಷ ಉ ಏವೇಂದ್ರ ಏಷ ಉ ಏವ ಹರಿರ್ಹರತಿ ಪರಃ ಪರಾನಂದಃ' ಎಂಬ ಇಂದ್ರದ್ಯುಮ್ನಶಾಖೆಯ ಶ್ರುತಿಯಲ್ಲಿ ಏವಕಾರಸಹಿತವಾದ ಬ್ರಹ್ಮಶಬ್ದವು ವಿಷ್ಣುವಾಚಕವೇ ಆಗಿದೆ ಎಂದು ಹೇಳಿದೆ.

(ಭಾ.ದೀ.) ವಿಷ್ಣಾವಪಿ ಸಾವಧಾರಣಬ್ರಹ್ಮಶಬ್ದಸ್ಯ ವೃತ್ತಿಃ ಕುತ ಇತ್ಯತ ಆಹ – **ಏಷ ಇತಿ** ॥ ಉಶಬ್ದಸ್ಯ ವ್ಯಾಖ್ಯಾ ಏವೇತಿ ॥ ಯದ್ವಾ – ಉಶಬ್ದೋ ವಿಷ್ಣುಪರಃ । ತಥಾಚ 'ಏಷ ವಿಷ್ಣುರೇವ ಬ್ರಹ್ಮ' ಇತ್ಯರ್ಥಃ । ಆತ್ಮಾನಮ್ ಇತ್ಯುಕ್ತಮಾತ್ಮತ್ವಂ, ಸ ಸವಿತಾ ಇತ್ಯುಕ್ತಸವಿತೃತ್ವಾದಿಕಮಪಿ ವಿಷ್ಣೋರೇವ ಇತ್ಯಾಹ – **ಏಷ ಉ ಏವಾಽತ್ಮಾ ಇತ್ಯಾದಿನಾ** ॥ ಯ ಉ ಯೋ ವಿಷ್ಣುರೇವ ಹರಿಃ । ತತ್ರ ನಿಮಿತ್ತಮಾಹ – **ಹರತೀತಿ** ॥ ಯಜ್ಞಗೃಹೇಷ್ವಿಡೋಪಹತಂ ಭಾಗಂ ಸ್ವೀಕರೋತಿ ಇತ್ಯರ್ಥಃ । ಏವಮೇಷ ಏವ ಪರ ಉತ್ತಮಃ ಪೂರ್ಣಾನಂದಶ್ಚ ಇತಿ ಯೋಜನಾ । 'ಇಂದ್ರದ್ಯುಮ್ನಶಾಖಾಯಾಮ್' ಇತ್ಯಸ್ಯ 'ಯ ಏತಂ ಸರ್ವಭೂತಸ್ಥಂ ವಿಷ್ಣುಮೇವ ಬ್ರಹ್ಮೇತ್ಯಾಚಕ್ಷತೇ ಇಂದ್ರದ್ಯುಮ್ನಾಃ' ಇತ್ಯುಪಸ್ಕೃತೇನ ಅನ್ವಯಃ । ಅಸ್ಯ ಚ ಹೇತೋರವತಾರಿಕಾಗತಸಾಧ್ಯೇನಾನ್ವಯಃ ॥

'ಏವ'ಕಾರ ಸಹಿತವಾದ ಬ್ರಹ್ಮಶಬ್ದವು ವಿಷ್ಣುವನ್ನು ಹೇಳುವುದು ಎಂಬ ವಿಷಯದಲ್ಲಿ ಪ್ರಮಾಣವೇನು? ಎಂಬ ಶಂಕೆಗೆ 'ಏಷ' ಇತ್ಯಾದಿ ವಾಕ್ಯದಿಂದ ಉತ್ತರಿಸಲಾಗಿದೆ.

ಶ್ರುತಿಯಲ್ಲಿ 'ಏವ' ಎಂಬ ಪದವು 'ಉ'ಶಬ್ದದ ವ್ಯಾಖ್ಯಾನವಾಗಿದೆ. ಅಥವಾ ಉಶಬ್ದವು ಇಲ್ಲಿ ವಿಷ್ಣುವಾಚಕವಾಗಿದೆ. ತಥಾ ಚ 'ಏಷ ಉ ಏವ ಬ್ರಹ್ಮ' ಅಂದರೆ ಈ ವಿಷ್ಣುವೇ ಬ್ರಹ್ಮನಾಗಿದ್ದಾನೆ ಎಂದು ಅರ್ಥ. 'ಆತ್ಮಾನಮ್ ಪರಸ್ಮೈ ಶಂಸತಿ' ಎಂಬ ವಾಕ್ಯದಲ್ಲಿ ಆತ್ಮಾನಂ ಎಂಬ ಪದದಿಂದ ಹೇಳಲಾದ ಆತ್ಮತ್ವವು, 'ಸ ಸವಿತಾ ಸ ವಾಯುಃ' ಎಂಬ ವಾಕ್ಯದಲ್ಲಿ ಹೇಳಿದ ಸವಿತೃತ್ವ ಅಂದರೆ ಜಗದುತ್ಪಾದಕತ್ವ ಮೊದಲಾದ ಧರ್ಮಗಳೂ ವಿಷ್ಣುವಿಗೇ ಇರುವುದೆಂದು 'ಏಷ ಉ ಏವ ಆತ್ಮಾ' ಇತ್ಯಾದಿ ಶ್ರುತಿಯಿಂದ ಹೇಳಲಾಗಿದೆ. 'ಯ ಉ' ಯಾವ ವಿಷ್ಣುವು ಇರುವನೋ ಅವನೇ ಹರಿಯು. ಈ ವಿಷಯದಲ್ಲಿ ನಿಮಿತ್ತವನ್ನು 'ಹರತಿ' ಇತ್ಯಾದಿ ವಾಕ್ಯದಿಂದ ಶ್ರುತಿಯು ಹೇಳುತ್ತಿದೆ. ಯಜ್ಞಗೃಹಗಳಲ್ಲಿ ಇಡಾ ಎಂಬ ಸಾಧನದಿಂದ ಹೋಮಿಸಲ್ಪಟ್ಟ ಭಾಗವನ್ನು ಸ್ವೀಕರಿಸುತ್ತಾನೆ ಎಂದು ಅರ್ಥ. ಅಥವಾ ಸತಾಂ ಪಾಪಂ ಹರತಿ - ಸಜ್ಜನರ ಪಾಪಗಳನ್ನು ಕಳೆಯುತ್ತಾನೆ ಎಂದು ಅರ್ಥ. ಹಾಗೆಯೇ ಏಷ ಏವ ಇವನೇ, ಪರಃ ಅಂದರೆ ಉತ್ತಮನೂ ಪೂರ್ಣಾನಂದನೂ ಆಗಿರುವನು ಎಂದು ಯೋಜನೆ. 'ಇಂದ್ರದ್ಯುಮ್ನಶಾಖೆಯಲ್ಲಿ' ಎಂಬ ಪದಕ್ಕೆ 'ಯ ಏತಂ ಸರ್ವಭೂತಸ್ಥಂ ವಿಷ್ಣುಮೇವ ಬ್ರಹ್ಮೇತ್ಯಾಚಕ್ಷತೇ ಇಂದದ್ಯುಮ್ನಾಃ' 'ಸರ್ವಜೀವರಲ್ಲಿರುವ ಈ ವಿಷ್ಣುವನ್ನೇ ಇಂದ್ರದ್ಯುಮ್ನಶಾಖಿಗಳು ಬ್ರಹ್ಮನೆಂದು ಹೇಳುವರು' ಎಂದು ಅಧ್ಯಾಹಾರಮಾಡಿಕೊಂಡ ವಾಕ್ಯದೊಂದಿಗೆ ಅನ್ವಯವಿರುವುದು. ಈ ಸೂತ್ರವು ಸೂಚಿಸುವ ಹೇತುವಿಗೆ ಅವತರಣಿಕೆಯಲ್ಲಿ ಹೇಳಲಾದ ಸಾಧ್ಯದೊಂದಿಗೆ ಅನ್ವಯವಾಗುವುದು.

**ಸೂ– ॥ ಓಂ ಸ್ಮೃತೇಶ್ಚ ಓಂ ॥ ೬ ॥**

ಸ್ಮೃತಿಗಳ ಆಧಾರದಿಂದಲೂ ಇಲ್ಲಿ ಹೇಳಲಾದ ಸರ್ವಗತತ್ವವು ವಿಷ್ಣುವಿಗೆ ಇರುವುದೇ ಹೊರತು ಅನ್ಯರಿಗಲ್ಲ.

**ಭಾ– 'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ'** । (ಭ.ಗೀ. ೧೦.೨೦); **'ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ'**(ಭ.ಗೀ. ೧೫.೨೩) ಇತ್ಯಾದಿ ।

'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ', 'ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ' ಇತ್ಯಾದಿ ಸ್ಮೃತಿವಾಕ್ಯಗಳ ಬಲದಿಂದಲೂ ವಿಷ್ಣುವಿಗೇ ಇಲ್ಲಿ ಹೇಳಿರುವ ಸರ್ವಗತತ್ವವು ಹೊರತು ಅನ್ಯರಿಗಲ್ಲ.

(ಭಾ.ದೀ.) ಸ್ಮೃತಿಸಮಾಖ್ಯಯಾಽಪಿ ವಿಷ್ಣೋಃ ಅತ್ರೋಕ್ತಸರ್ವಗತತ್ವಂ ಸಾಧಯತ್ಸೂತ್ರಂ ಪಠಿತ್ವಾ ಸ್ಮೃತಿಮುದಾಹರತಿ – **ಸ್ಮೃತೇಶ್ಚೇತಿ** ॥ 'ಇತ್ಯಾದಿ ಸ್ಮೃತೇಶ್ಚ ಸರ್ವತ್ರೋಚ್ಯಮಾನೋ ನಾರಾಯಣ ಏವ' ಇತ್ಯನ್ವಯಃ। ನ ಕೇವಲಮುಕ್ತಹೇತುಭ್ಯ ಇತಿ '**ಚ**'ಕಾರಾರ್ಥಃ । ಸ್ಮೃತೇಃ ಸ್ವವಚನತ್ವೇಽಪಿ ಪರೋಕ್ತಾನುವಾದರೂಪತ್ವಾತ್ ತದುಕ್ತಿರ್ಯುಕ್ತಾ। ಏವಮಗ್ರೇಽಪಿ।

**ಹೇ ಗುಡಾಕೇಶ,** ಗುಡಾಕಾ - ನಿದ್ರಾ, ತದೀಶಃ - ತದ್ರಹಿತ ಇತಿ ಯಾವತ್ । ಗುಡವದಾಸಮಂತಾತ್ ಈಷದಲಕ್ತಶ್ಲಕ್ಷ್ಣಕೇಶೇತಿ ವಾ । 'ಅಹಮಂತರ್ಯಾಮಿತಯಾ ಸರ್ವಹೃದಯಸ್ಥಿತಃ' ಇತ್ಯರ್ಥಃ।

**ಗಾಂ**- ಭೂಮಿಮ್, **ಆವಿಶ್ಯ**- ತತ್ರಾವತೀರ್ಯ, **ಭೂತಾನಿ**- ಜೀವಾನ್ **ಓಜಸಾ** - ಸಾಮರ್ಥ್ಯೇನ **ಧಾರಯಾಮಿ** - ಇತ್ಯನ್ಯವಾಕ್ಯಸ್ಯಾರ್ಥಃ।

ಇಮೇ ಚ ಗೀತಾಯಾಮ್ ಅರ್ಜುನಂ ಪ್ರತಿ ಕೃಷ್ಣವಾಕ್ಯೇ । ಪೂರ್ವವಾಕ್ಯೇ ಸರ್ವಭೂತಾಶಯಸ್ಥೋ ಯ ಆತ್ಮಾ ಜೀವಃ ಸೋಽಹಮಿತ್ಯಭೇದಪ್ರತೀತಿನಿರಾಸಾಯ ದ್ವಿತೀಯವಾಕ್ಯೋದಾಹರಣಮ್ । ತದ್ಗತತ್ವೇನೈವ ತದ್ಧಾರಕತ್ವಮ್ ಅಭಿಪ್ರೇತಮ್ । ಅತೋ ನಾಸಂಗತಿಃ। ಆದಿಪದಾತ್ ಸ್ಮೃತ್ಯಂತರಸಂಗ್ರಹಃ॥

ಸಮಾನಾರ್ಥಕಸ್ಮೃತಿಗಳ ಆಧಾರದಿಂದಲೂ ವಿಷ್ಣುವಿಗೇ ಸರ್ವಗತತ್ವವಿದೆ ಎಂದು ಸಾಧಿಸುವ ಸೂತ್ರವನ್ನು ಪಠಿಸಿ, ಆ ಸ್ಮೃತಿವಾಕ್ಯವನ್ನು 'ಸ್ಮೃತೇಶ್ಚ' ಎಂದು ಉದಾಹರಿಸುತ್ತಿದ್ದಾರೆ. 'ಇತ್ಯಾದಿ ಸ್ಮೃತಿಗಳ ಆಧಾರದಿಂದಲೂ ಸರ್ವತ್ರ ಇರುವನೆಂದು ಹೇಳಲ್ಪಟ್ಟಿರುವವನು ನಾರಾಯಣನೇ' ಎಂದು ಅನ್ವಯ. ಇಲ್ಲಿ ಹೇಳಿರುವ ಹೇತು-

ಗಳಿಂದ ಮಾತ್ರವಲ್ಲ ಎಂಬುದಾಗಿ ಚಕಾರದ ಅರ್ಥವಾಗಿದೆ. ಸ್ಮೃತಿಯು ತನ್ನ ವಚನವೇ ಆಗಿದ್ದರೂ ಪರರು ಹೇಳಿದ್ದರ ಅನುವಾದ ರೂಪವಾಗಿರುವುದರಿಂದ ಆ ವಾಕ್ಯಗಳನ್ನು ಹೇಳಿರುವುದು ಯುಕ್ತವೇ ಆಗಿದೆ. ಮುಂದೆಯೂ ಇದೇ ರೀತಿ ತಿಳಿಯತಕ್ಕದ್ದು.

**ಹೇ ಗುಡಾಕೇಶ!** - ಇಲ್ಲಿ ಗುಡಾಕಾ ಎಂದರೆ ನಿದ್ರೆ, ಅದಕ್ಕೆ ಈಶನಾದವನು ಅಂದರೆ ನಿದ್ರಾರಹಿತನು ಎಂದು ಗುಡಾಕೇಶಶಬ್ದದ ಅರ್ಥವಾಗಿದೆ. ಅಥವಾ ಗುಡಾಕಾ ಅಂದರೆ ಬೆಲ್ಲದಂತೆ ಆ ಚೆನ್ನಾಗಿ, ಅಲಕ್ತಶ್ಲಕ್ಷ್ಣಕೇಶ ಅಂದರೆ ನಸುಗೆಂಪಾದ ಮೃದುವಾದ ಕೇಶವುಳ್ಳವನು ಎಂದು ಅರ್ಥ. ನಾನು ಅಂತರ್ಯಾಮಿಯಾಗಿ ಎಲ್ಲರ ಹೃದಯದಲ್ಲಿ ಇರುವವನು ಎಂದು ಅರ್ಥ.

**'ಗಾಂ'** - ಭೂಮಿಯನ್ನು, **ಆವಿಶ್ಯ** - ಅಂದರೆ ಅಲ್ಲಿ ಅವತರಿಸಿ, **ಭೂತಾನಿ** - ಜೀವರನ್ನು, **ಓಜಸಾ**- ನನ್ನ ಸಾಮರ್ಥ್ಯದಿಂದ, **ಧಾರಯಾಮಿ** - ಧರಿಸುವೆನು ಎಂದು ಇನ್ನೊಂದು ವಾಕ್ಯದ ಅರ್ಥ.

ಈ ಎರಡೂ ವಾಕ್ಯಗಳು ಗೀತೆಯಲ್ಲಿ ಅರ್ಜುನನ್ನು ಕುರಿತು ಕೃಷ್ಣ ಹೇಳುವ ವಾಕ್ಯ-ಗಳಾಗಿವೆ. ಇವೆರಡರ ಮಧ್ಯೆ ಮೊದಲನೆಯ ವಾಕ್ಯದಲ್ಲಿ ಸರ್ವಪ್ರಾಣಿಗಳ ಅಂತ-ರ್ಯಾಮಿಯಾಗಿ ಯಾರು ಇರುವನೋ ಅವನು ಆತ್ಮಾ - ಜೀವನು, ಅವನೇ ನಾನಾ-ಗಿರುವೆನು ಎಂದು (ಜೀವಬ್ರಹ್ಮರಿಗೆ) ಅಭೇದಭ್ರಾಂತಿಯು ಬರದಿರಲು ಎರಡನೆಯ ವಾಕ್ಯವನ್ನು ಉದಾಹರಿಸಲಾಗಿದೆ. ಸರ್ವಪ್ರಾಣಿಗಳ ಹೃದ್ಗತನಾಗಿಯೇ ಅವರ ಧಾರಕ-ನಾಗಿದ್ದಾನೆ ಎಂಬ ಅಭಿಪ್ರಾಯವು ಇಲ್ಲಿ ವಿವಕ್ಷಿತವಾಗಿದೆ. ಆದ್ದರಿಂದ ಅಸಂಗತಿಯಿಲ್ಲ. ಆದಿಪದದಿಂದ ಮತ್ತೊಂದು ಸ್ಮೃತಿಯನ್ನು ಸಂಗ್ರಹಿಸಬೇಕು.

**ಭಾ– ನ ಚಾಪ್ರಾಮಾಣಿಕಂ ಕಲ್ಪ್ಯಮ್ ॥ ೬ ॥**

ಅಪ್ರಾಮಾಣಿಕವಾದದ್ದನ್ನು ಕಲ್ಪಿಸತಕ್ಕದ್ದಲ್ಲ.

(ಭಾ.ದೀ.) ಅನ್ಯೇ ತು, 'ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಸಂಕಲ್ಪಃ' ಇತಿ ವಾಕ್ಯೇ ಮನೋಮಯತ್ವಾದಿಗುಣ ಈಶ್ವರ ಏವ, ನ ಜೀವ ಇತಿ

ಸಿದ್ಧಾಂತಿತೇ ಜೀವೇಶಯೋರೈಕ್ಯಾತ್ ಕಥಮೇತತ್? ಇತ್ಯಾಶಂಕ್ಯ ಅಸ್ತಿ ಭೇದಃ । ನ ಚಾಪಸಿದ್ಧಾಂತಃ, ಯತೋಽಯಂ ನ ಪಾರಮಾರ್ಥಿಕಃ, ಕಿಂತು ಮಿಥ್ಯಾಭೂತ ಏವ ಸೂತ್ರಕೃತಾ ವಿವಕ್ಷಿತ ಇತಿ ಸಮಾಧಾಯ ಭೇದಮಿಥ್ಯಾತ್ವೇ ಸೂತ್ರತಾತ್ಪರ್ಯಂ ವರ್ಣಯಂತಿ । ತೇಷಾಂ ಮತಮಾಶಂಕ್ಯ ದೂಷಯತಿ – **ನ ಚೇತಿ ॥ ಚಸ್ತ್ವರ್ಥೇ ।** **ನಞ್** ಚ ತದ್ವಿರುದ್ಧತದಭಾವಾರ್ಥಃ । ತಥಾಚ – ''ಅಪ್ರಾಮಾಣಿಕಂ ಭೇದಮಿಥ್ಯಾತ್ವಂ ತು ನ ಕಲ್ಪ್ಯಮ್ ಸೂತ್ರಕೃದ್ವಿವಕ್ಷಾವಿಷಯತ್ವೇನ ನ ಕಲ್ಪನೀಯಮ್ । ಕುತಃ? ಯತಸ್ತದಪ್ರಾಮಾಣಿಕಂ ಪ್ರಮಾಣಶೂನ್ಯಂ 'ದ್ವಾ ಸುಪರ್ಣಾ' ಇತ್ಯಾದಿಪ್ರಮಾಣ-ವಿರುದ್ಧಂ ಚ, ಅತಃ'' ಇತಿ ಯೋಜನಾ ।

ಇತರರಾದರೋ 'ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯ-ಸಂಕಲ್ಪಃ' ಎಂಬ ವಾಕ್ಯದಲ್ಲಿ ಮನೋಮಯತ್ವ ಮೊದಲಾದ ಗುಣವುಳ್ಳವನು ಈಶ್ವರನೇ ಹೊರತು ಜೀವನಲ್ಲ ಎಂದು ಸಿದ್ಧಾಂತವನ್ನು ಸ್ವೀಕರಿಸಿದಾಗ, ಜೀವೇಶರಿಗೆ ಅಭೇದವಿರುವುದರಿಂದ ಜೀವನು ಮನೋಮಯತ್ವಾದಿ ಗುಣವುಳ್ಳವನಲ್ಲ ಎಂದು ಹೇಳುವುದು ಹೇಗೆ? ಎಂದು ಶಂಕಿಸಿ, ಅವರಿಬ್ಬರಿಗೂ ಭೇದವಿದೆ. ಹೀಗೆ ಹೇಳಿದ ಪಕ್ಷದಲ್ಲಿ ಅಪಸಿದ್ಧಾಂತದೋಷ ಬರುವುದೆಂದು ಹೇಳಬಾರದು. ಏಕೆಂದರೆ ಈ ಭೇದವು ಪಾರಮಾರ್ಥಿಕವಲ್ಲ. ಕಿಂತು ಮಿಥ್ಯಾಭೂತವಾದದ್ದೆಂದೇ ಸೂತ್ರಕಾರರಿಗೆ ವಿವಕ್ಷಿತವಾ-ಗಿದೆ ಎಂದು ಸಮಾಧಾನವನ್ನು ಹೇಳಿ ಭೇದಮಿಥ್ಯಾತ್ವವಿಷಯದಲ್ಲಿ ಸೂತ್ರಕ್ಕೆ ತಾತ್ಪರ್ಯವಿರುವುದೆಂದು ವರ್ಣಿಸುವರು. ಅವರ ಈ ಅಭಿಪ್ರಾಯವನ್ನು ಆಶಂಕಿಸಿ, ಭಾಷ್ಯಕಾರರು ''ನ ಚ'' ಎಂಬ ವಾಕ್ಯದಿಂದ ದೂಷಿಸುತ್ತಿದ್ದಾರೆ. ಇಲ್ಲಿ ಚಕಾರವು ತುಶಬ್ದದ ಅರ್ಥವನ್ನು ಹೇಳುವುದು. ಅಪ್ರಾಮಾಣಿಕಂ ಎಂಬ ಪದದಲ್ಲಿರುವ ನಞ್ ಶಬ್ದವು ಪ್ರಮಾಣವಿರುದ್ಧ ಮತ್ತು ಪ್ರಮಾಣಾಭಾವ ಎಂಬ ಅರ್ಥಗಳನ್ನು ಹೊಂದಿದೆ. ತಥಾಚ – ಅಪ್ರಾಮಾಣಿಕಂ - ಅಪ್ರಾಮಾಣಿಕವಾದ ಭೇದಮಿಥ್ಯಾತ್ವವಾದರೋ, 'ನ ಕಲ್ಪ್ಯಮ್' ಸೂತ್ರಕಾರರಿಗೆ ವಿವಕ್ಷಿತವಾದುದೆಂದು ಕಲ್ಪಿಸತಕ್ಕದ್ದಲ್ಲ. ಏಕೆಂದರೆ, ತದ-ಪ್ರಾಮಾಣಿಕಂ - ಆ ಭೇದಮಿಥ್ಯಾತ್ವವು ಪ್ರಮಾಣಶೂನ್ಯವೂ ಹಾಗೂ ದ್ವಾಸುಪರ್ಣಾ ಇತ್ಯಾದಿ ಪ್ರಮಾಣಗಳಿಗೆ ವಿರುದ್ಧವೂ ಆಗಿರುವುದು - ಎಂದು ಯೋಜನೆ.

**ಸೂ– ॥ ಓಂ ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ಓಂ ॥೭॥**

ಸರ್ವಪ್ರಾಣಿಹೃದಯಸ್ಥನಿಗೆ ಅಲ್ಪಸ್ಥಾನದಲ್ಲಿ ಸ್ಥಿತಿಯನ್ನು ಹೇಳಲಾಗಿದೆಯಾದ್ದರಿಂದ ಅವನು ಬ್ರಹ್ಮನಲ್ಲ. ಮತ್ತು ಚಕ್ಷುರ್ಮಯಃ ಇತ್ಯಾದಿ ಶ್ರುತಿಯಲ್ಲಿ ಜೀವನನ್ನೇ ಹೇಳಲಾಗಿದೆ ಎಂದರೆ ಅದು ಸರಿಯಲ್ಲ. ಏಕೆಂದರೆ, ಅಲ್ಪಸ್ಥಾನಸ್ಥಿತನೆಂದು ಹಾಗೆಯೇ ಚಕ್ಷುರ್ಮಯ ಮೊದಲಾದ ರೀತಿಯಿಂದ ಉಪಾಸನೆ ಮಾಡುವುದಕ್ಕಾಗಿ ಹಾಗೆ ಹೇಳಲಾಗಿದೆ. ಸರ್ವಗತನಾದವನಿಗೂ ಆಕಾಶದಂತೆ ಅಲ್ಪಸ್ಥಾನದಲ್ಲಿ ಇರುವಿಕೆಯು ಯುಕ್ತವಾಗಿದೆ.

**ಭಾ– ಸರ್ವೇಷು ಭೂತೇಷು ಇತ್ಯಲ್ಪೌಕಸ್ತ್ವಾಚ್ಚಕ್ಷುರ್ಮಯತ್ವಾದಿನಾ ಜೀವವ್ಯಪದೇಶಾಚ್ಚ ನೇತಿ ಚೇನ್ನ।**

'ಸರ್ವೇಷು ಭೂತೇಷು' ಎಂಬ ವಾಕ್ಯದಲ್ಲಿ ಅಲ್ಪಸ್ಥಾನಸ್ಥಿತತ್ವವನ್ನು ಹೇಳಿರುವುದರಿಂದ, ಚಕ್ಷುರ್ಮಯ ಮೊದಲಾದ ರೀತಿಯಿಂದ ಜೀವನನ್ನು ಹೇಳಿರುವುದರಿಂದ ಸರ್ವಗತನೆಂದು ಹೇಳಲ್ಪಟ್ಟಿರುವವನು ವಿಷ್ಣುವಲ್ಲ ಎಂದರೆ, ಅದು ಸರಿಯಲ್ಲ.

(ಭಾ.ದೀ.) ಉಕ್ತಾರ್ಥಮಾಕ್ಷಿಪ್ಯ ಸಮಾದಧತ್ ಸೂತ್ರಂ ಪಠಿತ್ವಾ ಆಕ್ಷೇಪಾಂಶಂ ತಾವದ್ವ್ಯಾಚಷ್ಟೇ – **ಅರ್ಭಕೇತಿ ॥** 'ವಾಕ್ಯೇ' ಇತಿ ಶೇಷಃ । ಅರ್ಭಕೇತ್ಯಸ್ಯ ವ್ಯಾಖ್ಯಾ **ಅಲ್ಪೇತಿ ॥** ಅಲ್ಪಮ್ ಓಕಃ ಸ್ಥಾನಂ ಯಸ್ಯ ತಸ್ಯ ಭಾವಃ ತತ್ತ್ವಂ ತಸ್ಮಾತ್ । ತಥಾಚ ಅಲ್ಪಸ್ಥಾನಸ್ಥಿತತ್ವೋಕ್ತೇಃ ಇತ್ಯರ್ಥಃ। ಸರ್ವಜೀವಹೃದಯಸುಷಿರಾಣಾಮಲ್ಪತ್ವಾತ್ ಇತಿ ಭಾವಃ । ಸೂತ್ರಗತತಚ್ಛಬ್ದಸ್ಯ ಪ್ರಕಾರಪ್ರಕಾರ್ಯುಭಯಾರ್ಥತ್ವಂ ಮತ್ವಾऽऽಹ – ಚಕ್ಷುರಿತಿ, ಜೀವ ಇತಿ ಚ। ಆದಿಪದೇನ ಶ್ರೋತ್ರಮಯತ್ವಾದಿ ಗೃಹ್ಯತೇ। ಚಕಾರಾದಾದಿಶಬ್ದಾದ್ವಾ ಆದಿತ್ಯಶ್ರುತಿರಪಿ ಗೃಹ್ಯತೇ । ಅತ ಏವ ಜೀವಪದಮಾದಿತ್ಯಸಾಧಾ-

ರಣಂ ಪ್ರಾಯೋಜಿ । ಜೀವಸ್ಯ ವ್ಯಪದೇಶೋ ವಚನಂ ಜೀವವ್ಯಪದೇಶಃ; 'ಚಕ್ಷು-ರ್ಮಯಃ ಶ್ರೋತ್ರಮಯ ಇತಿ ಶ್ರುತೌ' ಇತಿ ಶೇಷಃ । **ಚೋ ಹೇತುಸಮುಚ್ಚಯೇ । ನೇತಿ ॥** ಸರ್ವತ್ರೋಚ್ಯಮಾನೋ ನಾರಾಯಣ ಏವೇತಿ ಯದುಕ್ತಂ ತನ್ನೇತ್ಯರ್ಥಃ । ಪರಮಾತ್ಮಪಕ್ಷೇಽಪಿ ಜೀವಪಕ್ಷ ಇವ ಬಾಧಕಸದ್ಭಾವಾದಿತಿ ಭಾವಃ।

ಪರಿಹಾರಾಂಶಂ ವ್ಯಾಚಷ್ಟೇ – **ನೇತಿ ॥** ಉಕ್ತಬಾಧಕಾದ್ ವಿಷ್ಣೋಃ ಸರ್ವತ್ರ - ಉಚ್ಯಮಾನತ್ವಾಭಾವೋ ನೇತ್ಯರ್ಥಃ।

ಈ ಹಿಂದೆ ಹೇಳಲಾದ ವಿಷಯವನ್ನು ಆಕ್ಷೇಪಿಸಿ, ಸಮಾಧಾನವನ್ನು ಹೇಳುವ ಸೂತ್ರವನ್ನು ಪಠಿಸಿ, ಅಲ್ಲಿ ಆಕ್ಷೇಪಭಾಗವನ್ನು ಮೊದಲು 'ಅರ್ಭಕ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಭಾಷ್ಯದಲ್ಲಿ 'ಸರ್ವೇಷು ಭೂತೇಷು' ಎಂಬ ಪದಗಳ ನಂತರ 'ವಾಕ್ಯೇ' ಎಂಬ ಪದವು ಶೇಷವಾಗಿ ಸೇರುವುದು. ಸೂತ್ರದಲ್ಲಿ ಇರುವ ಅರ್ಭಕಪದಕ್ಕೆ ಭಾಷ್ಯದಲ್ಲಿ ಅಲ್ಪ ಎಂದು ವ್ಯಾಖ್ಯಾನ ಮಾಡಲಾಗಿದೆ. ಅಲ್ಪಮ್ - ಅಲ್ಪವಾದ ಓಕಃ - ಸ್ಥಾನವು ಯಾರಿಗಿರುವುದೋ ಅವನು, ಅಲ್ಪೌಕಾಃ ಅಂದರೆ ಅಲ್ಪಸ್ಥಾನವುಳ್ಳವನು. 'ತಸ್ಯ ಭಾವಃ ಅಲ್ಪೌಕಸ್ತ್ವಮ್ ತಸ್ಮಾತ್' ಎಂದು ವಿಗ್ರಹ. ಅಲ್ಪ-ಸ್ಥಾನಸ್ಥಿತತ್ವವನ್ನು ಹೇಳಿರುವುದರಿಂದ ಎಂದು ಅರ್ಥ. ಸರ್ವಜೀವರ ಹೃದಯಾಕಾಶಗಳು ಅಲ್ಪಪರಿಮಾಣವನ್ನು ಹೊಂದಿರುವುದರಿಂದ ಎಂದು ಭಾವ. ಸೂತ್ರದಲ್ಲಿ ತತ್ತ-ದ್ವ್ಯಪದೇಶಾತ್ ಎಂಬಲ್ಲಿರುವ ತತ್‌ಶಬ್ದಕ್ಕೆ ಪ್ರಕಾರ ಮತ್ತು ಪ್ರಕಾರಿ ಎಂಬ ಎರಡೂ ಅರ್ಥವಿರುವುದೆಂದು ತಿಳಿದು , ಚಕ್ಷುರ್ಮಯತ್ವಾದಿನಾ - ಅಂದರೆ ಚಕ್ಷುರ್ಮಯತ್ವ ಮೊದಲಾದ ಪ್ರಕಾರದಿಂದ, ಆ ಪ್ರಕಾರವನ್ನು ಹೊಂದಿರುವ ಕಾರಣ ಪ್ರಕಾರಿ ಎನಿಸುವ ಜೀವನ ವ್ಯವಹಾರವಿರುವುದರಿಂದ ಎಂದು ಹೇಳಲಾಗಿದೆ. ಚಕ್ಷುರ್ಮಯತ್ವಾದಿನಾ ಎಂಬಲ್ಲಿರುವ ಆದಿಪದದಿಂದ ಶ್ರೋತ್ರಮಯತ್ವ ಮೊದಲಾದವು ಗ್ರಹಿಸಲ್ಪಡುವವು. ಚಕಾರದಿಂದ ಅಥವಾ ಆದಿಶಬ್ದದಿಂದ ಆದಿತ್ಯಶಬ್ದವು ಗ್ರಹಿಸಲ್ಪಡುವುದು. ಆದ್ದರಿಂದಲೇ ಆದಿತ್ಯನಿಗೂ ಅನ್ವಯಿಸುವ 'ಜೀವ'ಶಬ್ದವನ್ನು ಭಾಷ್ಯದಲ್ಲಿ ಪ್ರಯೋಗಿಸಲಾಗಿದೆ. ಜೀವಸ್ಯ ವ್ಯಪದೇಶಃ ಜೀವವ್ಯಪದೇಶಃ. ವ್ಯಪದೇಶವೆಂದರೆ ವಚನ ಎಂದು ಅರ್ಥ. 'ಚಕ್ಷುರ್ಮಯಃ ಶ್ರೋತ್ರಮಯಃ ಎಂಬ ಶ್ರುತಿಯಲ್ಲಿ' ಎಂಬ ಪದಗಳು ಇಲ್ಲಿ ಶೇಷ-

ವಾಗಿವೆ. ವ್ಯಪದೇಶಾಚ್ಚ ಎಂಬಲ್ಲಿರುವ ಚಶಬ್ದವು ಹೇತುಗಳ ಸಮುಚ್ಚಯವನ್ನು ಹೇಳುವುದು. ನೇತಿ ಎಂದರೆ ಸರ್ವತ್ರ ಅಂದರೆ ಸರ್ವಪ್ರಾಣಿಗಳ ಹೃದಯದಲ್ಲಿ ಇರುವವನೆಂದು ಹೇಳಲಾದವನು ನಾರಾಯಣನೇ ಆಗಿರುವನು ಎಂದು ಯಾವುದು ಹೇಳಲ್ಪಟ್ಟಿತ್ತೋ ಅದು ಸರಿಯಲ್ಲ ಎಂದು ಅರ್ಥ. ಜೀವಪಕ್ಷದಲ್ಲಿ ಬಾಧಕವಿರುವಂತೆ ಪರಮಾತ್ಮಪಕ್ಷದಲ್ಲೂ ಬಾಧಕವಿರುವುದರಿಂದ ಹಾಗೆ ಹೇಳಲಾಗದು ಎಂದು ಭಾವ.

ಈ ಆಕ್ಷೇಪವನ್ನು ನಿರಾಕರಿಸುವ ಸೂತ್ರಭಾಗವನ್ನು ''ನ'' ಎಂಬುದಾಗಿ ಭಾಷ್ಯದಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ. ಈಗ ಹೇಳಿದ ಬಾಧಕದಿಂದ ವಿಷ್ಣುವಿಗೆ ಸರ್ವಪ್ರಾಣಿಹೃದಯಸ್ಥತ್ವವಿಲ್ಲ ಎನ್ನುವುದು ಸರಿಯಲ್ಲ ಎಂದು ಅರ್ಥ.

**ಭಾ– ಅರ್ಭಕೌಕಸ್ತ್ವೇನ ಚಕ್ಷುರ್ಮಯತ್ವಾದಿರೂಪೇಣ ಚ ತಸ್ಯೈವ ವಿಷ್ಣೋರ್ನಿಚಾಯ್ಯತ್ವಾತ್ । ಸರ್ವಗತತ್ವೇಽಪಿ ಅಲ್ಪೌಕಸ್ತ್ವಂ ಚ ಯುಜ್ಯತೇ ವ್ಯೋಮವತ್ ।**

ಅಲ್ಪಸ್ಥಾನಸ್ಥಿತನೆಂದೂ ಹಾಗು ಚಕ್ಷುರ್ಮಯ ಇತ್ಯಾದಿಗಳಾಗಿರುವವನೆಂದೂ ಆ ವಿಷ್ಣುವೇ ಉಪಾಸ್ಯನಾಗಿದ್ದಾನೆ. ಅವನು ಸರ್ವಗತನಾಗಿದ್ದರೂ ಅವನಿಗೆ ಆಕಾಶಕ್ಕಿರುವಂತೆ ಅಲ್ಪಸ್ಥಾನಸ್ಥಿತತ್ವವು ಯುಕ್ತವೇ ಆಗಿದೆ. ಆದ್ದರಿಂದ ಈ ಆಕ್ಷೇಪವು ಸರಿಯಲ್ಲ.

(ಭಾ.ದೀ.) ಕುತೋ ನ? ಇತ್ಯತಃ ಅತ್ರ ಬಾಧಕಾಭಾವಾತ್ ಇತಿ ಹೇತುಮ್, ಅರ್ಭಕೌಕಸ್ತ್ವಾದೀನಾಂ ಚ ವಿಷ್ಣಾವೇವೋಪಪನ್ನತ್ವೇನ ಅಬಾಧಕತ್ವಾದಿತಿ ತದುಪಪಾದಕಹೇತುಂ ಚೋಪಸ್ಕೃತ್ಯ ತರ್ಹಿ ವಿಷ್ಣಾವರ್ಭಕೌಕಸ್ತ್ವಾದಿಕಥನವೈಯರ್ಥ್ಯಮಿತ್ಯಾಶಂಕ್ಯ ತತ್ಪರಿಹಾರತ್ವೇನೋಕ್ತಮೇವಂನಿಚಾಯ್ಯತ್ವಾದಿತ್ಯಂಶಂ ವ್ಯಾಖ್ಯಾತಿ – **ಅರ್ಭಕೌಕಸ್ತ್ವೇನ ಇತಿ** ॥ ಆದಿಶಬ್ದಾತ್ ಮನೋಮಯತ್ವೇನೇತ್ಯಾಹ । ಅನೇನ ಸೌತ್ರೈವಂಶಬ್ದಃ ಪ್ರಕಾರಾರ್ಥತಯಾ ವ್ಯಾಖ್ಯಾತಃ । ಸಿದ್ಧಾಂತಾಂಶೇಽಪಿ ವಿಷ್ಣ್ವರ್ಥಕಸ್ಯ ವ್ಯಸ್ತತಚ್ಛಬ್ದಸ್ಯ ಸಾವಧಾರಣಸ್ಯಾನ್ವಯಮಭಿಪ್ರೇತ್ಯ ಆಹ – **ತಸ್ಯೈವೇತಿ** ॥ ಯದ್ವಾ, ಪ್ರಧಾನಸೂತ್ರೇ ಅನುವೃತ್ತಸ್ಯ ತದಿತ್ಯಸ್ಯೇಹ ವಿಪರಿಣತಸ್ಯಾನುವೃತ್ತಿಂ ಮತ್ವಾಽಽಹ –

**ತಸ್ಯೈವ ವಿಷ್ಣೋರಿತಿ ॥** ಏವಕಾರೋऽಪ್ಯರ್ಥಃ । ತಥಾಚ ಸರ್ವಗತಸ್ಯಾಪಿ ಜೀವವಿಲಕ್ಷಣಸ್ಯಾಪಿ ಇತ್ಯರ್ಥಃ। ನತು ಜೀವಸ್ಯ , ಇತ್ಯನ್ಯನಿಷೇಧಾರ್ಥೋ ವಾ ಏವಕಾರಃ। 'ನಿಚಾಯ್ಯತ್ವಾತ್' ಉಪಾಸ್ಯತ್ವಾತ್ । ಅನೇನ ಅಪರಿಚ್ಛಿನ್ನೇ ಅಲೌಕಿಕಸ್ತ್ವೋಕ್ತಿಃ ಜೀವವಿಲಕ್ಷಣೇ ಚಕ್ಷುರ್ಮಯತ್ವಾದ್ಯುಕ್ತಿಃ ವ್ಯರ್ಥೇತಿ ಶಂಕಾ ನಿರಸ್ತಾ ಭವತಿ।

ಇದಾನೀಂ ಸರ್ವಗತಸ್ಯಾಲೌಕಿಕಸ್ತ್ವಮಯುಕ್ತಮಿತಿ ಶಂಕಾನಿರಾಸಾಯ ಸೂತ್ರಗೃಹೀತಂ ದೃಷ್ಟಾಂತಾಂಶಂ, ಏವಮಿತ್ಯಸ್ಯ ಚಶಬ್ದೇನಾಪ್ಯನ್ವಯಂ ವ್ಯಸ್ತತತ್ಪದಸ್ಯ ಆವೃತ್ತಸ್ಯ 'ಯುಜ್ಯತೇ' ಇತಿ ಅಧ್ಯಾಹೃತೇನಾಪಿ ಸಂಬಂಧಮಭಿಪ್ರೇತ್ಯ ವ್ಯಾಖ್ಯಾತಿ – **ಸರ್ವಗತತ್ವ ಇತಿ ॥** ಅಪೀತಿ ದ್ವಿತೀಯಚಶಬ್ದವ್ಯಾಖ್ಯಾನಮ್ ।

ಆಕ್ಷೇಪವು ಏಕೆ ಸರಿಯಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ವಿಷ್ಣುವು ಸರ್ವಗತನೆಂದು ಹೇಳುವ ವಿಷಯದಲ್ಲಿ ಬಾಧಕವಿಲ್ಲದ್ದರಿಂದ ಎಂಬ ಹೇತುವನ್ನು ಮತ್ತು ಆ ಹೇತುವನ್ನು ಸಮರ್ಥಿಸುವ ಹೇತುವಾಗಿರುವ 'ಅಲ್ಪಸ್ಥಾನಸ್ಥಿತತ್ವವೇ ಮೊದಲಾದವುಗಳು ವಿಷ್ಣುವಿಗೇ ಉಪಪನ್ನವಾಗಿರುವುದರಿಂದ ಅವು ಬಾಧಕವಲ್ಲ' ಎಂಬ ಹೇತುವನ್ನು ದೃಷ್ಟಿಯಲ್ಲಿಟ್ಟುಕೊಂಡು ಹಾಗಿದ್ದ ಪಕ್ಷದಲ್ಲಿ ವಿಷ್ಣುವಿಗೆ ಅಲ್ಪಸ್ಥಾನದಲ್ಲಿ ಸ್ಥಿತಿಯನ್ನು ಹೇಳುವುದು ವ್ಯರ್ಥ ಎಂದು ಆಶಂಕಿಸಿ, ಅದಕ್ಕೆ ಪರಿಹಾರರೂಪವಾಗಿ ಸೂತ್ರದಲ್ಲಿ ಹೇಳಲಾಗಿರುವ 'ನಿಚಾಯ್ಯತ್ವಾತ್' ಎಂಬ ಅಂಶವನ್ನು ಭಾಷ್ಯಕಾರರು 'ಅರ್ಭಕೌಕಸ್ತ್ವೇನ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಇಲ್ಲಿ 'ಚಕ್ಷುರ್ಮಯತ್ವಾದಿ' ಎಂಬಲ್ಲಿರುವ ಆದಿಶಬ್ದದಿಂದ ಮನೋಮಯತ್ವವನ್ನು ಹೇಳುತ್ತಿದ್ದಾರೆ. ಇದರಿಂದ ಸೂತ್ರದಲ್ಲಿರುವ 'ಏವಂ' ಎಂಬ ಶಬ್ದವು ಈ ಪ್ರಕಾರವಾಗಿ ಎಂದು ಪ್ರಕಾರವೆಂಬ ಅರ್ಥವುಳ್ಳದ್ದೆಂದು ವ್ಯಾಖ್ಯಾನಿಸಲ್ಪಟ್ಟಿದೆ. ಸಿದ್ಧಾಂತವನ್ನು ನಿರೂಪಿಸುವ ಸೂತ್ರಭಾಗದಲ್ಲೂ 'ತದ್ವ್ಯಪದೇಶಾಚ್ಚ' ಎಂಬ ಸಮಸ್ತಪದದಲ್ಲಿರುವ ತಚ್ಛಬ್ದವನ್ನು ಪ್ರತ್ಯೇಕಗೊಳಿಸಿ ಪ್ರಕೃತ ವಿಷ್ಣುವಾಚಕವಾದ ಆ ಶಬ್ದವನ್ನು ಸಾವಧಾರಣವೆಂದು ಭಾವಿಸಿ, ಅದರ ಅನ್ವಯವನ್ನು 'ತಸ್ಯೈವ ವಿಷ್ಣೋಃ ನಿಚಾಯ್ಯತ್ವಾತ್' ಎಂಬುದಾಗಿ ಭಾಷ್ಯದಲ್ಲಿ ತೋರಿಸುತ್ತಿದ್ದಾರೆ. ಅಥವಾ ಈ ಅಧಿಕರಣದ ಪ್ರಧಾನಸೂತ್ರವಾದ ಸರ್ವತ್ರಪ್ರಸಿದ್ಧೋಪದೇಶಾತ್ ಎಂಬ ಸೂತ್ರದಲ್ಲಿ ಸಮನ್ವಯಸೂತ್ರದಿಂದ ಅನುವೃತ್ತಿಯನ್ನು ಹೊಂದಿ-

ರುವ ತತ್‌ಶಬ್ದಕ್ಕೆ ಇಲ್ಲಿ ಷಷ್ಠ್ಯಂತವಾಗಿ ಬದಲಾವಣೆಯನ್ನು ಮತ್ತು ಈ ಸೂತ್ರದಲ್ಲಿ ಅನುವೃತ್ತಿಯಿರುವುದನ್ನು ವಿವಕ್ಷಿಸಿ 'ತಸ್ಯೈವ ವಿಷ್ಣೋಃ' ಎಂದು ಭಾಷ್ಯದಲ್ಲಿ ಹೇಳಲಾಗಿದೆ. ಇಲ್ಲಿ ಏವಕಾರವು ಅಪಿ ಎಂಬ ಅರ್ಥವನ್ನು ಹೇಳುವುದು. ತಥಾಚ – ಜೀವವಿಲಕ್ಷಣನಾಗಿ ಸರ್ವಗತನಾಗಿದ್ದರೂ ಕೂಡ ಎಂದು ಅರ್ಥ. ಅಥವಾ ವಿಷ್ಣುವು ಉಪಾಸ್ಯನಾಗಿರುವನು ಹೊರತು ಜೀವನಲ್ಲ ಎಂದು ವಿಷ್ಣುಭಿನ್ನನನ್ನು ನಿಷೇಧಮಾಡುವ ಅಭಿಪ್ರಾಯವನ್ನು ಈ ಏವಕಾರವು ಹೊಂದಿದೆ. 'ನಿಚಾಯ್ಯತ್ವಾತ್' ಎಂದರೆ ಉಪಾಸನೆ ಮಾಡಲ್ಪಡಬೇಕಾದವನಾದ್ದರಿಂದ ಎಂದು ಅರ್ಥ. ಇದರಿಂದ ಸರ್ವವ್ಯಾಪ್ತನಾದ ವಿಷ್ಣುವಿಗೆ ಅಲ್ಪಸ್ಥಾನಸ್ಥಿತತ್ವವನ್ನು ಹೇಳಿರುವುದು ಹಾಗೆಯೇ ಜೀವವಿಲಕ್ಷಣನಾದವನಿಗೆ ಚಕ್ಷುರ್ಮಯತ್ವಾದಿಗಳನ್ನು ಹೇಳಿರುವುದು ವ್ಯರ್ಥ ಎಂಬ ಶಂಕೆಯು ನಿರಾಕೃತ-ವಾಗುವುದು.

ಈಗ, ಏವಂ ಎಂಬ ಪದಕ್ಕೆ ಚಶಬ್ದದಿಂದಲೂ ಅನ್ವಯವಿರುವುದು, ತದ್ವ್ಯಪ-ದೇಶಾತ್ ಎಂಬ ಸಮಸ್ತಪದದಿಂದ ವಿಭಜಿಸಲ್ಪಟ್ಟ ತತ್ ಪದಕ್ಕೆ ಆವೃತ್ತಿಯಿರುವುದು ಮತ್ತು ಆ ಪದಕ್ಕೆ ಯುಜ್ಯತೇ ಎಂಬ ಅಧ್ಯಾಹಾರಮಾಡಿಕೊಳ್ಳಲ್ಪಡುವ ಪದದೊಂದಿಗೆ ಸಂಬಂಧವಿರುವುದು ಎಂದು ಅಭಿಪ್ರಾಯಪಟ್ಟು, ಸರ್ವಗತನಿಗೆ ಅಲ್ಪಸ್ಥಾನಸ್ಥಿತತ್ವವು ಅಯುಕ್ತವಾದದ್ದೆಂಬ ಶಂಕೆಯನ್ನು ಪರಿಹರಿಸಲು ಸೂತ್ರವು ಸ್ವೀಕರಿಸಿರುವ ದೃಷ್ಟಾಂತಾಂಶವನ್ನು ಭಾಷ್ಯದಲ್ಲಿ 'ಸರ್ವಗತತ್ವ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಸರ್ವಗತತ್ವೇಽಪಿ ಎಂಬಲ್ಲಿರುವ ಅಪಿಶಬ್ದವು ಸೂತ್ರದ ಎರಡನೆಯ ಚಶಬ್ದದ ವ್ಯಾಖ್ಯಾನವಾಗಿದೆ.

ಭಾ– 'ಸರ್ವೇಂದ್ರಿಯಮಯೋ ವಿಷ್ಣುಃ ಸರ್ವಪ್ರಾಣೇಷು ಚ ಸ್ಥಿತಃ ।
ಸರ್ವನಾಮಾಭಿಧೇಯಶ್ಚ ಸರ್ವವೇದೋದಿತಶ್ಚ ಸಃ'
ಇತಿ ಸ್ಕಾಂದೇ ॥೭॥

ವಿಷ್ಣುವು ಸರ್ವಪ್ರಾಣಿಗಳಲ್ಲಿ ಇರುವ ಕಾರಣ ಅವರೆಲ್ಲರ ಇಂದ್ರಿಯ-ಗಳಿಗೆ ನಿಯಾಮಕನಾಗಿದ್ದಾನೆ. ಅವನು ಸರ್ವನಾಮಗಳಿಂದಲೂ

ವಾಚ್ಯನು ಸರ್ವವೇದಪ್ರತಿಪಾದ್ಯನು ಆಗಿದ್ದಾನೆ ಎಂದು ಸ್ಕಾಂದ-ಪುರಾಣದಲ್ಲಿ ಹೇಳಲಾಗಿದೆ.

(ಭಾ.ದೀ.) ಯದಪಿ ಜೀವವಿಲಕ್ಷಣಸ್ಯ ನಿತ್ಯಜ್ಞಾನವತೋ ಜ್ಞಾನಕರಣ-ಚಕ್ಷುರಾದಿಪ್ರಾಚುರ್ಯರೂಪಚಕ್ಷುರ್ಮಯತ್ವಾದಿಕಥನಮಯುಕ್ತಮಿತಿ ಚೋದ್ಯಂ ತತ್ ಚಶಬ್ದಸೂಚಿತಸ್ಮೃತ್ಯಾ ನಿರಾಹ– **ಸರ್ವೇಂದ್ರಿಯಮಯ ಇತಿ ॥** ವಿಷ್ಣುರ್ಯತಃ ಸರ್ವಪ್ರಾಣಿಷು ಸಂಸ್ಥಿತಃ, ಪ್ರಾಣಾ ಇಂದ್ರಿಯಾಣಿ, ತದ್ವಂತಃ ಪ್ರಾಣಿನಃ ತೇಷು ಇಂದ್ರಿಯನಿಯಾಮಕತ್ವೇನ ಸ್ಥಿತಃ, 'ಸರ್ವೇಂದ್ರಿಯಸ್ವಾಮೀ' ಇತಿ ಯಾವತ್, ಅತಃ **ಸರ್ವೇಂದ್ರಿಯಮಯ** ಇತ್ಯುಕ್ತಃ ಇತ್ಯರ್ಥಃ । ಸ್ವಾಮಿತ್ವಂ ಮಯಡರ್ಥ ಇತಿ ಭಾವಃ । ಚಶಬ್ದಃ ಪ್ರಥಮಪಾದಾರ್ಥೇ ದ್ವಿತೀಯಪಾದಾರ್ಥಂ ಹೇತುಮಾಹ । ಏವಂ ದ್ವಿತೀಯತೃತೀಯಪಾದದ್ವಯಮಪಿ ಆದಿತ್ಯಾದಿಸರ್ವಪ್ರಾಣಿಸ್ಥಿತತ್ವಾದಾದಿತ್ಯಾದಿ ಸರ್ವನಾಮಾಭಿಧೇಯ ಇತಿ ಹೇತುಹೇತುಮದ್ಭಾವೇನ ವ್ಯಾಖ್ಯೇಯಮ್ । ಅತ ಏವ ಚಶಬ್ದಃ ದ್ವಿತೀಯತೃತೀಯಚಶಬ್ದವದ್ ವಿಶೇಷಣಾಂತರಸಮುಚ್ಚಯೇಽಪ್ಯನ್ವೇಯಃ । ಅನೇನ ಪ್ರಥಮಪಾದೇನ 'ಚಕ್ಷುರ್ಮಯಃ ಶ್ರೋತ್ರಮಯೋ ಮನೋಮಯೋ ವಾಙ್ಮಯಃ' ಇತ್ಯಾದಿಕಂ ಬ್ರಹ್ಮಣಿ ತತ್ಸ್ವಾಮಿತ್ವೇನ ನಿಮಿತ್ತೇನ ಪ್ರಯುಕ್ತಮಿತಿ ವ್ಯಾಖ್ಯಾತಂ ಭವತಿ । ಏವಂ ದ್ವಿತೀಯತೃತೀಯಪಾದಾಭ್ಯಾಂ ತತ್ತದ್ಗತತ್ವೇನ ಆದಿತ್ಯಾದಿ ತತ್ತನ್ನಾಮವಾಚ್ಯತ್ವಕಥನಮುಖೇನ ಆದಿತ್ಯಶ್ರುತೇರೀಶ್ವರವಾಚಿತ್ವಮುಕ್ತಂ ಭವತಿ ।

ಜೀವವಿಲಕ್ಷಣನಾಗಿ, ಉತ್ಪತ್ತಿನಾಶಗಳಿಲ್ಲದಿರುವ ಜ್ಞಾನವನ್ನು ಪಡೆದಿರುವ ವಿಷ್ಣುವಿಗೆ ಜ್ಞಾನಸಾಧನವಾದ ಚಕ್ಷುರಾದಿಗಳ ಪ್ರಾಚುರ್ಯರೂಪವಾದ ಚಕ್ಷುರ್ಮಯತ್ವ ಮೊದ-ಲಾದವುಗಳನ್ನು ಹೇಳಿರುವುದು ಯುಕ್ತವಲ್ಲ ಎಂಬ ಯಾವ ಪೂರ್ವಪಕ್ಷಿಯ ಆಕ್ಷೇಪ-ವಿತ್ತೋ ಆದನ್ನು, ಸೂತ್ರದ ಚಶಬ್ದವು ಸೂಚಿಸುವ ಸ್ಮೃತಿಯನ್ನು 'ಸರ್ವೇಂದ್ರಿ-ಯಮಯಃ' ಎಂದು ಉದಾಹರಿಸಿ ಭಾಷ್ಯಕಾರರು ನಿರಾಕರಿಸುತ್ತಿದ್ದಾರೆ. ವಿಷ್ಣುವು ಸರ್ವಪ್ರಾಣಿಗಳಲ್ಲಿ ಸಂಸ್ಥಿತನಾಗಿದ್ದಾನೆ. ಪ್ರಾಣಗಳೆಂದರೆ ಇಂದ್ರಿಯಗಳು; ಅವುಗಳನ್ನು ಹೊಂದಿರುವವರು ಪ್ರಾಣಿಗಳು. ಅವರಲ್ಲಿ ಅವರ ಇಂದ್ರಿಯ ನಿಯಾಮಕನಾಗಿ ಸ್ಥಿತ-

ನಾಗಿದ್ದಾನೆ ಎಂದು ಅರ್ಥ. ಸರ್ವೇಂದ್ರಿಯಸ್ವಾಮಿಯಾಗಿದ್ದಾನೆ ಎಂದು ಭಾವ. ಈ ಕಾರಣದಿಂದಲೇ ವಿಷ್ಣುವು ಸರ್ವೇಂದ್ರಿಯಮಯನೆಂದು ಹೇಳಲ್ಪಡುವನು ಎಂದು ಅರ್ಥ. ಸರ್ವೇಂದ್ರಿಯಮಯ ಎಂಬಲ್ಲಿರುವ ಮಯಟ್ ಪ್ರತ್ಯಯವು ಸ್ವಾಮಿತ್ವವನ್ನು ಹೇಳುವುದು ಎಂದು 'ಭಾವ. ಸರ್ವಪ್ರಾಣಿಷು ಚ ಎಂಬಲ್ಲಿರುವ ಚಶಬ್ದವು ಈ ಶ್ಲೋಕದಲ್ಲಿ 'ಸರ್ವೇಂದ್ರಿಯಮಯೋ ವಿಷ್ಣುಃ' ಎಂಬ ಮೊದಲನೆಯ ಪಾದದ ಅರ್ಥಕ್ಕೆ 'ಸರ್ವಪ್ರಾಣಿಷು ಸ್ಥಿತಃ' ಎಂಬ ಎರಡನೆಯ ಪಾದದ ಅರ್ಥವು ಹೇತುವೆಂದು ಹೇಳುವುದು. ಇದೇ ರೀತಿಯಾಗಿ ಎರಡನೆಯ ಮತ್ತು ಮೂರನೆಯ ಪಾದಗಳೂ ಕೂಡ ಆದಿತ್ಯಾದಿ ಸರ್ವಪ್ರಾಣಿಗಳಲ್ಲಿ ಸ್ಥಿತನಾದ ಕಾರಣದಿಂದ ವಿಷ್ಣುವು ಆದಿತ್ಯ ಮೊದಲಾದ ಸರ್ವಶಬ್ದಗಳಿಂದ ವಾಚ್ಯನಾಗಿದ್ದಾನೆ ಎಂದು ಹೇತುಸಾಧ್ಯಭಾವವನ್ನು ಹೊಂದಿರುವಂತೆ ವ್ಯಾಖ್ಯಾನಮಾಡಬೇಕು. ಆದ್ದರಿಂದಲೇ 'ಸರ್ವಪ್ರಾಣಿಷು ಚ' ಎಂಬಲ್ಲಿರುವ ಚಶಬ್ದವು ಎರಡನೆಯ ಮತ್ತು ಮೂರನೆಯ ಚಶಬ್ದಗಳಂತೆ ಮತ್ತೊಂದು ವಿಶೇಷಣದ ಸಮುಚ್ಚಯವನ್ನು ಹೇಳುವಂತೆಯೂ ಅನ್ವಯಿಸಬೇಕು. ಇದರಿಂದ ಈ ಶ್ಲೋಕದ ಪ್ರಥಮಪಾದದಿಂದ 'ಚಕ್ಷುರ್ಮಯಃ ಶ್ರೋತ್ರಮಯೋ ಮನೋಮಯೋ ವಾಙ್ಮಯಃ' ಇತ್ಯಾದಿಶಬ್ದಗಳು ಬ್ರಹ್ಮನನ್ನು ಕುರಿತು ಆ ಚಕ್ಷುರಾದಿ ಇಂದ್ರಿಯಗಳಿಗೆ ಅವನು ಸ್ವಾಮಿಯಾಗಿರುವ ನಿಮಿತ್ತದಿಂದ ಪ್ರಯೋಗಿಸಲ್ಪಟ್ಟಿವೆ ಎಂಬುದಾಗಿ ವ್ಯಾಖ್ಯಾನ ಮಾಡಿದಂತಾಗುವುದು. ಹಾಗೆಯೇ ಎರಡು ಮತ್ತು ಮೂರನೆಯ ಪಾದಗಳಿಂದ ಆದಿತ್ಯಮೊದಲಾದ ಆಯಾಯಾ ದೇವತೆಗಳಲ್ಲಿ ಇರುವ ಕಾರಣ ಆದಿತ್ಯಮೊದಲಾದ ಆಯಾಯ ನಾಮಗಳಿಂದ ವಾಚ್ಯನಾಗಿದ್ದಾನೆ ಎಂದು ಹೇಳುವ ಮೂಲಕ ಈ ಉಪ-ನಿಷತ್ತಿನಲ್ಲಿ ಬರುವ ಆದಿತ್ಯಶಬ್ದವು ಈಶ್ವರವಾಚಕವಾದದ್ದೆಂದು ಹೇಳಿದಂತಾಗುವುದು.

(ಭಾ.ದೀ.) ಅನೇನೈವ ಆದಿತ್ಯೇಽನುಕ್ತಿಯುಕ್ತಿವಿರೋಧಶ್ಚ ಪರಿಹೃತಃ । ಚತುರ್ಥ-ಪಾದೇನ ಛಂದಃಪದೋಕ್ತವೇದಮುಖ್ಯಾರ್ಥತ್ವಾತ್ ಛಂದೋಮಯತ್ವಂ ಚ ವಿಷ್ಣೋ-ರ್ಯುಕ್ತಮ್ ಇತ್ಯುಕ್ತಂ ಭವತಿ । ಐತರೇಯಭಾಷ್ಯೇ – 'ಸಂಪೂರ್ಣದರ್ಶನಶಕ್ತೇಃ ಚಕ್ಷುರ್ಮಯಃ ಸಂಪೂರ್ಣಶ್ರವಣಶಕ್ತೇಃ ಶ್ರೋತ್ರಮಯಃ ಸತ್ಯಕಾಮತ್ವಾತ್ ಛಂದೋ-ಮಯಃ ಸರ್ವಮಂತೃತ್ವಾತ್ ಮನೋಮಯಃ ಸರ್ವವಕ್ತೃತ್ವಾದ್ ವಾಙ್ಮಯಃ ಪೂರ್ಣ-

ಫಲರೂಪತ್ವಾದಾತ್ಮಾ' ಇತಿ, ತಥಾ ಬೃಹದ್ಭಾಷ್ಯೇ – 'ಮಯಟ್ ಪ್ರಾಚುರ್ಯಾರ್ಥಃ ಸ್ವರೂಪೇ ಚ' ಇತಿ ಪ್ರತಿಜ್ಞಾಯ –

'ಸರ್ವದ್ರಷ್ಟೃಸ್ವರೂಪತ್ವಾಚ್ಚಕ್ಷುರ್ಮಯ ಇತೀರ್ಯತೇ ।
ಸರ್ವಶ್ರೋತೃಸ್ವರೂಪತ್ವಾತ್ ಸ ಶ್ರೋತ್ರಮಯ ಈರಿತಃ ॥' ಇತಿ ।

ತಥಾ ಭಾಗವತತಾತ್ಪರ್ಯೇ –

'ಸರ್ವೇ ವಿಷ್ಣೌ ಸ್ಥಿತಾ ಯಸ್ಮಾದತಃ ಸರ್ವಮಯೋ ಹ್ಯಸೌ ॥'

ಇತಿ ಪ್ರಕಾರಾಂತರೇಣ ಭಗವತಿ ಚಕ್ಷುರ್ಮಯತ್ವಾದಿಕಂ ವ್ಯಾಖ್ಯಾತಮ್ ।

'ಸ್ಕಾಂದೇ' ಇತ್ಯನಂತರಮ್ 'ಉಕ್ತಮ್' ಇತಿ ಶೇಷಃ । 'ಅಸ್ಯ ಜೀವವಿಲಕ್ಷಣಸ್ಯಾಪಿ ಇಂದ್ರಿಯಸ್ವಾಮಿತ್ವಾದಿನಾ ಚಕ್ಷುರ್ಮಯತ್ವಾದಿ ಯುಜ್ಯತ ಇತಿ ನ ತದಯೋಗಃ' ಇತ್ಯುಪಸ್ಕೃತಸಾಧ್ಯೇನಾನ್ವಯಃ ।

ಇದರಿಂದಲೇ ಈ ಉಪನಿಷದ್ವಾಕ್ಯದಲ್ಲಿ ಸರ್ವತ್ರ ಗತನೆಂದು ಹೇಳಲಾದವನನ್ನು ಆದಿತ್ಯನಲ್ಲಿರುವವನೆಂದು ಹೇಳದಿರುವುದರಿಂದ ಸರ್ವಗತನು ಆದಿತ್ಯನೇ ಆಗಿರುವನು ಎಂಬ ಪೂರ್ವಪಕ್ಷಯುಕ್ತಿಯ ವಿರೋಧವು ಪರಿಹರಿಸಲ್ಪಡುವುದು. ಸ್ಕಾಂದಪುರಾಣದ ಈ ಶ್ಲೋಕದ ನಾಲ್ಕನೆಯ ಪಾದದಿಂದ ಛಂದಃಪದವು ಹೇಳುವ ವೇದಗಳ ಮುಖ್ಯಾರ್ಥವಾಗಿರುವುದರಿಂದ ವಿಷ್ಣುವಿಗೆ ಛಂದೋಮಯತ್ವವು ಯುಕ್ತವಾಗಿದೆ ಎಂದು ಹೇಳಿದಂತಾಗುವುದು. ಐತರೇಯಭಾಷ್ಯದಲ್ಲಿ ಸಂಪೂರ್ಣವಾದ ದರ್ಶನಶಕ್ತಿಯಿರುವುದರಿಂದ ವಿಷ್ಣುವು ಚಕ್ಷುರ್ಮಯನೆಂದು, ಸಂಪೂರ್ಣಶ್ರವಣಶಕ್ತಿ ಇರುವುದರಿಂದ ಶ್ರೋತ್ರಮಯನೆಂದು, ಸತ್ಯಕಾಮನಾದ ಪ್ರಯುಕ್ತ ಛಂದೋಮಯನೆಂದು ಸರ್ವವನ್ನೂ ತಿಳಿಯುವವನಾದ್ದರಿಂದ ಮನೋಮಯನೆಂದು, ಸರ್ವವನ್ನೂ ಹೇಳುವ ಸಾಮರ್ಥ್ಯವುಳ್ಳವನಾದ್ದರಿಂದ ವಾಙ್ಮಯನೆಂದು, ಪೂರ್ಣಫಲಸ್ವರೂಪನಾದ್ದರಿಂದ ಆತ್ಮನೆಂದೂ ಈ ಶ್ರುತಿಯನ್ನು ವ್ಯಾಖ್ಯಾನಮಾಡಲಾಗಿದೆ. ಹಾಗೆಯೇ ಬೃಹದಾರಣ್ಯಕಭಾಷ್ಯದಲ್ಲಿ 'ಮಯಟ್‌ಪ್ರಾಚುರ್ಯಾರ್ಥಃ ಸ್ವರೂಪೇ ಚ'– ಮಯಟ್‌ಪ್ರತ್ಯಯವು ಪೂರ್ಣತ್ವ ಮತ್ತು ಸ್ವರೂಪ ಎಂಬ ಅರ್ಥಗಳನ್ನು ಹೇಳುವುದು ಎಂದು ಪ್ರತಿಜ್ಞೆ ಮಾಡಿ –

'ಸರ್ವದ್ರಷ್ಟೃಸ್ವರೂಪತ್ವಾಚ್ಚಕ್ಷುರ್ಮಯ ಇತೀರ್ಯತೇ ।
ಸರ್ವಶ್ರೋತೃಸ್ವರೂಪತ್ವಾತ್ ಸ ಶ್ರೋತ್ರಮಯ ಈರಿತಃ ॥' ಇತಿ ।

'ಸರ್ವವನ್ನೂ ಸಾಕ್ಷಾತ್ಕರಿಸುವ ಸ್ವರೂಪವುಳ್ಳವನಾದುದರಿಂದ ಚಕ್ಷುರ್ಮಯನೆಂದು ಹೇಳಲ್ಪಡುವವನು; ಸರ್ವವನ್ನೂ ಕೇಳುವ ಸ್ವರೂಪವುಳ್ಳವನಾದುದರಿಂದ ಶ್ರೋತ್ರಮಯನೆಂದು ಹೇಳಲ್ಪಡುವವನು' ಎಂದು ವ್ಯಾಖ್ಯಾನ ಮಾಡಲಾಗಿದೆ. ಹಾಗೆಯೇ ಭಾಗವತತಾತ್ಪರ್ಯದಲ್ಲಿ 'ಸರ್ವೇ ವಿಷ್ಣೌ ಸ್ಥಿತಾ ಯಸ್ಮಾದತಃ ಸರ್ವಮಯೋ ಹ್ಯಸೌ' ಎಲ್ಲರೂ ವಿಷ್ಣುವನ್ನು ಆಶ್ರಯಿಸಿಕೊಂಡಿರುವವರಾದ್ದರಿಂದ ಅವನು ಸರ್ವಮಯನೆಂದು ಹೇಳಲ್ಪಡುವವನು ಎಂಬುದಾಗಿ ಇನ್ನೊಂದು ಪ್ರಕಾರದಿಂದ ಭಗವಂತನಲ್ಲಿ ಇರುವ ಚಕ್ಷುರ್ಮಯತ್ವಾದಿಗಳನ್ನು ವ್ಯಾಖ್ಯಾನ ಮಾಡಲಾಗಿದೆ. ಭಾಷ್ಯದಲ್ಲಿ ಸ್ಕಾಂದೇ ಎಂಬ ಪದದ ನಂತರ 'ಉಕ್ತಮ್' ಎಂಬ ಪದವು ಶೇಷವಾಗಿ ಸೇರುವುದು. ಈ ವಾಕ್ಯಕ್ಕೆ ವಿಷ್ಣುವು ಜೀವವಿಲಕ್ಷಣನಾಗಿದ್ದರೂ ಇಂದ್ರಿಯಸ್ವಾಮಿಯಾಗಿರುವುದೇ ಮೊದಲಾದ ಕಾರಣಗಳಿಂದ ಅವನಿಗೆ 'ಚಕ್ಷುರ್ಮಯತ್ವಾದಿಗಳು ಯುಕ್ತವಾಗುವುದರಿಂದ ಚಕ್ಷುರ್ಮಯತ್ವಾದಿಗಳು ಅವನಿಗಿಲ್ಲ ಎಂದು ಹೇಳತಕ್ಕದ್ದಲ್ಲ' ಎಂಬ ಅಧ್ಯಾಹಾರಮಾಡಿಕೊಳ್ಳಲ್ಪಡುವ ಸಾಧ್ಯದೊಂದಿಗೆ ಅನ್ವಯವಾಗುವುದು.

(ಭಾ.ದೀ.) ಅನೇನ 'ಸರ್ವೇಷು ಭೂತೇಷು' ಇತ್ಯತ್ರಾರ್ಭಕೌಕಸ್ತ್ವೋಕ್ತೇಃ 'ಚಕ್ಷುರ್ಮಯಃ' ಇತ್ಯಾದೌ ಚ ತಸ್ಯ ಜೀವಸ್ಯ ತೇನ ಚಕ್ಷುರ್ಮಯತ್ವಾದಿನಾ ಪ್ರಕಾರೇಣೋಕ್ತತ್ವಾದ್ ಆದಿತ್ಯವ್ಯಪದೇಶಾಚ್ಚ ಅಸ್ಮಾದೇವ ಬಾಧಕಾನ್ನ ಸರ್ವತ್ರೋಕ್ತೋ ನಾರಾಯಣ ಇತಿ ಚೇತ್ – ನ, ಕುತಃ? ಅತ್ರ ಬಾಧಕಾಭಾವಾತ್, ಅರ್ಭಕೌಕಸ್ತ್ವಾದೇಶ್ಚ ವಿಷ್ಣಾವೇವೋಪಪತ್ತೇಃ । ನ ಚಾಪರಿಚ್ಛಿನ್ನಸ್ಯಾರ್ಭಕೌಕಸ್ತ್ವೋಕ್ತಿಃ ಜೀವವಿಲಕ್ಷಣಸ್ಯ ಚಕ್ಷುರ್ಮಯತ್ವಾದ್ಯುಕ್ತಿಶ್ಚ ವ್ಯರ್ಥೇತಿ ವಾಚ್ಯಮ್ । ಏವಂ ನಿಚಾಯ್ಯತ್ವಾತ್ । 'ಚಾಯ್ಯ ಪೂಜಾನಿಶಾಮನಯೋಃ' । ತಥಾಚ – ತಸ್ಯೈವ ತಸ್ಯಾಪರಿಚ್ಛಿನ್ನಸ್ಯಾಪಿ ವಿಷ್ಣೋರಲೌಕಿಕಸ್ಯ ಚಕ್ಷುರ್ಮಯತ್ವಾದಿನಾ ಪ್ರಕಾರೇಣೋಪಾಸ್ಯತ್ವೇನೋಪಾಸನಾರ್ಥಂ ತದುಕ್ತಿಸಾರ್ಥಕ್ಯಾತ್ । ನ ಚಾಪರಿಚ್ಛಿನ್ನೇ ಜೀವವಿಲಕ್ಷಣೇ ಚ ಬ್ರಹ್ಮಣಿ ಅರ್ಭಕೌಕಸ್ತ್ವಾದ್ಯುಕ್ತಿರ್ನ ಯುಜ್ಯತ ಇತಿ ವಾಚ್ಯಮ್ । ಯತಃ 'ಏವಂ ಚ' ಏವಮಪಿ

**ಸರ್ವಗತತ್ವೇऽಪಿ ವ್ಯೋಮವತ್ ತದಲೌಕಿಕತ್ವಂ ಚಕ್ಷುರ್ಮಯತ್ವಾದಿ ಯುಜ್ಯತೇ । ಯಥಾ ವ್ಯಾಪ್ತಸ್ಯಾಪಿ ವ್ಯೋಮ್ನೋऽವ್ಯಾಕೃತಾಕಾಶಸ್ಯ ಮಠಾದ್ಯೈಕದೇಶಾವಸ್ಥಿತಿಃ ತಥಾ ಬ್ರಹ್ಮಣೋ ಭೂತಾಶಯಾದೌ ಸ್ಥಿತಿರ್ಯುಕ್ತಾ । ಯತಶ್ಚೈವಂ ವಿಷ್ಣೋರ್ಜೀವವಿಲಕ್ಷಣತ್ವೇऽಪಿ ಇಂದ್ರಿಯಸ್ವಾಮಿತ್ವಾದಿನಾ ಚಕ್ಷುರ್ಮಯತ್ವಾದ್ಯುಕ್ತಿರ್ಯುಕ್ತಾ ಅತಃ ಇತಿ ಸೂತ್ರಾರ್ಥ ಉಕ್ತೋ ಭವತಿ ॥**

ಇದರಿಂದ 'ಸರ್ವೇಷು ಭೂತೇಷು' ಎಂಬ ವಾಕ್ಯದಲ್ಲಿ ಅಲ್ಪಸ್ಥಾನಸ್ಥಿತಿಯನ್ನು ಹೇಳಿರುವುದರಿಂದ ಹಾಗೆಯೇ ಚಕ್ಷುರ್ಮಯಃ ಇತ್ಯಾದಿ ಪದಗಳಿಂದ ಜೀವನನ್ನೇ ಚಕ್ಷುರ್ಮಯತ್ವಾದಿಪ್ರಕಾರಗಳಿಂದ ಹೇಳಿರುವುದರಿಂದ ಈ ವಾಕ್ಯದಲ್ಲಿ ಆದಿತ್ಯಶಬ್ದವಿರುವುದರಿಂದಲೂ - ಈ ಬಾಧಕಗಳಿಂದಲೇ ಸರ್ವತ್ರ ಇರುವನೆಂದು ಹೇಳಲಾದವನು ನಾರಾಯಣನಲ್ಲ ಎಂದರೆ, ಅದು ಸರಿಯಲ್ಲ. ಏಕೆಂದರೆ, ಸರ್ವತ್ರ ಇರುವನೆಂದು ಹೇಳಲ್ಪಟ್ಟಿರುವವನು ನಾರಾಯಣನು ಎಂಬ ವಿಷಯದಲ್ಲಿ ಯಾವ ಬಾಧಕವೂ ಇಲ್ಲ. ಏಕೆಂದರೆ, ಅಲ್ಪಸ್ಥಾನಸ್ಥಿತತ್ವ ಮೊದಲಾದವುಗಳು ವಿಷ್ಣುವಿನಲ್ಲೇ ಯುಕ್ತವಾಗುತ್ತವೆ. ಸರ್ವವ್ಯಾಪ್ತನಾದ ಭಗವಂತನಿಗೆ ಅಲ್ಪಸ್ಥಾನಸ್ಥಿತತ್ವವನ್ನು ಹೇಳುವುದು, ಜೀವವಿಲಕ್ಷಣನಾದವನಿಗೆ ಚಕ್ಷುರ್ಮಯತ್ವಾದಿಗಳನ್ನು ಹೇಳುವುದು ವ್ಯರ್ಥವೆಂದರೆ ಅದು ಸರಿಯಲ್ಲ. ಏಕೆಂದರೆ, ಏವಂ ನಿಚಾಯ್ಯತ್ವಾತ್ - ನಿಚಾಯ್ಯ ಎಂಬ ಶಬ್ದವು ಪೂಜಾ ಮತ್ತು ಉಪಾಸನೆ ಎಂಬ ಅರ್ಥವುಳ್ಳ 'ಚಾಯ್ ಪೂಜಾನಿಶಾಮನಯೋಃ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆ ಭಗವಂತನು ಆ ರೀತಿಯಿಂದ ನಿಚಾಯ್ಯನಾಗಿದ್ದಾನೆ. ತಥಾಚ – 'ತಸ್ಯೈವ' ಅಂದರೆ ಆ ವಿಷ್ಣುವು ಅಪರಿಚ್ಛಿನ್ನನಾದರೂ ಅಲ್ಪಸ್ಥಾನಸ್ಥಿತನಾಗಿರುವನೆಂದು ಹಾಗೂ ಚಕ್ಷುರ್ಮಯಮೊದಲಾದ ಸ್ವರೂಪದಿಂದ ಉಪಾಸ್ಯನಾಗಿರುವನೆಂದು ಅಂದರೆ, ಆ ರೀತಿ ಉಪಾಸನೆಗೋಸ್ಕರವಾಗಿ ಅವುಗಳನ್ನು ಹೇಳಿರುವುದು ಸಾರ್ಥಕವಾಗಿದೆ ಎಂದು ಅರ್ಥ. ಸರ್ವವ್ಯಾಪ್ತನೂ ಜೀವವಿಲಕ್ಷಣನೂ ಆದ ಬ್ರಹ್ಮನಿಗೆ ಅಲೌಕಿಕತ್ವ ಮೊದಲಾದವುಗಳನ್ನು ಹೇಳುವುದು ಯುಕ್ತವಲ್ಲವೆಂದರೆ ಅದು ಸರಿಯಲ್ಲ. ಏಕೆಂದರೆ, ಏವಂ ಚ - ಅಂದರೆ ಏವಮಪಿ ಅಂದರೆ ಸರ್ವಗತತ್ವವಿದ್ದರೂ, ವ್ಯೋಮವತ್ ಆಕಾಶಕ್ಕಿರುವಂತೆ, ತತ್ - ಆ ಅಲೌಕಿಕತ್ವ ಚಕ್ಷುರ್ಮಯ-

ತ್ವಾದಿಗಳು, ಯುಜ್ಯತೇ - ಯುಕ್ತವಾಗುತ್ತವೆ. ಹೇಗೆ ವ್ಯಾಪ್ತವಾಗಿದ್ದರೂ ವ್ಯೋಮಕ್ಕೆ ಅಂದರೆ ಅವ್ಯಾಕೃತಾಕಾಶಕ್ಕೆ ಮಠ ಮೊದಲಾದ ಏಕದೇಶದಲ್ಲಿ ಅವಸ್ಥಾನವಿರುವುದೋ ಹಾಗೆಯೇ ಪರಬ್ರಹ್ಮನಿಗೆ ಪ್ರಾಣಗಳ ಹೃದಯಾಕಾಶದಲ್ಲಿ ಇರುವಿಕೆಯು ಯುಕ್ತವೇ ಆಗಿದೆ. 'ಯಾವ ಕಾರಣದಿಂದಾಗಿ ಜೀವವಿಲಕ್ಷಣನಾಗಿದ್ದರೂ ವಿಷ್ಣುವಿಗೆ ಇಂದ್ರಿಯ-ಸ್ವಾಮಿತ್ವ ಮೊದಲಾದವುಗಳು ಇರುವ ಕಾರಣದಿಂದ ಚಕ್ಷುರ್ಮಯತ್ವಾದಿಗಳನ್ನು ಹೇಳಿರುವುದು ಯುಕ್ತವಾಗಿದೆಯೋ ಆದ್ದರಿಂದ' ಎಂಬುದಾಗಿ ಸೂತ್ರಾರ್ಥವನ್ನು ಹೇಳಿ-ದಂತಾಗುವುದು.

**॥ ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ ॥ ೮ ॥**

ವಿಷ್ಣುವು ಜೀವನಂತೆ ಅವನ ಹೃದಯಸ್ಥಾನದಲ್ಲಿ ಇರುವುದಾದರೆ ಅವನಿಗೆ ಜೀವಸಮಾನವಾದ ಭೋಗ ಉಂಟಾಗಬೇಕಾದೀತು ಎಂದರೆ, ಅದು ಸರಿಯಲ್ಲ. ಏಕೆಂದರೆ, ಪರಬ್ರಹ್ಮನಿಗೆ ಜೀವನಿ-ಗಿಂತಲೂ ವಿಶೇಷಸಾಮರ್ಥ್ಯವಿರುವುದರಿಂದ ಜೀವಸಮಾನಭೋಗ ಪ್ರಾಪ್ತಿಯಾಗುವುದಿಲ್ಲ.

**ಭಾ – ಜೀವಪರಯೋರೇಕಶರೀರಸ್ಥತ್ವೇ ಸಮಾನಭೋಗಪ್ರಾಪ್ತಿರಿತಿ ಚೇನ್ನ। ಸಾಮರ್ಥ್ಯವೈಶೇಷ್ಯಾತ್।**

ಜೀವಪರಬ್ರಹ್ಮರು ಒಂದೇ ಶರೀರದಲ್ಲಿ ಇದ್ದ ಪಕ್ಷದಲ್ಲಿ ಜೀವ-ಸಮಾನಭೋಗವು ಪರಮಾತ್ಮನಿಗೂ ಪ್ರಾಪ್ತವಾಗುವುದು ಎಂದರೆ, ಅದು ಸರಿಯಲ್ಲ. ಏಕೆಂದರೆ, ಪರಮಾತ್ಮನಿಗೆ ವಿಶೇಷವಾದ ಸಾಮರ್ಥ್ಯವಿದೆ.

(ಭಾ.ದೀ.) ಪುನರುಕ್ತಮಾಕ್ಷಿಪ್ಯ ಸಮಾದಧತ್ ಸೂತ್ರಮುಪನ್ಯಸ್ಯತಿ – **ಸಂಭೋಗೇತಿ** ॥ ಅತ್ರ ಪೂರ್ವಸೂತ್ರಾತ್ ಏವಂಶಬ್ದಮನುವರ್ತ್ಯ ತದ್ಬೋಧಿತಮ್ ಆಪಾದಕಂ ದರ್ಶಯನ್ ಪೂರ್ವಪಕ್ಷಾಂಶಂ ತಾವದ್ ವ್ಯಾಚಷ್ಟೇ – **ಜೀವೇತಿ** ॥ 'ಜೀವಪರಮಾತ್ಮನೋಃ' ಇತ್ಯರ್ಥಃ। **ಏಕೇತಿ** ॥ ವಿಷ್ಣೋಃ ಸರ್ವಶರೀರಸ್ಥತ್ವೇ ಜೀವೇನ

**ಸಹೈಕಶರೀರಸ್ಥತ್ವಪ್ರಾಪ್ತೇರಿತಿ ಭಾವಃ । ಸಂಶಬ್ದಸ್ಯ 'ವ್ಯವಹೃಪಣೋಃ ಸಮರ್ಥಯೋಃ' ಇತ್ಯತ್ರೇವ ಸಮಾನಾರ್ಥತ್ವಮಾಶ್ರಿತ್ಯಾऽಹ – ಸಮಾನೇತಿ ॥ 'ಪರಸ್ಯ ಜೀವಸಮಾನ-ಭೋಗಪ್ರಾಪ್ತಿರ್ಬಾಧಿಕಾऽಸ್ತಿ' ಇತಿ ಶೇಷಃ । ಅತೋ ಜೀವಪಕ್ಷ ಇವ ಈಶ್ವರಪಕ್ಷೇऽಪಿ ಬಾಧಕಸಾಮ್ಯಾನ್ನಾಯಂ ಸರ್ವಗತ ಇತಿ ವಾಕ್ಯಶೇಷಃ।**

**ಪರಿಹಾರಾಂಶಂ ವ್ಯಾಚಷ್ಟೇ – ನೇತಿ ॥ ನೇಶ್ವರಸ್ಯ ಸಮಾನಭೋಗಪ್ರಾಪ್ತಿರಿ-ತ್ಯರ್ಥಃ । ಕುತೋ ನೇತ್ಯತಸ್ತತ್ರ ಹೇತುತ್ವೇನ ವೈಶೇಷ್ಯಾದಿತ್ಯಂಶಂ ಯೋಜಯತಿ – ಸಾಮರ್ಥ್ಯೇತಿ ॥ ಸ್ವಾರ್ಥೇ ಷ್ಯಞ್ । ವಿಶೇಷಿಣೋ ಭಾವ ಇತಿ ವಾ । ತಥಾ ಚ ಪರಸ್ಯ ಸಮಾನಭೋಗಾಪ್ರಾಪ್ತೌ ಜೀವಾದಪಿ ಸಾಮರ್ಥ್ಯವೈಶೇಷ್ಯಾದಿತ್ಯರ್ಥಃ।**

ಹಿಂದೆ ಹೇಳಲಾದ ವಿಷಯವನ್ನು ಪುನಃ ಆಕ್ಷೇಪಿಸಿ ಸಮಾಧಾನವನ್ನು ಹೇಳುವ ಸೂತ್ರವನ್ನು 'ಸಂಭೋಗ' ಎಂದು ಭಾಷ್ಯಕಾರರು ಉಪನ್ಯಾಸ ಮಾಡುತ್ತಿದ್ದಾರೆ. ಇಲ್ಲಿ ಹಿಂದಿನ ಸೂತ್ರದಿಂದ 'ಏವಂ' ಎಂಬ ಪದವನ್ನು ಅನುವೃತ್ತಿಮಾಡಿಕೊಂಡು ಅದು ತಿಳಿಸುವ ಆಪಾದಕವನ್ನು ತಿಳಿಸುತ್ತಾ ಸೂತ್ರದಲ್ಲಿರುವ ಪೂರ್ವಪಕ್ಷಾಂಶವನ್ನು ಆಚಾ-ರ್ಯರು 'ಜೀವ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಜೀವಪರಯೋಃ' ಎಂದರೆ ಜೀವಪರಮಾತ್ಮರಿಗೆ ಎಂದು ಅರ್ಥ. ಏಕಶರೀರಸ್ಥತ್ವೇ - ಅಂದರೆ ವಿಷ್ಣುವು ಸರ್ವಶರೀರಗಳಲ್ಲಿ ಇರುವುದಾದರೆ ಜೀವನೊಂದಿಗೆ ಏಕಶರೀರಸ್ಥಿತತ್ವವು ಪ್ರಾಪ್ತವಾ-ಗುವುದರಿಂದ ಎಂದು ಭಾವ. 'ವ್ಯವಹೃಪಣೋಃ ಸಮರ್ಥಯೋಃ' ಎಂಬ ಪಾಣಿನಿ-ಸೂತ್ರದಲ್ಲಿ ಸಮರ್ಥಯೋಃ ಎಂಬಲ್ಲಿರುವ ಸಂಶಬ್ದಕ್ಕೆ ಹೇಗೆ ಸಮಾನ ಎಂಬರ್ಥ-ವಿದೆಯೋ ಹಾಗೆ ಇಲ್ಲೂ ಸಂಭೋಗಶಬ್ದದ ಸಂಶಬ್ದಕ್ಕೆ ಸಮಾನಭೋಗ ಎಂಬ ಅರ್ಥವಿರುವುದೆಂದು ವ್ಯಾಖ್ಯಾನ ಮಾಡುತ್ತಿದ್ದಾರೆ. ಪರಮಾತ್ಮನಿಗೆ ಜೀವರಿಗೆ ಆಗುವ ಭೋಗದಂತೆ ಭೋಗವು ಪ್ರಾಪ್ತವಾಗುವುದು ಬಾಧಕವಾಗಿದೆ ಎಂದು ಭಾವ. ಇಲ್ಲಿ 'ಅಸ್ತಿ' ಎಂಬ ಪದವು ಶೇಷವಾಗಿದೆ. ಆದ್ದರಿಂದ 'ಜೀವಪಕ್ಷಕ್ಕಿರುವಂತೆ ಈಶ್ವರಪಕ್ಷ-ದಲ್ಲೂ ಬಾಧಕವು ಸಮಾನವಾಗಿರುವುದರಿಂದ ಇಲ್ಲಿ ಉಕ್ತನಾಗಿರುವ ಸರ್ವಗತನು ಈಶ್ವರನಲ್ಲ' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ.

ಸೂತ್ರದಲ್ಲಿರುವ ಈ ಆಕ್ಷೇಪಪರಿಹಾರದ ಭಾಗವನ್ನು 'ನ' ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಈಶ್ವರನಿಗೆ ಜೀವಸಮಾನಭೋಗವು ಪ್ರಾಪ್ತವಾಗುವುದಿಲ್ಲ ಎಂದು ಅರ್ಥ. ಏಕಿಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಆ ವಿಷಯದಲ್ಲಿ ಹೇತುವಾಗಿ ವೈಶೇಷ್ಯಾತ್ ಎಂಬ ಸೂತ್ರಭಾಗವನ್ನು ಸಾಮರ್ಥ್ಯವೈಶೇಷ್ಯಾತ್ ಎಂದು ಯೋಜಿಸುತ್ತಿದ್ದಾರೆ. ವೈಶೇಷ್ಯ ಎಂಬಲ್ಲಿ ಷ್ಯಞ್‌ಪ್ರತ್ಯಯವು ವಿಶೇಷ ಎಂಬರ್ಥವನ್ನೇ ಹೇಳುವುದು. ಅಥವಾ ವಿಶೇಷಿಣಃ ಭಾವಃ ಅಂದರೆ ವಿಶೇಷವುಳ್ಳದ್ದರ ಧರ್ಮ ಎಂಬರ್ಥದಲ್ಲಿ ಇಲ್ಲಿ ಷ್ಯಞ್ ಪ್ರತ್ಯಯವಿದೆ. ತಥಾಚ – ಪರಮಾತ್ಮನಿಗೆ ಜೀವಸಮಾನ ಭೋಗವು ಉಂಟಾಗದಿರಲು ಜೀವನಿಗಿಂತಲೂ ವಿಶೇಷವಾದ ಸಾಮರ್ಥ್ಯವಿರುವುದೇ ಕಾರಣವೆಂದು ಅರ್ಥ.

ಭಾ– ಉಕ್ತಂ ಚ ಗಾರುಡೇ–

'ಸರ್ವಜ್ಞಾಲ್ಪಜ್ಞತಾಭೇದಾತ್ ಸರ್ವಶಕ್ತ್ಯಲ್ಪಶಕ್ತಿತಃ ।
ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ಸಂಭೋಗೋ ನೇಶಜೀವಯೋಃ ॥'
– ಇತಿ (ಚ) ॥ ೮ ॥

ಗಾರುಡಪುರಾಣದಲ್ಲೂ ಹೀಗೆ ಹೇಳಲಾಗಿದೆ– ಸರ್ವಜ್ಞತ್ವ-ಅಲ್ಪಜ್ಞತ್ವ, ಸರ್ವಶಕ್ತಿ-ಅಲ್ಪಶಕ್ತಿ, ಸ್ವಾತಂತ್ರ್ಯ-ಪಾರತಂತ್ರ್ಯಗಳೆಂಬ ವೈಲಕ್ಷಣ್ಯವಿರುವುದರಿಂದ ಈಶ ಜೀವರಿಗೆ ಸಮಾನವಾದ ಭೋಗವಿಲ್ಲ- ಎಂದು.

॥ ಇತಿ ಸರ್ವಗತತ್ವಾಧಿಕರಣಮ್ ॥ ೧ ॥

(ಭಾ.ದೀ.) ಕಿಂ ತತ್ ಸಾಮರ್ಥ್ಯವೈಶೇಷ್ಯಂ, ಯೇನ ಸಮಾನಭೋಗಾಪ್ರಾಪ್ತಿಃ? ಇತ್ಯತ ಆಹ – ಉಕ್ತಮಿತಿ ॥ ನ ಕೇವಲಂ ಸೂತ್ರೇ ಜೀವೇಶಯೋರ್ಭೋಗಸಾಮ್ಯಾಭಾವಃ, ತತ್ರ ಹೇತುತ್ವೇನ ಸಾಮರ್ಥ್ಯವೈಶೇಷ್ಯಂ ಚೋಕ್ತಮ್, ಕಿಂತು ಗಾರುಡೇ ಚ ಇತಿ ಸಮುಚ್ಚಯಾರ್ಥಃ ।

**ಕಿಮುಕ್ತಮ್? ಇತ್ಯತಃ, ತತ್ ಪಠತಿ – ಸರ್ವಜ್ಞೇತಿ ॥** ಸರ್ವಜ್ಞತ್ವಾಲ್ಪಜ್ಞತ್ವರೂಪ-ಭೇದಕಧರ್ಮಾಭ್ಯಾಮಿತ್ಯರ್ಥಃ । ಪ್ರಾಪ್ತಸ್ಯ ಬಾಧಕಸ್ಯ ಪರಿಹಾರಾಯ ವಿಷ್ಣೋಃ ಸಾಮರ್ಥ್ಯೇ ಸತ್ಯಪಿ ಪ್ರಥಮಂ ಪ್ರಾಪ್ತಿಸ್ತಾವತ್ ಸ್ಯಾದೇವ ಅಗ್ನಿಸ್ತಂಭವತೋ ದಾಹ-ಪ್ರಾಪ್ತಿವತ್ । ಸಾಽಪಿ ಭಗವತಿ ನ ಸಂಭವತಿ । ತಸ್ಯ ಸಾರ್ವಜ್ಞ್ಯೇನ ಏಷ್ಯದ್ಬಾಧಕ-ಪರಿಹರ್ತೃತ್ವಸಂಭವಾದಿತಿ ಭಾವೇನೇಹ ಸಾರ್ವಜ್ಞ್ಯೋಕ್ತಿಃ, ನ ಹೇತುತ್ವೇನ, ಹೇತುಸ್ತು ಸರ್ವಶಕ್ತಿತ್ವಮ್ । ತಲಸ್ತಸಿಲಶ್ಚ ಪ್ರತ್ಯೇಕಮನ್ವಯಃ । ಈಶ್ವರಸ್ಯ ಜೀವೇನ ಸಹೈಕ-ಶರೀರಸ್ಥತ್ವೇಽಪಿ ದುಃಖಪರಿತ್ಯಾಗೇನ ಸುಖಮಾತ್ರಭೋಗೇ ಸ್ವಾತಂತ್ರ್ಯಂ ಹೇತುಃ । ಜೀವಸ್ಯ ಚೋಭಯಾನುಭವೇ ಪಾರತಂತ್ರ್ಯಂ ಹೇತುರಿತಿ ವಿವೇಕ್ತವ್ಯಮ್ । **ಸಂಭೋಗಃ** - ಸಮಾನಭೋಗಃ । ಗಾರುಡೇ ಇತ್ಯನ್ವಯಃ । 'ಇತಿ ಚ' ಇತಿ ಚಶಬ್ದಪಾಠೇ ತತ್ರ ಪೂರ್ವೋಕ್ತೇನ ಸಮುಚ್ಚಯಾರ್ಥಶ್ಚಕಾರಃ ।

ಅನೇನ ಯತೋ ಯಥಾ ಏಕಸ್ಯ ಜೀವಸ್ಯ ಸರ್ವಶರೀರಸ್ಥತ್ವೇ ಸರ್ವಸಮಾನ-ಭೋಗಪ್ರಾಪ್ತಿಃ ಬಾಧಿಕಾಽನುಪಪತ್ತಿಃ ಸೂತ್ರೋಕ್ತಾಽಸ್ತಿ । ತಥೈವಮೀಶಸ್ಯ ಸರ್ವ-ಭೂತಗತತ್ವಮಂಗೀಕೃತ್ಯ ಜೀವೇಶ್ವರಯೋರೇಕಶರೀರಸ್ಥತ್ವೇಪರಸ್ಯ ಜೀವಸಮಾನ-ಭೋಗಪ್ರಾಪ್ತಿರ್ಬಾಧಿಕಾಽಸ್ತಿ । ಅತೋ ನೇಶ್ವರಃ ಸರ್ವಭೂತಗತ ಇತಿ ಚೇನ್ನ, ಕುತಃ? ತಸ್ಯ ತದಪ್ರಾಪ್ತೌ ಜೀವಾದಪಿ ಸಾಮರ್ಥ್ಯವೈಶೇಷ್ಯಾದ್ ಅಗ್ನಿಸ್ತಂಭವತೋ ದಾಹಾ-ಭಾವವದಿತಿ ಸೂತ್ರಾರ್ಥ ಉಕ್ತೋ ಭವತಿ ॥೧॥

ಯಾವುದರಿಂದಾಗಿ ಈಶ್ವರನಿಗೆ ಜೀವಸಮಾನಭೋಗಪ್ರಾಪ್ತಿಯಾಗುವುದಿಲ್ಲವೋ ಅಂತಹ ಸಾಮರ್ಥ್ಯವಿಶೇಷವು ಯಾವುದು? ಎಂಬ ಪ್ರಶ್ನೆಗೆ ಉತ್ತರವಾಗಿ 'ಉಕ್ತಮ್' ಎಂದು ಹೇಳಲಾಗಿದೆ. ಜೀವೇಶ್ವರರಿಗೆ ಭೋಗಸಾಮ್ಯವಿಲ್ಲವೆಂದು ಅದಕ್ಕೆ ಹೇತು ಸಾಮರ್ಥ್ಯವಿಶೇಷವೆಂದು ಸೂತ್ರದಲ್ಲಿ ಮಾತ್ರವಲ್ಲ ಗಾರುಡದಲ್ಲೂ ಇದನ್ನು ಹೇಳ-ಲಾಗಿದೆ ಎಂದು ಚಶಬ್ದವು ಸಮುಚ್ಚಯಾರ್ಥಕವಾಗಿದೆ.

ಗಾರುಡದಲ್ಲಿ ಏನು ಹೇಳಿದೆ? ಎಂಬ ಪ್ರಶ್ನೆಗೆ ಉತ್ತರವಾಗಿ ಆ ವಾಕ್ಯವನ್ನು 'ಸರ್ವಜ್ಞ' ಎಂಬುದಾಗಿ ಪಠಿಸುತ್ತಿದ್ದಾರೆ. 'ಸರ್ವಜ್ಞಾಲ್ಪಜ್ಞತಾಭೇದಾತ್' ಎಂದರೆ

ಸರ್ವಜ್ಞತ್ವ, ಅಲ್ಪಜ್ಞತ್ವಗಳೆಂಬ ಭೇದಜ್ಞಾಪಕವಾದ ಧರ್ಮಗಳಿಂದ ಎಂದು ಅರ್ಥ. ಜೀವಪರಮಾತ್ಮರಿಗೆ ಏಕಶರೀರಸ್ಥತ್ವವನ್ನು ಹೇಳಿದಾಗ ಪ್ರಾಪ್ತವಾದ ಬಾಧಕವನ್ನು ಪರಿಹರಿಸಲು ವಿಷ್ಣುವಿಗೆ ಸಾಮರ್ಥ್ಯವಿದ್ದರೂ, ಅಗ್ನಿಸ್ತಂಭಶಕ್ತಿಯುಳ್ಳವನಿಗೆ ಅಗ್ನಿ-ಸಂಬಂಧವಾದಾಗ ಮೊದಲು ಅಗ್ನಿಯಿಂದ ದಾಹಪ್ರಾಪ್ತವಾಗುವಂತೆ ವಿಷ್ಣುವಿಗೂ ಮೊದಲು ಸಮಾನಭೋಗಪ್ರಾಪ್ತಿಯೆಂಬ ಬಾಧಕವು ಪ್ರಾಪ್ತವಂತೂ ಆಗುವುದು. ಆದರೆ, ಆ ರೀತಿಯಾಗಿ ಭಗವಂತನ ವಿಷಯದಲ್ಲಿ ಮೊದಲು ಬಾಧಕದ ಪ್ರಾಪ್ತಿಯೇ ಇಲ್ಲ. ಏಕೆಂದರೆ, ಅವನು ಸರ್ವಜ್ಞನಾದ್ದರಿಂದ ಮುಂದೆ ಬರುವ ಬಾಧಕವನ್ನು ತಿಳಿದು ಅದನ್ನು ಪರಿಹರಿಸುವ ಸಾಮರ್ಥ್ಯವು ಅವನಿಗೆ ಇರುವುದು ಎಂಬ ಅಭಿಪ್ರಾಯದಿಂದ ಈ ಪುರಾಣವಾಕ್ಯದಲ್ಲಿ ಭಗವಂತನಿಗೆ ಸರ್ವಜ್ಞತ್ವವನ್ನು ಹೇಳಲಾಗಿದೆಯೇ ಹೊರತು ಬಾಧಕಪರಿಹಾರಕ್ಕೆ ಕಾರಣವೆಂದು ಅದನ್ನು ಹೇಳಿಲ್ಲ. ಬಾಧಕಪರಿಹಾರಕ್ಕೆ ಹೇತು-ವಾದರೋ ಭಗವಂತನಿಗೆ ಇರತಕ್ಕ ಸರ್ವಸಾಮರ್ಥ್ಯ. ಸರ್ವಜ್ಞಾಲ್ಪಜ್ಞತಾ ಎಂಬಲ್ಲಿರುವ ತಲ್‌ಪ್ರತ್ಯಯಕ್ಕೆ ಸರ್ವಜ್ಞತಾ, ಅಲ್ಪಜ್ಞತಾ ಎಂಬುದಾಗಿ, ಹಾಗೆಯೇ ಸರ್ವಶಕ್ತ್ಯಲ್ಪಶಕ್ತಿತಃ ಎಂಬಲ್ಲಿರುವ ತಸಿಲ್ ಪ್ರತ್ಯಯಕ್ಕೆ ಸರ್ವಶಕ್ತಿತಃ ಅಲ್ಪಶಕ್ತಿತಃ ಎಂಬುದಾಗಿ ಪ್ರತ್ಯೇಕವಾಗಿ ಅನ್ವಯವಾಗುವುದು. ಈಶ್ವರನು ಜೀವನೊಂದಿಗೆ ಒಂದೇ ಶರೀರದಲ್ಲಿದ್ದರೂ ದುಃಖ-ವನ್ನು ಬಿಟ್ಟು ಕೇವಲ ಸುಖವನ್ನು ಅನುಭವಿಸುವುದರಲ್ಲಿ ಅವನಿಗಿರುವ ಸ್ವಾತಂತ್ರ್ಯವು ಹೇತುವಾಗಿದೆ. ಜೀವನಿಗಾದರೋ ಸುಖದುಃಖವೆಂಬ ಎರಡರ ಅನುಭವವಿರುವುದಕ್ಕೆ ಪಾರತಂತ್ರ್ಯವು ಕಾರಣವಾಗಿದೆ ಎಂದು ವಿವೇಚನೆಯಿಂದ ತಿಳಿಯಬೇಕು. ಸಂಭೋಗಃ ಎಂದರೆ ಸಮಾನಭೋಗ. ಇತಿ ಗಾರುಡೇ ಎಂದು ಕೊನೆಯಲ್ಲಿರುವ ಇತಿಶಬ್ದಕ್ಕೆ ಗಾರುಡೇ ಎಂಬ ಪದದೊಂದಿಗೆ ಅನ್ವಯ. ಇತಿ ಚ ಎಂದು ಚಶಬ್ದವಿರುವ ಪಾಠವಿದ್ದ ಪಕ್ಷದಲ್ಲಿ ಚಕಾರವು ಹಿಂದೆ ಹೇಳಿದ್ದರ ಸಮುಚ್ಚಯವನ್ನು ಹೇಳುವುದು.

ಇದರಿಂದ, ಯಾವ ಕಾರಣದಿಂದಾಗಿ ಒಬ್ಬ ಜೀವನಿಗೆ ಸರ್ವಶರೀರಸ್ಥತ್ವವನ್ನು ಹೇಳಿದರೆ ಅವನಿಗೆ ಎಲ್ಲರೊಂದಿಗೆ ಸಮಾನವಾದ ಸುಖ-ದುಃಖಗಳ ಭೋಗಪ್ರಾಪ್ತ-ವಾಗಬೇಕಾಗುವುದೆಂಬ ಬಾಧಕವು ಅಂದರೆ ಸೂತ್ರದಲ್ಲಿ ಹೇಳಲಾದ ಅನುಪಪತ್ತಿಯು ಇರುವುದೋ ಹಾಗೆಯೇ ಪರಮಾತ್ಮನಿಗೆ ಸರ್ವಭೂತಗತತ್ವವನ್ನು ಅಂಗೀಕರಿಸಿ ಜೀವೇಶ್ವರರಿಗೆ ಏಕಶರೀರದಲ್ಲಿ ಸ್ಥಿತಿಯನ್ನು ಒಪ್ಪಿದರೆ ಪರಮಾತ್ಮನಿಗೆ ಜೀವಸಮಾನ-

ವಾದ ಭೋಗವು ಪ್ರಾಪ್ತವಾಗಬೇಕಾದೀತು ಎಂಬ ಬಾಧಕವಿರುವುದು. ಆದ್ದರಿಂದ ಈಶ್ವರನು ಸರ್ವಪ್ರಾಣಿಹೃದ್ಗತನಲ್ಲ ಎಂದರೆ ಅದು ಸರಿಯಲ್ಲ; ಏಕೆಂದರೆ, ಪರಮಾತ್ಮನಿಗೆ ಆ ರೀತಿ ಸಮಾನಭೋಗಪ್ರಾಪ್ತಿಯಾಗದಿರಲು ಅಗ್ನಿಸ್ತಂಭನಶಕ್ತಿ ಇರುವವನಿಗೆ ಅಗ್ನಿಯಿಂದ ದಾಹವಾಗದಿರುವಂತೆ ಜೀವನಲ್ಲಿ ಇಲ್ಲದಿರುವ ಸಾಮರ್ಥ್ಯವಿಶೇಷ ಇರುವುದರಿಂದ ಎಂದು ಸೂತ್ರಾರ್ಥವು ಹೇಳಿದಂತಾಗುವುದು.

*****

## ೨. ಅಥ ಅತ್ತೃತ್ವಾಧಿಕರಣಮ್

**ಭಾ– 'ಜನ್ಮಾದ್ಯಸ್ಯ ಯತಃ' ಇತ್ಯುಕ್ತಮ್ । ತತ್ರಾತ್ತೃತ್ವಂ, 'ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ । ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್' (ಬೃ.೩-೨-೫) ಇತಿ, ಅದಿತೇಃ ಪ್ರತೀಯತೇ ।**

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ವಿಷ್ಣುವಿಗೆ ಜಗಜ್ಜನ್ಮಾದಿಕರ್ತೃತ್ವವನ್ನು ಲಕ್ಷಣವನ್ನಾಗಿ ಹೇಳಲಾಗಿದೆ. ಆ ಲಕ್ಷಣಗಳ ಮಧ್ಯೆ ಇರುವ ಜಗತ್ಸಂಹರ್ತೃತ್ವವು ''ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ । ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್'' ಎಂಬ ವಾಕ್ಯದಲ್ಲಿ ದೇವಮಾತೆಯಾದ ಅದಿತಿಗೆ ಇರುವುದೆಂದು ತಿಳಿದುಬರುವುದು.

(ಭಾ.ದೀ.) – ಅತ್ರಾಧಿಕರಣೇ ಲೋಕತೋಽನ್ಯತ್ರ ಪ್ರಸಿದ್ಧಾದಿತಿಶಬ್ದೇನ ಸಹೋಕ್ತಾತ್ತೃತ್ವಲಿಂಗಸ್ಯ ಹರೌ ಸಮನ್ವಯಃ ಕ್ರಿಯತೇ । ಶ್ರುತ್ಯಾದಿಸಂಗತಿಂ ವಿಷಯವಾಕ್ಯಮುದಾಹೃತ್ಯ ವಿಷಯಸಂಶಯೌ ಸಯುಕ್ತಿಕಪೂರ್ವಪಕ್ಷಂ ಚ ಸೂಚಯತಿ – **ಜನ್ಮೇತಿ** ॥ ಜನ್ಮಾದಿಸೂತ್ರೇ ಜನ್ಮಾದಿಕರ್ತೃತ್ವಂ ವಿಷ್ಣೋರುಕ್ತಮಿತ್ಯರ್ಥಃ । **ತತ್ರೇತಿ** ॥ 'ಉಕ್ತಲಕ್ಷಣೇಷು ಮಧ್ಯೇ' ಇತ್ಯರ್ಥಃ । 'ಪ್ರವಿಷ್ಟಮ್' ಇತಿ ಶೇಷಃ । **ಅತ್ತೃತ್ವಮಿತಿ** ॥

'ಸ ಸರ್ಗಕಾಲೇ ಚ ಕರೋತಿ ಸರ್ವಂ ಸಂಹಾರಕಾಲೇ ತು ತದತ್ತಿ ಭೂಯಃ।';
'ಸ್ರಷ್ಟಾ ಪಾತಾ ತಥೈವಾತ್ತಾ' (ಸ್ಕಾಂದೇ)

ಇತ್ಯಾದಾವದಿಧಾತುಪ್ರಕೃತಿಕಾನೇಕಶಬ್ದವಾಚ್ಯಂ ಸಂಹರ್ತೃತ್ವಾಪರಪರ್ಯಾಯ-ಶಬ್ದಬೋಧ್ಯಮ್ ಊರ್ಣನಾಭ್ಯಾದಿವತ್ ಯದತ್ತೃತ್ವಂ ತದಿತ್ಯರ್ಥಃ । ಅನೇನ ಅದೇರ್ಭಕ್ಷಣಾರ್ಥತ್ವಾದದಿತೇರತ್ತೃತ್ವೇಽಪಿ ನ ಸಂಹರ್ತೃತ್ವಲಕ್ಷಣಸ್ಯಾತಿವ್ಯಾಪ್ತಿರಿತಿ ಶಂಕಾ ನಿರಸ್ತಾ। ಪ್ರಥಮೇತಿಶಬ್ದಃ ಶ್ರುತಿಗತಃ। ದ್ವಿತೀಯಸ್ತು ಭಾಷ್ಯಕಾರೀಯಃ। ವಾಕ್ಯ ಇತಿ ಶೇಷಃ। 'ಅದಿತೇಃ' ಇತ್ಯಾವರ್ತತೇ। ತತ್ರೈಕಂ ಭಾವಪ್ರಧಾನಮ್। ತಥಾಚ, ಇತಿ ಬೃಹದಾರಣ್ಯಕವಾಕ್ಯೇ ಯದತ್ತೃತ್ವಂ ಪ್ರತೀಯತೇ ತದ್ ಅದಿತೇಃ, ದೇವಮಾತುರೇವ ಭವೇತ್ । ಕುತಃ? ಅದಿತೇಃ- ಅದಿತಿಶ್ರುತೇಃ ತಥಾ ಅದಿತಿತ್ವಲಿಂಗಾಚ್ಚ ಇತಿ ಯೋಜನಾ। ಅದಿತಿತ್ವಂ ಚ ಗೋತ್ವಾದಿವತ್ ಅದಿತಿಮಾತ್ರಧರ್ಮಃ, ನ ವಿಷ್ಣೌ ಸಾವ-ಕಾಶಮ್।

ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಅದಿತಿಶಬ್ದದೊಂದಿಗೆ ಹೇಳ-ಲ್ಪಟ್ಟಿರುವ ಅತ್ತೃತ್ವಲಿಂಗದ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಲಾಗುವುದು. ಶ್ರುತಿ ಮೊದಲಾದ ಸಂಗತಿಯನ್ನು, ಈ ಅಧಿಕರಣದ ವಿಷಯವಾಕ್ಯವನ್ನು ಉದಾಹರಿಸಿ ವಿಷಯ ಸಂಶಯಗಳನ್ನು, ಯುಕ್ತಿಸಹಿತವಾದ ಪೂರ್ವಪಕ್ಷವನ್ನು ಜನ್ಮ ಇತ್ಯಾದಿ ವಾಕ್ಯದಿಂದ ಭಾಷ್ಯಕಾರರು ಸೂಚಿಸುತ್ತಿದ್ದಾರೆ. ಜನ್ಮಾದ್ಯಸ್ಯ ಯತಃ ಇತ್ಯುಕ್ತಮ್ - ಎಂದರೆ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಜನ್ಮಾದಿಕರ್ತೃತ್ವವು ವಿಷ್ಣುವಿಗೆ ಇರು-ವುದೆಂದು ಹೇಳಲಾಗಿದೆ ಎಂದು ಅರ್ಥ. ತತ್ರ - ಎಂದರೆ ಹೇಳಲಾದ ಲಕ್ಷಣಗಳ ಮಧ್ಯದಲ್ಲಿ ಎಂದು ಅರ್ಥ. 'ಪ್ರವಿಷ್ಟಮ್' - 'ಸೇರಿದೆ' ಎಂಬ ಪದವು ಇಲ್ಲಿ ಶೇಷ-ವಾಗಿದೆ. ಅತ್ತೃತ್ವಂ - ಅಂದರೆ, 'ಸ ಸರ್ಗಕಾಲೇ ಚ ಕರೋತಿ ಸರ್ವಂ ಸಂಹಾರ-ಕಾಲೇ ತು ತದತ್ತಿ ಭೂಯಃ'- 'ಆ ಬ್ರಹ್ಮನು ಸೃಷ್ಟಿಕಾಲದಲ್ಲಿ ಸರ್ವವನ್ನೂ ಸೃಜಿಸು-ವನು; ಸಂಹಾರಕಾಲದಲ್ಲಾದರೋ ಅದನ್ನು ಪುನಃ ಸಂಹರಿಸುವನು', 'ಸ್ರಷ್ಟಾ ಪಾತಾ ತಥೈವಾತ್ತಾ' (ಸ್ಕಾಂದೇ) 'ಆ ಪರಮಾತ್ಮನು ಜಗತ್ಸೃಷ್ಟಿಕರ್ತನೂ, ರಕ್ಷಕನೂ ಹಾಗೆ-

ಯೇ ಸಂಹಾರಕನೂ ಆಗಿರುವನು' ಇತ್ಯಾದಿ ವಾಕ್ಯಗಳಲ್ಲಿ ಅದ್ ಎಂಬ ಧಾತುವನ್ನು ಪ್ರಕೃತಿಯಾಗಿ ಹೊಂದಿರುವ ಅತ್ತಿ ಅತ್ತಾ ಇತ್ಯಾದಿ ಅನೇಕಶಬ್ದಗಳಿಂದ ವಾಚ್ಯವಾದ ಸಂಹರ್ತೃತ್ವ ಶಬ್ದಕ್ಕೆ ಸಮಾನಾರ್ಥಕವಾದ ಶಬ್ದಗಳಿಂದ ಬೋಧಿಸಲ್ಪಡುವ ಜೇಡರಹುಳ ಮೊದಲಾದವುಗಳಿಗೆ ಯಾವ ಅತ್ತೃತ್ವವಿದೆಯೋ ಅಂಥ ಎಂದು ಅರ್ಥ. ಈ ವಿವರಣೆ-ಯಿಂದ ಅದ್ ಧಾತುವು ಭಕ್ಷಣಾರ್ಥಕವಾದುದರಿಂದ ಅದಿತಿದೇವತೆಗೆ ಅತ್ತೃತ್ವವಿದ್ದರೂ ಭಗವಂತನ ಜಗತ್ಸಂಹರ್ತೃತ್ವವೆಂಬ ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲ ಎಂಬ ಶಂಕೆಯು ನಿರಾಕೃತವಾಯಿತು. ಭಾಷ್ಯದಲ್ಲಿ 'ಸರ್ವಂ ವಾ ಅತ್ತೀತಿ' ಎಂಬಲ್ಲಿರುವ ಮೊದಲನೆಯ ಇತಿ ಶಬ್ದವು ಶ್ರುತಿಯಲ್ಲಿರುವ ಶಬ್ದವಾಗಿದೆ. ಇತ್ಯದಿತೇಃ ಎಂಬಲ್ಲಿರುವ ಎರಡನೆಯ ಇತಿಶಬ್ದವಾದರೂ ಭಾಷ್ಯಕಾರರು ಪ್ರಯೋಗಿಸಿದ ಶಬ್ದವಾಗಿದೆ. 'ವಾಕ್ಯೇ' ಎಂಬ ಪದವು ಇಲ್ಲಿ ಶೇಷವಾಗಿದೆ. ಅದಿತೇಃ ಎಂಬ ಪದವು ಆವೃತ್ತಿಯನ್ನು ಪಡೆಯುವುದು. ಅವುಗಳಲ್ಲಿ ಒಂದು ಅದಿತಿಪದವು ಅದಿತಿತ್ವ ಎಂಬ ಧರ್ಮವನ್ನು ಪ್ರಧಾನವಾಗಿ ಹೇಳುವುದು. ತಥಾಚ - ಸ ಯದ್ಯದೇವ ಇತ್ಯಾದಿ ಬೃಹದಾರಣ್ಯಕವಾಕ್ಯದಲ್ಲಿ ಯಾವ ಅತ್ತೃತ್ವವು ತಿಳಿದು ಬರುವುದೋ ಅದು ಅದಿತೇಃ - ಅದಿತಿ ಎಂಬ ದೇವಮಾತೆಗೆ ಇರುವುದು. ಏಕೆಂದರೆ ಅದಿತೇಃ – ಅದಿತಿ ಎಂಬ ಶಬ್ದವಿರುವುದರಿಂದ. ಹಾಗೆಯೇ ಅದಿತಿತ್ವವೆಂಬ ಅಸಾಧಾರಣಧರ್ಮದಿಂದಲೂ ಕೂಡ ಎಂದು ಭಾಷ್ಯವಾಕ್ಯದ ಯೋಜನೆ. ಅದಿತಿತ್ವವಾದರೋ, ಗೋತ್ವ ಮೊದಲಾದವುಗಳು ಗೋವು ಮೊದಲಾದ-ವುಗಳಲ್ಲಿ ಮಾತ್ರವೇ ಇರುವ ಧರ್ಮದಂತೆ, ಆದಿತಿಯಲ್ಲಿ ಮಾತ್ರ ಇರುವ ಧರ್ಮವಾ-ಗಿದೆ. ಆದ್ದರಿಂದ ಅದು ವಿಷ್ಣುವಿನಲ್ಲಿ ಸಾವಕಾಶವಾಗಿಲ್ಲ.

(ಭಾ.ದೀ.) ಅನೇನ ಜನ್ಮಾದಿಸೂತ್ರೋಕ್ತಲಕ್ಷಣಸ್ಯ ಅತಿವ್ಯಾಪ್ತ್ಯಸಂಭವಾಕ್ಷೇಪಾತ್ ತೇನಾಸ್ಯ ಆಕ್ಷೇಪಿಕೀ ಸಂಗತಿಃ । ಶ್ರುತ್ಯುಕ್ತಮ್ 'ಅತ್ತೃತ್ವಂ' ವಿಷಯಃ । 'ವಿಷ್ಣೋರನ್ಯಸ್ಯ ವಾ' ಇತಿ ಸಂದೇಹಃ । 'ದೇವಮಾತುಃ ಅದಿತೇರೇವ' ಇತಿ ಪೂರ್ವಪಕ್ಷಃ । ಅದಿತಿಶ್ರುತಿಃ, ಅದಿತಿತ್ವಯುಕ್ತಿಶ್ಚ ಸೂಚಿತಾ ಭವತಿ ।

ಇದರಿಂದ, ಜನ್ಮಾದಿಸೂತ್ರದಲ್ಲಿ ಹೇಳಿರುವ ಸಂಹರ್ತೃತ್ವವೆಂಬ ಲಕ್ಷಣಕ್ಕೆ ಅದಿತಿ-ಯಲ್ಲಿ ಅತಿವ್ಯಾಪ್ತಿ ಮತ್ತು ಲಕ್ಷ್ಯವಾದ ವಿಷ್ಣುವಿನಲ್ಲಿ ಅಸಂಭವ ಎಂಬ ದೋಷಗಳಿರು-

ವುದೆಂದು ಇಲ್ಲಿ ಆಕ್ಷೇಪಿಸುವುದರಿಂದ ಆ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿ ಇರುವುದು. ಬೃಹದಾರಣ್ಯಕಶ್ರುತಿಯಲ್ಲಿ ಹೇಳಿರುವ ಅತ್ತೃತ್ವವು ಈ ಅಧಿಕರಣದ ವಿಷಯವಾಗಿದೆ. ಅದು ವಿಷ್ಣುವಿಗಿರುವುದೋ ಅಥವಾ ವಿಷ್ಣುಭಿನ್ನರಿಗೋ ಎಂದು ಸಂದೇಹ. ದೇವಮಾತೆಯಾದ ಅದಿತಿಗೇ ಇರುವುದೆಂದು ಪೂರ್ವಪಕ್ಷ. ಅದಿತಿಶ್ರುತಿ ಅಂದರೆ ಅದಿತಿಶಬ್ದ ಮತ್ತು ಅದಿತಿತ್ವವೆಂಬ ಯುಕ್ತಿ ಪೂರ್ವಪಕ್ಷಸಾಧಕವಾದುದೆಂದು ಸೂಚಿತವಾಗಿದೆ.

(ಭಾ.ದೀ.)ಪೂರ್ವಪಕ್ಷೇ ಶ್ರುತ್ಯರ್ಥಸ್ತು – 'ಸಃ' ಅದಿತಿರ್ದೇವಮಾತಾ ಸಂವತ್ಸರನಾಮ್ನಾ ಚತುರ್ಮುಖೇನ 'ಯದ್ಯದಸೃಜತ ತತ್ತದತ್ತುಮಧ್ರಿಯತ' ಮನಃ । 'ಆದಚ್ಚ' ಇತಿ ಶೇಷಃ । ಕುತಃ ಸರ್ವಾತ್ತೃತ್ವಮದಿತೇಃ? ಯಸ್ಮಾತ್ ಸರ್ವಾತ್ರೀ ಸಾ ಸರ್ವಮತ್ತೀತಿ ಯತ್ ತದೇವ ಹ್ಯದಿತಿರ್ದೇವಮಾತುಃ 'ಅದಿತಿತ್ವಮ್' ಅದಿತಿಶಬ್ದವಾಚ್ಯತ್ವೇ ನಿಮಿತ್ತಮ್, ಅನ್ಯಥಾ ತನ್ನ ಸ್ಯಾದಿತಿ । ಅಸ್ಮಿನ್ ಪಕ್ಷೇಽಪಿ ಸ್ಥಲಾಂತರಸ್ಥಾದಿತಿಶಬ್ದಸ್ಯ ನಿರ್ವಚನಮಿದಮ್ । ಅತ್ರ ಸರ್ವಶಬ್ದಃ **ಸುಧಾ**ರೀತ್ಯಾ ಅದಿತ್ಯದನಯೋಗ್ಯಸರ್ವಪರಃ। **ಟೀಕಾ**ರೀತ್ಯಾ ಸಂಕುಚಿತಸರ್ವಪರೋ ವಾ।

ಪೂರ್ವಪಕ್ಷದಲ್ಲಿ ಈ ಶ್ರುತಿಯ ಅರ್ಥವಾದರೋ – ಸಃ – ಅದಿತಿಯೆಂಬ ದೇವಮಾತೆಯು, ಸಂವತ್ಸರನಾಮಕನಾದ ಚತುರ್ಮುಖನಿಂದ 'ಯದ್ಯದಸೃಜತ ತತ್ತದತ್ತುಮಧ್ರಿಯತ'- 'ಯಾವುದು ಯಾವುದು ಸೃಜಿಸಲ್ಪಟ್ಟಿತ್ತೋ ಅದೆಲ್ಲವನ್ನೂ ಸಂಹರಿಸಲು ಮನಸ್ಸನ್ನು ಮಾಡಿದಳು'. 'ಆದಚ್ಚ'- 'ಮತ್ತು ಸಂಹರಿಸಿದಳು' ಎಂಬ ಪದಗಳು ಇಲ್ಲಿ ಶೇಷವಾಗಿವೆ. ಸರ್ವಾತ್ತೃತ್ವವು ಅದಿತಿಗೆ ಇರುವುದೆಂಬುದರಲ್ಲಿ ಆಧಾರವೇನು? ಯಾವ ಕಾರಣದಿಂದಾಗಿ (ಸರ್ವಂ ಅತ್ತಿ) ಎಲ್ಲವನ್ನೂ ಸಂಹರಿಸುವಳು ಎಂಬುದಾಗಿ ಸರ್ವಾತ್ರೀ (ಸರ್ವಸಂಹಾರಕಳು) ಆಗಿರುವಳೋ ಈ ಸರ್ವಸಂಹರ್ತೃತ್ವವೇ ದೇವಮಾತೆಯಾದ ಅದಿತಿಗೆ ಅದಿತಿತ್ವ ಅಂದರೆ ಅದಿತಿಶಬ್ದವಾಚ್ಯತ್ವವಿರುವುದರಲ್ಲಿ ನಿಮಿತ್ತವಾಗಿದೆ. ಹಾಗಿಲ್ಲದಿದ್ದಲ್ಲಿ ಆ ಅದಿತಿತ್ವವು ಅವಳಿಗೆ ಇಲ್ಲವಾದೀತು! ಈ ಪಕ್ಷದಲ್ಲೂ ಕೂಡ ಸ್ಥಲಾಂತರದಲ್ಲಿ ಇರುವ ಅದಿತಿಶಬ್ದದ ನಿರ್ವಚನವನ್ನು ಇಲ್ಲಿ ಮಾಡಲಾಗಿದೆ. ಸರ್ವಂ ವಾ ಅತ್ತಿ ಎಂಬಲ್ಲಿರುವ ಸರ್ವಶಬ್ದವು ಸುಧಾರೀತ್ಯಾ ಅದಿತಿಯು ಸಂಹಾರ-

ಮಾಡಲು ಯೋಗ್ಯವಾದ ಸರ್ವವನ್ನೂ ಹೇಳುವ ಶಬ್ದವಾಗಿದೆ. ಅಥವಾ ಟೀಕಾರೀತ್ಯಾ ಸಂಕುಚಿತಸರ್ವವನ್ನು ಹೇಳುವ ಶಬ್ದವಾಗಿದೆ.

(ಭಾ.ದೀ.) ಸಿದ್ಧಾಂತೇ ಶ್ರುತ್ಯರ್ಥಸ್ತು- **ಸಃ**- ಸಂವತ್ಸರನಾಮಕಚತುರ್ಮುಖೋ ಯದ್ಯದೇವಾಸೃಜತ ತತ್ತತ್ಸರ್ವಮತ್ತುಂ ಸ ಮೃತ್ಯುನಾಮಾ ಜನಾರ್ದನೋऽಧ್ರಿಯತ। ಆದಚ್ಚ। ಕುತಃ ಸರ್ವಸಂಹರ್ತೃತ್ವಂ ವಿಷ್ಣೋಃ? ಅದಿತೇಃ - ಅದಿತಿಶಬ್ದಾತ್। 'ಅದಿತಿ-ರ್ದೇವತಾಮಯೀ'(ಕಠ.೪-೭) ಇತಿ ಶ್ರುತ್ಯಂತರೇ ಬ್ರಹ್ಮಣ್ಯದಿತಿಶಬ್ದಪ್ರಯೋಗಾದಿತಿ ಯಾವತ್ । ತಾವತಾऽಪಿ ಕುತಃ ಸರ್ವಾತ್ತೃತ್ವಂ ವಿಷ್ಣೋಃ? ಸರ್ವಮತ್ತೀತಿ ಯತ್ ತದೇವ ಹಿ 'ಅದಿತೇಃ' ಸ್ತ್ರೀಲಿಂಗಾದಿತಿಶಬ್ದವಾಚ್ಯಸ್ಯ 'ಅದಿತಿತ್ವಮ್' ಅದಿತಿಶಬ್ದವಾಚ್ಯತ್ವ-ಮನ್ಯಥಾ ಸ ನಿರ್ನಿಮಿತ್ತಕಃ ಸ್ಯಾದಿತಿ ಭಾವಃ। ಅನೇನ ವಿಷ್ಣೋಃ ಸರ್ವಾತ್ತೃತಾಯಾಂ ತನ್ನಿಮಿತ್ತಶ್ರುತ್ಯಂತರಗತಾದಿತಿಶಬ್ದೋ ಹೇತುರಿತ್ಯುಕ್ತಂ ಭವತಿ। ಉಕ್ತಂ ಹಿ **ಚಂದ್ರಿಕಾ-ಯಾಮ್** – 'ತತ್ತದತ್ತುಮಿತಿ ಪೂರ್ವಪ್ರತಿಜ್ಞಾತಸರ್ವಾತ್ತೃತಾಯಾಂ ಶ್ರುತ್ಯಂತರೇ ಬ್ರಹ್ಮಣಿ ಪ್ರಯುಕ್ತಸ್ಯ ಸರ್ವಾತ್ತೃತ್ವನಿಮಿತ್ತಕಸ್ಯಾದಿತಿಶಬ್ದಸ್ಯ ಹೇತೂಕರಣಂ ಸಂಭವತಿ' ಇತಿ। ಅತ ಏವ **ಋಗ್ಭಾಷ್ಯೇ** – 'ಅತ್ತಿ ವಿಶ್ವಂ ತೇನ ಚೈವಾದಿತಿರಿತಿ ವಿಷ್ಣುಃ' ಇತ್ಯುಕ್ತಮ್। ತತ್ರೈವ 'ಗುಣತಃ ಕಾಲತಶ್ಚಾऽನಂತ್ಯರೂಪಮಖಂಡಿತತ್ವಂ ಚಾದಿತಿಶಬ್ದಪ್ರವೃತ್ತಿ-ನಿಮಿತ್ತಮ್' ಇತಿ ಚೋಕ್ತಮ್।

ಸಿದ್ಧಾಂತದಲ್ಲಿ ಶ್ರುತ್ಯರ್ಥವಾದರೋ, ಸಃ- ಸಂವತ್ಸರನಾಮಕನಾದ ಚತುರ್ಮುಖನು ಯದ್ಯದೇವ ಅಸೃಜತ ತತ್ಸರ್ವಂ ಅತ್ತುಂ - ಯಾವುದನ್ನು ಸೃಜಿಸಿದನೋ ಅದೆಲ್ಲ-ವನ್ನೂ ಸಂಹರಿಸಲು ಸಃ - ಮೃತ್ಯುನಾಮಕನಾದ ಜನಾರ್ದನನು ಅಧ್ರಿಯತ - ನಿಶ್ಚ-ಯಿಸಿದನು. ಆದಚ್ಚ - ಮತ್ತು ಸಂಹರಿಸಿದನು. ವಿಷ್ಣುವಿಗೆ ಸರ್ವಸಂಹರ್ತೃತ್ವವು ಇರು-ವುದಕ್ಕೆ ಪ್ರಮಾಣವೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ಅದಿತೇಃ' ಶ್ರುತಿಯಲ್ಲಿ ಅದಿತಿ-ಶಬ್ದವಿರುವುದರಿಂದ ಎಂದು ಹೇಳಲಾಗಿದೆ. ಅದಿತಿರ್ದೇವತಾಮಯೀ -(ಕಠ.೪-೭) ಎಂಬ ಇನ್ನೊಂದು ಶ್ರುತಿಯಲ್ಲಿ ಬ್ರಹ್ಮನನ್ನು ಕುರಿತು ಅದಿತಿಶಬ್ದವನ್ನು ಪ್ರಯೋಗಿಸಿರು-ವುದರಿಂದ ಎಂದು ಭಾವ. ಇದರಿಂದಲೂ ವಿಷ್ಣುವಿಗೆ ಸರ್ವಾತ್ತೃತ್ವವು ಹೇಗೆ ಸಿದ್ಧವಾಗುವುದು? ಸರ್ವಂ ಅತ್ತಿ - ಎಂಬುದಾಗಿ ಯಾವ ಸರ್ವಸಂಹರ್ತೃತ್ವವನ್ನು

ಹೇಳಿದೆಯೋ ಅದೇ, **ಅದಿತೇಃ** - ಸ್ತ್ರೀಲಿಂಗದಲ್ಲಿರುವ ಅದಿತಿಶಬ್ದದಿಂದ ವಾಚ್ಯನಿಗೆ, **ಅದಿತಿತ್ವಮ್** - ಅದಿತಿಶಬ್ದವಾಚ್ಯತ್ವ ಕೂಡುತ್ತದೆ. ಇಲ್ಲದಿದ್ದಲ್ಲಿ ಆ ಪದವು ಪ್ರವೃತ್ತಿನಿಮಿತ್ತರಹಿತವಾದೀತು ಎಂದು ಭಾವ. ಇದರಿಂದ ವಿಷ್ಣುವಿಗೆ ಸರ್ವಾತ್ತೃತ್ವ ಇರುವುದರಲ್ಲಿ ಆ ಧರ್ಮವೇ ಪ್ರವೃತ್ತಿನಿಮಿತ್ತವಾಗಿರುವ ಮತ್ತೊಂದು ಶ್ರುತಿಯಲ್ಲಿರುವ ಅದಿತಿಶಬ್ದವು ಹೇತುವಾಗಿದೆ ಎಂದು ಹೇಳಿದಂತಾಗುವುದು. ಚಂದ್ರಿಕಾದಲ್ಲಿ ಹೀಗೆ ಹೇಳಲಾಗಿದೆ – 'ತತ್ತದತ್ತುಮಿತಿ ಪೂರ್ವಪ್ರತಿಜ್ಞಾತಸರ್ವಾತ್ತೃತಾಯಾಂ ಶ್ರುತ್ಯಂತರೇ ಬ್ರಹ್ಮಣಿ ಪ್ರಯುಕ್ತಸ್ಯ ಸರ್ವಾತ್ತೃತ್ವನಿಮಿತ್ತಕಸ್ಯಾದಿತಿಶಬ್ದಸ್ಯ ಹೇತೂಕರಣಂ ಸಂಭವತಿ' - 'ತತ್ತದತ್ತುಂ ಎಂಬುದಾಗಿ ಹಿಂದೆ ಪ್ರತಿಜ್ಞೆ ಮಾಡಲಾದ ವಿಷ್ಣುವಿನ ಸರ್ವಾತ್ತೃತ್ವವಿಷಯದಲ್ಲಿ, ಮತ್ತೊಂದು ಶ್ರುತಿಯಲ್ಲಿ ಬ್ರಹ್ಮನನ್ನು ಕುರಿತು ಪ್ರಯೋಗಿಸಲ್ಪಟ್ಟಿರುವ ಸರ್ವಾತ್ತೃತ್ವವೇ ಪ್ರವೃತ್ತಿನಿಮಿತ್ತವಾಗುಳ್ಳ ಅದಿತಿಶಬ್ದವನ್ನು ಹೇತುವಾಗಿ ಮಾಡಿರುವುದು ಯುಕ್ತವಾಗಿದೆ' ಎಂದು. ಆದ್ದರಿಂದಲೇ ಋಗ್ಭಾಷ್ಯದಲ್ಲಿ 'ಅತ್ತಿ ವಿಶ್ವಂ ತೇನ ಚೈವಾದಿತಿರಿತಿ ವಿಷ್ಣುಃ' 'ವಿಷ್ಣುವು ಸಮಸ್ತವಿಶ್ವವನ್ನು ಸಂಹರಿಸುವನು ಆದ್ದರಿಂದಲೇ ಅವನು ಅದಿತಿ ಎಂದೆನಿಸುವನು' ಎಂದು ಹೇಳಲಾಗಿದೆ. ಅದೇ ಋಗ್ಭಾಷ್ಯದಲ್ಲಿ **'ಗುಣತಃ ಕಾಲತಶ್ಚ ಅನಂತ್ಯರೂಪಮ್ ಅಖಂಡಿತತ್ವಂ ಚ ಅದಿತಿಶಬ್ದಪ್ರವೃತ್ತಿನಿಮಿತ್ತಂ'** 'ಗುಣಗಳಿಂದ ಮತ್ತು ಕಾಲದಿಂದ ಅನಂತ್ಯರೂಪವಾದ ಅಖಂಡತ್ವವು ಅದಿತಿಶಬ್ದದ ಪ್ರವೃತ್ತಿನಿಮಿತ್ತವಾಗಿದೆ' ಎಂದೂ ಹೇಳಿದೆ.

**ಭಾ–** 'ಸ ಯದ್ಯದೇವಾಸೃಜತ' ಇತಿ ಪುಲ್ಲಿಂಗಂ ಚ 'ಕೂಟಸ್ಥೋಽಕ್ಷರ ಉಚ್ಯತೇ'(ಭ.ಗೀ.೧೫-೧೬) ಇತ್ಯಾದಿವತ್।

'ಸ ಯದ್ಯದೇವಾಸೃಜತ' ಎಂಬ ವಾಕ್ಯದಲ್ಲಿ ಸಃ ಎಂದು ಪುಲ್ಲಿಂಗವಾದರೋ 'ಕೂಟಸ್ಥೋಕ್ಷರ ಉಚ್ಯತೇ' ಎಂಬ ವಾಕ್ಯದಲ್ಲಿ ಅಕ್ಷರಃ ಎಂದು ಪುಲ್ಲಿಂಗ ಪ್ರಯೋಗವು ಹೇಗೋ ಹಾಗೆ ಯುಕ್ತವಾಗುತ್ತದೆ.

(ಭಾ.ದೀ.) ನನು ಏತತ್ ಅತೃತ್ವಮದಿತೇಃ ಚೇತ್ , ತರ್ಹಿ ತಸ್ಯಾಂ 'ಸಃ' ಇತಿ ಪುಲ್ಲಿಂಗಂ ಯುಕ್ತಂ ಸ್ಯಾತ್ । ಅತಸ್ತೇನ ಶ್ರುತ್ಯಾದಿಬಾಧ ಇತ್ಯತ ಆಹ – **ಸ ಇತಿ** ॥ 'ಇತಿ ವಾಕ್ಯೇ ಶ್ರುತಮ್' ಇತ್ಯರ್ಥಃ । 'ಇತ್ಯಾದಿವತ್' ಇತ್ಯನಂತರಮ್ 'ಅದಿತ್ಯಾಂ

ಯುಜ್ಯತೇ' ಇತಿ ಶೇಷಃ । **ಚಸ್ತ್ವರ್ಥಃ** । **ಆದಿ**ಪದೇನ 'ಸೋऽಹಂ ವಾಯುಂ ದಿಶಾಂ ವತ್ಸ ವೇದ' ಇತಿ ಛಂದೋಗವಾಕ್ಯಂ ಗೃಹ್ಯತೇ । ತಥಾಚ – 'ಪೂರ್ವಪಕ್ಷೇ ನ ಪುಲ್ಲಿಂಗಾನುಪಪತ್ತಿಃ' ಇತಿ ಭಾವಃ । **ಕೂಟಮ್**-ಆಕಾಶಂ ತದ್ವತ್ ನಿರ್ವಿಕಾರತಯಾ ತಿಷ್ಠತಿ ಇತಿ ಕೂಟಸ್ಥಃ ಪ್ರಕೃತಿಃ '**ಅಕ್ಷರಃ**' ದೇಹತೋऽವಿನಾಶಿತ್ವಾದುಚ್ಯತ ಇತಿ ಗೀತಾ-ವಾಕ್ಯಸ್ಯಾರ್ಥಃ।

ದಿಕ್‌ಶಬ್ದಾದೀನಾಂ ಪೂರ್ವಾದಿಚತುರ್ದಿಗವಸ್ಥಿತಭಗವದ್ಬಾಹೂನಾಂ 'ವತ್ಸಂ' ತತೋ ಜಾತಂ 'ವಾಯುಂ' ಮುಖ್ಯಪ್ರಾಣಮಹಂ ವೇದ ಜಾನಾಮಿ ಇತ್ಯರ್ಥಃ । ಲಕ್ಷ್ಮೀವಾಕ್ಯಮೇತತ್ ।

ಸ ಯದ್ಯದೇವ ಎಂಬ ವಾಕ್ಯದಲ್ಲಿ ಉಕ್ತವಾದ ಅತ್ತೃತ್ವವು ದೇವಮಾತೆಯಾದ ಅದಿತಿಗೆ ಇರುವುದಾದರೆ ಆ ಶ್ರುತಿಯಲ್ಲಿ ಸಃ ಎಂದು ಪುಲ್ಲಿಂಗವು ಹೇಗೆ ಯುಕ್ತವಾಗುವುದು? ಆದ್ದರಿಂದ ಆ ಪುಲ್ಲಿಂಗದಿಂದ ಅದಿತಿಶ್ರುತಿ ಮೊದಲಾದವುಗಳಿಗೆ ಬಾಧವುಂಟಾಗುವುದು ಎಂಬ ಶಂಕೆಗೆ 'ಸ ಯದ್ಯದೇವ' ಎಂದು ಉತ್ತರಿಸುತ್ತಿದ್ದಾರೆ. 'ಸ ಯದ್ಯದೇವ ಇತ್ಯಾದಿವಾಕ್ಯದಲ್ಲಿ ಶ್ರುತವಾಗಿರುವ ಪುಲ್ಲಿಂಗವಾದರೋ' ಎಂದು ಅರ್ಥ. ಭಾಷ್ಯದಲ್ಲಿ ಇತ್ಯಾದಿವತ್ ಎಂಬ ಪದದ ಅನಂತರ 'ಅದಿತ್ಯಾಂ ಯುಜ್ಯತೇ' 'ಅದಿತಿಯಲ್ಲಿ ಯುಕ್ತವಾಗಿದೆ' ಎಂಬ ಪದಗಳು ಶೇಷವಾಗಿವೆ. ಪುಲ್ಲಿಂಗಂ ಚ ಎಂಬಲ್ಲಿ-ರುವ ಚಕಾರವು 'ತು'ಶಬ್ದದ ಅರ್ಥವನ್ನು ಹೇಳುವುದು. ಇತ್ಯಾದಿ ಎಂಬಲ್ಲಿರುವ ಆದಿಪದದಿಂದ 'ಸೋऽಹಂ ವಾಯುಂ ದಿಶಾಂ ವತ್ಸಂ ವೇದ' ಎಂಬ ಛಾಂದೋ-ಗ್ಯವಾಕ್ಯವು ಗ್ರಹಿಸಲ್ಪಡುವುದು. ತಥಾ ಚ ಪೂರ್ವಪಕ್ಷದಲ್ಲಿ ಪುಲ್ಲಿಂಗದ ಅನುಪಪತ್ತಿ ಇಲ್ಲವೆಂದು ಭಾವ. ಕೂಟಸ್ಥ ಎಂಬಲ್ಲಿ ಕೂಟವೆಂದರೆ ಆಕಾಶ. ಅದರಂತೆ ನಿರ್ವಿಕಾರ-ವಾಗಿ ಇರುವುದರಿಂದ ಕೂಟಸ್ಥಳೆಂದೆನಿಸುವ ಚಿತ್‌ಪ್ರಕೃತಿಯು ಅಕ್ಷರಃ - ದೇಹತಃ ನಾಶವಿಲ್ಲದಿರುವುದರಿಂದ ಅಕ್ಷರಳೆಂದೆನಿಸುವಳು ಎಂದು ಗೀತಾವಾಕ್ಯದ ಅರ್ಥ.

ದಿಕ್‌ಶಬ್ದಾರ್ಥವಾದ ಪೂರ್ವ ಮೊದಲಾದ ನಾಲ್ಕು ದಿಕ್ಕುಗಳಲ್ಲಿರುವ ಭಗವಂತನ ಬಾಹುಗಳ, ವತ್ಸಂ ಅಂದರೆ ಅವುಗಳಿಂದ ಹುಟ್ಟಿದ, ವಾಯುಂ- ಮುಖ್ಯಪ್ರಾಣನನ್ನು,

ವೇದ- ನಾನು ತಿಳಿದಿದ್ದೇನೆ ಎಂದು 'ಸೋऽಹಂ ವಾಯುಂ ದಿಶಾಂ ವತ್ಸಂ ವೇದ' ಇತ್ಯಾದಿ ಶ್ರುತಿಯ ಅರ್ಥ. ಈ ಶ್ರುತಿಯು ಲಕ್ಷ್ಮಿಯು ಹೇಳುವ ವಾಕ್ಯವಾಗಿದೆ.

ಭಾ– ಅತ್ರೋಚ್ಯತೇ –

**॥ ಓಂ ಅತ್ತಾ ಚರಾಚರಗ್ರಹಣಾತ್ ಓಂ ॥ ೯ ॥**

ಈ ಪೂರ್ವಪಕ್ಷಕ್ಕೆ ಉತ್ತರವಾಗಿ ಹೀಗೆ ಹೇಳಲಾಗಿದೆ. 'ಓಂ ಅತ್ತಾ ಚರಾಚರಗ್ರಹಣಾತ್ ಓಂ' ಸರ್ವಂ ವಾ ಅತ್ತಿ ಎಂದು ಚೇತನಾ-ಚೇತನಾತ್ಮಕವಾದ ಸಮಸ್ತಪ್ರಪಂಚವನ್ನು ಸಂಹಾರ್ಯವಾದುದೆಂದು ಗ್ರಹಿಸಿರುವುದರಿಂದ ಈ (ಸ ಯದ್ಯದೇವ ಎಂಬ) ವಾಕ್ಯದಲ್ಲಿ ಅತ್ತ್ಯ-ವೆಂದು ಹೇಳಲ್ಪಟ್ಟಿರುವವನು ವಿಷ್ಣುವೇ ಆಗಿದ್ದಾನೆ.

(ಭಾ.ದೀ.) ಸಿದ್ಧಾಂತಯತ್ಸೂತ್ರಮವತಾರಯತಿ– **ಅತ್ರೇತಿ** ॥ 'ಇತಿ ಚೋದ್ಯೇ ಸಮಾಧಾನಮುಚ್ಯತೇ ಸೂತ್ರಕೃತಾ' ಇತಿ ಶೇಷಃ । ಅನೇನ ಸೂತ್ರೇ ಅತ್ರೋಚ್ಯತೇ ಇತಿ ಶೇಷೋ ದರ್ಶಿತಃ । ತತ್ಸೂತ್ರಂ ಪಠತಿ – **ಅತ್ತೇತಿ** ॥ 'ತತ್ತು' ಇತ್ಯನುವರ್ತತೇ । ವಿಪರಿಣಮ್ಯತೇ ಚ । ತಥಾಚಾತ್ರ ವಾಕ್ಯೇ ಯಃ '**ಅತ್ತಾ**' - ಸಂಹರ್ತಾ ಉಚ್ಯತೇ, ಸ ವಿಷ್ಣುರೇವ । ಕುತಃ? 'ಸರ್ವಂ ವಾ ಅತ್ತಿ' ಇತಿ 'ಚರಾಚರಸ್ಯ' ಚೇತನಾಚೇತನರೂಪಸ್ಯ ವಿಶ್ವಸ್ಯಾದ್ಯತಯಾ ಸಂಹಾರ್ಯತಯಾ 'ಗ್ರಹಣಾತ್' ಚರಾಚರಾತ್ತೃತ್ವಲಿಂಗಾದಿತಿ ಯಾವದಿತಿ ಸೂತ್ರಾರ್ಥಃ ।

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ 'ಅತ್ರ' ಎಂದು ಅವತಾರಿಕೆಯನ್ನು ನೀಡುತ್ತಿದ್ದಾರೆ. 'ಹೀಗೆ ಆಕ್ಷೇಪವನ್ನು ಮಾಡಿದಾಗ ಸಮಾಧಾನವು ಸೂತ್ರಕಾರರಿಂದ ಹೇಳಲ್ಪಡುವುದು' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ. ಈ ಅವತಾರಿಕೆಯಿಂದ ಸೂತ್ರದಲ್ಲಿ 'ಅತ್ರ ಉಚ್ಯತೇ' ಎಂಬ ಪದಗಳು ಶೇಷವಾಗಿವೆ ಎಂದು ಸೂಚಿತವಾಗುವುದು. ಆ ಸಮಾಧಾನ ನೀಡುವ ಸೂತ್ರವನ್ನು 'ಅತ್ರ' ಎಂದು ಭಾಷ್ಯಕಾರರು ಪಠಿಸುತ್ತಿದ್ದಾರೆ. ತತ್, ತು ಎಂಬ ಪದಗಳು ಅನುವೃತ್ತಿಯನ್ನು ಪಡೆಯುತ್ತವೆ. ಮತ್ತು ತಚ್ಛಬ್ದವು ಸಃ ಎಂಬುದಾಗಿ

ವ್ಯತ್ಯಾಸವನ್ನು ಪಡೆಯುತ್ತದೆ. ತಥಾಚ - ಯದ್ಯದೇವ ಎಂಬ ವಾಕ್ಯದಲ್ಲಿ ಯಾರು ಅತ್ತಾ ಅಂದರೆ ಸಂಹಾರಕನೆಂದು ಹೇಳಲ್ಪಟ್ಟಿದ್ದಾನೋ ಸಃ ವಿಷ್ಣುರೇವ - ಅವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ, 'ಸರ್ವಂ ವಾ ಅತ್ತಿ' ಎಂಬುದಾಗಿ 'ಚರಾಚರಸ್ಯ' ಚೇತನಾಚೇತನಾತ್ಮಕವಾದ ಪ್ರಪಂಚವನ್ನು ಅದ್ಯ ಎಂದರೆ ಸಂಹರಿಸಲ್ಪಡತಕ್ಕದ್ದೆಂದು, ಗ್ರಹಣಾತ್- ಗ್ರಹಿಸಿರುವುದರಿಂದ ಚರಾಚರಾತ್ಮಕವಿಶ್ವಸಂಹರ್ತೃತ್ವರೂಪಲಿಂಗದಿಂದ ಎಂದು ಭಾವ - ಎಂದು ಸೂತ್ರದ ಅರ್ಥವಾಗಿದೆ.

**ಭಾ– ನ ಹಿ ಚರಾಚರಸ್ಯ ಸರ್ವಸ್ಯಾತ್ತೃತ್ವಮದಿತೇಃ।**

**'ಸ್ರಷ್ಟಾ ಪಾತಾ ತಥೈವಾತ್ತಾ ನಿಖಿಲಸ್ಯೈಕ ಏವ ತು।**
**ವಾಸುದೇವಃ ಪರಃ ಪುಂಸಾಮಿತರೇऽಲ್ಪಸ್ಯ ವಾ ನ ವಾ' ಇತಿ ಸ್ಕಾಂದೇ।**

ಚೇತನಾಚೇತನಾತ್ಮಕವಾದ ಸಮಸ್ತ ಪ್ರಪಂಚದ ಅತ್ತೃತ್ವವು ಅದಿತಿಗೆ ಇಲ್ಲವೆಂಬುದು ಪ್ರಸಿದ್ಧ. ಸ್ಕಾಂದಪುರಾಣದಲ್ಲಿ 'ಸಮಸ್ತಜಗತ್ತಿಗೆ ಪುರುಷೋತ್ತಮನಾದ ವಾಸುದೇವನೊಬ್ಬನೇ ಸ್ವತಂತ್ರವಾಗಿ ಸೃಷ್ಟಿ-ಕರ್ತನೂ ರಕ್ಷಕನೂ ಹಾಗೆಯೇ ಸಂಹಾರಕನೂ ಆಗಿರುವನು. ಅವನಿಂದ ಇತರರು ಜಗತ್ತಿನ ಏಕದೇಶಕ್ಕೆ ಅಸ್ವತಂತ್ರರಾಗಿ ಸೃಷ್ಟ್ಯಾದಿ ಕಾರಣರಾಗಿರುವರು. ಸ್ವತಂತ್ರರಾಗಿ ಕಾರಣರಾಗಿರುವುದಿಲ್ಲ' ಎಂದು ಹೇಳಿದೆ.

(ಭಾ.ದೀ.) ಚರಾಚರಸ್ಯಾದ್ಯತಯಾ ಗ್ರಹಣೇऽಪಿ ಕುತೋ ನಾದಿತೇಃ ತದ-ತ್ತೃತ್ವಮ್? ಇತಿ ಲಿಂಗಸ್ಯ ಸಾವಕಾಶತ್ವಶಂಕಾಂ ನಿರಾಹ – **ನ ಹೀತಿ ।। ಹಿಶಬ್ದಃ ಪ್ರಸಿದ್ಧೌ।** 'ಚರಾಚರಸ್ಯ' ಇತಿ ಸೂತ್ರಾಕ್ಷರಾಣ್ಯನೂದ್ಯ ಶ್ರುತ್ಯನುಸಾರೇಣ '**ಸರ್ವಸ್ಯ**' ಇತಿ ವ್ಯಾಖ್ಯಾನಮ್ । ನ ಚ ಸಾಮಾನ್ಯಪದೇನ ವ್ಯಾಖ್ಯಾನಂ ವ್ಯರ್ಥಮಿತಿ ವಾಚ್ಯಮ್ । ಸೂತ್ರಸ್ಯ ಶ್ರುತಿವಿಸಂವಾದಪ್ರತೀತಿನಿರಾಸಾರ್ಥತ್ವಾತ್ । '**ಅದಿತೇಃ**' - ದೇವಮಾತುಃ । 'ಸಿದ್ಧಮ್' ಇತಿ ಶೇಷಃ।

ಚರಾಚರಾತ್ತೃತ್ವಂ ವಿಷ್ಣೋರಪಿ ಕುತಃ ಸಿದ್ಧಮ್? ಇತ್ಯತ ಆಹ – **ಸ್ರಷ್ಟೇತಿ ॥** **'ಪುಂಸಾಂ ಪರಃ'** ತೇಭ್ಯಃ ಉತ್ತಮಃ **'ವಾಸುದೇವಃ'** ಕೃಷ್ಣಃ **'ಏಕ ಏವ'** ನಿಖಿಲಸ್ಯ ಜಗತಃ ಏಕಃ ಸ್ವತಂತ್ರಃ **'ಸ್ರಷ್ಟಾ'** ಸೃಷ್ಟಿಕರ್ತಾ ತಥಾ **'ಪಾತಾ'** - ರಕ್ಷಿತಾ । **ತುಶ್ಶಾರ್ಥಃ । ಅತ್ತಾ ಚ ।** **'ವಾಸುದೇವೇತರೇ'** ಬ್ರಹ್ಮಾದ್ಯಾಸ್ತು **'ಅಲ್ಪಸ್ಯ'** ಜಗದೇಕದೇಶಸ್ಯಾಸ್ವಾತಂತ್ರ್ಯೇಣ ಸೃಷ್ಟ್ಯಾದಿಕರ್ತಾರೋ ಭವಂತಿ । ಸ್ವಾತಂತ್ರ್ಯಾಪೇಕ್ಷಯಾ ನ ಇತ್ಯರ್ಥಃ । **'ಇತಿ ಸ್ಕಾಂದೇ'** ಇತ್ಯನಂತರಮ್ **'ಉಕ್ತತ್ವಾತ್'** ಇತಿ ವಾಕ್ಯಶೇಷಃ ॥

ಈ ಶ್ರುತಿಯಲ್ಲಿ ಚರಾಚರಪ್ರಪಂಚವನ್ನು ಅದ್ಯ ಅಂದರೆ ಸಂಹಾರ್ಯವೆಂದು ಗ್ರಹಿಸಿದರೂ ಅದಿತಿಗೆ ಅದರ ಸಂಹಾರಕತ್ವವು ಇಲ್ಲವೇಕೆ? ಎಂಬುದಾಗಿ ಅದಿತಿತ್ವ-ಲಿಂಗವು ಸಾವಕಾಶವಾಗಿದೆ ಎಂಬ ಶಂಕೆಯನ್ನು 'ನ ಹಿ' ಎಂದು ನಿರಾಕರಿಸುತ್ತಿದ್ದಾರೆ. ಹಿಶಬ್ದವು ಪ್ರಸಿದ್ಧಿಯನ್ನು ಹೇಳುವುದು. 'ಚರಾಚರಸ್ಯ' ಎಂದು ಸೂತ್ರದ ಅಕ್ಷರಗಳನ್ನೇ ಅನುವಾದ ಮಾಡಿ ಅದಕ್ಕೆ 'ಸರ್ವಂ ವಾ ಅತ್ತಿ' ಎಂಬ ಶ್ರುತಿಯನ್ನು ಅನುಸರಿಸಿ 'ಸರ್ವಸ್ಯ' ಎಂದು ಭಾಷ್ಯದಲ್ಲಿ ವ್ಯಾಖ್ಯಾನಮಾಡಲಾಗಿದೆ. ಸಾಮಾನ್ಯರೂಪದಿಂದ ಎಲ್ಲವನ್ನೂ ಹೇಳುವ ಸರ್ವಪದದಿಂದ ವ್ಯಾಖ್ಯಾನಮಾಡುವುದು ವ್ಯರ್ಥವೆಂದು ಹೇಳ-ತಕ್ಕದ್ದಲ್ಲ. ಏಕೆಂದರೆ, ಸೂತ್ರವು ಶ್ರುತಿಗೆ ಸಮಾನಾರ್ಥಕವಾಗಿಲ್ಲ ಎಂಬ ಭ್ರಾಂತಿಯನ್ನು ಪರಿಹರಿಸಲು ಹಾಗೆ ವ್ಯಾಖ್ಯಾನಮಾಡಲಾಗಿದೆ. ಭಾಷ್ಯದಲ್ಲಿರುವ 'ಅದಿತೇಃ' ಎಂಬ ಪದಕ್ಕೆ ದೇವಮಾತೆ ಎಂದು ಅರ್ಥ. 'ಸಿದ್ಧಮ್'- 'ಪ್ರಸಿದ್ಧವಾಗಿದೆ' ಎಂಬ ಪದವು ಇಲ್ಲಿ ಶೇಷವಾಗಿದೆ.

ಚರಾಚರಾತ್ಮಕಜಗತ್ತಿನ ಅತ್ತೃತ್ವವು ವಿಷ್ಣುವಿಗಾದರೂ ಯಾವ ಪ್ರಮಾಣದಿಂದ ಸಿದ್ಧವಾಗಿದೆ ಎಂಬ ಪ್ರಶ್ನೆಗೆ ಉತ್ತರವಾಗಿ 'ಸ್ರಷ್ಟಾ' ಎಂದು ಹೇಳಲಾಗಿದೆ. 'ಪುಂಸಾಂ ಪರಃ' - ಎಲ್ಲ ಚೇತನರಿಗಿಂತ ಉತ್ತಮನಾದ ವಾಸುದೇವಃ - ಕೃಷ್ಣನು, ಏಕ ಏವ - ಒಬ್ಬನೇ, ನಿಖಿಲಸ್ಯ- ಸಮಸ್ತ ಜಗತ್ತಿಗೆ, ಏಕಃ- ಸ್ವತಂತ್ರನಾದ, ಸ್ರಷ್ಟಾ- ಸೃಷ್ಟಿಕರ್ತನು, ತಥಾ ಪಾತಾ- ಹಾಗೆಯೇ ರಕ್ಷಕನು. ತುಶಬ್ದವು ಚಕಾರದ ಅರ್ಥವನ್ನು ಹೇಳುವುದು. ಅತ್ತಾ ಚ- ಸಂಹಾರಕನೂ ಆಗಿದ್ದಾನೆ. ಇತರೇ - ವಾಸುದೇವನಿಗಿಂತ ಅನ್ಯರಾದ, ಬ್ರಹ್ಮಾದಿಗಳಾದರೋ, ಅಲ್ಪಸ್ಯ- ಜಗತ್ತಿನ ಏಕದೇಶಕ್ಕೆ ಅಸ್ವತಂತ್ರರಾಗಿ ಸೃಷ್ಟ್ಯಾದಿ

ಕಾರಣರಾಗಿರುವರು. ಸ್ವಾತಂತ್ರ್ಯದ ದೃಷ್ಟಿಯಿಂದ ಸೃಷ್ಟ್ಯಾದಿಕಾರಣರಲ್ಲ ಎಂದು ಅರ್ಥ. 'ಇತಿ ಸ್ಕಾಂದೇ' ಎಂಬ ಪದಗಳ ನಂತರ 'ಉಕ್ತತ್ವಾತ್' - ಹೇಳಿರುವುದರಿಂದ ಎಂಬ ಪದವು ಶೇಷವಾಗಿದೆ.

ಭಾ– 'ಏಕಃ ಪುರಸ್ತಾದ್ ಯ ಇದಂ ಬಭೂವ
ಯತೋ ಬಭೂವ ಭುವನಸ್ಯ ಗೋಪಾಃ।
ಯಮಪ್ಯೇತಿ ಭುವನಂ ಸಾಂಪರಾಯೇ
ಸ ನೋ ಹರಿರ್ಘೃತಮಿಹಾಯುಷೇಽತ್ತು ದೇವಃ' (ಘೃತಸೂಕ್ತಂ)
ಇತಿ ಶ್ರುತಿಃ ॥ ೯

ಯಾರೊಬ್ಬನೇ ಈ ಜಗತ್ತಿನ ಮುಂಚೆ ಇದ್ದನೋ, ಯಾರಿಂದ ಈ ಜಗತ್ತು ಹುಟ್ಟಿತೋ, ಯಾರೊಬ್ಬನೇ ಈ ಜಗತ್ತಿಗೆ ರಕ್ಷಕನೋ, ಯಾರನ್ನು ಮೋಕ್ಷ ಮತ್ತು ಪ್ರಲಯಗಳಲ್ಲಿ ಈ ಜಗತ್ತು ಪ್ರವೇಶಿಸುವುದೋ ದೇವನಾದ ಆ ಹರಿಯು ನಮ್ಮ ಆಯುಷ್ಯಕ್ಕಾಗಿ ಈ ಯಜ್ಞಸ್ಥಾನದಲ್ಲಿ ಬಂದು ಆಹುತಿರೂಪವಾಗಿರುವ ಘೃತವನ್ನು ಸ್ವೀಕರಿಸಲಿ - ಎಂದು ಶ್ರುತಿಯಿರುವುದರಿಂದಲೂ ವಿಷ್ಣುವಿಗೆ ಚರಾಚರಸಂಹರ್ತೃತ್ವವು ಸಿದ್ಧವಾಗುವುದು.

(ಭಾ.ದೀ.) ಸ್ಪಷ್ಟಾರ್ಥತ್ವಾತ್ ಪ್ರಥಮಂ ಸ್ಮೃತಿಮುದಾಹೃತ್ಯ ಅತ್ರೈವಾರ್ಥೇ ಶ್ರುತಿಮಪ್ಯಾಹ – **ಏಕ ಇತಿ ॥** 'ಏಕಃ' ಇತ್ಯಸ್ಯಾನುವೃತ್ತಿಃ, 'ಇದಮ್' ಇತ್ಯಸ್ಯಾಪ್ಯಾವೃತ್ತಿವಿಪರಿಣಾಮೌ । ತಥಾಚ ಯ ಏಕಃ ಇದಮ್ ಅಸ್ಯ ಜಗತಃ ಪುರಸ್ತಾತ್ ಪ್ರಲಯೇ ಬಭೂವ। ಯತಶ್ಚ ಸೃಷ್ಟೌ ಇದಂ ಜಗತ್, ಬಭೂವ - ಜಾತಮ್ । ಅಥ ಯಶ್ಚೈಕೋ ಭುವನಸ್ಯ ಗೋಪಾಃ ಗೋಪ್ತಾ ಬಭೂವ । ಯಂ ಚ ಸಾಂಪರಾಯೇ ಮುಕ್ತಿಪ್ರಲಯಯೋಃ ಭುವನಂ ಪ್ರವಿಶತಿ ನಿಗೀರ್ಣೌದನವತ್ ಸಃ ದೇವಃ - ಹರಿಃ, ನಃ ಆಯುಷೇ - ಆಯುರರ್ಥೇ, ಇಹ- ಯಜ್ಞಸ್ಥಾನೇ ಆಗತ್ಯ, ಘೃತಮ್ - ಆಹುತಿ-

**ರೂಪಮ್ ಅತ್ತು - ಸ್ವೀಕರೋತು – ಇತಿ ತೈತ್ತಿರೀಯಶ್ರುತ್ಯರ್ಥಃ । ಮಂತ್ರದ್ರಷ್ಟೃಋಷಿವಾಕ್ಯಮೇತತ್ । 'ಇತಿ ಶ್ರುತಿಃ' ಇತ್ಯನಂತರಂ 'ಯತಃ' ಇತಿ ಶೇಷಃ । ಅಸ್ಮಾತೋಽಪಿ ವಿಷ್ಣೋಶ್ಚರಾಚರಾತ್ತೃತ್ವಂ ಸಿದ್ಧಮ್ ಇತ್ಯನ್ವಯಃ।**

ಸ್ಪಷ್ಟವಾದ ಅರ್ಥವನ್ನು ಹೊಂದಿರುವುದರಿಂದ ಮೊದಲು ಸ್ಮೃತಿಯನ್ನು ಉದಾಹರಿಸಿ ಅನಂತರ ಇದೇ ವಿಷಯದಲ್ಲಿ ಏಕಃ ಎಂದು ಶ್ರುತಿಯನ್ನು ಉದಾಹರಿಸುತ್ತಿದ್ದಾರೆ. 'ಏಕಃ' ಎಂಬ ಪದಕ್ಕೆ ಅನುವೃತ್ತಿ ಮತ್ತು 'ಇದಂ' ಎಂಬ ಪದಕ್ಕೆ ಆವೃತ್ತಿ ಮತ್ತು ವಿಭಕ್ತಿವ್ಯತ್ಯಾಸಗಳು ಆಗುತ್ತವೆ. ತಥಾಚ – **ಯಃ ಏಕಃ** - ಯಾರು ಒಬ್ಬನೇ **ಇದಮ್** - ಈ ಜಗತ್ತಿಗೆ, **ಪುರಸ್ತಾತ್ ಬಭೂವ** - ಮುಂಚೆ ಪ್ರಲಯಕಾಲದಲ್ಲಿ ಇದ್ದನೋ, **ಯತಃ** - ಯಾರಿಂದ, ಸೃಷ್ಟಿಕಾಲದಲ್ಲಿ, **ಇದಂ ಬಭೂವ** - ಈ ಜಗತ್ತು ಹುಟ್ಟಿತೋ, ಅನಂತರ **ಯಃ ಏಕಃ** - ಯಾರೊಬ್ಬನೇ, **ಭುವನಸ್ಯ ಗೋಪಾಃ** - ಜಗತ್ತಿನ ರಕ್ಷಕನಾಗಿರುವನೋ, **ಯಂ** – ಯಾರನ್ನು, **ಸಾಂಪರಾಯೇ** - ಮುಕ್ತಿ ಮತ್ತು ಪ್ರಲಯಗಳಲ್ಲಿ, **ಭುವನಂ ಅಪ್ಯೇತಿ**- ಈ ಜಗತ್ತು ನುಂಗಲ್ಪಟ್ಟ ಅನ್ನದಂತೆ ಪ್ರವೇಶಿಸುವುದೋ, **ಸಃ ದೇವಃ ಹರಿಃ**- ದೇವನಾದ ಆ ಹರಿಯು, **ನಃ ಆಯುಷೇ**- ನಮ್ಮ ಆಯುಸ್ಸಿಗೋಸ್ಕರವಾಗಿ, **ಇಹ** - ಈ ಯಜ್ಞದ ಸ್ಥಾನದಲ್ಲಿ ಬಂದು, **ಘೃತಮ್** - ಆಹುತಿರೂಪವಾದ ಘೃತವನ್ನು, **ಅತ್ತು** - ಸ್ವೀಕರಿಸಲಿ ಎಂದು ತೈತ್ತಿರೀಯಶ್ರುತಿಯ ಅರ್ಥವಾಗಿದೆ. ಇದು ಮಂತ್ರದ್ರಷ್ಟಾರನಾದ ಋಷಿಯ ವಾಕ್ಯವಾಗಿದೆ. 'ಇತಿ ಶ್ರುತಿಃ' ಎಂಬ ಪದಗಳ ನಂತರ 'ಯತಃ' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ 'ಅತೋಽಪಿ ವಿಷ್ಣೋಃ ಚರಾಚರಾತ್ತೃತ್ವಂ ಸಿದ್ಧಮ್' 'ಆದ್ದರಿಂದಲೂ ವಿಷ್ಣುವಿಗೆ ಚೇತನಾಚೇತನರೂಪವಾದ ಸಕಲ ಜಗತ್‌ಸಂಹರ್ತೃತ್ವವು ಸಿದ್ಧವಾಗಿದೆ' ಎಂದು ಅನ್ವಯ.

**ಸೂ– ॥ ಓಂ ಪ್ರಕರಣಾಚ್ಚ ಓಂ ॥ ೧೦ ॥**

ನಿರವಕಾಶವಾದ ವಿಷ್ಣುಪ್ರಕರಣದಲ್ಲಿ ಬರುವ ಕಾರಣದಿಂದಲೂ ಇಲ್ಲಿ ಹೇಳಿರುವ ಅತ್ತೃವು ವಿಷ್ಣುವೇ ಆಗಿರುವನು.

(ಭಾ.ದೀ.) ಯದಾ ನಿರವಕಾಶಸರ್ವಾತ್ತೃತ್ವಲಿಂಗಮಾತ್ರಾತ್ ಸಾವಕಾಶಾದ-

ದಿತಿಶ್ರುತ್ಯದಿತಿತ್ವಲಿಂಗಯೋರ್ಬಾಧೇನ 'ಅತ್ತಾ ವಿಷ್ಣುರೇವ' ಇತಿ ಸಿದ್ಧ್ಯತಿ ತದಾ ಕಿಮು ವಾಚ್ಯಂ ನಿರವಕಾಶಪ್ರಕರಣಸಮುಚಿತಾಲ್ಲಿಂಗಾತ್ ಇತ್ಯರ್ಥಂ ಪ್ರತಿಪಾದಯತ್-ಸೂತ್ರಂ ಪಠಿತ್ವಾ ವ್ಯಾಚಷ್ಟೇ – **ಪ್ರಕರಣಾಚ್ಚೇತಿ ॥** 'ನೈವೇಹ ಕಿಂಚನ' (ಬೃ.೩-೨) ಇತಿ ನಿರವಕಾಶವಿಷ್ಣುಪ್ರಕರಣಬಲಾಚ್ಚ ಅತ್ತಾ ವಿಷ್ಣುರೇವ ಇತಿ ಸೂತ್ರಾರ್ಥಃ।

ಕೇವಲ ನಿರವಕಾಶವಾದ ಸರ್ವಾತ್ತೃತ್ವವೆಂಬ ಲಿಂಗದಿಂದಲೇ ಸಾವಕಾಶಗಳಾದ ಅದಿತಿಶ್ರುತಿ ಮತ್ತು ಅದಿತಿತ್ವಲಿಂಗಗಳಿಗೆ ಬಾಧ ಬರುವುದರಿಂದ ವಿಷ್ಣುವೇ ಇಲ್ಲಿ ಹೇಳಿರುವ ಅತ್ತೃವೆಂದು ಸಿದ್ಧವಾಗುವಾಗ ನಿರವಕಾಶಪ್ರಕರಣಸಹಿತವಾದ ಲಿಂಗದಿಂದ ಆ ವಿಷಯವು ಸಿದ್ಧವಾಗುವುದೆಂದು ಹೇಳಬೇಕಾದುದೇನು? ಎಂದು ಪ್ರತಿಪಾದಿಸುವ ಸೂತ್ರವನ್ನು 'ಪ್ರಕರಣಾಚ್ಚ' ಎಂದು ಪಠಿಸಿ, ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿ-ದ್ದಾರೆ. 'ನೈವೇಹ ಕಿಂಚನ' ಎಂಬ ನಿರವಕಾಶವಾದ ವಿಷ್ಣುಪ್ರಕರಣದ ಬಲದಿಂದಲೂ ಅತ್ತೃವು ವಿಷ್ಣುವೇ ಆಗಿದ್ದಾನೆ ಎಂದು ಸೂತ್ರದ ಅರ್ಥ.

ಭಾ– ಅಪ್ಸಂವತ್ಸರಸೃಷ್ಟ್ಯಾದಿನಾ ತತ್ಪ್ರಕರಣತ್ವಾಚ್ಚ।

> ಜಲದ ಸೃಷ್ಟಿ, ಸಂವತ್ಸರನಾಮಕ ಚತುರ್ಮುಖನ ಸೃಷ್ಟಿ, ಮೊದ-ಲಾದವುಗಳಿಂದ ಈ ಪ್ರಕರಣವು ವಿಷ್ಣುಪ್ರಕರಣವಾಗಿರುವುದರಿಂದ-ಲೂ ವಿಷ್ಣುವೇ ಇಲ್ಲಿ ಉಕ್ತನಾಗಿದ್ದಾನೆ.

(ಭಾ.ದೀ.) ಪ್ರಕರಣಸ್ಯ ವೈಷ್ಣವತ್ವಾಸಿದ್ಧಿಮಾಶಂಕ್ಯ ಆಹ – **ಅಪ್ಸಂವತ್ಸರ-ಸೃಷ್ಟ್ಯಾದಿನೇತಿ ॥** ಅಪ್ಸೃಷ್ಟಿಃ ಸಂವತ್ಸರನಾಮಕಚತುರ್ಮುಖಸೃಷ್ಟಿಶ್ಚ ತೇ ಆದೀ ಯಸ್ಯ ತತ್ ತಥೋಕ್ತಮ್ । ಆದಿಪದೇನ ಸಂವತ್ಸರಾದನೋದ್ಯಮಾದಿಲಿಂಗಂ ಗೃಹ್ಯತೇ । **'ತತ್ಪ್ರಕರಣತ್ವಾತ್'** ವಿಷ್ಣುಪ್ರಕರಣತ್ವಾತ್ ಇತ್ಯರ್ಥಃ । 'ಏತತ್ಪ್ರಕರಣಸ್ಯ' ಇತಿ ಶೇಷಃ । ಅವಗಮೋಪಲಕ್ಷಕಮೇತತ್ । ಅಸ್ಯಾತಃ ಪ್ರಕರಣಾತ್ ವಿಷ್ಣುರೇವಾತ್ತ್ರೋಚ್ಯತೇ ಇತಿ ಪ್ರಕೃತಸಾಧ್ಯೇನಾನ್ವಯಃ । **ಚೋ** ಹೇತುಸಮುಚ್ಚಯೇ । ಪ್ರಕರಣಂ ನಾಮ ಏಕ-ಪ್ರಮೇಯಪ್ರತಿಪಾದಕಾನೇಕವಾಕ್ಯಾನಿ।

**ಬೃಹದಾರಣ್ಯಕೇ ಹಿ** – ನೈವೇಹ ಕಿಂಚನಾಗ್ರ ಆಸೀತ್ । ಮೃತ್ಯುನೈವೇದಮಾವೃತ-ಮಾಸೀತ್ । ಅಶನಾಯಯಾಽಶನಾಯಾ ಹಿ ಮೃತ್ಯುಸ್ತನ್ಮನೋಽಕುರುತಾಽತ್ಮನ್ವೀ ಸ್ಯಾಮಿತಿ । ಸೋಽರ್ಚನ್ನಚರತ್ ತಸ್ಯಾರ್ಚತ ಆಪೋಽಜಾಯಂತ । ತದ್ಯದಪಾಂ ಶರ ಆಸೀತ್ ತತ್ಸಮಹನ್ಯತ ಸಾ ಪೃಥಿವ್ಯಭವತ್ ತಸ್ಯಾಮಶ್ರಾಮ್ಯತ । ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ ಸ ಮನಸಾ ವಾಚಾ ಮಿಥುನಂ ಸಮ-ಭವದಶನಾಯಾ ಹಿ ಮೃತ್ಯುಸ್ತದ್ರೇತ ಆಸೀತ್ ತತ್ ಸಂವತ್ಸರೋಽಭವತ್ ... ತಂ ಜಾತಮಭಿವ್ಯಾದದಾತ್ ಸ ಭಾಣಮಕರೋತ್ ಸೈವ ವಾಗಭವತ್ ಸ ಐಕ್ಷತ ಯದಿ ಹ ವಾ ಇಮಮಭಿಮಂಸ್ಯೇ ಕನೀಯೋಽನ್ನಂ ಕರಿಷ್ಯ ಇತಿ । ಸ ತಯಾ ವಾಚಾ ತೇನಾಽತ್ಮನಾ ಇದಂ ಸರ್ವಮಸೃಜತ । (ಬೃ.೧-೨) ಇತಿ ವಿಷ್ಣುವಿಷಯಾಣ್ಯನೇಕ-ವಾಕ್ಯಾನಿ ಶ್ರೂಯಂತೇ । **ಅಗ್ರೇ** - ಪ್ರಲಯೇ; **ಇಹ** - ಅಸ್ವತಂತ್ರವರ್ಗೇ, ಗಗನ ಇತಿ ವಾ । **ಕಿಂಚನ** - ಜೀವಜಡರೂಪಂ ವಸ್ತು ನೈವಾಽಸೀದಿತಿ ।

ಈ ಪ್ರಕರಣವು ವಿಷ್ಣುವಿಗೆ ಸಂಬಂಧಪಟ್ಟುದುದೆಂದು ಸಿದ್ಧವಾಗಿಲ್ಲ ಎಂದು ಶಂಕಿಸಿ ಅದನ್ನು ನಿರಾಕರಿಸಲು ಅಪ್ಸಂವತ್ಸರಸೃಷ್ಟ್ಯಾದಿನಾ ಎಂದು ಹೇಳುತ್ತಿದ್ದಾರೆ. ಅಪ್ಸೃಷ್ಟಿಃ ಸಂವತ್ಸರನಾಮಕನಾದ ಚತುರ್ಮುಖನ ಸೃಷ್ಟಿ ಇವೆರಡೂ ಆದಿಯಲ್ಲಿ ಯಾವ ಪ್ರಕರಣದಲ್ಲಿರುವುದೋ ಅದು ಅಪ್ಸಂವತ್ಸರಸೃಷ್ಟ್ಯಾದಿ ಎಂದು ವಿಗ್ರಹ. ಇಲ್ಲಿ ಆದಿ-ಪದದಿಂದ ಸಂವತ್ಸರನಾಮಕ ಚತುರ್ಮುಖನನ್ನು ಭಕ್ಷಿಸಲು ಉದ್ಯುಕ್ತನಾಗುವುದು ಎಂಬ ಲಿಂಗವು ಗ್ರಹಿಸಲ್ಪಡುವುದು. ತತ್ಪ್ರಕರಣತ್ವಾತ್ ಅಂದರೆ ವಿಷ್ಣುಪ್ರಕರಣವಾದು-ದರಿಂದ ಎಂದು ಅರ್ಥ. ಏತತ್ಪ್ರಕರಣಸ್ಯ ಎಂಬ ಪದವು ಇಲ್ಲಿ ಶೇಷವಾಗಿದೆ. ವಿಷ್ಣು-ಪ್ರಕರಣವೆಂದು ತಿಳಿದುಬರುವುದೆಂದು ಈ ಪದವು ಉಪಲಕ್ಷಣಯಾ ಹೇಳುವುದು. ಈ ವಾಕ್ಯಕ್ಕೆ ಅತಃ ಪ್ರಕರಣಾತ್ ವಿಷ್ಣುರೇವ ಅತ್ರ ಉಚ್ಯತೇ. ಆದ್ದರಿಂದ ಈ ಪ್ರಕರಣದ ಬಲದಿಂದಾಗಿ ವಿಷ್ಣುವೇ ಇಲ್ಲಿ ಹೇಳಲ್ಪಟ್ಟಿದ್ದಾನೆ ಎಂಬ ಪ್ರಸ್ತುತವಾದ ಸಾಧ್ಯದೊಂದಿಗೆ ಅನ್ವಯವಾಗುವುದು. ಪ್ರಕರಣಾಚ್ಚ ಎಂಬಲ್ಲಿ ಚಕಾರವು ಹೇತುವಿನ ಸಮುಚ್ಚಯವನ್ನು ಹೇಳುವುದು. **ಪ್ರಕರಣವೆಂದರೆ** ಒಂದೇ ಪ್ರಮೇಯವನ್ನು ಪ್ರತಿಪಾದಿಸುವ ಅನೇಕ-ವಾಕ್ಯಗಳು.

ಬೃಹದಾರಣ್ಯಕದಲ್ಲಿ 'ನೈವೇಹ ಕಿಂಚನಾಗ್ರ ಆಸೀತ್ । ಮೃತ್ಯುನೈವೇದಮಾವೃತ-ಮಾಸೀತ್ ಅಶನಾಯಯಾಽಶನಾಯಾ ಹಿ ಮೃತ್ಯುಸ್ತನ್ಮನೋಽಕುರುತಾಽತ್ಮನ್ವೀ ಸ್ಯಾಮಿತಿ । ಸೋಽರ್ಚನ್ನಚರತ್ ತಸ್ಯಾರ್ಚತ ಆಪೋಽಜಾಯಂತ । ತದ್ಯದಪಾಂ ಶರ ಆಸೀತ್ ತತ್ಸಮಹನ್ಯತ ಸಾ ಪೃಥಿವ್ಯಭವತ್ ತಸ್ಯಾಮಶ್ರಾಮ್ಯತ । ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ ಸ ಮನಸಾ ವಾಚಾ ಮಿಥುನಂ ಸಮಭವ-ದಶನಾಯಾ ಹಿ ಮೃತ್ಯುಸ್ತದ್ರೇತ ಆಸೀತ್ ತತ್ ಸಂವತ್ಸರೋಽಭವತ್ ... ತಂ ಜಾತಮಭಿವ್ಯಾದದಾತ್ ಸ ಭಾಣಮಕರೋತ್ ಸೈವ ವಾಗಭವತ್ ಸ ಐಕ್ಷತ ಯದಿ ಹ ವಾ ಇಮಮಭಿಮಂಸ್ಯೇ ಕನೀಯೋಽನ್ನಂ ಕರಿಷ್ಯ ಇತಿ । ಸ ತಯಾ ವಾಚಾ ತೇನಾಽತ್ಮನಾ ಇದಂ ಸರ್ವಮಸೃಜತ ।' ಎಂದು ವಿಷ್ಣುವಿಷಯಕವಾದ ಅನೇಕ-ವಾಕ್ಯಗಳು ಶ್ರುತವಾಗಿವೆ. 'ನೈವೇಹ' ಎಂಬ ವಾಕ್ಯದಲ್ಲಿ 'ಅಗ್ರೇ' ಅಂದರೆ ಪ್ರಲಯ-ದಲ್ಲಿ, ಇಹ - ಅಸ್ವತಂತ್ರವರ್ಗದಲ್ಲಿ, ಅಥವಾ ಗಗನದಲ್ಲಿ; ಕಿಂಚನ - ಜೀವಜಡ-ರೂಪವಾದ ಯಾವ ವಸ್ತುವೂ, ನೈವ ಆಸೀತ್ - ಇರಲಿಲ್ಲ ಎಂದು ಅರ್ಥ.

(ಭಾ.ದೀ.) ನನು –
ಸರ್ವಸಂಹಾರಕಂ ವಿಷ್ಣುಂ ದೇವೀಂ ಜೀವಾಂಸ್ತಥೈವ ಚ ।
ಕಾಲಂ ತ್ರಿಗುಣಸಾಮ್ಯಂ ಚ ಕರ್ಮಾಣಿ ಪ್ರಾಣಮಿಂದ್ರಿಯಮ್ ।
ಸಂಸ್ಕಾರಂ ಚೈವ ವೇದಾಂಶ್ಚ ನರ್ತೇ ಕಿಂಚಿಲ್ಲಯೇ ತ್ವಭೂತ್ ॥'

ಇತಿ ಬೃಹದ್ಭಾಷ್ಯೋದಾಹೃತವಚನಾತ್ ನಿತ್ಯಾನಾಂ ಜೀವಾನಾಮಪಿ ಸತ್ತ್ವಾತ್ ಕಥಮಿಯಮುಕ್ತಿಃ? ಇತ್ಯತ ಉಕ್ತಮ್ – **ಮೃತ್ಯುನೈವೇತಿ** ॥ ಇದಂ - ಜೀವಾದಿಕಂ, **ಮೃತ್ಯುನಾ**- ತನ್ನಾಮಕೇನ ಜನಾರ್ದನೇನ, **ಆವೃತಂ**- ಆಚ್ಛಾದಿತಮಾಸೀತ್ । ಮೃತ್ಯೋರಾವರಕತ್ವೇ ಹೇತುಃ – **ಅಶನಾಯಯೇತಿ** ॥ ಅಶಂ ಜಗತ್ ತನ್ನೇತ್ರ್ಯೇ-ತ್ಯರ್ಥಃ । ಮೃತ್ಯೋರಶನಾಯಾತ್ವಂ ಶ್ರುತಿಪ್ರಸಿದ್ಧಮಿತ್ಯಾಹ – **ಅಶನಾಯಾ ಹೀತಿ** ॥ ತತ್ - ತಸ್ಮಾದೇಕಾಕಿತ್ವಾತ್ ಮೃತ್ಯುಃ, ಆತ್ಮನ್ವೀ - ಜಗದ್ರೂಪಶರೀರವಾನ್ ಸ್ಯಾಮಿ ಇತ್ಯೈಚ್ಛತ್ । ಏವಂ ಸ ಮೃತ್ಯುಃ ಅರ್ಚನ್ - ಸ್ವಾತ್ಮಾನಂ ಪೂಜಯನ್ ಸಂಚಚಾರ ತಸ್ಯಾರ್ಚತ ಆಪೋಽಜಾಯಂತ । ಅತ ಏವ ತಾಸಾಮರ್ಚನಸಾಧನತ್ವಮಿತಿ ಭಾವಃ ।

ತತ್ರಾಪ್ಸು ಯೋಽಪಾಂ ಶರಃ - ಫೇನರೂಪೋ ಮಂಡ ಆಸೀತ್ ತಚ್ಛರಃ । ಸ ಶರೋ ಮೃತ್ಯುನಾ ಸ್ವರೇತಸಾ 'ಸಮಹನ್ಯತ' ಸಂಘಾತತ್ವಂ ಪ್ರಾಪಿತಃ । ಯಃ ಸಂಘಾತಃ ಸಾ ಪೃಥಿವೀ- ಬ್ರಹ್ಮಾಂಡರೂಪಾಽಭವತ್ 'ತಸ್ಯಾಂ'- ಪೃಥಿವ್ಯಾಂ ಶ್ವೇತದ್ವೀಪೇ 'ಅಶ್ರಾಮ್ಯತ್' ಶಿಷ್ಯೇ ಮೃತ್ಯುಃ । ಸ ಮೃತ್ಯುಃ 'ಮೇ' ಮಮ 'ಆತ್ಮಾ' ಬ್ರಹ್ಮಾ ದ್ವಿತೀಯೋ ವಾಯ್ವಪೇಕ್ಷಯಾ ಜಾಯೇತೇತಿ ಅಕಾಮಯತ । ಅಥ ಅಶನಾಯಾ - ಸ ಮೃತ್ಯುಃ, ಮನಸಾ ಸ್ವೇಚ್ಛಯಾ ವಾಚಾ - ವೇದಾಭಿಮಾನಿಶ್ರಿಯಾ ಮಿಥುನಂ - ದ್ವಂದ್ವೀಭಾವಂ, 'ಸಮಭವತ್' ಪ್ರಾಪತ್ । ತೇನ ಮಿಥುನೀಭಾವೇನ ಯದ್ರೇತ ಆಸೀತ್ 'ತತ್ ಸಂವತ್ಸರಃ' ತದುಪಾದಾನಕದೇಹವಾನ್ ಸಂವತ್ಸರನಾಮಕಶ್ಚತುರ್ಮುಖೋಽಭವತ್ । ಅಥ ಜಾತಂ ಸಂವತ್ಸರಮಭಿಲಕ್ಷ್ಯ ಅತ್ತುಂ 'ವ್ಯಾದದಾತ್' ವಿದದಾರ ಸ್ವಮುಖಂ ಮೃತ್ಯುಃ । ಸ ಸಂವತ್ಸರೋ ಭಯಾದ್ ವಿಷ್ಣುದೀಪ್ತ್ಯಾಽಽನಂದಬೋಧಕಭಾಣಿತಿ ಶಬ್ದಮಕರೋತ್ । ಯದ್ ಭಾಣಿತಿ ವಚಃ ತದಭಿಮಾನಿನೀ ಸೈವ ವಾಙ್ನಾಮ್ನೀ ಸರಸ್ವತ್ಯಭವತ್ । ಸ ಮೃತ್ಯುಃ 'ಐಕ್ಷತ' ಆಲೋಚಿತವಾನ್ । ಕಿಮಿತಿ? 'ಯದೀಮಂ' ಸಂವತ್ಸರಮ್ 'ಅಭಿಮಂಸ್ಯೇ' ಲೀನಂ ಕರಿಷ್ಯೇ ತತ್ ತದಾ ಮೇ 'ಕನೀಯಃ' ಅಲ್ಪಮನ್ನಂ ಕರಿಷ್ಯೇ । ತತೋ ಬಹ್ವನ್ನಂ ಭವತ್ವಿತ್ಯಾಲೋಚ್ಯ ಸ ಮೃತ್ಯುಃ 'ತಯಾ ವಾಚಾ' ಸರಸ್ವತ್ಯಾ 'ತೇನಾಽತ್ಮನಾ' ಚತುರ್ಮುಖೇನೇದಂ ಸರ್ವಮ್ ಅಸೃಜತ । ಜನಯಾಮಾಸ – ಇತಿ ಶ್ರುತ್ಯರ್ಥಃ ।

ಆಕ್ಷೇಪ –

ಸರ್ವಸಂಹಾರಕಂ ವಿಷ್ಣುಂ ದೇವೀಂ ಜೀವಾಂಸ್ತಥೈವ ಚ ।
ಕಾಲಂ ತ್ರಿಗುಣಸಾಮ್ಯಂ ಚ ಕರ್ಮಾಣಿ ಪ್ರಾಣಮಿಂದ್ರಿಯಮ್ ।
ಸಂಸ್ಕಾರಂ ಚೈವ ವೇದಾಂಶ್ಚ ನರ್ತೇ ಕಿಂಚಿಲ್ಲಯೇ ತ್ವಭೂತ್ ॥'

'ಸರ್ವಸಂಹಾರಕನಾದ ವಿಷ್ಣು, ಲಕ್ಷ್ಮೀದೇವಿ, ಜೀವರು, ಕಾಲ, ಸಾಮ್ಯಾವಸ್ಥೆಯನ್ನು ಪಡೆದಿರುವ ಸತ್ವರಜಸ್ತಮೋಗುಣಗಳು, ಕರ್ಮಗಳು, ಅಹಂಕಾರತತ್ತ್ವದ ಕಾರ್ಯವಾದ ವಸ್ತುವಿನ ಸೂಕ್ಷ್ಮರೂಪ, ಇಂದ್ರಿಯಗಳ ಸೂಕ್ಷ್ಮರೂಪ, ಸಂಸ್ಕಾರ, ವೇದಗಳು

ಇವುಗಳನ್ನು ಬಿಟ್ಟು ಉಳಿದ ಯಾವುದೂ ಪ್ರಲಯಕಾಲದಲ್ಲಿ ಇರಲಿಲ್ಲ' - ಎಂದು ಬೃಹದಾರಣ್ಯಕಭಾಷ್ಯದಲ್ಲಿ ಉದಾಹರಿಸಲಾದ ವಚನದಿಂದ ನಿತ್ಯರಾದ ಜೀವರುಗಳೂ ಪ್ರಲಯಕಾಲದಲ್ಲಿ ಇರುವುದರಿಂದ 'ನೈವೇಹ' ಎಂದು ಪ್ರಲಯಕಾಲದಲ್ಲಿ ಭಗ-ವಂತನನ್ನು ಬಿಟ್ಟು ಯಾವುದೂ ಇರಲಿಲ್ಲ ಎಂದು ಹೇಳಿದ್ದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ **'ಮೃತ್ಯುನೈವ'** ಎಂಬ ಮುಂದಿನ ಉಪನಿಷದ್ವಾಕ್ಯಗಳು ಹೊರಟಿವೆ. **ಇದಂ** - ಜೀವ ಮೊದಲಾದವು, **ಮೃತ್ಯುನಾ** - ಮೃತ್ಯುನಾಮಕನಾದ ಜನಾರ್ದನ-ನಿಂದ, **ಆವೃತಮಾಸೀತ್** - ಆಚ್ಛಾದಿತವಾಗಿತ್ತು. ಮೃತ್ಯುವು ಆಚ್ಛಾದಕವಾಗಿರಲು ಹೇತುವನ್ನು **ಅಶನಾಯಯಾ** ಎಂದು ಹೇಳಿದೆ. ಅಶನಾಯಾ ಎಂಬಲ್ಲಿ ಅಶ ಎಂದರೆ ಸಂಹಾರ್ಯವಾದ ಜಗತ್ತು, ಅದಕ್ಕೆ ನೇತಾರನಾಗಿರುವ ಕಾರಣದಿಂದ ಎಂದು ಅರ್ಥ. ಮೃತ್ಯುವು ಅಶನಾಯಾ ಎಂಬುದು ಶ್ರುತಿಪ್ರಸಿದ್ಧವಾಗಿದೆ ಎಂದು ಅಶನಾಯಾ ಹಿ ಮೃತ್ಯುಃ ಎಂಬ ವಾಕ್ಯವು ತಿಳಿಸುತ್ತಿದೆ. **ತತ್** ಆದ್ದರಿಂದ ಅಂದರೆ ಏಕಾಕಿಯಾದ್ದರಿಂದ, **'ಆತ್ಮನ್ವೀ ಸ್ಯಾಮ್'** ಜಗತ್ತೆಂಬ ಶರೀರವನ್ನು ಹೊಂದುವೆನು ಎಂಬುದಾಗಿ, **ಮನೋಽಕುರುತ** - ಇಚ್ಛಿಸಿದನು. ಹಾಗೆಯೇ **ಸಃ** - ಆ ಮೃತ್ಯುವು, **ಅರ್ಚನ್** - ತನ್ನನ್ನು ಪೂಜಿಸುತ್ತಾ, **ಅಚರತ್** - ಸಂಚರಿಸುತ್ತಿದ್ದನು. **ತಸ್ಯ ಅರ್ಚತಃ** - ತನ್ನನ್ನು ಅರ್ಚಿಸುವ ಆ ಮೃತ್ಯುವಿನಿಂದ, **ಆಪಃ ಅಜಾಯಂತ** - ಜಲವು ಹುಟ್ಟಿತು. ಆದ್ದ-ರಿಂದಲೇ ಜಲವು ಅವನ ಅರ್ಚನೆಗೆ ಸಾಧನವಾಗಿದೆ ಎಂದು ಭಾವ. ಆ ಜಲದಲ್ಲಿ **ಯಃ ಅಪಾಂ ಶರಃ** - ನೀರಿನ ನೊರೆ ರೂಪವಾದ ಶರ, **ತತ್** - ಅದು, ಮೃತ್ಯುವಿನಿಂದ ತನ್ನ ರೇತಸ್ಸಿನಿಂದ, **ಸಮಹನ್ಯತ** -ಮಿಶ್ರಣವನ್ನು ಹೊಂದುವಂತೆ ಮಾಡಲ್ಪಟ್ಟಿತು. **ಸಾ ಪೃಥಿವ್ಯಭವತ್** - ಆ ಮಿಶ್ರಣವೇ ಪೃಥಿವೀ ಅಂದರೆ ಬ್ರಹ್ಮಾಂಡರೂಪವನ್ನು ತಳೆ-ಯಿತು. **ತಸ್ಯಾಂ** - ಆ ಪೃಥಿವಿಯಲ್ಲಿ ಶ್ವೇತದ್ವೀಪದಲ್ಲಿ ಮೃತ್ಯುವು, **ಅಶ್ರಾಮ್ಯತ್** - ಶಯನ ಮಾಡಿದನು. **ಸಃ** - ಆ ಮೃತ್ಯುವು, **ಮೇ** - ನನಗೆ, **ಆತ್ಮಾ** - ಚತುರ್ಮುಖನು, **ದ್ವಿತೀಯಃ ಜಾಯೇತ** - ವಾಯುವಿನ ದೃಷ್ಟಿಯಿಂದ ಎರಡನೆಯವನಾಗಿ ಹುಟ್ಟಲಿ ಎಂದು, **ಅಕಾಮಯತ** - ಇಚ್ಛಿಸಿದನು. ಅನಂತರ, ಅಶನಾಯಾ ಎನಿಸಿದ ಆ ಮೃತ್ಯುವು, **ಮನಸಾ** - ತನ್ನ ಇಚ್ಛೆಯಿಂದಲೇ, **ವಾಚಾ** - ವೇದಾಭಿಮಾನಿಯಾದ ಲಕ್ಷ್ಮೀದೇವಿಯೊಂದಿಗೆ, **ಮಿಥುನಂ ಸಮಭವತ್** - ಸಂಬಂಧವನ್ನು ಹೊಂದಿದನು.

**ತದ್ರೇತಃ** - ಆ ಮಿಥುನೀಭಾವದಿಂದ ಯಾವ ರೇತಸ್ಸು ಉಂಟಾಯಿತೋ ಅದು, **ಸಂವತ್ಸರಃ ಅಭವತ್** - ಆ ರೇತಸ್ಸೇ ಉಪಾದಾನಕಾರಣವಾಗಿ ಉಳ್ಳ ದೇಹವನ್ನು ಹೊಂದಿದ ಸಂವತ್ಸರನಾಮಕನಾದ ಚತುರ್ಮುಖನು ಹುಟ್ಟಿದನು. **ಅಥ** - ಅನಂತರ **ತಂ ಜಾತಂ ಅಭಿಲಕ್ಷ್ಯ** - ಹಾಗೆ ಹುಟ್ಟಿದ ಸಂವತ್ಸರನನ್ನು ಉದ್ದೇಶಿಸಿ, ಅವನನ್ನು ಭಕ್ಷಿಸಲು **ವ್ಯಾದದಾತ್** - ಮೃತ್ಯುವು ತನ್ನ ಮುಖವನ್ನು ತೆರೆದನು. **ಸಃ** - ಆ ಸಂವತ್ಸರನು ಭಯದಿಂದ, **ಭಾಣಮಕರೋತ್** - ವಿಷ್ಣುವಿನ ಪ್ರಕಾಶ ಮತ್ತು ಆನಂದ -ವನ್ನು ತಿಳಿಸುವ ಭಾಣ್ ಎಂಬ ಶಬ್ದವನ್ನು ಮಾಡಿದನು. **ಸೈವ ವಾಗಭವತ್** - ಆ ಭಾಣ್ ಎಂಬ ಶಬ್ದವೇ ಅದಕ್ಕೆ ಅಭಿಮಾನಿನಿಯಾದ ವಾಙ್ನಾಮಕಳಾದ ಸರಸ್ವತಿ-ಯಾದಳು. **ಸಃ ಐಕ್ಷತ** - ಆ ಮೃತ್ಯುವು ಆಲೋಚಿಸಿದನು. ಏನೆಂದು? **ಯದಿ ಹ ವಾ ಇಮಂ** - ನಾನು ಒಂದು ಪಕ್ಷದಲ್ಲಿ ಈ ಸಂವತ್ಸರನನ್ನು, **ಅಭಿಮಂಸ್ಯೇ** - ನನ್ನಲ್ಲಿ ಲೀನನನ್ನಾಗಿ ಮಾಡಿದರೆ **ತತ್** - ಆಗ, **ಮೇ ಕನೀಯಃ ಅನ್ನಂ ಕರಿಷ್ಯೇ** - ನನಗೆ ಅಲ್ಪವಾದ ಅನ್ನವನ್ನು ಮಾಡುವೆನು. ಆದ್ದರಿಂದ ತನಗೆ ಬಹುಳವಾದ ಅನ್ನವು ಉಂಟಾ-ಗಲಿ ಎಂದು ಆಲೋಚಿಸಿ, **ಸಃ** ಆ ಮೃತ್ಯುವು, **ತಯಾ ವಾಚಾ** - ಆ ಸರಸ್ವತಿಯಿಂದ, **ತೇನ ಆತ್ಮನಾ** - ಆ ಚತುರ್ಮುಖನಿಂದ, **ಇದಂ ಸರ್ವಂ ಅಸೃಜತ** - ಈ ಎಲ್ಲವನ್ನೂ ಸೃಷ್ಟಿಸಿದನು ಎಂದು ಶ್ರುತ್ಯರ್ಥವಾಗಿದೆ.

**ಭಾ–** 'ನೇಹಾಸೀತ್ಕಿಂಚನಾಪ್ಯಾದೌ ಮೃತ್ಯುರಾಸೀದ್ಧರಿಸ್ತದಾ ।
ಸೋಽತ್ಮನೋ ಮನಸಾಽಸ್ರಾಕ್ಷೀದಪ ಏವ ಜನಾರ್ದನಃ ॥
ಶಯಾನಸ್ತಾಸು ಭಗವಾನ್ನಿರ್ಮಮೇಽಂಡಂ ಮಹತ್ತರಮ್ ।
ತತ್ರ ಸಂವತ್ಸರಂ ನಾಮ ಬ್ರಹ್ಮಾಣಮಸೃಜತ್ ಪ್ರಭುಃ ॥
ತಮತ್ತುಂ ವ್ಯಾದದಾದಾಸ್ಯಂ ತದಾಽಸೌ ವಿರುರಾವ ಹ ॥
ಅಥ ತಂ ಕೃಪಯಾ ವಿಷ್ಣುಃ ಸೃಷ್ಟಿಕರ್ಮಣ್ಯಯೋಜಯತ್ ।
ಸೋಽಸೃಜದ್ ಭುವನಂ ಸರ್ವಮದ್ಯಾರ್ಥಂ ಹರಯೇ ವಿಭುಃ ॥
– ಇತಿ ಬ್ರಹ್ಮವೈವರ್ತೇ ॥ ೧೦ ॥

'ಜಗತ್ತಿನ ಸೃಷ್ಟಿಯ ಪೂರ್ವದಲ್ಲಿ ಯಾವುದೂ ಇರಲಿಲ್ಲ. ಆಗ ಮೃತ್ಯುನಾಮಕನಾದ ಹರಿಯು ಇದ್ದನು. ಆ ವಿಷ್ಣುವು ತನ್ನ ಇಚ್ಛೆಗೆ ಅನುಗುಣವಾಗಿ ಜಲವನ್ನು ಸೃಷ್ಟಿಸಿದನು. ಆ ಜಲದಲ್ಲಿ ಮಲಗಿದ ಭಗವಂತನು ಮಹತ್ತಾದ ಬ್ರಹ್ಮಾಂಡವನ್ನು ಆ ಜಲದಲ್ಲಿ ನಿರ್ಮಿಸಿದನು. ಆ ಬ್ರಹ್ಮಾಂಡದಲ್ಲಿ ಸಂವತ್ಸರನಾಮಕನಾದ ಬ್ರಹ್ಮನನ್ನು ಆ ಪ್ರಭುವು ಸೃಷ್ಟಿಸಿದನು. ಆ ಚತುರ್ಮುಖನನ್ನು ಭಕ್ಷಿಸಲು ವಿಷ್ಣುವು ತನ್ನ ಮುಖವನ್ನು ತೆರೆದನು. ಆಗ ಆ ಬ್ರಹ್ಮನು ಭಾಣ್ ಎಂಬ ಶಬ್ದವನ್ನು ಮಾಡಿದನು. ಆಗ ಆ ಚತುರ್ಮುಖನಲ್ಲಿ ಕೃಪೆಯಿಂದ ಅವನನ್ನು ವಿಷ್ಣುವು ಜಗತ್ತನ್ನು ಸೃಷ್ಟಿಸುವ ಕಾರ್ಯದಲ್ಲಿ ನಿಯೋಜಿಸಿದನು. ಆ ಚತುರ್ಮುಖನು ಭಗವಂತನ ಭಕ್ಷಣೆಗಾಗಿ ಈ ಭುವನವನ್ನು ಸೃಷ್ಟಿಸಿದನು' ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ.

(ಭಾ.ದೀ.) ನನು ಅಪ್ಸು ಸಂವತ್ಸರಸೃಷ್ಟ್ಯಾದಿನಾಽತ್ರೋಚ್ಯಮಾನೇನಾಪಿ ಕಥಮಸ್ಯ ವಿಷ್ಣುಪ್ರಕರಣತ್ವನಿಶ್ಚಯ ಇತ್ಯತೋಽಪಿ ಸಂವತ್ಸರಸೃಷ್ಟ್ಯಾದೇರ್ವಿಷ್ಣುಲಿಂಗತ್ವಾದಿತಿ ಭಾವೇನ ತಸ್ಯ ತಲ್ಲಿಂಗತ್ವೇ ಸ್ಮೃತಿಮಾಹ – **ನೇಹಾಽಸೀದಿತಿ ॥** 'ಆದೌ' - ಪ್ರಲಯೇ, 'ಇಹ' ಅಸ್ವತಂತ್ರವರ್ಗೇ, 'ಕಿಂಚನಾಪಿ' ಜೀವೋ ಜಡಂ ವಾ ನಾಽಸೀತ್। ನನ್ವಿದಮ್ ಅಯುಕ್ತಮ್; ಜೀವಾದೇಃ ನಿತ್ಯಸ್ಯ ಸತ್ತ್ವಾದಿತ್ಯತ ಆಹ – **ಮೃತ್ಯುರಿತಿ ॥** ಪ್ರಲಯೇ ಮೃತ್ಯುನಾಮಾ ಹರಿಃ ಜೀವಾದ್ಯಾವರಕತ್ವೇನಾಽಸೀತ್ । ಅತ ಆವೃತತ್ವಾತ್ ನಾಸೀದಿತ್ಯುಕ್ತಮಿತಿ ನಾನುಪಪತ್ತಿರಿತಿ ಭಾವಃ । 'ಸಃ ಆತ್ಮನಃ' ಇತಿ ಪದಚ್ಛೇದಃ । 'ಮಂತ್ರೇಷ್ವಾಙ್ಯಾದೇರಾತ್ಮನಃ' (ಪಾ.ಸೂ.೬-೪-೧೪೧) ಇತ್ಯಾಲ್ಲೋಪಃ । ತಥಾ ಚ 'ಸಃ' ಪ್ರಭುರ್ವಿಷ್ಣುರಾತ್ಮನೋ 'ಮನಸಾ' ಸ್ವೇಚ್ಛಯೈವಾಪೋಽಸ್ರಾಕ್ಷೀತ್ । 'ತಾಸು' ಅಪ್ಸು, ಮಹತ್ತರಂ ಸ್ವಾರ್ಥೇ ತರಪ್ । ಮಹತ್ ಸ್ಥೂಲಮ್ 'ಅಂಡಂ' ಬ್ರಹ್ಮಾಂಡಂ ನಿರ್ಮಮೇ । 'ತತ್ರ' ಅಂಡೇ ಸಂವತ್ಸರಾಖ್ಯಂ ಬ್ರಹ್ಮಾಣಮ್ಯಸಜತ್ ಇತ್ಯನ್ವಯಃ । ನಾಮ ಇತ್ಯನೇನ ಸಮ್ಯಗ್ ವತ್ಸಭೂತಾನ್ ರಮಯತೀತಿ ವ್ಯುತ್ಪತ್ತ್ಯಾ ಸಂವತ್ಸರಶಬ್ದ-

ಕ್ಷತುರ್ಮುಖೇ ಪ್ರಸಿದ್ಧ ಇತ್ಯುಚ್ಯತೇ । ಅತ್ರಾಸಾಮರ್ಥ್ಯಪರಿಹಾರಾಯ – ಪ್ರಭುರಿತಿ ॥ 'ತಂ' ಚತುರ್ಮುಖಮ್ 'ಅತ್ತುಂ' ಭಕ್ಷಯಿತುಂ 'ವ್ಯಾದದಾತ್' ವ್ಯಾವೃಣೋದ್ ವಿಷ್ಣುಃ । ತದಾ ಬ್ರಹ್ಮಾ 'ವಿರುರಾವ' ಭಾಣಿತಿ ಶಬ್ದಮಕರೋದಿತ್ಯರ್ಥಃ । ಹೇತಿ, ಅಸ್ಯಾರ್ಥಸ್ಯ ಶ್ರುತಿಪ್ರಸಿದ್ಧತಾಂ ಸೂಚಯತಿ । ಅಥ ಆರಾವಕರಣಾನಂತರಂ 'ತತ್ಕೃಪಯಾ' ತಸ್ಮಿನ್ ಚತುರ್ಮುಖೇ ಕೃಪಯಾ ವಿಷ್ಣುಸ್ತಮಜಗ್ರಾಂ ಸೃಷ್ಟಿಕ್ರಿಯಾಯಾಮ್ ಆಯೋಜಯತ್ । 'ಸ ವಿಭುಃ' ಚತುರ್ಮುಖೋ ಹರಯೇ ಹರೇರದ್ಯಾರ್ಥಂ ಭುವನಮಸೃಜತ್ ।

ಯದ್ವಾ – ಭುವನಮಸೃಜತ್, ಸೃಷ್ಟಂ ತದ್ಧರಯೇಽದ್ಯಾರ್ಥಮರ್ಪಿತವಾನ್ ಇತಿ ಶೇಷೇಣ ಯೋಜನಾ । 'ಬ್ರಹ್ಮವೈವರ್ತೇ' ಇತ್ಯನಂತರಂ 'ಯತ ಉಕ್ತಮ್' ಇತಿ ಶೇಷಃ । ಅಸ್ಯ 'ಅತಃ ಅಪ್ಸು ಸಂವತ್ಸರಸೃಷ್ಟ್ಯಾದೇರ್ವಿಷ್ಣುಲಿಂಗತ್ವಸಿದ್ಧಿಃ' ಇತ್ಯಧ್ಯಾಹೃತಸಾಧ್ಯೇನ ಅನ್ವಯಃ ।

ಬೃಹದಾರಣ್ಯಕದ ಈ ಪ್ರಕರಣದಲ್ಲಿ ಅಪ್‌ಸೃಷ್ಟಿ, ಸಂವತ್ಸರದ ಸೃಷ್ಟಿ ಮೊದಲಾದವು ಹೇಳಲ್ಪಟ್ಟಿದ್ದರೂ ಈ ಪ್ರಕರಣವು ವಿಷ್ಣುಪ್ರಕರಣವೆಂದು ನಿಶ್ಚಯಿಸುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಅಪ್‌ಸೃಷ್ಟಿ, ಸಂವತ್ಸರಸೃಷ್ಟಿ ಮೊದಲಾದವುಗಳು ವಿಷ್ಣುಲಿಂಗಗಳಾಗಿರುವುದರಿಂದ ಅವನ್ನು ಹೇಳುವ ಈ ಪ್ರಕರಣವು ವಿಷ್ಣುಪ್ರಕರಣವೆಂದು ನಿರ್ಣಯಿಸಲಾಗುವುದು ಎಂಬ ಆಶಯದಿಂದ ಅವುಗಳು ವಿಷ್ಣುಲಿಂಗ ಎಂಬ ವಿಷಯದಲ್ಲಿ ಪ್ರಮಾಣವಾಗಿ 'ನೇಹಾಸೀತ್' ಎಂಬ ಸ್ಮೃತಿಯನ್ನು ಭಾಷ್ಯಕಾರರು ಉದಾಹರಿಸುತ್ತಿದ್ದಾರೆ. ಆದೌ - ಪ್ರಲಯದಲ್ಲಿ, ಇಹ - ಅಸ್ವತಂತ್ರಸಮುದಾಯದಲ್ಲಿ, ಕಿಂಚನಾಪಿ - ಜೀವರಾಗಲೀ ಜಡವಾಗಲೀ ಯಾವುದೂ, ನಾಸೀತ್ - ಇರಲಿಲ್ಲ. ಜೀವ ಮೊದಲಾದ ನಿತ್ಯಪದಾರ್ಥಗಳು ಆ ಸಮಯದಲ್ಲೂ ಇದ್ದ ಕಾರಣ ಯಾವುದೂ ಇರಲಿಲ್ಲವೆಂದು ಹೇಳುವುದು ಅಯುಕ್ತ ಎಂಬ ಶಂಕೆಗೆ ಉತ್ತರವಾಗಿ ಮೃತ್ಯುರಾಸೀತ್ ಎಂದು ಹೇಳಿದೆ. ಪ್ರಲಯದಲ್ಲಿ ಮೃತ್ಯುನಾಮಕನಾದ ಹರಿಯು ಜೀವ ಮೊದಲಾದವುಗಳಿಗೆ ಆವರಕನಾಗಿ ಇದ್ದನು. ಹೀಗೆ ಆವೃತವಾಗಿದ್ದ ಕಾರಣ ಯಾವುದೂ ಇರಲಿಲ್ಲವೆಂದು ಹೇಳಿದೆಯಾದ್ದರಿಂದ ಅನುಪಪತ್ತಿ ಇಲ್ಲವೆಂದು ಭಾವ. ಸೋಽತ್ಮನಃ ಎಂಬಲ್ಲಿ

ಸಃ ಆತ್ಮನಃ ಎಂದು ಪದಚ್ಛೇದ. 'ಮಂತ್ರೇಷ್ವಾಙ್ಯಾದೇರಾತ್ಮನಃ' ಎಂಬ ಪಾಣಿನಿ-ಸೂತ್ರದ ಪ್ರಕಾರ ಆತ್ಮಶಬ್ದದ ಮೊದಲನೆಯ ವರ್ಣವಾದ ಆಕಾರವು ಲೋಪವಾಗಿ ಸೋತ್ಮನಃ ಎಂದು ರೂಪವಾಗುವುದು. ತಥಾಚ - ಸಃ – ಆ ಪ್ರಭುವಾದ ವಿಷ್ಣುವು, ಆತ್ಮನಃ ಮನಸಾ - ತನ್ನ ಇಚ್ಛಾನುಸಾರವಾಗಿ, ಅಪಃ ಅಸ್ರಾಕ್ಷೀತ್ - ಜಲವನ್ನು ಸೃಷ್ಟಿಸಿದನು. ತಾಸು - ಆ ಜಲದಲ್ಲಿ ಮಲಗಿದ್ದ ಆ ಭಗವಂತನು ಅದರಲ್ಲಿ, ಮಹ-ತ್ತರಂ - ಇಲ್ಲಿ ತರಪ್ ಪ್ರತ್ಯಯವು ಮಹತ್ ಶಬ್ದದ ಅರ್ಥಕ್ಕಿಂತ ಬೇರೆಯಾದ ಅರ್ಥವನ್ನು ಹೇಳುವುದಿಲ್ಲ, ಮಹತ್ತಾದ ಅಂದರೆ ಸ್ಥೂಲವಾದ, ಅಂಡಂ - ಬ್ರಹ್ಮಾಂಡ -ವನ್ನು, ನಿರ್ಮಮೇ -ನಿರ್ಮಿಸಿದನು. ತತ್ರ - ಆ ಬ್ರಹ್ಮಾಂಡದಲ್ಲಿ, ಸಂವತ್ಸರಾಖ್ಯಂ ಬ್ರಹ್ಮಾಣಂ– ಸಂವತ್ಸರನಾಮಕನಾದ ಬ್ರಹ್ಮನನ್ನು, ಅಸೃಜತ್ - ಸೃಷ್ಟಿಸಿದನು ಎಂದು ಅನ್ವಯ. ನಾಮ ಎಂಬ ಪದದಿಂದ ಸಮ್ಯಗ್ ವತ್ಸಭೂತಾನ್ ರಮಯತಿ - ತನಗೆ ವತ್ಸರಾದ ತಾನು ಸೃಷ್ಟಿಸಿದ ಜೀವರನ್ನು ಚೆನ್ನಾಗಿ ಸಂತೋಷಪಡಿಸುವನು ಎಂಬ ವ್ಯುತ್ಪತ್ತಿ-ಯನ್ನು ಅನುಸರಿಸಿ, ಸಂವತ್ಸರಶಬ್ದವು ಚತುರ್ಮುಖನ ವಿಷಯದಲ್ಲಿ ಪ್ರಸಿದ್ಧವಾದುದು ಎಂದು ಸೂಚಿತವಾಗಿದೆ. ಬ್ರಹ್ಮನನ್ನು ಸೃಷ್ಟಿಸುವ ವಿಷಯದಲ್ಲಿ ವಿಷ್ಣುವಿಗೆ ಸಾಮರ್ಥ್ಯ-ವಿಲ್ಲ ಎಂಬ ಶಂಕೆಯ ಪರಿಹಾರಕ್ಕಾಗಿ ಪ್ರಭುಃ - ಸಮರ್ಥನು ಎಂದು ಹೇಳಿದೆ. ತಂ - ಆ ಚತುರ್ಮುಖನನ್ನು, ಅತ್ತುಂ - ಭಕ್ಷಿಸಲು, ಆಸ್ಯಂ ವ್ಯಾದದಾತ್ - ವಿಷ್ಣುವು ತನ್ನ ಮುಖವನ್ನು ಅಗಲವಾಗಿ ತೆರೆದನು. ತದಾ ಅಸೌ ವಿರುರಾವ - ಆಗ ಚತು-ರ್ಮುಖನು ಭಾಣ್ ಎಂಬ ಶಬ್ದವನ್ನು ಮಾಡಿದನು ಎಂದು ಅರ್ಥ. ಹ ಶಬ್ದವು ಈ ವಿಷಯವು ಶ್ರುತಿ ಪ್ರಸಿದ್ಧವಾದುದು ಎಂದು ಸೂಚಿಸುವುದು. ಅಥ - ಹಾಗೆ ಶಬ್ದ-ಮಾಡಿದ ನಂತರ, ತತ್ಕೃಪಯಾ - ಆ ಚತುರ್ಮುಖನಲ್ಲಿ ಕೃಪೆಯಿಂದ ವಿಷ್ಣುವು ಅವನನ್ನು ಭಕ್ಷಿಸದೇ ಸೃಷ್ಟಿಕ್ರಿಯೆಯಲ್ಲಿ ನಿಯೋಜಿಸಿದನು. ಸಃ ವಿಭುಃ - ಸಮರ್ಥನಾದ ಆ ಚತುರ್ಮುಖನು, ಹರೇಃ ಅದ್ಯಾರ್ಥಂ - ಶ್ರೀಹರಿಗೆ ಭಕ್ಷಣೆಗಾಗಿ ಭುವನಂ ಅಸೃಜತ್ - ಜಗತ್ತನ್ನು ಸೃಷ್ಟಿಸಿದನು.

ಅಥವಾ – ಭುವನವನ್ನು ಸೃಷ್ಟಿಸಿದನು. ಅನಂತರ ಸೃಷ್ಟಿಯಾದ ಆ ಜಗತ್ತನ್ನು ಹರಯೇ ಅದ್ಯಾರ್ಥಂ - ಹರಿಯ ಭಕ್ಷಣೆಗಾಗಿ ಅರ್ಪಿತವಾನ್ ಅರ್ಪಿಸಿದನು ಎಂದು 'ಅರ್ಪಿತವಾನ್' ಎಂಬ ಶೇಷವನ್ನು ಸೇರಿಸಿ ಯೋಜಿಸಬೇಕು. 'ಬ್ರಹ್ಮವೈವರ್ತೇ' ಎಂಬ

**ಶ್ಚತುರ್ಮುಖೇ ಪ್ರಸಿದ್ಧ ಇತ್ಯುಚ್ಯತೇ । ಅತ್ರಾಸಾಮರ್ಥ್ಯಪರಿಹಾರಾಯ – ಪ್ರಭುರಿತಿ ॥ 'ತಂ' ಚತುರ್ಮುಖಮ್ 'ಅತ್ತುಂ' ಭಕ್ಷಯಿತುಂ 'ವ್ಯಾದದಾತ್' ವ್ಯಾವೃಣೋದ್ ವಿಷ್ಣುಃ । ತದಾ ಬ್ರಹ್ಮಾ 'ವಿರುರಾವ' ಭಾಣಿತಿ ಶಬ್ದಮಕರೋದಿತ್ಯರ್ಥಃ । ಹೇತಿ, ಅಸ್ಯಾರ್ಥಸ್ಯ ಶ್ರುತಿಪ್ರಸಿದ್ಧತಾಂ ಸೂಚಯತಿ । ಅಥ ಆರಾವಕರಣಾನಂತರಂ 'ತತ್ಕೃಪಯಾ' ತಸ್ಮಿನ್ ಚತುರ್ಮುಖೇ ಕೃಪಯಾ ವಿಷ್ಣುಸ್ತಮಜಗ್ಧ್ವಾ ಸೃಷ್ಟಿಕ್ರಿಯಾಯಾಮ್ ಅಯೋಜಯತ್ । 'ಸ ವಿಭುಃ' ಚತುರ್ಮುಖೋ ಹರಯೇ ಹರೇರದ್ಯಾರ್ಥಂ ಭುವನಮಸೃಜತ್ ।**

**ಯದ್ವಾ – ಭುವನಮಸೃಜತ್, ಸೃಷ್ಟಂ ತದ್ಧರಯೇಽದ್ಯಾರ್ಥಮರ್ಪಿತವಾನ್ ಇತಿ ಶೇಷೇಣ ಯೋಜನಾ । 'ಬ್ರಹ್ಮವೈವರ್ತೇ' ಇತ್ಯನಂತರಂ 'ಯತ ಉಕ್ತಮ್' ಇತಿ ಶೇಷಃ । ಅಸ್ಯ 'ಅತಃ ಅಪ್ಸು ಸಂವತ್ಸರಸೃಷ್ಟ್ಯಾದೇರ್ವಿಷ್ಣುಲಿಂಗತ್ವಸಿದ್ಧಿಃ' ಇತ್ಯಧ್ಯಾಹೃತಸಾಧ್ಯೇನ ಅನ್ವಯಃ।**

ಬೃಹದಾರಣ್ಯಕದ ಈ ಪ್ರಕರಣದಲ್ಲಿ ಅಪ್‌ಸೃಷ್ಟಿ, ಸಂವತ್ಸರದ ಸೃಷ್ಟಿ ಮೊದಲಾದವು ಹೇಳಲ್ಪಟ್ಟಿದ್ದರೂ ಈ ಪ್ರಕರಣವು ವಿಷ್ಣುಪ್ರಕರಣವೆಂದು ನಿಶ್ಚಯಿಸುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಅಪ್‌ಸೃಷ್ಟಿ, ಸಂವತ್ಸರಸೃಷ್ಟಿ ಮೊದಲಾದವುಗಳು ವಿಷ್ಣುಲಿಂಗಗಳಾಗಿರುವುದರಿಂದ ಅವನ್ನು ಹೇಳುವ ಈ ಪ್ರಕರಣವು ವಿಷ್ಣುಪ್ರಕರಣವೆಂದು ನಿರ್ಣಯಿಸಲಾಗುವುದು ಎಂಬ ಆಶಯದಿಂದ ಅವುಗಳು ವಿಷ್ಣುಲಿಂಗ ಎಂಬ ವಿಷಯದಲ್ಲಿ ಪ್ರಮಾಣವಾಗಿ '**ನೇಹಾಸೀತ್**' ಎಂಬ ಸ್ಮೃತಿಯನ್ನು ಭಾಷ್ಯಕಾರರು ಉದಾಹರಿಸುತ್ತಿದ್ದಾರೆ. **ಆದೌ** - ಪ್ರಲಯದಲ್ಲಿ, **ಇಹ** - ಅಸ್ವತಂತ್ರಸಮುದಾಯದಲ್ಲಿ, **ಕಿಂಚನಾಪಿ** - ಜೀವರಾಗಲೀ ಜಡವಾಗಲೀ ಯಾವುದೂ, **ನಾಸೀತ್** - ಇರಲಿಲ್ಲ. ಜೀವ ಮೊದಲಾದ ನಿತ್ಯಪದಾರ್ಥಗಳು ಆ ಸಮಯದಲ್ಲೂ ಇದ್ದ ಕಾರಣ ಯಾವುದೂ ಇರಲಿಲ್ಲವೆಂದು ಹೇಳುವುದು ಅಯುಕ್ತ ಎಂಬ ಶಂಕೆಗೆ ಉತ್ತರವಾಗಿ **ಮೃತ್ಯುರಾಸೀತ್** ಎಂದು ಹೇಳಿದೆ. ಪ್ರಲಯದಲ್ಲಿ ಮೃತ್ಯುನಾಮಕನಾದ ಹರಿಯು ಜೀವ ಮೊದಲಾದವುಗಳಿಗೆ ಆವರಕನಾಗಿ ಇದ್ದನು. ಹೀಗೆ ಆವೃತವಾಗಿದ್ದ ಕಾರಣ ಯಾವುದೂ ಇರಲಿಲ್ಲವೆಂದು ಹೇಳಿದೆಯಾದ್ದರಿಂದ ಅನುಪಪತ್ತಿ ಇಲ್ಲವೆಂದು ಭಾವ. **ಸೋಽತ್ಮನಃ** ಎಂಬಲ್ಲಿ

ಸಃ ಆತ್ಮನಃ ಎಂದು ಪದಚ್ಛೇದ. 'ಮಂತ್ರೇಷ್ವಾಙ್ಯಾದೇರಾತ್ಮನಃ' ಎಂಬ ಪಾಣಿನಿ-ಸೂತ್ರದ ಪ್ರಕಾರ ಆತ್ಮಶಬ್ದದ ಮೊದಲನೆಯ ವರ್ಣವಾದ ಆಕಾರವು ಲೋಪವಾಗಿ ಸೋತ್ಮನಃ ಎಂದು ರೂಪವಾಗುವುದು. ತಥಾಚ - ಸಃ - ಆ ಪ್ರಭುವಾದ ವಿಷ್ಣುವು, ಆತ್ಮನಃ ಮನಸಾ - ತನ್ನ ಇಚ್ಛಾನುಸಾರವಾಗಿ, ಅಪಃ ಅಸ್ರಾಕ್ಷೀತ್ - ಜಲವನ್ನು ಸೃಷ್ಟಿಸಿದನು. ತಾಸು - ಆ ಜಲದಲ್ಲಿ ಮಲಗಿದ್ದ ಆ ಭಗವಂತನು ಅದರಲ್ಲಿ, ಮಹ-ತ್ತರಂ - ಇಲ್ಲಿ ತರಪ್ ಪ್ರತ್ಯಯವು ಮಹತ್ ಶಬ್ದದ ಅರ್ಥಕ್ಕಿಂತ ಬೇರೆಯಾದ ಅರ್ಥವನ್ನು ಹೇಳುವುದಿಲ್ಲ, ಮಹತ್ತಾದ ಅಂದರೆ ಸ್ಥೂಲವಾದ, ಅಂಡಂ - ಬ್ರಹ್ಮಾಂಡ -ವನ್ನು, ನಿರ್ಮಮೇ -ನಿರ್ಮಿಸಿದನು. ತತ್ರ - ಆ ಬ್ರಹ್ಮಾಂಡದಲ್ಲಿ, ಸಂವತ್ಸರಾಖ್ಯಂ ಬ್ರಹ್ಮಾಣಂ- ಸಂವತ್ಸರನಾಮಕನಾದ ಬ್ರಹ್ಮನನ್ನು, ಅಸೃಜತ್ - ಸೃಷ್ಟಿಸಿದನು ಎಂದು ಅನ್ವಯ. ನಾಮ ಎಂಬ ಪದದಿಂದ ಸಮ್ಯಗ್ ವತ್ಸಭೂತಾನ್ ರಮಯತಿ - ತನಗೆ ವತ್ಸರಾದ ತಾನು ಸೃಷ್ಟಿಸಿದ ಜೀವರನ್ನು ಚೆನ್ನಾಗಿ ಸಂತೋಷಪಡಿಸುವನು ಎಂಬ ವ್ಯುತ್ಪತ್ತಿ-ಯನ್ನು ಅನುಸರಿಸಿ, ಸಂವತ್ಸರಶಬ್ದವು ಚತುರ್ಮುಖನ ವಿಷಯದಲ್ಲಿ ಪ್ರಸಿದ್ಧವಾದುದು ಎಂದು ಸೂಚಿತವಾಗಿದೆ. ಬ್ರಹ್ಮನನ್ನು ಸೃಷ್ಟಿಸುವ ವಿಷಯದಲ್ಲಿ ವಿಷ್ಣುವಿಗೆ ಸಾಮರ್ಥ್ಯ-ವಿಲ್ಲ ಎಂಬ ಶಂಕೆಯ ಪರಿಹಾರಕ್ಕಾಗಿ ಪ್ರಭುಃ - ಸಮರ್ಥನು ಎಂದು ಹೇಳಿದೆ. ತಂ - ಆ ಚತುರ್ಮುಖನನ್ನು, ಅತ್ತುಂ - ಭಕ್ಷಿಸಲು, ಆಸ್ಯಂ ವ್ಯಾದದಾತ್ - ವಿಷ್ಣುವು ತನ್ನ ಮುಖವನ್ನು ಅಗಲವಾಗಿ ತೆರೆದನು. ತದಾ ಅಸೌ ವಿರುರಾವ - ಆಗ ಚತು-ರ್ಮುಖನು ಭಾಣ್ ಎಂಬ ಶಬ್ದವನ್ನು ಮಾಡಿದನು ಎಂದು ಅರ್ಥ. ಹ ಶಬ್ದವು ಈ ವಿಷಯವು ಶ್ರುತಿ ಪ್ರಸಿದ್ಧವಾದುದು ಎಂದು ಸೂಚಿಸುವುದು. ಅಥ - ಹಾಗೆ ಶಬ್ದ-ಮಾಡಿದ ನಂತರ, ತತ್ಕೃಪಯಾ - ಆ ಚತುರ್ಮುಖನಲ್ಲಿ ಕೃಪೆಯಿಂದ ವಿಷ್ಣುವು ಅವನನ್ನು ಭಕ್ಷಿಸದೇ ಸೃಷ್ಟಿಕ್ರಿಯೆಯಲ್ಲಿ ನಿಯೋಜಿಸಿದನು. ಸಃ ವಿಭುಃ - ಸಮರ್ಥನಾದ ಆ ಚತುರ್ಮುಖನು, ಹರೇಃ ಅದ್ಯಾರ್ಥಂ - ಶ್ರೀಹರಿಗೆ ಭಕ್ಷಣೆಗಾಗಿ ಭುವನಂ ಅಸೃಜತ್ - ಜಗತ್ತನ್ನು ಸೃಷ್ಟಿಸಿದನು.

ಅಥವಾ – ಭುವನವನ್ನು ಸೃಷ್ಟಿಸಿದನು. ಅನಂತರ ಸೃಷ್ಟಿಯಾದ ಆ ಜಗತ್ತನ್ನು ಹರಯೇ ಅದ್ಯಾರ್ಥಂ - ಹರಿಯ ಭಕ್ಷಣೆಗಾಗಿ ಅರ್ಪಿತವಾನ್ ಅರ್ಪಿಸಿದನು ಎಂದು 'ಅರ್ಪಿತವಾನ್' ಎಂಬ ಶೇಷವನ್ನು ಸೇರಿಸಿ ಯೋಜಿಸಬೇಕು. 'ಬ್ರಹ್ಮವೈವರ್ತೇ' ಎಂಬ

ಪದದ ನಂತರ, ಯತ ಉಕ್ತಮ್ - ಯಾವ ಕಾರಣದಿಂದ ಇಲ್ಲಿ ಹೇಳಲ್ಪಟ್ಟಿದೆಯೋ ಎಂಬ ಪದಗಳು ಶೇಷವಾಗಿವೆ. ಈ ವಾಕ್ಯಕ್ಕೆ "ಆದ್ದರಿಂದ ಅಪ್‌ಸೃಷ್ಟಿ, ಸಂವತ್ಸರಸೃಷ್ಟಿ ಮೊದಲಾದವುಗಳು ವಿಷ್ಣುಲಿಂಗಗಳೆಂದು ಸಿದ್ಧವಾಗುವವು" ಎಂಬ ಅಧ್ಯಾಹಾರ ಮಾಡಿ -ಕೊಳ್ಳುವ ಸಾಧ್ಯದೊಂದಿಗೆ ಅನ್ವಯವಾಗುವುದು.

॥ ಇತಿ ಅತ್ತೃತ್ವಾಧಿಕರಣಮ್ ॥ ೨ ॥

*****

## ೩. ಅಥ ಗುಹಾಧಿಕರಣಮ್

ಭಾ– ಸರ್ವಾತ್ಮೈಕಃ ಪರ ಉಕ್ತಃ।

'ಋತಂ ಪಿಬಂತೌ ಸುಕೃತಸ್ಯ ಲೋಕೇ
ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ।
ಛಾಯಾಽಽತಪೌ ಬ್ರಹ್ಮವಿದೋ ವದಂತಿ
ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ'। (ಕಠ. ೧-೩-೧)

ಇತಿ ಪಿಬಂತೌ ಪ್ರತೀಯತೇ। ತೌ ಕಾವಿತಿ।

ಪರಮಾತ್ಮನೊಬ್ಬನೇ ಸರ್ವಸಂಹರ್ತೃವೆಂದು ಉಕ್ತನಾಗಿದ್ದಾನೆ. ಆದರೆ 'ಋತಂ ಪಿಬಂತೌ' ಎಂಬ ಮಂತ್ರದಲ್ಲಿ ಕರ್ಮಫಲಸಾರಭೋಕ್ತರು ಇಬ್ಬರಿರುವರು ಎಂದು ತಿಳಿದು ಬರುವುದು. ಅವರು ಯಾರು? ಎಂದು ಸಂಶಯವಿದೆ.

(ಭಾ.ದೀ.) ಅತ್ರಾಧಿಕರಣೇ ಲೋಕತೋಽನ್ಯತ್ರ ಪ್ರಸಿದ್ಧಕರ್ಮಫಲಭೋಕ್ತೃತ್ವ-ಲಿಂಗಸ್ಯ ವಿಷ್ಣೌ ಸಮನ್ವಯಃ ಪ್ರತಿಪಾದ್ಯತೇ। ಪೂರ್ವಾಧಿಕರಣಶ್ರುತಿಸಂಗತಿಂ ವಿಷಯ-ವಾಕ್ಯೋದಾಹರಣಪೂರ್ವಕಂ ವಿಷಯಂ ಚ ಸೂಚಯತಿ – **ಸರ್ವೇತಿ** ॥ ಯಸ್ಮಾತ್ 'ಪರಃ' - ಪರಮಾತ್ಮಾ, ಏಕಃ - ಏಕತ್ವಸಂಖ್ಯಾಯುಕ್ತಃ, ಸರ್ವಾತ್ಮಾ - ಸರ್ವ-ಸಂಹರ್ತಾ ಚ, ತಸ್ಮಾತ್ ಪ್ರಕೃತಿಪ್ರತ್ಯಯಾರ್ಥಯೋಸ್ತತ್ರ ಯೋಗಾತ್ ಸರ್ವಾತ್ಮಾ'

ಇತ್ಯಾದಿ ಕ್ರಿಯಾಲಿಂಗಬೋಧಕಶಬ್ದೈಃ ವಾಚ್ಯತ್ವೇನೋಕ್ತ ಇತ್ಯರ್ಥಃ । 'ಸರ್ವಾತ್ತಾ' ಇತ್ಯುಕ್ತ್ಯೈವ ಅರ್ಥಾತ್ 'ಪಾತಾ' ಇತ್ಯಪ್ಯುಕ್ತ ಇತಿ ಭಾವಃ। ತತಃ ಕಿಮ್? ಇತ್ಯತ ಆಹ – **ಋತಮಿತಿ ॥** 'ತತ್ರ' ಇತ್ಯಾದೌ ಸಂಯೋಜ್ಯಮ್ ।

ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಕರ್ಮಫಲಭೋಕ್ತೃತ್ವವೆಂಬ ಲಿಂಗಕ್ಕೆ ವಿಷ್ಣುವಿನಲ್ಲಿ ಸಮನ್ವಯವನ್ನು ಪ್ರತಿಪಾದಿಸಲಾಗುವುದು. ಪೂರ್ವಾಧಿಕರಣದ ಶ್ರುತಿವಾಕ್ಯದಿಂದ ಸಂಗತಿಯನ್ನು ಮತ್ತು ಈ ಅಧಿಕರಣದ ವಿಷಯವಾಕ್ಯವನ್ನು ಉದಾಹರಿಸುವ ಮೂಲಕ ವಿಷಯವನ್ನು ಸರ್ವ ಎಂಬ ವಾಕ್ಯದಿಂದ ಸೂಚಿಸುತ್ತಿದ್ದಾರೆ. ಯಾವ ಕಾರಣದಿಂದಾಗಿ ಪರಃ - ಪರಮಾತ್ಮನು, ಏಕಃ - ಏಕತ್ವಸಂಖ್ಯೆಯನ್ನು ಹೊಂದಿರುವವನೂ, ಸರ್ವಾತ್ತಾ - ಸರ್ವಸಂಹಾರಕನೂ ಆಗಿರುವನೋ, ಆದ್ದರಿಂದ ಪ್ರಕೃತಿ ಮತ್ತು ಪ್ರತ್ಯಯಗಳ ಅರ್ಥಗಳು ಅವನಲ್ಲಿ ಹೊಂದುವುದರಿಂದ 'ಸರ್ವಾತ್ತಾ' ಎಂಬ ಸಂಹಾರಕ್ರಿಯಾರೂಪವಾದ ಲಿಂಗವನ್ನು ತಿಳಿಸುವ ಶಬ್ದಗಳಿಂದ ವಾಚ್ಯನೆಂದು ಉಕ್ತನಾಗಿದ್ದಾನೆ. 'ಸರ್ವಾತ್ತಾ' ಎಂದು ಹೇಳಿರುವುದರಿಂದಲೇ ಅರ್ಥಾತ್, ಪಾತಾ - ಅಂದರೆ ಕರ್ಮಫಲಸಾರಭೋಕ್ತೃವೆಂದೂ ಉಕ್ತನಾಗಿದ್ದಾನೆ ಎಂದು ಭಾವ. ಆದ-ರಿಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ **ಋತಂ** ಎಂದು ಹೇಳಲಾಗಿದೆ. ಈ ಮಂತ್ರದ ಆದಿಯಲ್ಲಿ 'ತತ್ರ' ಎಂಬ ಪದವನ್ನು ಸಂಯೋಜಿಸಬೇಕು.

(ಭಾ.ದೀ.) ತಥಾಚ – 'ತತ್ರ' ಸರ್ವಾತ್ತೃತ್ವಮಧ್ಯೇ ಪ್ರವಿಷ್ಟಂ ತದ್ವಿಶೇಷಭೂತಂ ಪಾತೃತ್ವಂ ಯತ್ರೋಕ್ತಂ ತತ್ರ ಕಾಠಕೇ 'ಋತಂ ಪಿಬಂತೌ' ಇತ್ಯತ್ರ 'ಪಿಬಂತೌ' ಕರ್ಮಫಲಸಾರಭೋಕ್ತಾರೌ ದ್ವೌ ಪ್ರತೀಯೇತೇ - ಇತಿ ಯೋಜನಾ । ದ್ವಿವಚನೇನ ದ್ವಿತ್ವಬೋಧಾತ್ ಇತಿ ಭಾವಃ। ಅನೇನ ಯುಕ್ತಮ್ ಅತ್ತೃತ್ವಂ ಭಗವತಃ ತತ್ರ ಪ್ರಕೃತಿ-ಪ್ರತ್ಯಯಾರ್ಥಯೋರುಪಪತ್ತೇಃ । ಇಹ ತು ಕರ್ಮಬಂಧವಿಧುರೇ ಪರಮಾತ್ಮನಿ ಪ್ರಕೃತ್ಯರ್ಥಸ್ಯ, ನಿರ್ಭೇದೇ ಪ್ರತ್ಯಯಾರ್ಥಸ್ಯ ಚಾಯೋಗಾನ್ನ ತಸ್ಯ ದ್ವಿವಚನಾಂತಪಿಬ-ಚ್ಛಬ್ದವಾಚ್ಯತಾ ಇತಿ ಪೂರ್ವವೈಷಮ್ಯೇಣ ಪ್ರತ್ಯವಸ್ಥಾನಾದ್ವಾ ಪೂರ್ವಮರ್ಥಾದುಕ್ತಸ್ಯ ಪಾತೃತ್ವಸ್ಯ ಅನ್ಯಮಾತ್ರನಿಷ್ಠತ್ವೇऽಸಂಭವಸ್ಯ, ಅನ್ಯಸ್ಮಿನ್ನಪಿ ಸತ್ವೇऽತಿವ್ಯಾಪ್ತೇರ್ವಾ,

ಆಕ್ಷೇಪಾದ್ವಾ ಪೂರ್ವಾಧಿಕರಣೇನ ಅಸ್ಯ ಸಂಗತಿಃ ಪಾತೃತ್ವಾಖ್ಯವಿಷಯಶ್ಚ ಸೂಚಿತೋ ಭವತಿ ॥

ತಥಾಚ - ತತ್ರ - ಸರ್ವಾತ್ತೃತ್ವದ ಮಧ್ಯದಲ್ಲಿ ಸೇರಿರುವ ಅತ್ತೃತ್ವವಿಶೇಷ-ರೂಪವಾದ ಪಾತೃತ್ವ ಅಂದರೆ ಕರ್ಮಫಲಸಾರಭೋಕ್ತೃತ್ವವನ್ನು ಎಲ್ಲಿ ಹೇಳಲಾಗಿ-ದೆಯೋ ಆ ಕಾರಕದಲ್ಲಿ 'ಋತಂ ಪಿಬಂತೌ' ಎಂಬ ವಾಕ್ಯದಲ್ಲಿ ಪಿಬಂತೌ - ಕರ್ಮ-ಫಲಸಾರಭೋಕ್ತೃಗಳೆಂದು ಇಬ್ಬರು ತಿಳಿದು ಬರುವರು – ಎಂದು ಪದಗಳ ಯೋಜನೆ. ಈ ವಾಕ್ಯದಲ್ಲಿರುವ ದ್ವಿವಚನದಿಂದ ದ್ವಿತ್ವಸಂಖ್ಯೆಯು ತಿಳಿದು ಬರುವುದೆಂದು ಭಾವ. ಇದರಿಂದ, ಭಗವಂತನಿಗೆ 'ಅತ್ತೃ' ಎಂಬ ಪ್ರಕೃತಿಯ ಅರ್ಥವಾದ ಅತ್ತೃತ್ವ ಮತ್ತು ಏಕವಚನಪ್ರತ್ಯಯದ ಅರ್ಥವಾದ ಏಕತ್ವ ಎರಡೂ ಇರುವುದರಿಂದ ಅತ್ತೃತ್ವವು ಅವ-ನಿಗೆ ಇರುವುದೆಂದು ಹೇಳಿದ್ದು ಯುಕ್ತವೇ. ಇಲ್ಲಾದರೋ ಕರ್ಮಬಂಧರಹಿತನಾದ ಪರಮಾತ್ಮನಲ್ಲಿ ಕರ್ಮಫಲಭೋಕ್ತೃತ್ವವು ಮತ್ತು 'ಪಿಬತ್' ಎಂಬ ಪ್ರಕೃತಿಯ ಅರ್ಥ-ವಾದ ಒಬ್ಬನೇ ಆಗಿದ್ದು ಭೇದರಹಿತನಾದ ಅವನಲ್ಲಿ ದ್ವಿತ್ವಸಂಖ್ಯೆಯೆಂಬ ಪ್ರತ್ಯಯಾ-ರ್ಥವು ಹೊಂದುವುದಿಲ್ಲವಾದ್ದರಿಂದ ಅವನಿಗೆ ದ್ವಿವಚನಾಂತವಾದ ಪಿಬತ್‌ಶಬ್ದದ ವಾಚ್ಯತ್ವವು ಇರುವುದಿಲ್ಲ ಎಂದು ಹಿಂದಿನ ಅಧಿಕರಣದ ವೈಷಮ್ಯದಿಂದ ಈ ಅಧಿ-ಕರಣವು ಹೊರಡುವುದರಿಂದ ಅಥವಾ ಹಿಂದಿನ ಅಧಿಕರಣದಲ್ಲಿ ಅರ್ಥಾತ್ ಹೇಳಲ್ಪಟ್ಟ ಪಾತೃತ್ವವು ವಿಷ್ಣುಭಿನ್ನನಿಗೆ ಇರುವುದಾದರೆ ಅಸಂಭವ ದೋಷವು ಅಥವಾ ವಿಷ್ಣುಭಿನ್ನ-ನಲ್ಲೂ ಅದು ಇರುವುದಾದರೆ ಅತಿವ್ಯಾಪ್ತಿ ಬರುವುದೆಂದು ಆಕ್ಷೇಪಿಸುವುದರಿಂದ ಈ ಅಧಿಕರಣಕ್ಕೆ ಪೂರ್ವಾಧಿಕರಣದಿಂದ[೧] ಸಂಗತಿಯು ಸೂಚಿತವಾಗುವುದು. ಹಾಗೆಯೇ ಪಾತೃತ್ವವು ಈ ಅಧಿಕರಣದ ವಿಷಯವೆಂದೂ ಸೂಚಿತವಾಗುವುದು.

(೧) ಪೂರ್ವಾಧಿಕರಣದ ವೈಷಮ್ಯದಿಂದ ಮುಂದಿನ ಅಧಿಕರಣವು ಹೊರಟರೆ ಪ್ರತ್ಯುದಾಹರಣಸಂಗತಿ. ಪೂರ್ವಾಧಿಕರಣದ ಸಿದ್ಧಾಂತವನ್ನು ಆಕ್ಷೇಪಿಸಿ ಹೊರ-ಟರೆ ಆಕ್ಷೇಪಿಕೀ ಸಂಗತಿ.

(ಭಾ.ದೀ.) ವಿಷಯವಾಕ್ಯೇ ಜನ್ಯಜನಕಭಾವಃ ಷಷ್ಠ್ಯರ್ಥಃ । ತಥಾ ಚ 'ಸುಕೃತಸ್ಯ ಲೋಕೇ' ಸುಕೃತನಿರ್ಮಿತೇ ಶರೀರೇ, ತತ್ತ್ವಪ್ರದೀಪರೀತ್ಯಾ ಸುಕೃತನಿಮಿತ್ತೇ ಶರೀರೇ,

ಹೃದಯಗುಹಾಂ ಪ್ರವಿಷ್ಟೌ ಗುಹಾಯಾಮಪಿ 'ಪರಮೇ' ಸರ್ವಜೀವೋತ್ತಮೇ, ಆ ಋದ್ಧ ಆರ್ಧಃ। ಪರೇಭ್ಯೋ ರುದ್ರಾದಿಭ್ಯ ಆರ್ಧಃ ಪರಾರ್ಧಃ। 'ತಸ್ಮಿನ್ ಅತಿಪೂರ್ಣೇ ವಾಯೌ' ಇತಿ ಶೇಷಃ। ತಥಾ ಚ ತತ್ರ ಪ್ರವಿಷ್ಟೌ ಹೃದಯಗುಹಾಶ್ರಿತವಾಯ್ವಧಿಷ್ಠಾನೌ ಇತಿ ಯಾವತ್। 'ಸ ಹಾऽऽಯಸ್ತಃ ಪಿತುರರ್ಧಮೇಯಾಯ' (ಛಾಂ.೫-೩-೪) ಇತಿ ತತ್ವಪ್ರದೀಪೋದಾಹೃತಶ್ರುತೇಃ ಪರಬ್ರಹ್ಮಾವಾಸತ್ವಾತ್ ತದನ್ಯಜೀವಾಭಿಮನ್ಯಮಾನ-ತ್ವಾತ್ ಪರಾರ್ಧಂ ಶರೀರಮ್ ಇತಿ ವಾ॥

'ಋತಂ ಸತ್ಯಂ ತಥಾ ಸುಕೃತಂ ಚಾಭಿಧೀಯತೇ।
ಋತಂ ತು ಮಾನಸೋ ಧರ್ಮಃ ....'

ಇತಿ **ಗೀತಾಭಾಷ್ಯೋ**ದಾಹೃತಸ್ಮೃತೇಃ ಶಾಸ್ತ್ರವಿಹಿತಕರ್ಮಭಿರಾಗತಂ ಫಲಮುಪ-ಲಕ್ಷಣಯಾ 'ಋತಮ್' ಇತ್ಯುಚ್ಯತೇ। ತಥಾಚ – 'ಋತಂ ಪಿಬಂತೌ' ಭುಂಜಾನೌ ಯೌ ಆತ್ಮಾಂತರಾತ್ಮಾಖ್ಯಭಗವದ್ರೂಪವಿಶೇಷೌ ವರ್ತೇತೇ ತೌ 'ಬ್ರಹ್ಮವಿದಃ' ಬ್ರಹ್ಮಜ್ಞಾನಿನಃ 'ಪಂಚಾಗ್ನಯಃ' ದೇವಪಿತೃಭೂತಮನುಷ್ಯಬ್ರಹ್ಮಯಜ್ಞಾಖ್ಯಪಂಚ-ಮಹಾಯಜ್ಞವಂತಃ। 'ಸ ಏಷ ಯಜ್ಞಃ ಪಂಚವಿಧೋऽಗ್ನಿಹೋತ್ರಂ ದರ್ಶಪೂರ್ಣ-ಮಾಸೌ ಚಾತುರ್ಮಾಸ್ಯಾನಿ ಪಶುಃ ಸೋಮಃ' **ಇತ್ಯೈತರೇಯೋಕ್ತ**ಪಂಚಮಹಾ-ಯಜ್ಞಾ ವಾ। ದ್ಯುಪರ್ಜನ್ಯಧರಾಪುಂಸ್ತ್ರ್ಯಾಖ್ಯಪಂಚಾಗ್ನಿವಿದ್ಯಾನಿಷ್ಠಾ ವಾ।

'ಋತಂ ಪಿಬಂತೌ ಸುಕೃತಸ್ಯ' ಎಂಬ ವಿಷಯವಾಕ್ಯದಲ್ಲಿ ಸುಕೃತಸ್ಯ ಎಂಬ ಪದದಲ್ಲಿರುವ ಷಷ್ಠೀವಿಭಕ್ತಿಗೆ ಜನ್ಯಜನಕಭಾವವು ಅರ್ಥವಾಗಿದೆ. ತಥಾಚ ಸುಕೃತಸ್ಯ ಲೋಕೇ ಪುಣ್ಯದಿಂದ ಲಭಿಸಿದ ಶರೀರದಲ್ಲಿ, ತತ್ತ್ವಪ್ರದೀಪರೀತ್ಯಾ ಸುಕೃತಕ್ಕೆ ಕಾರಣವಾದ ಶರೀರದಲ್ಲಿ ಗುಹಾಂ ಪ್ರವಿಷ್ಟೌ ಹೃದಯಗುಹೆಯನ್ನು ಪ್ರವೇಶಿಸಿರುವ, ಆ ಗುಹೆಯಲ್ಲೂ, 'ಪರಮೇ' ಸರ್ವಜೀವೋತ್ತಮನಾದ, ಪರಾರ್ಧೇ - ಆ ಋದ್ಧಃ ಆರ್ಧಃ, ಚೆನ್ನಾಗಿ ಅತ್ಯಂತಪೂರ್ಣನು ಎಂದು ಅರ್ಥ. ಪರೇಭ್ಯಃ ರುದ್ರಾದಿ ಇತರರಿ-ಗಿಂತ ಆರ್ಧಃ ಅತಿ ಪೂರ್ಣನಾದವನು ಪರಾರ್ಧ. ಹೀಗೆ ಅತಿಪೂರ್ಣನಾದ ವಾಯು-ವಿನಲ್ಲಿ, ಇಲ್ಲಿ 'ವಾಯುವಿನಲ್ಲಿ' ಎಂಬುದು ಶೇಷವಾಗಿದೆ. ತಥಾಚ ಹೃದಯಗುಹೆ-

ಯನ್ನು ಆಶ್ರಯಿಸಿರುವ ವಾಯುವೆಂಬ ಅಧಿಷ್ಠಾನದಲ್ಲಿರುವ ಎಂದು ಭಾವ. ಅಥವಾ, ಸ ಹಾಽಽಯಸ್ತಃ ಪಿತುರರ್ಧಮೇಯಾಯ(೧) ಎಂಬ ತತ್ವಪ್ರದೀಪದಲ್ಲಿ ಉದಾಹರಿಸಲಾಗಿರುವ ಶ್ರುತಿಯ ಪ್ರಕಾರ ಪರಬ್ರಹ್ಮನಿಗೆ ಆವಾಸಸ್ಥಾನವಾದುದರಿಂದ, ಪರಬ್ರಹ್ಮನಿಗಿಂತ ಭಿನ್ನನಾದ ಜೀವನ ಅಭಿಮಾನಕ್ಕೆ ವಿಷಯವಾದ ಕಾರಣ ಪರಾರ್ಧವೆಂದೆನಿಸುವ ಶರೀರವನ್ನು ಪ್ರವೇಶಿಸಿರುವ ಎಂದು ಅರ್ಥ.

'ಋತಂ ಸತ್ಯಂ ತಥಾ ಧರ್ಮಃ ಸುಕೃತಂ ಚಾಭಿಧೀಯತೇ । ಋತಂ ತು ಮಾನಸೋ ಧರ್ಮಃ ....' ಎಂದು ಗೀತಾಭಾಷ್ಯದಲ್ಲಿ ಉದಾಹರಿಸಲಾದ ಸ್ಮೃತಿಗೆ ಅನುಸಾರವಾಗಿ ಶಾಸ್ತ್ರವಿಹಿತವಾದ ಕರ್ಮಗಳಿಂದ ಬಂದ ಫಲವು ಲಕ್ಷಣಾವೃತ್ತಿಯಿಂದ ಋತಶಬ್ದದ ಅರ್ಥವಾಗಿದೆ. ತಥಾಚ - 'ಋತಂ ಪಿಬಂತೌ' ಶಾಸ್ತ್ರವಿಹಿತಕರ್ಮಗಳಿಂದ ಉಂಟಾದ ಫಲವನ್ನು ಭುಜಿಸುವ ಯಾವ ಆತ್ಮಾ, ಅಂತರಾತ್ಮಾ ಎಂಬ ಭಗವಂತನ ರೂಪವಿಶೇಷಗಳು ಇವೆಯೋ, ಅವುಗಳನ್ನು ಬ್ರಹ್ಮವಿದಃ - ಬ್ರಹ್ಮಜ್ಞಾನಿಗಳು, ಪಂಚಾಗ್ನಯಃ - ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಬ್ರಹ್ಮಯಜ್ಞವೆಂಬ ಪಂಚಮಹಾಯಜ್ಞಗಳನ್ನು ಅನುಷ್ಠಾನ ಮಾಡುವವರು ಅಥವಾ 'ಸ ಏಷ ಯಜ್ಞಃ ಪಂಚವಿಧೋಽಗ್ನಿಹೋತ್ರಂ ದರ್ಶಪೂರ್ಣಮಾಸೌ ಚಾತುರ್ಮಾಸ್ಯಾನಿ ಪಶುಃ ಸೋಮಃ' ಎಂದು ಐತರೇಯದಲ್ಲಿ ಹೇಳಲಾದ ಅಗ್ನಿಹೋತ್ರ , ದರ್ಶಪೂರ್ಣಮಾಸ, ಚಾತುರ್ಮಾಸ್ಯ , ಪಶುಯಾಗ, ಸೋಮಯಾಗ ಎಂಬ ಪಂಚಮಹಾಯಜ್ಞಗಳನ್ನು ಅನುಷ್ಠಾನ ಮಾಡಿದವರು ಅಥವಾ - ದ್ಯು, ಪರ್ಜನ್ಯ, ಧರಾ, ಪುರುಷ ಮತ್ತು ಸ್ತ್ರೀ ಎಂಬ ಪಂಚಾಗ್ನಿವಿದ್ಯಾನಿಷ್ಠರು ಎಂದು ಅರ್ಥ.

(೧) 'ಸ ಹಾಯಸ್ತಃ ಪಿತುರರ್ಧಮೇಯಾಯ' ಎಂಬ ಛಾಂದೋಗ್ಯದ ವಾಕ್ಯದಲ್ಲಿ 'ಸಃ' ಅಂದರೆ ಶ್ವೇತಕೇತು. ಅವನು ಪ್ರವಾಹಣನೆಂಬ ಋಷಿಯ ಪ್ರಶ್ನೆಗಳಿಗೆ ಉತ್ತರ ಕೊಡಲಾಗದೇ ಆಯಾಸಗೊಂಡು ತಂದೆಯ ಆವಾಸಸ್ಥಾನಕ್ಕೆ ತೆರಳಿದನು ಎಂದು ಶ್ರುತಿಯ ಅರ್ಥ. ಇಲ್ಲಿ ಅರ್ಧಶಬ್ದಕ್ಕೆ ಆವಾಸಸ್ಥಾನವೆಂದು ಅರ್ಥ ಹೇಳಿರುವಂತೆ ಪರಾರ್ಧಶಬ್ದಲ್ಲೂ ಪರ ಅಂದರೆ ಪರಬ್ರಹ್ಮನ ಅರ್ಧ ಅಂದರೆ ಆವಾಸಸ್ಥಾನವಾದ ಶರೀರವೆಂದು ಅಥವಾ ಪರ ಅಂದರೆ ಬ್ರಹ್ಮಭಿನ್ನನಾದ ಜೀವ. ಅವನ ಅಭಿಮಾನಕ್ಕೆ ವಿಷಯವಾದ ಶರೀರ ಪರಾರ್ಧ ಎನಿಸುವುದು ಎಂದು ಭಾವ.

(ಭಾ.ದೀ.) ನಚಿಕೇತಾ ನಾಮ ಋಷಿಃ, ನಚಿಕೇತಸ ಇದಂ ನಾಚಿಕೇತಮಗ್ನಿ-ಚಯನವಿಶೇಷಃ । ತ್ರಿನಾಚಿಕೇತಾಸ್ತ್ರಿವಾರಮನುಷ್ಠಿತನಾಚಿಕೇತೇಷ್ಟಕಾಚಯನವಂತೋ ಯೇ ವರ್ತಂತೇ ತೇ ವಿದುಷಾಂ ಪಾಪಿನಾಂ ಚ ಕ್ರಮೇಣ 'ಛಾಯಾऽऽತಪೌ' ಸುಖದುಃಖಕಾರಣೀಭೂತೌ ದ್ವೌ ವದಂತೀತ್ಯರ್ಥಃ । ಸುಖದುಃಖಹೇತುತ್ವರೂಪಂ ಗೌಣಂ ಛಾಯಾऽऽತಪತ್ವಂ ಚ ಪ್ರತಿಯೋಗಿಭೇದಾದವಿರುದ್ಧಮ್ । ಯಥೋಕ್ತಂ **ತತ್ತ್ವಪ್ರದೀಪೇ** – 'ಅಮರಾಣಾಮ್ ಅಹ್ಲಾದಕೌ ಅಸುರಾಣಾಂ ತಾಪಕೌ ಇತ್ಯರ್ಥಃ' ಇತಿ । ಪ್ರಶ್ನರೂಪಕಾರ್ಯದ್ವಾರಾ ತನ್ಮೂಲಸಂದೇಹಪ್ರಕಾರಂ ದರ್ಶಯತಿ – 'ತೌ' ಶ್ರುತ್ಯುಕ್ತಪಿಬಂತೌ ಇತಿ । ಇತಿ ವಾಕ್ಯೇ ಪಿಬಂತೌ ಯೌ ಪ್ರತೀಯೇತೇ ತೌ ಕೌ? ಇತ್ಯನ್ವಯಃ । ಅನೇನ 'ಪಿಬಂತೌ ಕಿಂ ಜೀವಪರೌ ಉತ ಪರರೂಪೇ ಏವ' ಇತಿ ಸಂಶಯಃ ಸೂಚಿತೋ ಭವತಿ । 'ಇತಿ' ಇತ್ಯನಂತರಮ್ 'ಇತಿ ಸಂಶಯೇ ಜೀವಸಹಿತ-ಈಶ್ವರಃ ಪಾತಾ ಇತಿ ಪೂರ್ವಪಕ್ಷೇ ಚ ಸತಿ' ಇತಿ ವಾಕ್ಯಶೇಷಃ ।

ತ್ರಿನಾಚಿಕೇತಾಃ - ನಚಿಕೇತನೆಂಬವನು ಒಬ್ಬ ಋಷಿ. 'ನಚಿಕೇತಸಃ ಇದಂ ನಾಚಿ-ಕೇತಂ' ಎಂಬ ವಿವರಣೆಗನುಸಾರವಾಗಿ ನಚಿಕೇತನಿಗೆ ಸಂಬಂಧಿಸಿದ, ಅಗ್ನಿಚಯನ-ವೆಂಬ ಕರ್ಮವಿಶೇಷವು ನಾಚಿಕೇತವೆಂದೆನಿಸುವುದು. ತ್ರಿನಾಚಿಕೇತಾಃ ಎಂದರೆ ಮೂರು ಸಲ ನಾಚಿಕೇತ ಇಷ್ಟಕಾಚಯನವೆಂಬ ಕರ್ಮವನ್ನು ಅನುಷ್ಠಾನ ಮಾಡಿದವರು ಯಾರಿರುವರೋ ಅವರು, ಜ್ಞಾನಿಗಳಿಗೆ ಮತ್ತು ಪಾಪಿಗಳಿಗೆ ಈ ಆತ್ಮಾ, ಅಂತರಾತ್ಮರು ಕ್ರಮವಾಗಿ ಛಾಯಾऽऽತಪೌ - ಸುಖ-ದುಃಖಗಳಿಗೆ ಕಾರಣರೆಂದು ಹೇಳುವರು ಎಂದು ಅರ್ಥ. ಇಲ್ಲಿ ಛಾಯಾತಪತ್ವವು ಗೌಣವಾಗಿದ್ದು ಸುಖದುಃಖಹೇತುತ್ವರೂಪ-ವಾಗಿದೆ. ಅದು ಪ್ರತಿಯೋಗಿಭೇದದಿಂದ ಅಂದರೆ, ಬೇರೆ ಬೇರೆಯವರಿಗೆ ಸುಖದುಃಖ-ಹೇತುಗಳಾದ್ದರಿಂದ ಅವುಗಳ ಮಧ್ಯೆ ವಿರೋಧವಿಲ್ಲ. ತತ್ತ್ವಪ್ರದೀಪದಲ್ಲಿ ಹೀಗೆ ಹೇಳಲಾಗಿದೆ. 'ಅಮರಾಣಾಮ್ ಅಹ್ಲಾದಕೌ ಅಸುರಾಣಾಂ ತಾಪಕೌ ಇತ್ಯರ್ಥಃ' 'ದೇವತೆಗಳಿಗೆ ಸಂತೋಷಕರರೂ ಅಸುರರಿಗೆ ದುಃಖಕರರೂ ಆಗಿದ್ದಾರೆ' ಎಂದು ಅರ್ಥ - ಎಂದು. ತೌ ಕೌ? ಎಂಬ ಪ್ರಶ್ನೆಯೆಂಬ ಕಾರ್ಯದ ಮೂಲಕ ಅದಕ್ಕೆ ಕಾರಣವಾದ ಸಂದೇಹದ ಪ್ರಕಾರವನ್ನು 'ತೌ ಪಿಬಂತೌ' ಎಂಬ ವಾಕ್ಯದಿಂದ

ತೋರಿಸುತ್ತಿದ್ದಾರೆ. ಈ ವಾಕ್ಯದಲ್ಲಿ ಕರ್ಮಫಲಭೋಕ್ತೃಗಳೆಂದು ಯಾವ ಇಬ್ಬರು ತಿಳಿದು ಬರುವರೋ ಅವರಿಬ್ಬರು ಯಾರು? ಎಂದು ಅನ್ವಯ. ಇದರಿಂದ ಕರ್ಮಫಲ-ಭೋಕ್ತೃಗಳು ಜೀವಪರಮಾತ್ಮರೆಂಬ ಇಬ್ಬರೋ ಅಥವಾ ಪರಮಾತ್ಮನೇ ಆದ ಎರಡು ರೂಪಗಳೋ ಎಂಬ ಸಂಶಯವು ಸೂಚಿತವಾಗುವುದು. ಭಾಷ್ಯದಲ್ಲಿ ಇತಿ ಎಂಬ ಪದದ ನಂತರ 'ಇತಿ ಸಂಶಯೇ ಜೀವಸಹಿತ ಈಶ್ವರಃ ಪಾತಾ ಇತಿ ಪೂರ್ವಪಕ್ಷೇ ಚ ಸತಿ'- 'ಹೀಗೆ ಸಂಶಯವುಂಟಾಗಲು ಜೀವಸಹಿತನಾದ ಈಶ್ವರನೇ ಪಾತೃ - ಕರ್ಮಫಲಭೋಕ್ತೃವಾಗಿದ್ದಾನೆ ಎಂಬ ಪೂರ್ವಪಕ್ಷವು ಪ್ರಾಪ್ತವಾಗಲು' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ.

**ಭಾ– ಉಚ್ಯತೇ।**

**॥ ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ ॥ ೧೧ ॥**

ಈ ಪೂರ್ವಪಕ್ಷಕ್ಕೆ ಹೀಗೆ ಉತ್ತರವನ್ನು ನೀಡಲಾಗಿದೆ.

'ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ' – 'ಕರ್ಮಫಲ-ಭೋಕ್ತೃಗಳಾದ ಇಬ್ಬರು ಚೇತನರು ವಿಷ್ಣುರೂಪಗಳೇ ಆಗಿದ್ದಾರೆ. ಏಕೆಂದರೆ, ಹೃದಯ-ಗುಹೆಯನ್ನು ಪ್ರವೇಶಿಸಿ ಇರುವ ಕಾರಣದಿಂದ' ಎಂದು. ಹಾಗೆ ಕರ್ಮಫಲಭೋಕ್ತೃಗಳು ಭಗವಂತನ ರೂಪಗಳೇ ಆಗಿವೆ ಎಂಬುದು ಶ್ರುತಿಯಿಂದ ಸಿದ್ಧವಾಗಿದೆ.

**ಭಾ– ಗುಹಾಂ ಪ್ರವಿಷ್ಟೌ ಪಿಬಂತೌ ವಿಷ್ಣುರೂಪೇ ಏವ।**

ಹೃದಯಗುಹೆಯನ್ನು ಪ್ರವೇಶಿಸಿ ಕರ್ಮಫಲಭೋಕ್ತೃಗಳಾಗಿರುವವರು ವಿಷ್ಣುವಿನ ಎರಡು ರೂಪಗಳೇ ಆಗಿವೆ.

**(ಭಾ.ದೀ.) ಅಥ ಸಿದ್ಧಾಂತಯತ್ಸೂತ್ರಮವತಾರ್ಯ ವ್ಯಾಚಷ್ಟೇ – ಉಚ್ಯತೇ ಇತಿ ॥ ಸೂತ್ರಾತ್ 'ಪರತಃ' ಇತಿ ಶಬ್ದೋ ಅಧ್ಯಾಹಾರ್ಯಃ। 'ಗುಹಾಂ ಪ್ರವಿಷ್ಟೌ' ಇತಿ ಹೇತುಗರ್ಭವಿಶೇಷಣಮ್ । 'ಪಿಬಂತೌ' ಇತಿ ಆತ್ಮಪದವ್ಯಾಖ್ಯಾನಮ್ । 'ಋತಮ್' ಇತಿ ಆದೌ ಅಧ್ಯಾಹಾರ್ಯಮ್ । 'ವಿಷ್ಣುರೂಪೇ' ಇತಿ 'ಆತ್ಮಾನೌ' ಇತ್ಯಸ್ಯ ವ್ಯಾಖ್ಯಾ-**

ನಾಂತರಮ್ । ತಥಾಚ – ಯೌ ಆತ್ಮಾನೌ ಋತಂ ಪಿಬಂತೌ ತೌ ಆತ್ಮಾನೌ ವಿಷ್ಣು-ರೂಪೇ ಏವ । ಕುತಃ? ಯತೋ ಗುಹಾಂ ಪ್ರವಿಷ್ಟೌ - ಇತಿ ಯೋಜನಾ । 'ಏವ' ಇತ್ಯನೇನ ಅನುವೃತ್ತತುಶಬ್ದಾರ್ಥ ಉಕ್ತಃ। 'ವಿಷ್ಣೂ' ಇತಿ ವಕ್ತವ್ಯೇ 'ವಿಷ್ಣುರೂಪೇ ಏವ' ಇತ್ಯುಕ್ತಿಃ ದ್ವಿವಚನಸ್ಯ ರೂಪದ್ವಯವಿವಕ್ಷಯಾ ಸಾವಕಾಶತೋಕ್ತ್ಯರ್ಥಾ ।

ಸಿದ್ಧಾಂತವನ್ನು ಸೂಚಿಸುವ ಸೂತ್ರಕ್ಕೆ 'ಉಚ್ಯತೇ' ಎಂದು ಅವತಾರಿಕೆಯನ್ನು ಕೊಟ್ಟು ವ್ಯಾಖ್ಯಾನ ಮಾಡುತ್ತಿದ್ದಾರೆ. ಸೂತ್ರದ ಮುಂದೆ ಇತಿಶಬ್ದವನ್ನು ಅಧ್ಯಾಹಾರ ಮಾಡಿ ಸೇರಿಸಬೇಕು. '**ಗುಹಾಂ ಪ್ರವಿಷ್ಟೌ**' ಎಂಬ ಪದಗಳು (೧)ಹೇತುಗರ್ಭವಾದ ವಿಶೇಷಣವನ್ನು ಹೇಳುವವು. ಭಾಷ್ಯದಲ್ಲಿ ಪಿಬಂತೌ - ಎಂಬ ಪದವು ಸೂತ್ರದಲ್ಲಿರುವ ಆತ್ಮಪದದ ವ್ಯಾಖ್ಯಾನವಾಗಿದೆ. 'ಋತಮ್' ಎಂಬ ಪದವನ್ನು ಅಧ್ಯಾಹಾರ ಮಾಡಿ-ಕೊಂಡು ಅದರ ಹಿಂದೆ ಸೇರಿಸಬೇಕು. ಆತ್ಮಾನೌ ಎಂಬ ಪದಕ್ಕೆ ಇನ್ನೊಂದು ವ್ಯಾಖ್ಯಾನ 'ವಿಷ್ಣುರೂಪೇ' ಎಂದು. ತಥಾಚ – ಯಾವ ಇಬ್ಬರು ಆತ್ಮಾನೌ - ಕರ್ಮ ಫಲ-ಭೋಕ್ತೃಗಳಾದ ಚೇತನರೋ ಅವರಿಬ್ಬರು ಆತ್ಮಾನೌ - ವಿಷ್ಣುರೂಪಗಳೇ ಆಗಿದ್ದಾರೆ. ಏಕೆಂದರೆ ಗುಹಾಪ್ರವಿಷ್ಟರಾಗಿರುವುದರಿಂದ ಎಂದು ಯೋಜನೆ. ಭಾಷ್ಯದಲ್ಲಿ ಏವ ಎಂಬ ಪದದಿಂದ ಅನುವೃತ್ತಿಮಾಡಿಕೊಂಡಿರುವ ತುಶಬ್ದದ ಅರ್ಥವನ್ನು ಹೇಳಲಾಗಿದೆ. ವಿಷ್ಣೂ ಎಂದು ಹೇಳಬಹುದಾಗಿದ್ದರೂ ವಿಷ್ಣುರೂಪೇ ಏವ ಎಂದು ಹೇಳಿರುವುದು ದ್ವಿವಚನವು ಎರಡು ರೂಪಗಳ ವಿವಕ್ಷೆಯಿಂದ ಪ್ರಯೋಗಿಸಲ್ಪಟ್ಟಿರುವುದರಿಂದ ಸಾವ-ಕಾಶವೆಂದು ಸೂಚಿಸಲು.

(೧) 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಕರ್ಮಫಲಭೋಕ್ತೃಗಳೆಂದು ಹೇಳಲಾಗಿರುವವರು ವಿಷ್ಣುವಿನ ಎರಡು ರೂಪಗಳೇ ಆಗಿವೆ ಎಂಬುದನ್ನು ಸಾಧಿಸುವ ಹೇತು – ಹೃದಯಗುಹಾಪ್ರವಿಷ್ಟತ್ವ ಅದನ್ನೊಳಗೊಂಡ 'ಹೃದಯ-ಗುಹಾಪ್ರವಿಷ್ಟತ್ವ' ಎಂಬ ವಿಶೇಷಣವನ್ನು ಹೇಳುವ ಪದಗಳು – ಗುಹಾಂ ಪ್ರವಿಷ್ಟೌ ಎಂಬ ಪದಗಳು ಎಂದು ಆಶಯ.

**ಭಾ– 'ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ'(ಋ.೧೦-೧೧೪-೧) ಇತ್ಯಾದಿನಾ ತದ್ದರ್ಶನಾತ್ ।**

'ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ' ಇತ್ಯಾದಿ ಶ್ರುತಿಯು ವಿಷ್ಣುವು ರೂಪದ್ವಯವನ್ನು ಪಡೆದು ಸರ್ವಶರೀರಗಳನ್ನು ಪ್ರವೇಶಿಸುವನು ಎಂದು ಹೇಳಿರುವುದರಿಂದ 'ಋತಂ ಪಿಬಂತೌ' ಎಂಬ ವಾಕ್ಯದಲ್ಲಿ ಗುಹಾಪ್ರವಿಷ್ಟವಾದ ರೂಪಗಳು ವಿಷ್ಣುರೂಪಗಳೇ ಆಗಿವೆ.

(ಭಾ.ದೀ.) ನನು ವಿಷ್ಣೋಃ ಸರ್ವಶರೀರೇಷು ಏಕೈಕರೂಪೇಣೈವ ಪ್ರವೇಶಾತ್ ಕಥಂ ರೂಪದ್ವಯಾಭಿಪ್ರಾಯೇಣಾಪಿ ದ್ವಿವಚನೋಪಪತ್ತಿಃ? ಇತ್ಯತ 'ತದ್ದರ್ಶನಾತ್' ಇತಿ ಸೂತ್ರಾಂಶಸೂಚಿತಶ್ರುತಿಮುದಾಹರತಿ – **ಘರ್ಮೇತಿ** ॥ 'ಭಗವಂತೌ', 'ಕರ್ತುಮ್' ಇತಿ ಚ ಶೇಷಃ । 'ತ್ರಿವೃತಮ್' ಇತ್ಯಾವರ್ತತೇ । ತಥಾಚ 'ಘರ್ಮಾ' ಘರ್ಮೌ ದೀಪ್ತೌ ಧರ್ಷಕೌ ಸಂಹಾರಕೌ ಇತಿ ವಾ । 'ಘರ್ಷಣಾತ್ ಸರ್ವಲೋಕಸ್ಯ ನೃಸಿಂಹೋ ಘರ್ಮ ಉಚ್ಯತೇ' ಇತ್ಯೈತರೇಯಭಾಷ್ಯೋಕ್ತೇಃ, 'ಘೃಷ್ಟತ್ವೇನ ಧರ್ಷಕತ್ವೇನ ಚ ಮಿತೌ' ಇತಿ **ತತ್ತ್ವಪ್ರದೀಪೋಕ್ತೇಶ್ಚ** । 'ಸಮಂತಾ' ಸಮಂತೌ ವ್ಯಾಪ್ತೌ ಪ್ರಕೃತಿಪುರುಷಕಾಲವ್ಯಾಪಿನೌ । ದೇಶತಃ ಕಾಲತಃ ಶಕ್ತಿತಶ್ಚ ಸಂಪೂರ್ಣೌ ಯೌ ಭಗವಂತೌ ತ್ರಿವೃತಂ ತೇಜೋಬನ್ನಾತ್ಮಕಂ ಶರೀರಂ, 'ವ್ಯಾಪತುಃ' ವಿಶೇಷೇಣಾಽಪತುಃ, ದೇಹಹೃದಯಗುಹಾಸ್ಥಾನಂ ಪ್ರಾಪ್ತೌ ತಯೋಃ 'ಜುಷ್ಟಿಂ' ಸೇವಾಂ ಕರ್ತುಂ 'ಮಾತರಿಶ್ವಾ' ಮುಖ್ಯವಾಯುರಪಿ ತ್ರಿವೃತಂ ಜಗಾಮ । 'ದಿವೋ' ದೇವ್ಯಾಃ ವಾಯುಪತ್ನ್ಯಾಃ ಸ್ತನ್ಯಂ 'ಪಯಃ' 'ದಿಧಿಷಾಣಾಃ' ಪಿಪಾಸಂತೋ ದೇವಾಃ ದ್ವಿರೂಪಂ ತಮೇಕಮ್ 'ಅವೇಷನ್' ಅನ್ವೈಚ್ಛನ್ । ತಮ್ 'ಅರ್ಕಮ್' ಅರಮ್ ಅಲಂ ಕಂ ರೂಪಂ ಸುಖರೂಪಂ 'ಸಹಸಾಮಾನಂ' ಸಹವಾಯುಂ ವಿದುಃ - ಇತಿ ಶ್ರುತ್ಯರ್ಥಃ । **ಗುರ್ವರ್ಥದೀಪಿಕಾಯಾಂ** ತು 'ಸಮಂತಾತ್' ಇತಿ ಪದಚ್ಛೇದಂ ಕೃತ್ವಾ 'ವಿದ್ಯಮಾನೌ' ಇತಿ ಚಾಧ್ಯಾಹೃತ್ಯ 'ಸಮಂತಾತ್ ವಿದ್ಯಮಾನೌ ವ್ಯಾಪ್ತೌ' ಇತಿ ವ್ಯಾಖ್ಯಾತಮ್ । ತಚ್ಚಿಂತ್ಯಮ್ । ಇತ್ಯಾದಿನಾ ಇತಿ ॥ 'ವಾಕ್ಯೇನ' ಇತಿ ಶೇಷಃ ।

ವಿಷ್ಣುವು ಎಲ್ಲ ಶರೀರಗಳನ್ನು ಒಂದೊಂದು ರೂಪದಿಂದಲೇ ಪ್ರವೇಶಿಸುವು-

ದರಿಂದ ರೂಪದ್ವಯದ ಅಭಿಪ್ರಾಯದಿಂದ ಋತಂ ಪಿಬಂತೌ ಎಂಬ ಮಂತ್ರದಲ್ಲಿ ದ್ವಿವಚನವನ್ನು ಹೊಂದಿಸುವುದು ಹೇಗೆ ಯುಕ್ತವಾಗುವುದು? ಎಂಬ ಶಂಕೆಗೆ ಉತ್ತರವಾಗಿ ತದ್ದರ್ಶನಾತ್ ಎಂಬ ಸೂತ್ರಾಂಶದಿಂದ ಸೂಚಿತವಾಗುವ ಶ್ರುತಿಯನ್ನು ಘರ್ಮಾ ಎಂದು ಭಾಷ್ಯಕಾರರು ಉದಾಹರಿಸುತ್ತಿದ್ದಾರೆ. ಇಲ್ಲಿ 'ಭಗವಂತೌ ಮತ್ತು ಕರ್ತುಮ್' ಎಂಬ ಪದಗಳು ಶೇಷವಾಗಿವೆ. ಶ್ರುತಿಯಲ್ಲಿರುವ 'ತ್ರಿವೃತಮ್' ಎಂಬ ಪದವು ಆವೃತ್ತಿಯನ್ನು ಹೊಂದುವುದು. ತಥಾಚ - ಘರ್ಮಾ - ಎಂದರೆ ಘರ್ಮೌ ಪ್ರಕಾಶಮಾನವಾದ ಅಥವಾ 'ಘರ್ಷಣಾತ್ ಸರ್ವಲೋಕಸ್ಯ ನೃಸಿಂಹೋ ಘರ್ಮ ಉಚ್ಯತೇ' - ಎಲ್ಲ ಲೋಕವನ್ನು ಸಂಹರಿಸುವುದರಿಂದ ನೃಸಿಂಹನು ಘರ್ಮನೆಂದೆ-ನಿಸುವನು ಎಂದು ಐತರೇಯಭಾಷ್ಯದಲ್ಲಿ ಹೇಳಿರುವುದರಿಂದ ಹಾಗೆಯೇ 'ಘೃಷ್ಟತ್ವೇನ ಘರ್ಷಕತ್ವೇನ ಚ ಮಿತೌ' - 'ಪ್ರಕಾಶಮಾನರೆಂದು ಮತ್ತು ಸಂಹಾರಕರೆಂದು ಪ್ರಮಿತ-ರಾದುದರಿಂದ ಘರ್ಮ ಎಂದೆನಿಸುವರು' ಎಂದು ತತ್ತ್ವಪ್ರದೀಪದಲ್ಲಿ ಹೇಳಿರುವು-ದರಿಂದ ಘರ್ಮಾ ಎಂದರೆ ಸಂಹಾರಕರು ಎಂದು ಅರ್ಥ. 'ಸಮಂತಾ' ಎಂದರೆ ಸಮಂತೌ - ವ್ಯಾಪ್ತರಾದ, ಪ್ರಕೃತಿ-ಪುರುಷ-ಕಾಲಗಳನ್ನು ವ್ಯಾಪಿಸಿರುವ, ದೇಶ-ಕಾಲ-ಶಕ್ತಿಗಳಿಂದ ಪೂರ್ಣರಾದ ಯಾವ ಭಗವಂತನ ರೂಪಗಳು, ತ್ರಿವೃತಂ - ತೇಜಸ್ಸು ಅಪ್ ಪೃಥಿವೀ ಏತದಾತ್ಮಕವಾದ ಶರೀರವನ್ನು, ವ್ಯಾಪತುಃ - ವಿಶೇಷವಾಗಿ ಹೊಂದಿ-ದರು. ದೇಹದ ಹೃದಯಗುಹಾಸ್ಥಾನವನ್ನು ಹೊಂದಿದರು ಎಂದು ಅರ್ಥ. ತಯೋಃ - ಆ ಭಗವದ್ರೂಪಗಳ, ಜುಷ್ಟಿಂ - ಸೇವೆಯನ್ನು ಮಾಡಲು, ಮಾತರಿಶ್ವಾ - ಮುಖ್ಯ-ವಾಯುವು ಕೂಡ, ತ್ರಿವೃತಂ - ತ್ರಿವೃತವನ್ನು ಅಂದರೆ ಶರೀರವನ್ನು, ಜಗಾಮ - ಪ್ರವೇಶಿಸಿದನು. ದಿವಃ - ದೇವಿಯ ಅಂದರೆ ವಾಯುಪತ್ನಿಯ, ಪಯಃ - ಸ್ತನ್ಯವನ್ನು, ದಿಧಿಷಾಣಾಃ - ಪಾನಮಾಡಲು ಇಚ್ಛಿಸುವ ದೇವತೆಗಳು, ಎರಡು ರೂಪಗಳನ್ನು ಹೊಂದಿರುವ ಅವನನ್ನು, ಅವೇಷನ್ - ಇಚ್ಛಿಸಿದರು. ತಮ್ ಅರ್ಕಮ್ - ಆ ಭಗವಂತನನ್ನು, ಅರಮ್ ಅಂದರೆ ಅಲಮ್ - ಅಂದರೆ ಪೂರ್ಣವಾದ, ಕಂ - ಸುಖ-ರೂಪನೆಂದು, 'ಸಹಸಾಮಾನಂ' ವಾಯುಸಹಿತನೆಂದು ತಿಳಿದರು – ಎಂದು ಶ್ರುತಿಯ ಅರ್ಥ. ಗುರ್ವರ್ಥದೀಪಿಕಾದಲ್ಲಾದರೋ ಸಮಂತಾತ್ ಎಂದು ಪದಚ್ಛೇದ ಮಾಡಿ, ವಿದ್ಯಮಾನೌ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು, ಸಮಂತಾತ್ ವಿದ್ಯ-

ಮಾನೌ ಅಂದರೆ ವ್ಯಾಪ್ತರು ಎಂದು ವ್ಯಾಖ್ಯಾನಮಾಡಲಾಗಿದೆ. ಅದು ವಿಚಾರಣೀಯವಾದದ್ದು. ಇತ್ಯಾದಿನಾ ಎಂಬ ಪದದ ನಂತರ 'ವಾಕ್ಯೇನ' ಎಂಬ ಪದವು ಶೇಷವಾಗಿದೆ.

(ಭಾ.ದೀ.) ಆದಿಪದೇನ ದಿವಸ್ಪಯಃ ಇತ್ಯುತ್ತರಾರ್ಧಂ, ತಥಾ –

ಏಕಃ ಸುಪರ್ಣಃ ಸ ಸಮುದ್ರಮಾವಿವೇಶ ಸ ಇದಂ ವಿಶ್ವಂ ಭುವನಂ ವಿಚಷ್ಟೇ।
ತಂ ಪಾಕೇನ ಮನಸಾಽಪಶ್ಯಮಂತಿತಸ್ತಂ ಮಾತಾ ರೇಳ್ಹಿ ಸ ಉ ರೇಳ್ಹಿ ಮಾತರಮ್।
ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ॥
– (ಋ.೧೦-೧೧೪-೪,೫)

ಇತ್ಯಾದಿಕಂ ಗೃಹ್ಯತೇ । ಸಃ 'ಏಕಃ ಸುಪರ್ಣಃ' ಸುಷ್ಠು ಪರಮಾನಂದರೂಪೋ ಭಗವಾನ್ ಸಮುದ್ರಮಾವಿವೇಶ। ಸ ಇದಂ ಸರ್ವಂ ಜಗತ್ 'ವಿಚಷ್ಟೇ' ಪಶ್ಯತಿ। 'ತಂ' ಪರಮಾತ್ಮಾನಂ ಪಕ್ವೇನ ಮನಸಾ ಅಹಮಪಶ್ಯಮ್ । 'ತಂ ಮಾತಾ' ವ್ಯಂಜಕತ್ವಾದ್ ವಾಕ್ ಸರಸ್ವತೀ 'ರೇಳ್ಹಿ' ಲಿಹ್ಯತ ಇವ । ಸ ಪರಮಾತ್ಮಾ ಮಾತರಂ ರೇಳ್ಹಿ । ತೌ ಅನ್ಯೋನ್ಯಂ ಸಂಬದ್ಧೌ ಭವತಃ। ತಥಾ ಚ ಭಗವದ್ವ್ಯಂಜಕವಾಚೋಽಪಿ ತದ್ವ್ಯಂಗ್ಯತ್ವಮಿತಿ ಭಾವಃ।

ತಮೇವ ಸುಪರ್ಣಮೇಕಂ ಸಂತಂ 'ವಿಪ್ರಾಃ' ವಿಶೇಷೇಣ ಪ್ರಕೃಷ್ಟಾಃ ಕವಯೋ ಜ್ಞಾನಿನಃ, 'ವಚೋಭಿಃ' ಶಬ್ದೈಃ 'ಬಹುಧಾ' ಕೇಶವಾದಿದ್ವಾದಶಧಾ ಸ್ಥಿತಂ ಕಲ್ಪಯಂತಿ ಚಿಂತಯಂತಿ ಇತ್ಯರ್ಥಃ।

**ತದ್ದರ್ಶನಾದಿತಿ ॥** ತಸ್ಯ ವಿಷ್ಣೋಃ ದ್ವಿರೂಪತಯಾ ಸರ್ವಶರೀರಪ್ರವೇಶಸ್ಯ ಉಕ್ತತ್ವಾದಿತ್ಯರ್ಥಃ। ತಥಾಚ – ಏಕಸ್ಮಿನ್ನಪಿ ವಿಷ್ಣೌ ಯುಕ್ತಂ ರೂಪದ್ವಯಾಭಿಪ್ರಾಯೇಣ ದ್ವಿವಚನಮಿತಿ ಭಾವಃ । ಏವಂ 'ತದ್ದರ್ಶನಾತ್' ಇತ್ಯೇತತ್ ತತ್ತ್ವಪ್ರದೀಪರೀತ್ಯಾ ಉಕ್ತವಿಶೇಷಣೇ ನಿರ್ಣೀತೇ ವಿಷ್ಣೌ ದ್ವಿವಚನದರ್ಶನಾತ್, 'ಏಕಃ ಸುಪರ್ಣಃ' ಇತ್ಯಾದಿನಾ ತಚ್ಛಬ್ದೇನೈಕವಚನೇನ ಪರಾಮರ್ಶದರ್ಶನಾತ್, ತಸ್ಯೈವ ಸಮುದ್ರನಿವೇಶಿನೋ

ನಿಖಿಲಭುವನದರ್ಶಿನಃ 'ಅಪಶ್ಯಮಂತಿತಃ' ಇತಿ ಗುಹಾಪ್ರವಿಷ್ಟತ್ವದರ್ಶನಾದ್, ಏಕಸ್ಯೈವ ಬಹುನಾಮರೂಪದರ್ಶನಾದ್ ಇತ್ಯಪಿ ವ್ಯಾಖ್ಯೇಯಮ್ ।

ಭಾಷ್ಯದಲ್ಲಿ ಇತ್ಯಾದಿನಾ ಎಂಬಲ್ಲಿರುವ ಆದಿಪದದಿಂದ 'ದಿವಸ್ವಯಃ' ಎಂಬ ಉತ್ತರಾರ್ಧವು, ಹಾಗೆಯೇ

ಏಕಃ ಸುಪರ್ಣಃ ಸ ಸಮುದ್ರಮಾವಿವೇಶ ಸ ಇದಂ ವಿಶ್ವಂ ಭುವನಂ ವಿಚಷ್ಟೇ ।
ತಂ ಪಾಕೇನ ಮನಸಾಽಪಶ್ಯಮಂತಿತಸ್ತಂ ಮಾತಾ ರೇಳ್ಹಿ ಸ ಉ ರೇಳ್ಹಿ ಮಾತರಮ್ ।
ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ ॥

ಇತ್ಯಾದಿ ವಾಕ್ಯಗಳು ಗ್ರಹಿಸಲ್ಪಡುತ್ತವೆ. ಸಃ ಏಕಃ ಸುಪರ್ಣಃ - ಸಮೀಚೀನವಾದ ಪರಮಾನಂದಸ್ವರೂಪನಾದ ಕಾರಣ ಸುಪರ್ಣ ಎಂದೆನಿಸುವ ಅದ್ವಿತೀಯನಾದ ಭಗವಂತನು, ಸಮುದ್ರಂ ಆವಿವೇಶ - ಸಮುದ್ರವನ್ನು ಪ್ರವೇಶಿಸಿದನು. ಸಃ ಇದಂ ವಿಶ್ವಂ ಭುವನಂ - ಅವನು ಈ ಸಮಸ್ತಜಗತ್ತನ್ನು, ವಿಚಷ್ಟೇ - ನೋಡುವನು. ತಂ ಆ ಪರಮಾತ್ಮನನ್ನು, ಪಾಕೇನ ಮನಸಾ ಅಪಶ್ಯಮ್ - ಪರಿಪಕ್ವವಾದ ಮನಸ್ಸಿನಿಂದ ನಾನು ನೋಡಿದೆನು. ತಂ ಮಾತಾ - ಆ ಪರಮಾತ್ಮನನ್ನು ಅವನ ಅಭಿವ್ಯಕ್ತಿಗೆ ಕಾರಣಳಾದುದರಿಂದ ಮಾತೆಯೆಂದೆನಿಸುವ ವಾಗಭಿಮಾನಿನಿಯಾದ ಸರಸ್ವತಿಯು 'ರೇಳ್ಹಿ' ಆಸ್ವಾದಿಸುವಳೋ ಎಂಬಂತಿದ್ದಳು. ಸ ಉ ಮಾತರಂ ರೇಳ್ಹಿ - ಆ ಪರಮಾತ್ಮನು ಮಾತೆಯಾದ ಸರಸ್ವತಿಯನ್ನು ಆಸ್ವಾದಿಸಿದನು. ಹೀಗೆ ಅವರು ಪರಸ್ಪರ ಸಂಬಂಧವನ್ನು ಪಡೆದರು. ತಥಾಚ - ಭಗವಂತನನ್ನು ಅಭಿವ್ಯಕ್ತಿಗೊಳಿಸುವ ವಾಕ್ಕು ಆ ಭಗವಂತನಿಂದ ಅಭಿವ್ಯಕ್ತಿಯನ್ನು ಪಡೆಯುವುದೆಂದು ಭಾವ.

ಏಕಂ ಸಂತಂ ಸುಪರ್ಣಂ - ಒಬ್ಬನೇ ಆಗಿರುವ ಆ ಸುಪರ್ಣನನ್ನು, ವಿಪ್ರಾಃ ಕವಯಃ - ವಿಶೇಷವಾಗಿ ಅತಿಶಯವನ್ನು ಪಡೆದಿರುವ ಜ್ಞಾನಿಗಳು, ವಚೋಭಿಃ ಶಬ್ದಗಳಿಂದ, ಬಹುಧಾ - ಕೇಶವ ಮೊದಲಾದ ಹನ್ನೆರಡು ರೂಪಗಳಿಂದ ಇರುವವನೆಂದು, ಕಲ್ಪಯಂತಿ - ಚಿಂತಿಸುವರು ಎಂದರ್ಥ.

ಭಾಷ್ಯದಲ್ಲಿ 'ತದ್ದರ್ಶನಾತ್' ಎಂದರೆ - ತಸ್ಯ ಆ ವಿಷ್ಣುವಿಗೆ ಎರಡು ರೂಪದಿಂದ ಸರ್ವಶರೀರಪ್ರವೇಶವನ್ನು ಹೇಳಲಾಗಿರುವುದರಿಂದ ಎಂದರ್ಥ. ತಥಾಚ -

ವಿಷ್ಣುವು ಒಬ್ಬನೇ ಆಗಿದ್ದರೂ ಅವನ ಎರಡು ರೂಪಗಳ ಅಭಿಪ್ರಾಯದಿಂದ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ದ್ವಿವಚನವು ಯುಕ್ತವಾಗಿದೆ ಎಂದು ಭಾವ. ಹಾಗೆಯೇ **ತತ್ವಪ್ರದೀಪರೀತ್ಯಾ** 'ತದ್ದರ್ಶನಾತ್' ಎಂಬ ಪದವನ್ನು, ಉಕ್ತವಿಶೇಷಣಗಳಿಂದ ವಿಷ್ಣು-ವೆಂದು ನಿರ್ಣಯಿಸಲ್ಪಟ್ಟವನಲ್ಲಿ ದ್ವಿವಚನಪ್ರಯೋಗವು ದೃಷ್ಟವಾಗಿರುವುದರಿಂದ, 'ಏಕಃ ಸುಪರ್ಣಃ' ಇತ್ಯಾದಿವಾಕ್ಯದಲ್ಲಿ ಏಕವಚನಾಂತವಾದ ತಚ್ಛಬ್ದದಿಂದ ಪರಾಮರ್ಶ ಮಾಡಿರುವುದು ದೃಷ್ಟವಾಗಿರುವುದರಿಂದ, ತಸ್ಯೈವ - ಸಮುದ್ರಪ್ರವೇಶ ಮಾಡಿದ, ನಿಖಿಲಜಗತ್ತನ್ನು ನೋಡುವ ಪರಮಾತ್ಮನಿಗೆ, **'ಅಪಶ್ಯಮಂತಿತಃ'** ಎಂದು ಗುಹಾ-ಪ್ರವಿಷ್ಟತ್ವವು ದೃಷ್ಟವಾಗಿರುವುದರಿಂದ, ಒಬ್ಬನಿಗೇ ಅನೇಕ ನಾಮರೂಪಗಳು ಇರುವುದು ದೃಷ್ಟವಾದುದರಿಂದ, ಹೀಗೂ ಅನೇಕವಿಧವಾಗಿ ವ್ಯಾಖ್ಯಾನಿಸಬೇಕು.

**ಭಾ– 'ಆತ್ಮಾಽಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ।**
**ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್' ॥**

**– ಇತಿ ಬೃಹತ್ಸಂಹಿತಾಯಾಮ್ ।**

ಒಬ್ಬನೇ ಹರಿಯು ಆತ್ಮಾ ಅಂತರಾತ್ಮಾ ಎಂದು ಎರಡು ರೂಪಗಳಿಂದ ಇದ್ದು, ದೇಹ ಮತ್ತು ಜೀವರ ಹೃದಯದಲ್ಲಿ ಪ್ರವೇಶಿಸಿದ್ದಾನೆ. ಅವನು ಕರ್ಮಗಳಿಂದ ಉಂಟಾಗುವ ಫಲವನ್ನು ನಿಯಮೇನ ಭುಜಿ-ಸುವನು - ಎಂದು ಬೃಹತ್ಸಂಹಿತೆಯಲ್ಲಿ ಹೇಳಿದೆ.

(ಭಾ.ದೀ.) ನನು ವಿಷ್ಣೌ ರೂಪದ್ವಯವಿವಕ್ಷಯಾ ಪ್ರತ್ಯಯಾರ್ಥೋಪಪತ್ತಾವಪಿ ಪ್ರಾತಿಪದಿಕಾರ್ಥಕರ್ಮಫಲಭೋಕ್ತೃತ್ವಾಯೋಗಾನ್ನ 'ಋತಮ್' ಇತಿ ವಾಕ್ಯಪ್ರತಿ-ಪಾದ್ಯತ್ವಂ ತಸ್ಯ ಇತ್ಯತ ಆಹ – **ಆತ್ಮೇತಿ ॥** ಏಕ ಏವ ಹರಿಃ ದೇಹಜೀವರೂಪೋಪಾಧಿ-ಭೇದಾದ್ 'ಆತ್ಮಾಂತರಾತ್ಮಾ' ಇತಿ ರೂಪಭೇದೇನ ದ್ವಿಧಾ ಸ್ಥಿತಃ ದ್ವಿಧಾ ಭೂತಃ ದೇಹಜೀವಯೋರ್ಹೃದಯೇ ನಿವಿಷ್ಟಃ । ಯದ್ವಾ - **ಟೀಕಾರೀತ್ಯಾ** ಉಪಾಧಿಭೇದ-ವಿವಕ್ಷಾಮಂತರೇಣೈವ ದ್ವಿರೂಪತಯಾ ದೇಹನಿವಿಷ್ಟಃ 'ಕರ್ಮಜಂ ರಸಂ' ಫಲಂ 'ನಿತ್ಯಂ' ನಿಯಮೇನ 'ಪಿಬತಿ' ಭುಂಕ್ತೇ ಇತ್ಯರ್ಥಃ । 'ಸ್ಮೃತಃ' ಇತಿ ಪಾಠೇ 'ಕೀರ್ತಿತಃ'

ಇತ್ಯರ್ಥಃ। ರಸಶಬ್ದೇನ ಜೀವಾಭೋಗ್ಯಗುಣಭೋಕ್ತಾ ಏವ ಈಶ್ವರಃ, ನ ತು ತದ್ಭೋಗ್ಯ -ದ್ರವ್ಯಭೋಕ್ತಾ ಇತಿ ಪ್ರಮೇಯಂ ಸೂಚಿತಮ್ । 'ಬೃಹತ್ಸಂಹಿತಾಯಾಮ್' ಇತ್ಯಸ್ಯ 'ತದ್ದರ್ಶನಾತ್' ಇತ್ಯನುವೃತ್ತವಾಕ್ಯೇನಾನ್ವಯಃ । 'ಕರ್ಮಫಲಭೋಗಸ್ಯೋಕ್ತತ್ವಾತ್' ಇತಿ ತದರ್ಥಃ । ತಥಾಚ - ನ ತದನುಪಪತ್ತಿರಿತಿ ಭಾವಃ । ನ ಕೇವಲಂ ಬೃಹ-ತ್ಸಂಹಿತಾಯಾಂ, ಕಿಂತು –

'ಶ್ರೋತ್ರಂ ಚಕ್ಷುಃ ಸ್ಪರ್ಶನಂ ರಸನಂ ಘ್ರಾಣಮೇವ ಚ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ - (ಭ.ಗೀ.೧೫.೯)

ಇತಿ **ಗೀತಾಸ್ವಪೀತಿ** ಚಾರ್ಥಃ।

ವಿಷ್ಣುವಿನಲ್ಲಿ ಎರಡು ರೂಪಗಳ ವಿವಕ್ಷೆಯಿಂದ ದ್ವಿವಚನಪ್ರತ್ಯಯದ ಅರ್ಥವಾದ ದ್ವಿತ್ವಸಂಖ್ಯೆಯು ಯುಕ್ತವಾಗುವುದಾದರೂ, 'ಪಿಬಂತೌ' ಎಂಬಲ್ಲಿರುವ ಪಿಬತ್ ಎಂಬ ಪ್ರಾತಿಪದಿಕಭಾಗದ ಅರ್ಥವಾದ ಕರ್ಮಫಲಭೋಕ್ತೃತ್ವವು ಯುಕ್ತವಾಗುವುದಿಲ್ಲ-ವಾದ್ದರಿಂದ **ಋತಂ** ಎಂಬ ವಾಕ್ಯದಿಂದ ವಿಷ್ಣುವು ಪ್ರತಿಪಾದ್ಯನೆಂದು ಹೇಳುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಆತ್ಮಾ ಎಂಬ ವಾಕ್ಯವು ಹೊರಟಿದೆ. ಏಕ ಏವ ಹರಿಃ - ಒಬ್ಬನೇ ಆಗಿರುವ ಶ್ರೀಹರಿಯು ದೇಹ ಮತ್ತು ಜೀವ ಎಂಬ ಎರಡು ಉಪಾಧಿ ಗಳ ಭೇದದಿಂದಾಗಿ, ಆತ್ಮಾ-ಅಂತರಾತ್ಮಾ ಎಂಬ ಎರಡು ರೂಪಗಳಿಂದ, ದ್ವಿಧಾ ಸ್ಥಿತಃ -ಎರಡಾಗಿ ಇದ್ದು, ಹೃದಯೇ ನಿವಿಷ್ಟಃ - ದೇಹ ಮತ್ತು ಜೀವರ ಹೃದಯವನ್ನು ಪ್ರವೇಶಿಸಿರುವನು. ಅಥವಾ ತತ್ತ್ವಪ್ರಕಾಶಿಕಾ ರೀತ್ಯಾ ಉಪಾಧಿಭೇದವಿವಕ್ಷೆಯನ್ನು ಮಾಡದೇ ಎರಡು ರೂಪಗಳಿಂದ ದೇಹವನ್ನು ಪ್ರವೇಶಿಸಿ, ಕರ್ಮಜಂ ರಸಂ - ಕರ್ಮದಿಂದುಂಟಾದ ಫಲವನ್ನು, ನಿತ್ಯಂ - ನಿಯಮದಿಂದ, ಪಿಬತಿ - ಭುಜಿಸುವನು ಎಂದು ಅರ್ಥ. 'ಏಕ ಏವ ದ್ವಿಧಾ ಸ್ಮೃತಃ' ಎಂದು ಬೃಹತ್ಸಂಹಿತಾ ಪಾಠವಿದ್ದ ಪಕ್ಷದಲ್ಲಿ ಸ್ಮೃತಃ ಎಂದರೆ ಹೇಳಲ್ಪಟ್ಟಿರುವನು ಎಂದು ಅರ್ಥ. ಇಲ್ಲಿ ರಸಶಬ್ದದಿಂದ ಜೀವನ ಭೋಗಕ್ಕೆ ವಿಷಯವಾಗದ ಗುಣವನ್ನು ಮಾತ್ರ ಈಶ್ವರನು ಭುಜಿಸುವನು ಹೊರತು, ಜೀವಭೋಗ್ಯವಾದ ವಸ್ತುವನ್ನು ಈಶ್ವರನು ಭುಜಿಸುವುದಿಲ್ಲ ಎಂಬ ಪ್ರಮೇಯವು ಸೂಚಿತವಾಗುವುದು. ಬೃಹತ್ಸಂಹಿತಾಯಾಂ ಎಂಬ ಪದಕ್ಕೆ, ಹಿಂದಿನ ಭಾಷ್ಯವಾಕ್ಯ-

ದಿಂದ ಅನುವೃತ್ತಿಯನ್ನು ಪಡೆಯುವ ತದ್ದರ್ಶನಾತ್ ಎಂಬ ವಾಕ್ಯದಿಂದ ಅನ್ವಯವಾಗುವುದು. 'ಕರ್ಮಫಲಭೋಗವು ಈಶ್ವರನಿಗೆ ಇರುವುದೆಂದು ಹೇಳಲ್ಪಟ್ಟಿರುವುದರಿಂದ' ಎಂದು ಆ ವಾಕ್ಯದ ಅರ್ಥ. ತಥಾಚ – ಕರ್ಮಫಲಭೋಕ್ತೃತ್ವವು ಪರಮಾತ್ಮನಿಗೆ ಅನುಪಪನ್ನವಲ್ಲ ಎಂದು ಭಾವ. ಬೃಹತ್ಸಂಹಿತೆಯಲ್ಲಿ ಮಾತ್ರವಲ್ಲ ಕಿಂತು –

'ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥

ಎಂಬ ಗೀತಾವಾಕ್ಯದಲ್ಲೂ 'ಶ್ರೋತ್ರ , ಚಕ್ಷುಸ್ಸು, ಸ್ಪರ್ಶನ, ರಸನ, ಘ್ರಾಣ ಮತ್ತು ಮನಸ್ಸು ಎಂಬ ಇಂದ್ರಿಯಗಳಲ್ಲಿ ಅಧಿಷ್ಠಿತನಾಗಿ ಭಗವಂತನು ವಿಷಯಗಳನ್ನು ಭುಜಿಸುವನು ಎಂಬುದಾಗಿ ಈಶ್ವರನಿಗೆ ಕರ್ಮಫಲಭೋಕ್ತೃತ್ವವನ್ನು ಹೇಳಲಾಗಿದೆ ಎಂದು ಇತಿ ಚ ಎಂಬಲ್ಲಿರುವ ಚಕಾರದ ಅರ್ಥವಾಗಿದೆ.

**ಭಾ– 'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ।**
**ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾ ನ ಜ್ಞಾಯತೇ ಕ್ವಚಿತ್' ॥**
**–ಇತಿ ಪಾದ್ಮೇ ॥**

'ಎಲ್ಲರ ಶರೀರದಲ್ಲಿರುವ ಪ್ರಾಣನಲ್ಲಿ ಅಂತರ್ಯಾಮಿಯಾಗಿರುವ ಹರಿಯು ನಿಯಮೇನ ಶುಭಕರ್ಮಫಲವನ್ನೇ ಭುಜಿಸುವನು ಹೊರತು ಅಶುಭಕರ್ಮಫಲವನ್ನು ಎಂದೂ ಭುಜಿಸುವುದಿಲ್ಲ. ಪೂರ್ಣಾನಂದಸ್ವರೂಪನಾದ ಈ ವಿಷ್ಣುವಿನ ಮಹಿಮೆಯು ಯಾವ ದೇಶಕಾಲಗಳಲ್ಲೂ ಯಾರಿಂದಲೂ ಸಂಪೂರ್ಣವಾಗಿ ತಿಳಿಯಲಾಗದು' ಎಂದು ಪಾದ್ಮಪುರಾಣದಲ್ಲಿ ಹೇಳಿದೆ.

(ಭಾ.ದೀ.) ನನು ಕಿಮೀಶ್ವರೋ ದುಃಖಂ ಪಾಪಕರ್ಮಫಲಂ ಭುಂಕ್ತೇ ಪುಣ್ಯಜಂ ಸುಖಂ ವಾ? ನಾದ್ಯದ್ವಿತೀಯೌ । ಪೂರ್ಣಾನಂದತ್ವಾತ್ ಇತ್ಯತ ಆಹ – **ಶುಭಮಿತಿ ॥** 'ಅಸೌ' ಸರ್ವಶರೀರಗತಪ್ರಾಣೇ ಸ್ಥಿತೋ 'ಹರಿಃ' ಯಜ್ಞೇ ಹವಿಃ ಸ್ವೀಕರ್ತಾ ಪಾಪಹರ್ತಾ ಭಗವಾನ್ 'ನಿತ್ಯಂ' ನಿಯಮೇನ ಶುಭಕರ್ಮಫಲಮೇವ 'ಪಿಬತಿ' ಭುಂಕ್ತೇ । ಸ

ಹರಿರಶುಭಕರ್ಮಫಲಂ 'ನ ಪಿಬೇತ್' ನ ಭುಂಕ್ತೇ ಇತ್ಯರ್ಥಃ । 'ಪುಣ್ಯಮೇವಾಮುಂ ಗಚ್ಛತಿ' (ಬೃ.೩-೫-೨೦) 'ಪರಮೇ ಪರಾರ್ಧೇ' (ಕಠ.೩-೧) ಇತಿ ಶ್ರುತೇಃ । 'ಪಿಬತಿ' ಇತಿ ಋತಪಾನಕರ್ತರಿ ಅದ್ವಿತೀಯತ್ವಮಭ್ಯುಪೈತಿ । ಅನೇನಾರ್ಥೇನ ದ್ವಿತೀಯಪಕ್ಷಮಂಗೀಕೃತ್ಯ ಆದ್ಯಪಕ್ಷೋಽನಭ್ಯುಪಗಮೇನ ಪರಿಹೃತಃ।

ಪೂರ್ಣಾನಂದಸ್ಯ ಸುಖಭೋಗಾಯೋಗಃ, ಇತಿ ದ್ವಿತೀಯಂ ದೂಷಣಂ ಪರಿಹರತಿ– **ಪೂರ್ಣಾನಂದಮಯಸ್ಯೇತಿ** ॥ ತಾದಾತ್ಮ್ಯಾರ್ಥೇ ಮಯಟ್ । 'ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ ತ್ರಿಧಾ' ಇತಿ **ಗೀತಾಭಾಷ್ಯೋಕ್ತೇಃ** । ತಥಾ ಚ ಪೂರ್ಣಾನಂದರೂಪಸ್ಯಾಸ್ಯ ವಿಷ್ಣೋಃ 'ಚೇಷ್ಟಾ' ಐಶ್ವರ್ಯಂ ಕ್ವಚಿತ್ಕಾಲೇ ದೇಶೇ ಕೇನಾಪಿ ಸಾಕಲ್ಯೇನ 'ನ ಜ್ಞಾಯತೇ' ನ ಚಿಂತ್ಯತ ಇತ್ಯರ್ಥಃ । ತಥಾಚ – ಅಚಿಂತ್ಯೈಶ್ವರ್ಯಬಲೇನ ಪೂರ್ಣಾನಂದಸ್ಯಾಪಿ ಸುಖಭೋಗೋ ಯುಕ್ತ ಇತಿ ಭಾವಃ।

ಯದ್ವಾ– ವಿಷ್ಣೋರ್ಭೋಕ್ತೃತ್ವಾಭ್ಯುಪಗಮೇ 'ಅನಶ್ನನ್ನನ್ಯಃ' (ಮು.- ೩-೧-೧) ಇತಿ ಶ್ರುತಿವಿರೋಧ ಇತ್ಯತ ಆಹ – **ಶುಭಮಿತಿ** ॥ ಪರಾಧೀನಭೋಗಾಭಾವವಿಷಯಮ್ ಅಶುಭಭೋಗಾಭಾವವಿಷಯಮ್ ವಾ ತದ್ವಾಕ್ಯಮ್ ಇತಿ ಭಾವಃ। ನ ಚ –

> ನೀಚೋಚ್ಚತ್ವೈವ ದುಃಖಾದೇರ್ಭೋಗ ಇತ್ಯಭಿಧೀಯತೇ।
> ನಾಸೌ ನೀಚೋಚ್ಚತಾಂ ಯಾತಿ ...

ಇತಿ ವಾಕ್ಯವಿರೋಧಃ, ಸುಖಭೋಗಸ್ಯೋಚ್ಚತಾರೂಪತ್ವಾತ್ ಇತಿ ವಾಚ್ಯಮ್ । ವಿಷ್ಣೌ ಜೀವಸಮವೇತೇ ಭೋಗೇ ಸ್ವೀಕಾರಮಾತ್ರಾಭ್ಯುಪಗಮೇನ ಉಚ್ಚತಾಸಂಪಾದಕವಿಕ್ರಿಯಾವಿಶೇಷಾನಭ್ಯುಪಗಮಾತ್ । ಉಕ್ತಂ ಹಿ **ತತ್ತ್ವಪ್ರದೀಪೇ** – ನ ಚ ಅನಶ್ನನ್ನನ್ಯಃ ಇತಿ ಶ್ರುತಿವಿರೋಧಃ । ನ ಹಿ ಪರಾಧೀನತಯಾ ಭೋಗೋ, ನಾಪಿ ಅಪ್ರಿಯಭೋಗೋ ನ ಚ ತನ್ನಿಮಿತ್ತೋಚ್ಚನೀಚತಾ ವಿಷ್ಣೋಃ, ಕಿಂತು ಜೀವ-

**ಸಮವೇತೇ ಭೋಗೇ ಸ್ವೀಕಾರಮಾತ್ರಮುಚ್ಯತೇ - ಇತಿ । ಯದ್ವಾ, ನೀಚೋಚ್ಚತಾ-ಸಂಪಾದಕೋ ಭೋಗಃ ಸ್ವೀಯತಯಾ ಸಾಕ್ಷಾತ್ಕಾರಃ, ಸ ಚಾಭಿಯಾನಯುತೋ ವಿವಕ್ಷಿತಃ, ನ ಚಾಸಾವೀಶ್ವರೇ ಇತಿ ನ ವಿರೋಧಃ । 'ಪಾದ್ಮೇ' ಇತ್ಯನಂತರಮ್ 'ಉಕ್ತತ್ವಾತ್' ಇತಿ ಶೇಷಃ । ತಥಾಚ – ನ ಶ್ರುತಿಯುಕ್ತಿವಿರೋಧ ಇತಿ ಭಾವಃ ।**

ಈಶ್ವರನು ಪಾಪಕರ್ಮದ ಫಲವಾದ ದುಃಖವನ್ನು ಭುಜಿಸುವನೋ ಅಥವಾ ಪುಣ್ಯದಿಂದ ಉಂಟಾಗುವ ಸುಖವನ್ನೋ? ಅವನು ಪೂರ್ಣಾನಂದನಾದುದರಿಂದ ಎರಡೂ ಅಂಗೀಕಾರಾರ್ಹವಲ್ಲ ಎಂಬ ಶಂಕೆಗೆ ಉತ್ತರವಾಗಿ 'ಶುಭಂ' ಎಂದು ಪ್ರಮಾಣವಾಕ್ಯವನ್ನು ಉದಾಹರಿಸಲಾಗಿದೆ. ಅಸೌ- ಸರ್ವಶರೀರಗಳಲ್ಲಿ ಇರುವ ಪ್ರಾಣನಲ್ಲಿ ನೆಲೆಸಿರುವ, ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವ ಮತ್ತು ಪಾಪಗಳನ್ನು ಪರಿಹರಿಸುವ ಕಾರಣ ಹರಿ ಎಂದು ಕರೆಯಲ್ಪಡುವ ಭಗವಂತನು, ನಿತ್ಯಂ-ನಿಯಮೇನ, ಶುಭಂ ಪಿಬತಿ - ಶುಭಕರ್ಮಗಳ ಫಲವನ್ನೇ ಭುಜಿಸುವನು. ಸಃ ನ **ಅಶುಭಂ ಪಿಬೇತ್** 'ಆ ಹರಿಯು ಅಶುಭಕರ್ಮಫಲವನ್ನು ಭುಜಿಸುವುದಿಲ್ಲ' ಎಂದು ಅರ್ಥ. ಏಕೆಂದರೆ, 'ಪುಣ್ಯಮೇವಾಮುಂ ಗಚ್ಛತಿ' 'ಪರಮೇ ಪರಾರ್ಧೇ' ಎಂಬ ಶ್ರುತಿಗಳಲ್ಲಿ ಹಾಗೆ ಹೇಳಲಾಗಿದೆ. ಪಿಬತಿ ಎಂಬಲ್ಲಿರುವ ಏಕವಚನದಿಂದ ಕರ್ಮಫಲ-ಭೋಕ್ತೃವಾದ ಹರಿಯಲ್ಲಿ ಏಕತ್ವವನ್ನು ಅಂದರೆ ಅದ್ವಿತೀಯತ್ವವನ್ನು ಅಂಗೀಕರಿಸ-ಲಾಗಿದೆ. ಹೀಗೆ ಈ ಪ್ರಮಾಣವನ್ನು ವ್ಯಾಖ್ಯಾನಿಸುವುದರಿಂದ ಹಿಂದೆ ಮಾಡಲಾದ ವಿಕಲ್ಪಗಳಲ್ಲಿ ಎರಡನೆಯ ಪಕ್ಷವನ್ನು ಅಂಗೀಕರಿಸಿ ಮೊದಲನೆಯ ಪಕ್ಷವನ್ನು ಒಪ್ಪದೇ ಪರಿಹರಿಸಲಾಗಿದೆ.

ಪೂರ್ಣಾನಂದಸ್ವರೂಪನಾದ ಕಾರಣ ಪರಮಾತ್ಮನಿಗೆ ಕರ್ಮಫಲವಾದ ಸುಖದ ಭೋಗವು ಇರಲಾರದು ಎಂಬ ಎರಡನೆ ಪಕ್ಷದಲ್ಲಿ ಶಂಕಿಸಲಾದ ದೋಷವನ್ನು **ಪೂರ್ಣಾನಂದಮಯಸ್ಯ** ಎಂಬ ವಾಕ್ಯದಿಂದ ಪರಿಹರಿಸಲಾಗಿದೆ. ಇಲ್ಲಿ ಮಯಟ್-ಪ್ರತ್ಯಯವು 'ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ ತ್ರಿಧಾ' 'ತಾದಾತ್ಮ್ಯ, ವಿಕಾರ, ಪ್ರಾಚುರ್ಯ ಎಂಬ ಮೂರು ಅರ್ಥಗಳು ಮಯಟ್ ಪ್ರತ್ಯಯಕ್ಕೆ ಇರುವವು' ಎಂದು ಗೀತಾಭಾಷ್ಯದ ಉಕ್ತಿಯನ್ನು ಅನುಸರಿಸಿ ತಾದಾತ್ಮ್ಯ

ಎಂಬ ಅರ್ಥವನ್ನು ಹೇಳುವುದು. ತಥಾಚ – ಪೂರ್ಣಾನಂದಮಯಸ್ಯ ಅಸ್ಯ - ಪೂರ್ಣಾನಂದಸ್ವರೂಪನಾಗಿರುವ ಈ ವಿಷ್ಣುವಿನ, ಚೇಷ್ಟಾ - ಐಶ್ವರ್ಯವು, ಕ್ವಚಿತ್ ಯಾವುದೇ ದೇಶ ಅಥವಾ ಕಾಲದಲ್ಲಿ ಯಾರಿಂದಲೂ ಸಾಕಲ್ಯೇನ, 'ನ ಜ್ಞಾಯತೇ' - ತಿಳಿಯಲಾಗುವುದಿಲ್ಲ ಎಂದು ಅರ್ಥ. ತಥಾಚ – ಭಗವಂತನು ಪೂರ್ಣಾನಂದನಾಗಿದ್ದರೂ ಅವನಲ್ಲಿರುವ ಅಚಿಂತ್ಯವಾದ ಐಶ್ವರ್ಯದ ಬಲದಿಂದಾಗಿ ಅವನಿಗೆ ಸುಖಭೋಗವು ಯುಕ್ತವಾಗಿದೆ ಎಂದು ಭಾವ.

ಅಥವಾ - ವಿಷ್ಣುವಿಗೆ ಕರ್ಮಫಲಭೋಗವನ್ನು ಅಂಗೀಕರಿಸಿದರೆ, ಅನಶ್ನನ್ನನ್ಯಃ - (ಈ ದೇಹದಲ್ಲಿ ಇರುವ, ಜೀವನಿಗಿಂತ ಭಿನ್ನನಾದ ಪರಮಾತ್ಮನು ಯಾವುದೇ ಕರ್ಮಫಲವನ್ನು ಭುಜಿಸದೇ ಇರುವನು) ಎಂಬ ಶ್ರುತಿಯ ವಿರೋಧ ಬರುವುದು ಎಂಬ ಶಂಕೆಗೆ ಉತ್ತರವಾಗಿ ಶುಭಂ ಎಂಬ ವಾಕ್ಯವು ಹೊರಟಿದೆ. ಅನಶ್ನನ್ನನ್ಯಃ ಎಂಬ ಎಂಬ ಶ್ರುತಿಯು ಪರಾಧೀನವಾದ ಅಥವಾ ಅಶುಭಕರ್ಮಫಲದ ಭೋಗವಿಲ್ಲವೆಂದು ಹೇಳುವುದೆಂದು ಭಾವ. ಹೀಗೆ ಹೇಳಿದ ಪಕ್ಷದಲ್ಲಿ ಸುಖಭೋಗವು ಉಚ್ಯತಾ ಸ್ವರೂಪವಾಗಿರುವುದರಿಂದ–

ನೀಚೋಚ್ಚತ್ವೈವ ದುಃಖಾದೇರ್ಭೋಗ ಇತ್ಯಭಿಧೀಯತೇ ।
ನಾಸೌ ನೀಚೋಚ್ಚತಾಂ ಯಾತಿ ...

'ದುಃಖಸುಖಗಳ ಭೋಗವೆಂದರೆ ಭೋಕ್ತೃವು ಹೊಂದುವ ನೀಚತ್ವ ಉಚ್ಚತ್ವಗಳೇ ಆಗಿವೆ. ಭಗವಂತನು ನೀಚತ್ವನ್ನಾಗಲೀ, ಉಚ್ಚತ್ವವನ್ನಾಗಲೀ ಎಂದೂ ಹೊಂದುವುದಿಲ್ಲ' ಎಂಬ ವಾಕ್ಯವಿರೋಧ ಬರುವುದು ಎಂದರೆ ಹಾಗೆ ಹೇಳುವುದು ಸರಿಯಲ್ಲ. ಏಕೆಂದರೆ, ವಿಷ್ಣುವು, ಜೀವನು ಅನುಭವಿಸುವ ಭೋಗವನ್ನು ಕೇವಲ ಸ್ವೀಕಾರ ಮಾಡುವನು ಎಂದಿಷ್ಟು ಮಾತ್ರ ಒಪ್ಪಿರುವುದರಿಂದ ಭಗವಂತನಿಗೆ ಉಚ್ಚತ್ವಕ್ಕೆ ಕಾರಣವಾದ ವಿಕಾರವಿಶೇಷವನ್ನು ಅಂಗೀಕರಿಸಿರುವುದಿಲ್ಲ. ತತ್ವಪ್ರದೀಪದಲ್ಲಿ ಹೀಗೆ ಹೇಳಲಾಗಿದೆ– ''ನ ಚ ಅನಶ್ನನ್ನನ್ಯಃ ಇತಿ ಶ್ರುತಿವಿರೋಧಃ । ನ ಹಿ ಪರಾಧೀನತಯಾ ಭೋಗೋ, ನಾಪಿ ಅಪ್ರಿಯಭೋಗೋ ನ ಚ ತನ್ನಿಮಿತ್ತೋಚ್ಚನೀಚತಾ ವಿಷ್ಣೋಃ, ಕಿಂತು ಜೀವಸಮವೇತೇ ಭೋಗೇ ಸ್ವೀಕಾರಮಾತ್ರಮುಚ್ಯತೇ'' - 'ವಿಷ್ಣುವಿಗೆ ಕರ್ಮಫಲ-

ಭೋಕ್ತೃತ್ವವನ್ನು ಹೇಳಿದಾಗ ಅನಶ್ನನ್ನನ್ಯಃ ಎಂಬ ಶ್ರುತಿವಿರೋಧವನ್ನು ಶಂಕಿಸಲಾಗದು. ಏಕೆಂದರೆ, ವಿಷ್ಣುವಿಗೆ ಪರಾಧೀನವಾದ ಭೋಗವಾಗಲೀ, ಅಶುಭಕರ್ಮಫಲವಾದ ಅಪ್ರಿಯಭೋಗವಾಗಲೀ, ಅಂತಹ ಭೋಗಗಳಿಂದ ಉಂಟಾಗುವ ಉಚ್ಚತ್ವ ನೀಚತ್ವ-ಗಳಾಗಲೀ ಇಲ್ಲ. ಕಿಂತು, ಜೀವನಿಗೆ ಉಂಟಾಗುವ ಕರ್ಮಫಲಭೋಗವನ್ನು ಅವನು ಕೇವಲ ಸ್ವೀಕರಿಸುವನು ಎಂದು ಮಾತ್ರ ಹೇಳಲಾಗಿದೆ' – ಎಂದು. ಅಥವಾ ನೀಚೋ-ಚ್ಚತಾಗಳನ್ನು ಉಂಟುಮಾಡುವ ಭೋಗವೆಂದರೆ ಆ ಸುಖದುಃಖಗಳನ್ನು ತನ್ನದೇ ಎಂದು ಅನುಭವಿಸುವುದು. ಇಂತಹ ಅನುಭವವು ಅಭಿಮಾನದಿಂದ ಸಹಿತವಾಗಿ-ರುವುದು ಎಂದು ವಿವಕ್ಷಿತವಾಗಿದೆ. ಇಂತಹ ಭೋಗವು ಈಶ್ವರನಲ್ಲಿ ಇಲ್ಲವಾದ್ದರಿಂದ ವಿರೋಧವಿಲ್ಲ. ಭಾಷ್ಯದಲ್ಲಿ 'ಪಾದ್ಮೇ' ಎಂಬ ಪದದ ನಂತರ 'ಉಕ್ತತ್ವಾತ್' ಎಂಬ ಪದವು ಶೇಷವಾಗಿದೆ. ಆದ್ದರಿಂದ ಭಗವಂತನಿಗೆ ಕರ್ಮಫಲಭೋಕ್ತೃತ್ವವನ್ನು ಹೇಳಿದ ಪಕ್ಷದಲ್ಲಿ ಶ್ರುತಿಗಳಿಂದಾಗಲೀ, ಯುಕ್ತಿಗಳಿಂದಾಗಲೀ ವಿರೋಧವಿಲ್ಲವೆಂದು ಭಾವ.

**ಭಾ– 'ಯೋ ವೇದ ನಿಹಿತಂ ಗುಹಾಯಾಮ್' (ತೈ. ೨-೧) ಇತ್ಯಾದಿನಾ ಪ್ರಸಿದ್ಧಂ ಹಿಶಬ್ದೇನ ದರ್ಶಯತಿ ॥ ೧೧ ॥**

'ಯೋ ವೇದ ನಿಹಿತಂ ಗುಹಾಯಾಮ್' ಇತ್ಯಾದಿ ಶ್ರುತಿಯಿಂದ ವಿಷ್ಣುವಿನಲ್ಲೇ ಪ್ರಸಿದ್ಧವಾಗಿರುವ ಗುಹಾನಿಹಿತತ್ವವು ಇಲ್ಲಿ ಗ್ರಾಹ್ಯ-ವೆಂದು ಸೂತ್ರಕಾರರು 'ಹಿ'ಶಬ್ದದಿಂದ ತಿಳಿಸುತ್ತಿದ್ದಾರೆ.

(ಭಾ.ದೀ.) ನನು ಕಥಂ ಗುಹಾನಿವಿಷ್ಟತ್ವಲಿಂಗಾತ್ ಪಿಬತೋ ವಿಷ್ಣುತ್ವನಿಶ್ಚಯಃ, ತಸ್ಯ ಜೀವೇಽಪಿ ಯೋಗಾತ್ ಇತ್ಯತ ಆಹ – **ಯೋ ವೇದೇತಿ** ॥ 'ವಿಷ್ಣೋರೇವ ಗುಹಾನಿಹಿತತ್ವಮತ್ರ ಗ್ರಾಹ್ಯಮ್' ಇತಿ ಚೋಪಸ್ಕರ್ತವ್ಯಮ್ । ಆದಿಶಬ್ದೇನ 'ಆತ್ಮಾಽ-ಂತರಾತ್ಮಾ' ಇತಿ, 'ಶ್ರೋತ್ರಂ ಚಕ್ಷುಃ' ಇತಿ, 'ಅಹಂ ವೈಶ್ವಾನರೋ ಭೂತ್ವಾ' ಇತ್ಯಾದಿ-ಸ್ಮೃತಿರ್ಗೃಹ್ಯತೇ । ತಥಾಚ– ಇತ್ಯಾದಿನಾ ವಿಷ್ಣೋರೇವ ಪ್ರಸಿದ್ಧಂ ಗುಹಾನಿಹಿತತ್ವಮತ್ರ ಗ್ರಾಹ್ಯಮಿತಿ ಇಮಮರ್ಥಂ ಸೂತ್ರಕಾರೋ ಹಿ ಶಬ್ದೇನ ದರ್ಶಯತೀತ್ಯರ್ಥಃ ।

ತಥಾಚ – ಹೃದಯಗುಹಾಸ್ಥತ್ವಮಾತ್ರಸ್ಯ ಜೀವೇ ಸಂಭವೇಽಪಿ ನ ತದಿಹ

ಹೇತುತ್ವೇನ ಗೃಹ್ಯತೇ, ಕಿಂತು - ಶ್ರುತ್ಯಾದಿಪ್ರಸಿದ್ಧಂ ಮೋಕ್ಷಜನಕಜ್ಞಾನಪ್ರಕಾರೀಭೂತಂ ಪ್ರಾಧಾನ್ಯೇನ ಗುಹಾನಿಹಿತತ್ವಮೇವ । ತಚ್ಚ ಜೀವೇ ನಿರವಕಾಶಮಿತಿ ಭಾವಃ । ಸೂತ್ರೇ ಸಮನ್ವಯಸೂತ್ರಾತ್ ತುಶಬ್ದಮಾತ್ರಮನುವರ್ತತೇ । ಆತ್ಮಾನೌ ಇತ್ಯಾವರ್ತತೇ । ತಥಾಚ 'ಆತ್ಮಾನೌ' ಆದೇಯಂ ಸುಖಂ ಮಾತಿ ಅನುಭವತೀತಿ ವ್ಯುತ್ಪತ್ತ್ಯಾ ಆತ್ಮ-ಶಬ್ದೋಕ್ತಶುಭಕರ್ಮಫಲಭೋಕ್ತಾರೌ 'ಆತ್ಮಾನಾವೇವ' ಆತ್ಮಾಂತರಾತ್ಮಾಖ್ಯೇ ವಿಷ್ಣು-ರೂಪೇ ಏವ, ನ ತು ಜೀವೇಶ್ವರೌ । ಕುತಃ? ಹಿ ಯಸ್ಮಾತ್ ತೌ ಹೃದಯಗುಹಾಂ ಪ್ರವಿಷ್ಟೌ ತಸ್ಮಾತ್ । ನ ಹಿ ಜೀವೇಽಪಿ ಗುಹಾನಿವಿಷ್ಟತ್ವಲಿಂಗಂ ಸಂಭವತೀತಿ ವಾಚ್ಯಮ್ । ತಸ್ಯ ಶ್ರುತ್ಯಾದ್ಯಪ್ರಸಿದ್ಧತ್ವಾತ್ । ತತ್ರ ಪ್ರಸಿದ್ಧಸ್ಯೈವ ಗ್ರಾಹ್ಯತ್ವಾತ್ । ವಿಷ್ಣೋಸ್ತು 'ಯೋ ವೇದ' ಇತಿ ಶ್ರುತ್ಯಾದಿಪ್ರಸಿದ್ಧತ್ವಾದಿತಿ ಹಿಶಬ್ದಾರ್ಥಃ।

ನನು ವಿಷ್ಣೌ 'ಪಿಬಂತೌ' ಇತಿ ದ್ವಿವಚನಾನುಪಪತ್ತಿಃ । ನ ಚ ರೂಪದ್ವಯಾಭಿ-ಪ್ರಾಯೇಣ ತದುಪಪತ್ತಿರಿತಿ ವಾಚ್ಯಮ್ । ವಿಷ್ಣೋಃ ಸರ್ವಶರೀರೇಷು ಏಕರೂಪೇಣ ಪ್ರವೇಶೇನ ದ್ವಿರೂಪೇಣ ಪ್ರವೇಶಸ್ಯಾಸಿದ್ಧತ್ವಾತ್ ಇತ್ಯಾಶಂಕ್ಯಾಽಹ- **ತದ್ದರ್ಶನಾದಿತಿ ॥** ತಸ್ಯ ಹರೇರ್ದ್ವಿರೂಪತಯಾ ಶರೀರಹೃದಯಗುಹಾಸ್ಥತ್ವಸ್ಯ ಲಿಂಗಸ್ಯ ದರ್ಶನಾತ್ 'ಘರ್ಮಾ' ಇತಿ ಶ್ರುತ್ಯುಕ್ತತ್ವಾದಿತಿ ಸೂತ್ರಾರ್ಥಃ।

[೧]ಅತ್ರ 'ತತ್ತು' ಇತ್ಯಸ್ಯಾನುವೃತ್ತ್ಯಾ ಶ್ರೌತಪದಾನುವೃತ್ತ್ಯಾ ಚ ಆನಂದಮಯಃ ತದ್

---

[೧] ಇಲ್ಲಿ ಮುದ್ರಿತಪಾಠದಲ್ಲಿ ದೋಷಗಳಿದ್ದು ಸರಿಯಾದ ಪಾಠವನ್ನು ಊಹಿಸಿ ಈ ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ. ಊಹಿಸಲಾದ ಈ ಪಾಠದ ಕನ್ನಡ ಅನುವಾದವನ್ನೇ ಅನುವಾದಭಾಗದಲ್ಲಿ ಕೊಡಲಾಗಿದೆ.

ಅತ್ರ ತತ್ತು ಇತ್ಯಸ್ಯಾನುವೃತ್ತ್ಯಾ ಶ್ರೌತಪದಾನುವೃತ್ತ್ಯಾ ಚ 'ಆನಂದಮಯಃ ತದ್ ಬ್ರಹ್ಮ' ಇತ್ಯಾದಿವತ್ ಇಹಾಪಿ ಪ್ರತಿಜ್ಞಾಸಿದ್ಧಾವಪಿ ಆತ್ಮಾನಾವಿತ್ಯುಕ್ತಿಃ ಶ್ರೌತ-ದ್ವಿವಚನಸ್ಯ ಗತಿಂ, ಸ್ಮೃತಿಸಮಾಖ್ಯಾಂ, ಶ್ರೌತಪದಾನುವೃತ್ತಿಂ ವಿನಾ 'ಆದೇಯಂ ಮಾತಿ' ಇತಿ ವ್ಯುತ್ಪತ್ತ್ಯಾ ಶುಭಕರ್ಮಫಲಭೋಕ್ತೃತ್ವರೂಪಲಿಂಗಂ ಚ ವಕ್ತುಮ್ ।

ಬ್ರಹ್ಮೇತ್ಯಾದಿವತ್ ಇಹಾಪಿ ಪ್ರತಿಜ್ಞಾಸಿದ್ಧೇಃ 'ಆತ್ಮಾನೌ' ಇತ್ಯುಕ್ತಿಃ । ಶ್ರೌತದ್ವಿವಚನಸ್ಯ ಗತಿಮಾಹ – **ಆತ್ಮೇತಿ** ॥ ಸ್ಮೃತಿಸಮಾಖ್ಯಾಂ ಶ್ರೌತಪದಾನುವೃತ್ತಿಂ ವಿನಾ ಆದೇಯಂ ಮಾತೀತಿ ವ್ಯುತ್ಪತ್ತ್ಯಾ ಶುಭಕರ್ಮಫಲಭೋಕ್ತೃತ್ವರೂಪಲಿಂಗಂ ಚ ವಕ್ತುಮ್ । ಉಕ್ತಂ ಹಿ **ಚಂದ್ರಿಕಾಯಾಮ್**– ಆದೇಯಂ ಮಾತೀತಿ ವ್ಯುತ್ಪತ್ತ್ಯಾ ಆತ್ಮಶಬ್ದೋಕ್ತಂ ಶುಭ-ಭೋಕ್ತೃತ್ವಂ ಮೂಲಯುಕ್ತಿಃ - ಇತಿ । ನ ಚೈವಮೃತಪಾತೃತ್ವಸಮಾನಾಧಿಕರಣಗುಹಾ-ಪ್ರವಿಷ್ಟತ್ವೋಕ್ತಿದ್ವಾರಾ ತದುಕ್ತಿರಿತಿ ತದ್ವಾಕ್ಯಾಂತರವಿರೋಧಃ ಶಂಕ್ಯಃ । ತಸ್ಯ ಸೂತ್ರೇಽ-ವಶ್ಯವಕ್ತವ್ಯಗುಹಾಪ್ರವಿಷ್ಟತ್ವಲಿಂಗಾರ್ಪಕದ್ವಿವಚನಾಂತಪದಾನ್ವಯಯೋಗ್ಯತಾದೃಶ-ವಿಶೇಷ್ಯೋಕ್ತಿಮುಖೇನ ಇತ್ಯರ್ಥಾಭ್ಯುಪಗಮಾತ್ । ತಥಾ – ಯದ್ಯಪಿ ಸಮನ್ವೇತ-ವ್ಯಮೃತಪಾತೃತ್ವಂ ಸಾಕ್ಷಾದೇವ ವಕ್ತವ್ಯಮಿತಿ ತದ್ವಾಕ್ಯಾಂತರಸ್ಯಾಪ್ಯಾದೇಯಂ ಮಾತೀತಿ ವ್ಯುತ್ಪತ್ತಿಮಂತರೇಣ ಅಂತರ್ಯಾಮೀತಿವದ್ 'ಋತಂ ಪಿಬಂತೌ' ಇತಿ ಸ್ಪಷ್ಟಶಬ್ದೇನೈವ ವಕ್ತವ್ಯಮ್ । ನ ತ್ವಾತ್ಮಶಬ್ದೇನ ಇತ್ಯರ್ಥಾಶ್ರಯಣಾತ್ ನ ವಿರೋಧಃ । ಅನ್ಯಥೋ-ಕ್ತವಾಕ್ಯವಿರೋಧಾಪಾತಾತ್ । ಏವಂ ಚಾತ್ರ ಕೇಷಾಂಚಿದನ್ಯಥಾ **ಚಂದ್ರಿಕಾ**ಭಿ-ಪ್ರಾಯಕಥನಮ್, ತಥಾ ತೇಷಾಮೇವ ಸಮನ್ವಯಸೂತ್ರಾತ್ 'ತತ್' ಇತ್ಯತ್ರಾ-ಪ್ಯನುವರ್ತತ ಇತಿ ಚಂದ್ರಿಕಾವಿರುದ್ಧೋಕ್ತಿರಪಿ ಚಿಂತ್ಯಾ ।

ಸೌತ್ರದ್ವಿವಚನೋಪಪತ್ತ್ಯರ್ಥಮ್ ಉದ್ದೇಶ್ಯಸಮರ್ಪಣಾರ್ಥಂ ಚಾವಶ್ಯವಕ್ತ-ವ್ಯಾತ್ಮಾನಾವಿತಿ ಪದೇನೈವ ವಿಧೇಯಸ್ಯಾಪಿ ಬೋಧನಸಂಭವೇನ ಇತರವ್ಯಾವರ್ತಕಾ-ವಧಾರಣಾರ್ಥಕತುಶಬ್ದಮಾತ್ರಸ್ಯೈವ ವೇಕ್ಷತಿ ಸೂತ್ರ ಇವಾತ್ರಾನುವೃತ್ತ್ಯೌಚಿತ್ಯಾತ್ । ನ ಚ ತದಿತ್ಯನುಕ್ತೌ ತುಶಬ್ದಸ್ಯಾನ್ವಯಃ ನ ಪ್ರತ್ಯೇತುಂ ಶಕ್ಯತೇ ಇತಿ ಸಮನ್ವಯಾಧಿಕರ-ಣೀಯ**ಸುಧಾವಿರೋಧಃ** । ಉದ್ದೇಶ್ಯವಿಧೇಯಪದಾಂತರಾಭಾವ ಇತ್ಯಾಶಯಾತ್ ।

ಹೃದಯಗುಹಾನಿಹಿತತ್ವವೆಂಬ ಲಿಂಗದ ಆಧಾರದಿಂದ ಕರ್ಮಫಲಭೋಕ್ತೃವು ವಿಷ್ಣುವೆಂದು ನಿಶ್ಚಯಿಸುವುದು ಹೇಗೆ? ಏಕೆಂದರೆ ಆ ಲಿಂಗವು ಜೀವನಲ್ಲೂ ಸಂಭವಿ-ಸುವುದು ಎಂಬ ಶಂಕೆಗೆ ಉತ್ತರವಾಗಿ 'ಯೋ ವೇದ' ಎಂದು ಹೇಳುತ್ತಿದ್ದಾರೆ. 'ವಿಷ್ಣೋರೇವ ಗುಹಾನಿಹಿತತ್ವಮ್ ಅತ್ರ ಗ್ರಾಹ್ಯಮ್' - 'ಋತಂ ಪಿಬಂತೌ ಎಂಬ

ಶ್ರುತಿಯಲ್ಲಿ ಹೇಳಿರುವ ಗುಹಾನಿಹಿತತ್ವವು ವಿಷ್ಣುವಿಗೇ ಸಂಬಂಧಿಸಿರುವುದೆಂದು ಇಲ್ಲಿ ಗ್ರಹಿಸಬೇಕು'– ಈ ಪದಗಳನ್ನು ಇಲ್ಲಿ ಸೇರಿಸಬೇಕು. ಇತ್ಯಾದಿನಾ ಎಂಬಲ್ಲಿರುವ ಆದಿ-ಶಬ್ದದಿಂದ 'ಆತ್ಮಾಂತರಾತ್ಮಾ', 'ಶ್ರೋತ್ರಂ ಚಕ್ಷುಃ', 'ಅಹಂ ವೈಶ್ವಾನರೋ ಭೂತ್ವಾ' ಇತ್ಯಾದಿ ಸ್ಮೃತಿಗಳು ಗ್ರಹಿಸಲ್ಪಡುತ್ತವೆ. ತಥಾಚ - 'ಇತ್ಯಾದಿನಾ' ಎಂದರೆ ಇತ್ಯಾದಿ-ವಚನಗಳಿಂದ ವಿಷ್ಣುವಿಗೇ ಪ್ರಸಿದ್ಧವಾಗಿರುವ ಗುಹಾನಿಹಿತತ್ವವು ಈ ಶ್ರುತಿಯಲ್ಲಿ ಉಕ್ತವಾಗಿದೆ ಎಂದು ಗ್ರಹಿಸತಕ್ಕದ್ದು ಎಂಬ ವಿಷಯವನ್ನು ಸೂತ್ರಕಾರರು ಹಿಶಬ್ದದಿಂದ ತೋರಿಸುತ್ತಿದ್ದಾರೆ ಎಂದು ಅರ್ಥ.

ತಥಾಚ – ಕೇವಲ ಹೃದಯಗುಹೆಯಲ್ಲಿ ಇರುವಿಕೆಯು ಜೀವನಿಗೂ ಇರುವುದಾದರೂ ಅದನ್ನು ಇಲ್ಲಿ ಹೇತುವಾಗಿ ಸ್ವೀಕರಿಸಲಾಗಿಲ್ಲ. ಕಿಂತು, ಶ್ರುತಿಸ್ಮೃತಿಗಳಿಂದ ಪ್ರಸಿದ್ಧವಾದ, ಮೋಕ್ಷಕಾರಣವಾದ ಜ್ಞಾನವು ಗ್ರಹಿಸುವ ಪ್ರಧಾನವಾಗಿ 'ಹೃದಯ-ಗುಹೆಯಲ್ಲಿ ಇರುವಿಕೆಯೇ' ಇಲ್ಲಿ ಹೇತುವಾಗಿ ಗ್ರಹಿಸಲ್ಪಡುವುದು. ಆ ಲಿಂಗಕ್ಕೆ ಜೀವನಲ್ಲಿ ಅವಕಾಶವಿಲ್ಲವೆಂದು ಭಾವ. ಈ ಸೂತ್ರದಲ್ಲಿ 'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ ಕೇವಲ ತುಶಬ್ದವು ಅನುವೃತ್ತಿಯನ್ನು ಹೊಂದುವುದು. ಸೂತ್ರದಲ್ಲಿರುವ 'ಆತ್ಮಾನೌ' ಎಂಬ ಪದವು ಆವೃತ್ತಿಯನ್ನು ಪಡೆಯುವುದು. ತಥಾಚ- ಆತ್ಮಾನೌ - 'ಆದೇಯಂ - ಸ್ವೀಕಾರಾರ್ಹವಾದ, ಸುಖಂ -ಸುಖವನ್ನು, ಮಾತಿ - ಅನುಭವಿಸು-ವವನು' ಎಂಬ ವ್ಯುತ್ಪತ್ತಿಯಿಂದ ಆತ್ಮಶಬ್ದವು ಹೇಳುವ ಶುಭಕರ್ಮಫಲಭೋಕ್ತೃಗಳು 'ಆತ್ಮಾನೌ ಏವ' - ಆತ್ಮಾ, ಅಂತರಾತ್ಮಾ ಎಂಬ ವಿಷ್ಣುರೂಪಗಳೇ ಆಗಿವೆ, ಹೊರತು ಜೀವೇಶ್ವರರಲ್ಲ. ಏಕೆಂದರೆ? ಹಿ – ಯಾವ ಕಾರಣದಿಂದ, ಆ ಎರಡು ರೂಪಗಳು **ಗುಹಾಂ ಪ್ರವಿಷ್ಟೌ** - ಹೃದಯಗುಹೆಯನ್ನು ಪ್ರವೇಶಿಸಿ ಇರುವವೋ ಆದ್ದರಿಂದ. ಜೀವನಲ್ಲೂ ಗುಹಾನಿವಿಷ್ಟತ್ವವೆಂಬ ಲಿಂಗವು ಇರುವುದೆಂದು ಇಲ್ಲಿ ಶಂಕಿಸತಕ್ಕದ್ದಲ್ಲ. ಏಕೆಂದರೆ ಜೀವನಿಗೆ ಆ ಲಿಂಗವಿರುವುದೆಂದು ಶ್ರುತ್ಯಾದಿಪ್ರಸಿದ್ಧಿ ಇರುವುದಿಲ್ಲ. ಪ್ರಸ್ತುತ ಶ್ರುತ್ಯಾದಿಗಳಿಂದ ಪ್ರಸಿದ್ಧವಾದ ಲಿಂಗವೇ ಗ್ರಹಿಸಲ್ಪಡತಕ್ಕದ್ದು. ವಿಷ್ಣುವಿಗಾದರೋ ಹೃದಯಗುಹಾನಿಹಿತತ್ವಲಿಂಗವು 'ಯೋ ವೇದ' ಇವೇ ಮೊದಲಾದ ಶ್ರುತಿಸ್ಮೃತಿಗಳಿಂದ ಪ್ರಸಿದ್ಧವಾಗಿರುವುದು. ಆದ್ದರಿಂದ ವಿಷ್ಣುವಿನ ಹೃದಯಗುಹಾನಿಹಿತತ್ವವೇ ಇಲ್ಲಿ ಗ್ರಾಹ್ಯ-ವೆಂದು 'ಹಿ'ಶಬ್ದದ ಅರ್ಥವಾಗಿದೆ.

'ಕರ್ಮಫಲಭೋಕ್ತೃವು ವಿಷ್ಣುವೇ' ಎಂದು ಇಲ್ಲಿ ವಿವಕ್ಷಿತನಾಗಿರುವನು ಎಂದು ಹೇಳಿದಲ್ಲಿ, 'ಋತಂ ಪಿಬಂತೌ' ಎಂಬಲ್ಲಿರುವ ದ್ವಿವಚನವು ಅನುಪಪನ್ನವಾಗುವುದು. ವಿಷ್ಣುವಿನ ಎರಡು ರೂಪಗಳ ದೃಷ್ಟಿಯಿಂದ ದ್ವಿವಚನ ಯುಕ್ತವಾಗುವುದು ಎಂದು ಹೇಳಲಾಗದು. ಏಕೆಂದರೆ, ವಿಷ್ಣುವು ಎಲ್ಲ ಶರೀರಗಳಲ್ಲೂ ಒಂದೇ ರೂಪದಿಂದ ಪ್ರವೇಶಿಸಿರುವುದರಿಂದ ಎರಡು ರೂಪಗಳಿಂದ ಪ್ರವೇಶಿಸಿರುವನು ಎನ್ನುವುದು ಸಿದ್ಧ-ವಾಗಿಲ್ಲ ಎಂಬ ಶಂಕೆಗೆ ಉತ್ತರವಾಗಿ ''ತದ್ದರ್ಶನಾತ್'' ಎಂದು ಹೇಳುತ್ತಿದ್ದಾರೆ. ತಸ್ಯ- ಆ ಹರಿಗೆ ಎರಡು ರೂಪಗಳಿಂದ ಶರೀರದ ಹೃದಯಗುಹೆಯಲ್ಲಿ ಇರುವಿಕೆಯೆಂಬ ಲಿಂಗವು, ದರ್ಶನಾತ್ - 'ಘರ್ಮಾ' ಎಂಬ ಶ್ರುತಿಯಲ್ಲಿ ಉಕ್ತವಾಗಿದೆಯಾದ್ದರಿಂದ ಎಂದು ಸೂತ್ರದ ಅರ್ಥ.

ಇಲ್ಲಿ 'ತತ್ತು' ಎಂಬ ಪದಗಳ ಅನುವೃತ್ತಿಯಿಂದ ಮತ್ತು ಶ್ರುತಿಯಲ್ಲಿರುವ 'ಋತಂ ಪಿಬಂತೌ' ಎಂಬ ಪದಗಳ ಅನುವೃತ್ತಿಯಿಂದ, 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರದಲ್ಲಿ 'ಆನಂದಮಯಃ ತದ್ ಬ್ರಹ್ಮ' ಇತ್ಯಾದಿ ಪ್ರತಿಜ್ಞೆಯು ಹೇಗೆ ಸಿದ್ಧ-ವಾಗುವುದೋ ಹಾಗೆಯೇ ಇಲ್ಲೂ ಪ್ರತಿಜ್ಞೆಯು ಸಿದ್ಧವಾಗುವುದಾದರೂ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿರುವ ದ್ವಿವಚನದ ಸಮರ್ಥನೆಯನ್ನು ಮಾಡಲು, ಆತ್ಮಾಂತರಾತ್ಮಾ ಎಂಬ ಸ್ಮೃತಿಯ ಸಂವಾದವನ್ನು ಹಾಗೂ ಶ್ರುತಿಯಲ್ಲಿರುವ 'ಋತಂ ಪಿಬಂತೌ' ಎಂಬ ಪದಗಳ ಅನುವೃತ್ತಿಯನ್ನು ಮಾಡಿಕೊಳ್ಳದೇ ಆದೇಯಂ ಮಾತಿ - ಉಪಾದೇಯವಾದ ಸುಖವನ್ನು ಅನುಭವಿಸುವವನು ಎಂಬ ವ್ಯುತ್ಪತ್ತಿಯಿಂದ ಶುಭ-ಕರ್ಮಫಲಭೋಕ್ತೃತ್ವವೆಂಬ ಲಿಂಗವನ್ನು ಆತ್ಮಶಬ್ದದಿಂದ ಇಲ್ಲಿ ಹೇಳಲು ಸೂತ್ರದಲ್ಲಿ 'ಆತ್ಮಾನೌ' ಎಂಬ ಪದವನ್ನು ಸೂತ್ರಕಾರರು ಸೇರಿಸಿದ್ದಾರೆ. ಚಂದ್ರಿಕಾದಲ್ಲಿ ಹೀಗೆ ಹೇಳಲಾಗಿದೆ – ''ಆದೇಯಂ ಮಾತೀತಿ ವ್ಯುತ್ಪತ್ತ್ಯಾ ಆತ್ಮಶಬ್ದೋಕ್ತಂ ಶುಭಭೋಕ್ತೃತ್ವಂ ಮೂಲಯುಕ್ತಿಃ'' - ಆದೇಯಂ ಮಾತಿ ಎಂಬ ವ್ಯುತ್ಪತ್ತಿಯಿಂದ ಆತ್ಮಶಬ್ದವು ಹೇಳುವ ಶುಭಕರ್ಮಫಲಭೋಕ್ತೃತ್ವವು ಇಲ್ಲಿ ಮೂಲಯುಕ್ತಿಯಾಗಿದೆ - ಎಂದು.

ಹಾಗೆ ಹೇಳಿದಲ್ಲಿ 'ಋತಪಾತೃತ್ವಸಮಾನಾಧಿಕರಣಗುಹಾಪ್ರವಿಷ್ಟೋಕ್ತಿದ್ವಾರಾ ತದುಕ್ತಿಃ' 'ಕರ್ಮಫಲಭೋಕ್ತೃತ್ವದ ಜೊತೆಗೆ ಹೇಳಲಾಗಿರುವ ಗುಹಾಪ್ರವಿಷ್ಟತ್ವವನ್ನು

ಹೇಳುವ ಮೂಲಕ ಕರ್ಮಫಲಭೋಕ್ತೃತ್ವವನ್ನು ಹೇಳಲಾಗಿದೆ' ಎಂಬ ಚಂದ್ರಿಕೆಯ ಇನ್ನೊಂದು ವಾಕ್ಯದಿಂದ ವಿರೋಧಬರುವುದು ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಆ ವಾಕ್ಯಕ್ಕೆ - ಸೂತ್ರದಲ್ಲಿ ಅವಶ್ಯವಾಗಿ ಹೇಳಬೇಕಾಗಿರುವ ಗುಹಾಪ್ರವಿಷ್ಟತ್ವಲಿಂಗವನ್ನು ತಿಳಿಸುವ ದ್ವಿವಚನಾಂತಪದದೊಂದಿಗೆ ಅನ್ವಯಯೋಗ್ಯವಾದ ವಿಶೇಷ್ಯವಾಚಕಪದವನ್ನು ಹೇಳುವ ಮೂಲಕ - ಎಂಬ ಅರ್ಥವನ್ನು ಒಪ್ಪಲಾಗಿದೆ. ಹಾಗೆಯೇ 'ಯದ್ಯಪಿ ಸಮನ್ವೇತವ್ಯಮ್ ಋತಪಾನಕರ್ತೃತ್ವಂ ಸಾಕ್ಷಾದೇವ ವಕ್ತವ್ಯಮ್' - 'ಯದ್ಯಪಿ ಈ ಅಧಿಕರಣದಲ್ಲಿ ಸಮನ್ವಯ ಮಾಡಬೇಕಾಗಿರುವ ಕರ್ಮಫಲಭೋಕ್ತೃತ್ವವನ್ನು ಸಾಕ್ಷಾತ್ತಾಗಿಯೇ ಹೇಳಬೇಕಾಗುವುದು' ಎಂಬ ಇನ್ನೊಂದು ಚಂದ್ರಿಕಾವಾಕ್ಯಕ್ಕೂ ''ಆದೇಯಂ ಮಾತಿ ಎಂಬ ವ್ಯುತ್ಪತ್ತಿಯನ್ನು ಹೇಳದೇ ಅಂತರ್ಯಾಮಿಸೂತ್ರದಲ್ಲಿ ಅಂತರ್ಯಾಮಿ ಎಂಬ ಪದದಿಂದ ಹೇಗೆ ಹೇಳಲಾಗಿದೆಯೋ ಹಾಗೆ ಋತಂ ಪಿಬಂತೌ ಎಂಬ ಸ್ಪಷ್ಟಶಬ್ದಗಳಿಂದಲೇ ಹೇಳಬೇಕಾಗಿದ್ದಿತು ಹೊರತು, ಆತ್ಮಶಬ್ದದಿಂದಲ್ಲ'' ಎಂಬ ಅರ್ಥವನ್ನು ಆಶ್ರಯಿಸುವುದರಿಂದ ವಿರೋಧವಿಲ್ಲ. ಹಾಗೆ ಹೇಳದೇ ಇದ್ದಲ್ಲಿ ಉದಾಹರಿಸಲಾದ ವಾಕ್ಯದ ವಿರೋಧವು ಬರುವ ಪ್ರಸಂಗವುಂಟಾಗುವುದು. ತಥಾಚ ಕೆಲವರು ಪ್ರಕಾರಾಂತರದಿಂದ ಚಂದ್ರಿಕೆಯ ಅಭಿಪ್ರಾಯವನ್ನು ಹೇಳುವುದು, ಹಾಗೆಯೇ ಅವರೇ ಹೇಳುವ 'ಸಮನ್ವಯಸೂತ್ರದಿಂದ ತತ್ ಎಂಬ ಪದವು ಇಲ್ಲಿ ಅನುವೃತ್ತಿಯನ್ನು ಹೊಂದುವುದು' ಎಂಬ ಚಂದ್ರಿಕಾವಿರುದ್ಧವಾದ ಮಾತು ವಿಚಾರಾರ್ಹವಾದ ಸಂಗತಿಯಾಗಿದೆ. ಸೂತ್ರದಲ್ಲಿರುವ ದ್ವಿವಚನವನ್ನು ಕೂಡಿಸಲು ಮತ್ತು ಉದ್ದೇಶ್ಯವನ್ನು ತಿಳಿಸುವ ಸಲುವಾಗಿ ಹೇಳಲೇಬೇಕಾಗಿರುವ 'ಆತ್ಮಾನೌ' ಎಂಬ ಪದದಿಂದಲೇ ವಿಧೇಯವಾದ ಕರ್ಮಫಲಭೋಕ್ತೃತ್ವವನ್ನು ತಿಳಿಸಲು ಸಾಧ್ಯವಿರುವುದರಿಂದ ಈಕ್ಷತೇರ್ನಾಶಬ್ದಮ್ ಎಂಬ ಸೂತ್ರದಲ್ಲಿ ಕೇವಲ ತುಶಬ್ದವನ್ನು ಅನುವೃತ್ತಿಮಾಡಿಕೊಂಡಿರುವಂತೆ ಇಲ್ಲೂ ಕೂಡ ಇತರವ್ಯಾವೃತ್ತಿಯನ್ನು ತಿಳಿಸುವ ಅವಧಾರಣಾರ್ಥಕವಾದ ತುಶಬ್ದವನ್ನು ಮಾತ್ರ ಅನುವೃತ್ತಿಮಾಡಿಕೊಳ್ಳುವುದು ಉಚಿತವಾಗಿದೆ. ಹೀಗೆ ಹೇಳಿದಲ್ಲಿ 'ತದಿತ್ಯನುಕ್ತೌ ತುಶಬ್ದಸ್ಯ ಅನ್ವಯಃ ನ ಪ್ರತ್ಯೇತುಂ ಶಕ್ಯತೇ' - 'ತತ್'ಶಬ್ದವನ್ನು ಹೇಳದಿದ್ದ ಪಕ್ಷದಲ್ಲಿ ತುಶಬ್ದಕ್ಕೆ ಅನ್ವಯವನ್ನು ತಿಳಿಯಲು ಸಾಧ್ಯವಾಗುವುದಿಲ್ಲ- ಎಂಬ ಸಮನ್ವಯಾಧಿಕರಣದ ಸುಧಾವಾಕ್ಯದಿಂದ ವಿರೋಧಬರುವುದು ಎಂದರೆ ಅದು ಸರಿಯಲ್ಲ. ಏಕೆಂ-

ದರೆ ಆ ಸುಧಾವಾಕ್ಯಕ್ಕೆ ಉದ್ದೇಶ್ಯವಿಧೇಯಗಳನ್ನು ಹೇಳುವ ಪದವಿಲ್ಲದ ಸಂದರ್ಭದಲ್ಲಿ ತುಶಬ್ದಕ್ಕೆ ಅನ್ವಯವನ್ನು ತಿಳಿಯಲು ಸಾಧ್ಯವಾಗುವುದಿಲ್ಲ ಎಂದು ಅಭಿಪ್ರಾಯವಿದೆ(೧).

(೧) ಭಾಷ್ಯದೀಪಿಕೆಯ ಈ ಭಾಗದಲ್ಲಿ ಚರ್ಚಿತವಾದ ವಿಷಯಗಳ ಸಾರಾಂಶ ಹೀಗಿದೆ –

ಈ ಅಧಿಕರಣದಲ್ಲಿ ಕರ್ಮಫಲಭೋಕ್ತೃತ್ವವೆಂಬ ಲಿಂಗದ ಸಮನ್ವಯನ್ನು ಮಾಡಲಾಗಿದೆ. ಸಾಮಾನ್ಯವಾಗಿ ಹಿಂದುಮುಂದಿನ ಎಲ್ಲ ಅಧಿಕರಣಗಳಲ್ಲಿ 'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ 'ತತ್ ತು' ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಂಡು 'ಆನಂದಮಯಃ ತತ್ ತು' – 'ಆನಂದಮಯನು ಬ್ರಹ್ಮನೇ' ಎಂಬ ಪ್ರತಿಜ್ಞೆಯನ್ನು 'ಅಭ್ಯಾಸಾತ್' ಎಂಬ ಬ್ರಹ್ಮಶಬ್ದಾಭ್ಯಾಸವೆಂಬ ಹೇತು–ವಿನಿಂದ ಸಮರ್ಥಿಸಲಾಗಿದೆ. ಆದರೆ ಪ್ರಕೃತ 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರದಲ್ಲಿ 'ತತ್'ಪದವನ್ನು ಆವೃತ್ತಿಮಾಡಿಕೊಂಡು, ಒಂದು ಆತ್ಮಶಬ್ದಕ್ಕೆ 'ಆದೇಯಂ ಮಾತಿ' 'ಉಪಾದೇಯವಾದ ಶುಭಕರ್ಮಫಲವನ್ನು ಅನುಭವಿಸುವವನು' ಎಂದೂ, ಇನ್ನೊಂದು ಆತ್ಮಪದಕ್ಕೆ 'ಆತ್ಮಾ–ಅಂತರಾತ್ಮಾ' ಎಂಬ ಎರಡು ವಿಷ್ಣುರೂಪಗಳು ಎಂದು ಅರ್ಥ ಮಾಡಿದಲ್ಲಿ, ಆತ್ಮಾನೌ – ಆತ್ಮ, ಅಂತರಾತ್ಮಾ ಎಂಬ ಎರಡು ವಿಷ್ಣುರೂಪಗಳು, ಆತ್ಮಾನೌ – ಶುಭಕರ್ಮಫಲಭೋಕ್ತೃಗಳು ಎಂದು 'ಋತಂ ಪಿಬಂತೌ' ಎಂಬ ಕಠಶ್ರುತಿಯ ಅರ್ಥವಾಗಿದೆ. ಏಕೆಂದರೆ, ಈ ಶ್ರುತಿಯಲ್ಲಿ 'ಗುಹಾಂ ಪ್ರವಿಷ್ಟೌ' ಎಂದು ಹೃದಯಗುಹಾಪ್ರವಿಷ್ಟತ್ವವೆಂಬ ವಿಷ್ಣುಲಿಂಗವು ಶ್ರುತ–ವಾಗಿದೆ ಎಂದು ಸೂತ್ರದಲ್ಲಿರುವ ಪದಗಳಿಂದಲೇ ಹೇಳಬೇಕಾದ ಎಲ್ಲ ವಿಷಯ–ಗಳೂ ಲಭ್ಯವಾಗುತ್ತವೆ. ಹೀಗೆ ಸೂತ್ರವ್ಯಾಖ್ಯಾನದಿಂದ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ದ್ವಿವಚನಪ್ರಯೋಗದ ಯುಕ್ತತೆಯನ್ನು, 'ಆತ್ಮಾಂತರಾತ್ಮೇತಿ ಹರಿಃ' ಇತ್ಯಾದಿ ಸ್ಮೃತಿಯ ಸಂವಾದವನ್ನು ಹಾಗೆಯೇ ಇಲ್ಲಿ ಸಮನ್ವಯ ಮಾಡುತ್ತಿರುವ ಶುಭಕರ್ಮಫಲಭೋಕ್ತೃತ್ವವೆಂಬ ಲಿಂಗವನ್ನು ಸೂತ್ರದ ಪದ–ದಿಂದಲೇ ಸೂಚಿಸಿದಂತಾಗುವುದು. ಇದೇ ಅಭಿಪ್ರಾಯವನ್ನು ತಾತ್ಪರ್ಯ–ಚಂದ್ರಿಕೆಯ 'ಆದೇಯಂ ಮಾತಿ' ಇತ್ಯಾದಿ ವಾಕ್ಯವೂ ದೃಢೀಕರಿಸುವುದು.

ಯದ್ಯಪಿ ಚಂದ್ರಿಕೆಯಲ್ಲಿ, 'ಋತಪಾನಕರ್ತೃತ್ವದ ಜೊತೆಗೆ ಹೇಳಿರುವ ಗುಹಾ–ಪ್ರವಿಷ್ಟತ್ವವನ್ನು ಸೂತ್ರದಲ್ಲಿ ಹೇಳಿದ್ದು, ತನ್ಮೂಲಕವಾದ ಋತಪಾನಕರ್ತೃತ್ವವನ್ನೂ

ಸೂತ್ರದಲ್ಲಿ ಹೇಳಲಾಗಿದೆ' ಎಂಬ ಆಶಯದ ಇನ್ನೊಂದು ವಾಕ್ಯವಿದ್ದು, ಆ ವಾಕ್ಯಕ್ಕೂ 'ಆತ್ಮಾನೌ' ಎಂಬ ಸೂತ್ರದ ಪದವೇ ಸಮನ್ವಿತವಾಗುತ್ತಿರುವ ಲಿಂಗವನ್ನು ಹೇಳುತ್ತಿದೆ ಎಂಬ ಆಶಯದ 'ಆದೇಯಂ ಮಾತಿ' ಇತ್ಯಾದಿವಾಕ್ಯಕ್ಕೂ ವಿರೋಧವಿರುವಂತೆ ಭಾಸವಾಗುವುದು. ಆದರೆ 'ಗುಹಾಪ್ರವಿಷ್ಟತ್ವವನ್ನು ಹೇಳುವ ಮೂಲಕ' ಎಂಬ ವಾಕ್ಯಕ್ಕೆ 'ಲಿಂಗವನ್ನು ಹೇಳುವ ದ್ವಿವಚನಾಂತಪದಕ್ಕೆ ಅನ್ವಯ-ಯೋಗ್ಯವಾದ ಆತ್ಮಾನೌ ಎಂಬ ವಿಶೇಷ್ಯಪದದ ಮೂಲಕ' ಎಂಬ ಅಭಿಪ್ರಾಯವಿರುವುದರಿಂದ ಆ ಎರಡು ವಾಕ್ಯಗಳಿಗೆ ಯಾವ ವಿರೋಧವೂ ಇಲ್ಲ. ಶ್ರುತಿಯಲ್ಲಿರುವ ದ್ವಿವಚನದ ಸಮರ್ಥನೆಗಾಗಿ ಹಾಗೂ ಶುಭಕರ್ಮಫಲ-ಭೋಕ್ತೃತ್ವವೆಂಬ ವಿಧೇಯಕ್ಕೆ ಉದ್ದೇಶ್ಯರಾದ ಎರಡು ವಿಷ್ಣುರೂಪಗಳನ್ನು ತಿಳಿಸುವ ಸಲುವಾಗಿ ಆವಶ್ಯಕವಾದ 'ಆತ್ಮಾನೌ' ಎಂಬ ಪದವೇ ವಿಧೇಯವನ್ನು ತಿಳಿಸಲು ಸಾಧ್ಯವಿರುವಾಗ 'ತತ್' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳುವುದು ಅನುಚಿತವೆಂದೇ ಚಂದ್ರಿಕೆಯ ಆಶಯವಾಗಿದೆ. ಈಕ್ಷತ್ಯಧಿಕರಣದಲ್ಲಿ ತುಶಬ್ದವನ್ನು ಮಾತ್ರ ಅನುವೃತ್ತಿಮಾಡಿಕೊಂಡಿರುವ ನಿದರ್ಶನವಿದೆ. ಯದ್ಯಪಿ ಸಮನ್ವಯಾಧಿಕರಣಸುಧಾದಲ್ಲಿ 'ತತ್'ಶಬ್ದದ ಅನುವೃತ್ತಿಯಿಲ್ಲದಿದ್ದರೆ ತುಶಬ್ದಕ್ಕೆ ಅನ್ವಯವೆಲ್ಲಿ ಎಂದು ತಿಳಿಯಲು ಸಾಧ್ಯವಿಲ್ಲ ಎಂಬ ಮಾತಿದೆ. ಆದರೆ, ಆ ವಾಕ್ಯವು, ಉದ್ದೇಶ್ಯವಿಧೇಯಗಳನ್ನು ಹೇಳುವ ಪದಗಳು ಸೂತ್ರದಲ್ಲಿ ಇಲ್ಲದಿರುವ ಸನ್ನಿವೇಶವನ್ನು ಕುರಿತದ್ದೆಂದು ಭಾಷ್ಯದೀಪಿಕಾದಲ್ಲಿ ಸ್ಪಷ್ಟಪಡಿಸಲಾಗಿದೆ.

ಇದೇ ಸಂದರ್ಭದಲ್ಲಿ ಕೆಲ ವ್ಯಾಖ್ಯಾಕಾರರು ಚಂದ್ರಿಕಾವಾಕ್ಯಗಳಿಗೆ ಬೇರೆ ಅಭಿಪ್ರಾಯವನ್ನು ಹೇಳಿರುವುದು ಮತ್ತು ಚಂದ್ರಿಕಾದಲ್ಲಿ ಹೇಳಿರುವುದಕ್ಕೆ ವಿರುದ್ಧವಾಗಿ 'ತತ್'ಪದದ ಅನುವೃತ್ತಿ ಈ ಸೂತ್ರದಲ್ಲಿರುವುದೆಂಬುದು ವಿಚಾರಣೀಯ ಅಂಶವೆಂದು ಭಾಷ್ಯದೀಪಿಕಾದಲ್ಲಿ ಸೂಚಿಸಲಾಗಿದೆ.

## ಸೂ– ॥ ಓಂ ವಿಶೇಷಣಾಚ್ಚ ಓಂ ॥ ೧೨ ॥

'ಯಃ ಸೇತುರೀಜಾನಾನಾಮ್' ಎಂಬ ಶ್ರುತಿಯಲ್ಲಿ ಕರ್ಮಫಲ-ಭೋಕ್ತೃಗಳಿಗೆ, ಏಕವಚನವು ತಿಳಿಸುವ ಏಕತ್ವವೆಂಬ ವಿಶೇಷಣವನ್ನು ಹೇಳಿರುವುದರಿಂದಲೂ ಕರ್ಮಫಲಭೋಕ್ತೃವು ವಿಷ್ಣುವೇ ಹೊರತು ಜೀವನಲ್ಲ.

ಭಾ– '**ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ತತ್ಪರಮ್**'(ಕಠ. ೧-೩-೨) **ಇತಿ ।**

'ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ತತ್ಪರಮ್' ಎಂದು ಏಕತ್ವ-ವಿಶೇಷಣದಿಂದಲೂ ಕೂಡ ಪರಮಾತ್ಮನೇ ಕರ್ಮಫಲಭೋಕ್ತೃ-ವಾಗಿದ್ದಾನೆ.

(ಭಾ.ದೀ.) ಏವಂ ಯದಾ ನಿರವಕಾಶಗುಹಾನಿಹಿತತ್ವಲಿಂಗಸ್ಯ ಸಾವಕಾಶಾದ್ ದ್ವಿವಚನಶ್ರುತಿತೋಽಪಿ ಪ್ರಾಬಲ್ಯಾದ್ ವಿಷ್ಣೋಃ ಪ್ರಕೃತ್ಯರ್ಥಭೋಕ್ತೃತ್ವಸಂಭವಾಚ್ಚ ಸ ಏವ ಪಾತಾ ಇತಿ ಸಿದ್ಧ್ಯತಿ ಕಿಮು ಪುನರ್ನಿರವಕಾಶಶ್ರುತ್ಯಾಽಪಿ ಇತ್ಯರ್ಥಂ ಪ್ರತಿಪಾದ-ಯತ್ ಸೂತ್ರಂ ಪಠಿತ್ವಾ ತದಭಿಪ್ರೇತಶ್ರುತಿಮೇವೋದಾಹರತಿ – **ವಿಶೇಷಣಾಚ್ಚೇತಿ ॥** 'ಇತಿ ವಿಶೇಷಣಾತ್' ಇತ್ಯನ್ವಯಃ । ಸೂತ್ರೇ ಪಿಬತೋರಿತಿ ವಿಪರಿಣಾಮೇನಾನು-ವರ್ತತೇ । ಚೋ ಯುಕ್ತಿಸಮುಚ್ಚಯೇ ।

ತಥಾ ಚ 'ಯಃ ಸೇತುಃ' ಇತಿ ಶ್ರುತೌ ಪಿಬತೋರೇಕವಚನಬೋಧ್ಯೇನೈಕತ್ವೇನ ವಿಶೇಷಣಾದೇಕ ಏವ ಪಾತಾ । ಸ ಚ ಯಜಮಾನಸೇತುತ್ವಬ್ರಹ್ಮತ್ವಾಕ್ಷರತ್ವಾದಿನಾ ವಿಶೇಷಣಾದ್, ಬ್ರಹ್ಮಣಶ್ಚ ಪರತ್ವೇನ ವಿಶೇಷಣಾದ್ ವಿಷ್ಣುರೇವ, ನ ಜೀವ ಇತಿ ಸೂತ್ರಾರ್ಥಃ । ನ ಕೇವಲಂ ಲಿಂಗಾತ್, ಕಿಂತು ಸೇತ್ವಾದಿಶ್ರುತಿತೋಽಪೀತಿ ಚಾರ್ಥಃ ।

'ಯಃ' ಆತ್ಮಾಂತರಾತ್ಮಾಖ್ಯೋ ದ್ವಿರೂಪೋ ಭಗವಾನ್ 'ಈಜಾನಾನಾಂ' ವಿಷ್ಣು-ಮುದ್ದಿಶ್ಯ ಯಾಗಂ ಕುರ್ವಾಣಾನಾಂ 'ಸೇತುಃ' ಆಶ್ರಯೋ, ಯದಕ್ಷರಂ ಪರಂ ಬ್ರಹ್ಮ ತಂ ಧ್ಯಾತುಂ ನಚಿಕೇತಸಂ ಪ್ರತಿ ಸಾಧನಂ ವಕ್ತುಂ 'ಶಕೇಮಹಿ' ಶಕ್ತಾಃ ಸ್ಮ – ಇತಿ ಕಾಠಕಶ್ರುತ್ಯರ್ಥಃ ।

ಹೀಗೆ, ಯಾವಾಗ ವಿಷ್ಣುವನ್ನು ಬಿಟ್ಟು ಉಳಿದವರಲ್ಲಿ ಅವಕಾಶವಿಲ್ಲದ ಗುಹಾ-ನಿಹಿತತ್ವಲಿಂಗವು ವಿಷ್ಣುವಿನಲ್ಲಿಯೂ ಅವಕಾಶವಿರುವ ದ್ವಿವಚನಕ್ಕಿಂತಲೂ ಪ್ರಬಲವಾ-ದದ್ದರಿಂದ ಮತ್ತು 'ಪಿಬಂತೌ' ಎಂಬಲ್ಲಿರುವ 'ಪಿಬತ್' ಎಂಬ ಪ್ರಕೃತಿಭಾಗದ ಅರ್ಥ-

ವಾದ ಕರ್ಮಫಲಭೋಕ್ತೃತ್ವವು ವಿಷ್ಣುವಿನಲ್ಲಿ ಇರುವುದು ಸಾಧ್ಯವಿರುವುದರಿಂದ ವಿಷ್ಣುವೇ ಕರ್ಮಫಲಭೋಕ್ತೃವೆಂದು ಸಿದ್ಧನಾಗುವನೋ ಆಗ, ನಿರವಕಾಶಶ್ರುತಿ-ಯಿಂದಲೂ ಅವನೇ ಕರ್ಮಫಲಭೋಕ್ತೃವೆಂದು ಸಿದ್ಧನಾಗುವನು ಎಂದು ಹೇಳುವು-ದೇನು? ಎಂಬ ವಿಷಯವನ್ನು ಪ್ರತಿಪಾದಿಸುವ ಸೂತ್ರವನ್ನು ಪಠಿಸಿ, ಆ ಸೂತ್ರಕ್ಕೆ ಅಭಿಪ್ರೇತವಾದ ಶ್ರುತಿಯನ್ನು ಭಾಷ್ಯಕಾರರು ಉದಾಹರಿಸುತ್ತಿದ್ದಾರೆ. ಭಾಷ್ಯದಲ್ಲಿರುವ ಇತಿಶಬ್ದಕ್ಕೆ ವಿಶೇಷಣಾತ್ ಎಂಬ ಸೂತ್ರದ ಪದದೊಂದಿಗೆ ಅನ್ವಯವಾಗುವುದು. ಸೂತ್ರದಲ್ಲಿ ಶ್ರುತಿಯ ಪಿಬಂತೌ ಎಂಬ ಪದವು 'ಪಿಬತೋಃ' ಎಂಬ ವಿಭಕ್ತಿಬದಲಾ-ವಣೆಯೊಂದಿಗೆ ಅನುವೃತ್ತಿಯನ್ನು ಹೊಂದುವುದು. ಚಶಬ್ದವು ಯುಕ್ತಿಸಮುಚ್ಚಯವನ್ನು ಹೇಳುವುದು.

ತಥಾಚ – 'ಯಃ ಸೇತುಃ' ಎಂಬ ಶ್ರುತಿಯಲ್ಲಿ ಋತಪಾನಕರ್ತೃಗಳಿಗೆ ಏಕವಚನ-ದಿಂದ ತಿಳಿಯುವ ಏಕತ್ವವೆಂಬ ವಿಶೇಷಣವನ್ನು ಕೊಟ್ಟಿರುವುದರಿಂದಲೂ ಒಬ್ಬನೇ ಋತಪಾನಕರ್ತೃವಾಗಿದ್ದಾನೆ. ಅವನಾದರೋ ಯಜಮಾನನನ್ನು ಅಂದರೆ ಯಾಗಕರ್ತೃ-ವನ್ನು ಕುರಿತು ಸೇತುತ್ವ, ಬ್ರಹ್ಮತ್ವ, ಅಕ್ಷರತ್ವ ಮೊದಲಾದ ವಿಶೇಷಣಗಳಿಂದ ಮತ್ತು 'ಬ್ರಹ್ಮ ತತ್ಪರಂ' ಎಂಬುದಾಗಿ ಬ್ರಹ್ಮನಿಗೆ ಪರತ್ವವೆಂಬ ವಿಶೇಷಣವನ್ನು ಹೇಳಿರುವುದ-ರಿಂದ ವಿಷ್ಣುವೇ ಆಗಿದ್ದಾನೆ; ಜೀವನಲ್ಲ – ಎಂದು ಸೂತ್ರಾರ್ಥವಾಗಿದೆ. ಸೂತ್ರದಲ್ಲಿ ಚಕಾರವು ಲಿಂಗದಿಂದ ಮಾತ್ರವಲ್ಲ; ಕಿಂತು ಸೇತು ಮೊದಲಾದಶಬ್ದಗಳಿಂದಲೂ ಎಂದು ಸಮುಚ್ಚಯವನ್ನು ಹೇಳುತ್ತದೆ.

ಯಃ - ಯಾವ ಆತ್ಮಾ ಅಂತರಾತ್ಮಾ ಎಂದು ದ್ವಿರೂಪನಾದ ಭಗವಂತನು, ಈಜಾನಾನಾಂ -ವಿಷ್ಣುವನ್ನು ಉದ್ದೇಶಿಸಿ ಯಾಗ ಮಾಡುವ ಯಜಮಾನರಿಗೆ, ಸೇತುಃ - ಆಶ್ರಯನಾಗಿರುವನೋ, ಯತ್ ಅಕ್ಷರಂ ಪರಂ ಬ್ರಹ್ಮ - ಯಾರು ನಾಶರಹಿತನೂ ಪರಬ್ರಹ್ಮನೂ ಆಗಿರುವನೋ ಅವನನ್ನು ಧ್ಯಾನಮಾಡಲು ನಚಿಕೇತನಿಗೆ ಸಾಧನವನ್ನು ಹೇಳಲು, ಶಕೇಮಹಿ - ಶಕ್ತರಾಗಿದ್ದೇವೆ ಎಂದು 'ಯಃ ಸೇತುಃ' ಇತ್ಯಾದಿ ಕಾಠಕ-ಶ್ರುತಿಯ ಅರ್ಥವಾಗಿದೆ.

ಭಾ– 'ಪೃಥಗ್ ವಕ್ತುಂ ಗುಣಾಸ್ತಸ್ಯ ನ ಶಕ್ಯಂತೇಽಮಿತತ್ವತಃ ।
ಯತೋಽತೋ ಬ್ರಹ್ಮಶಬ್ದೇನ ಸರ್ವೇಷಾಂ ಗ್ರಹಣಂ ಭವೇತ್ ॥
ಏತಸ್ಮಾದ್ ಬ್ರಹ್ಮಶಬ್ದೋಽಯಂ ವಿಷ್ಣೋರೇವ ವಿಶೇಷಣಮ್ ।
ಅಮಿತಾ ಹಿ ಗುಣಾ ಯಸ್ಮಾನ್ನಾನ್ಯೇಷಾಂ ತಮೃತೇ ವಿಭುಮ್ ॥'
–ಇತಿ ಪಾದ್ಮೇ ।

ಯಾವ ಕಾರಣದಿಂದಾಗಿ ವಿಷ್ಣುವಿನ ಗುಣಗಳು ಅಸಂಖ್ಯಾಕವಾಗಿವೆಯೋ ಆದ್ದರಿಂದ ಅವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೇಳಲು ಸಾಧ್ಯವಿಲ್ಲ. ಯಾವ ಕಾರಣದಿಂದಾಗಿ ಬ್ರಹ್ಮಶಬ್ದದಿಂದ ಎಲ್ಲ ಭಗವದ್ಗುಣಗಳ ಜ್ಞಾನವು ಉಂಟಾಗುವುದೋ ಆದ್ದರಿಂದ ವಿಷ್ಣುವಿನಲ್ಲೇ ಬ್ರಹ್ಮಶಬ್ದವು ಪ್ರಯೋಗಿಸಲ್ಪಡುವುದು. ಈ ಕಾರಣದಿಂದಲೇ ಬ್ರಹ್ಮಶಬ್ದವು ವಿಷ್ಣುವಿಗೇ ವಿಶೇಷಣವಾಗಿರುವುದು. ಏಕೆಂದರೆ ಸರ್ವವ್ಯಾಪ್ತನಾದ ಆ ವಿಷ್ಣುವನ್ನು ಬಿಟ್ಟು ಉಳಿದವರಿಗೆ ಅನಂತವಾದ ಗುಣ-ಗಳು ಇರಲು ಸಾಧ್ಯವಿಲ್ಲ - ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ.

(ಭಾ.ದೀ.) ಬ್ರಹ್ಮಶಬ್ದಸ್ಯ ಭಗವದೇಕವಾಚಿತ್ವಂ ಸ್ಮಾರಯತಿ – **ಪೃಥಗಿತಿ** ॥ ಅತ್ರ 'ಯತಃ' ಇತ್ಯಾವರ್ತತೇ । ತಥಾಚ – ಯತಃ ತಸ್ಯ ವಿಷ್ಣೋರ್ಗುಣಾಃ 'ಅಮಿತತ್ವತಃ' ಅಸಂಖ್ಯಾತತ್ವತೋ ನಿಮಿತ್ತಾತ್ 'ಪೃಥಕ್' ವಿವಿಚ್ಯ ವಕ್ತುಂ ನ ಶಕ್ಯಂತೇ, 'ಜ್ಞಾತವ್ಯಾಶ್ಚ ಸರ್ವೈರಧಿಕಾರಿಭಿಃ ಸರ್ವೇ ಗುಣಾಃ' ಇತಿ ಶೇಷಃ ''ಯತೋ ಬ್ರಹ್ಮಶಬ್ದೇನ ಸರ್ವೇಷಾಂ ಗುಣಾನಾಂ 'ಗ್ರಹಣಂ' ಜ್ಞಾನಂ ಭವೇದ್ ಅತಃ ಸರ್ವಗುಣಜ್ಞಾನಾರ್ಥಂ ತಸ್ಮಿನ್ ವಿಷ್ಣೌ ಬ್ರಹ್ಮಶಬ್ದಃ ಪ್ರಯುಜ್ಯತೇ'' ಇತಿ ಶೇಷಃ । ಯತೋ ಬ್ರಹ್ಮಶಬ್ದೇನ ಸರ್ವೇಷಾಂ ಗುಣಾನಾಂ ಗ್ರಹಣಂ ಭವೇತ್ । ಏವಂ ಚ ಸರ್ವಗುಣವಾಚೀ ಬ್ರಹ್ಮಶಬ್ದೋ ಭವತಿ, ತತ್ರ ವೃತ್ತಿಮಂತರೇಣ ತಜ್ಜ್ಞಾನಜನಕತ್ವಾಯೋಗಾದಿತಿ ಭಾವಃ । ಯಸ್ಮಾದ್ ವಿಭುಂ ತಂ ವಿಷ್ಣುಮೃತೇ ಅನ್ಯೇಷಾಂ ಜೀವಾನಾಂ ನಾಮಿತಾ ಗುಣಾಃ, ಕಿಂತು – ವಿಷ್ಣೋರೇವ,

**ಹೀತ್ಯತ್ರಾರ್ಥೇ ಪ್ರಮಾಣಪ್ರಸಿದ್ಧಿಂ ಸೂಚಯತಿ, ಏತಸ್ಮಾತ್ ಕಾರಣಾದಯಂ ಬ್ರಹ್ಮಶಬ್ದೋ ವಿಷ್ಣೋರೇವ 'ವಿಶೇಷಣಂ' ಮುಖ್ಯವಾಚಕೋ ನಾನ್ಯೇಷಾಮಿತ್ಯರ್ಥಃ। 'ಬ್ರಾಹ್ಮೇ' ಇತ್ಯನಂತರಂ 'ಬ್ರಹ್ಮಶಬ್ದಸ್ಯ ಭಗವದೇಕವಾಚಿತ್ವಮುಕ್ತಮ್' ಇತಿ ಶೇಷಃ।**

ಬ್ರಹ್ಮಶಬ್ದಕ್ಕೆ ಕೇವಲ ಭಗವದ್ವಾಚಕತ್ವವಿರುವುದು ಎಂಬುದನ್ನು ಪೃಥಕ್ ಎಂಬ ಸ್ಮೃತಿವಾಕ್ಯದಿಂದ ತಿಳಿಸುತ್ತಿದ್ದಾರೆ. ಈ ವಾಕ್ಯದಲ್ಲಿ ಬರುವ ಯತಃ ಎಂಬ ಶಬ್ದವು ಆವೃತ್ತಿಯನ್ನು ಹೊಂದುತ್ತದೆ. ತಥಾಚ ಯತಃ - ಯಾವ ಕಾರಣದಿಂದಾಗಿ, ತಸ್ಯ **ಗುಣಾಃ** - ಆ ವಿಷ್ಣುವಿನ ಗುಣಗಳು, ಅಮಿತತ್ವತಃ - ಅಸಂಖ್ಯಾಕವಾಗಿರುವ ನಿಮಿತ್ತ-ದಿಂದಾಗಿ, ಪೃಥಗ್ ವಕ್ತುಂ ನ ಶಕ್ಯಂತೇ - ಪ್ರತ್ಯೇಕವಾಗಿ ಹೇಳಲು ಸಾಧ್ಯವಿಲ್ಲ. ಇಲ್ಲಿ 'ಜ್ಞಾತವ್ಯಾಶ್ಚ ಸರ್ವೈರಧಿಕಾರಿಭಿಃ ಸರ್ವೇ ಗುಣಾಃ'- ಆದರೆ ಎಲ್ಲ ಅಧಿಕಾರಿ-ಗಳಿಂದಲೂ ಭಗವಂತನ ಎಲ್ಲ ಗುಣಗಳೂ ತಿಳಿಯಲ್ಪಡಬೇಕಾಗಿವೆ - ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ. ಯತಃ - ಯಾವ ಕಾರಣದಿಂದ, ಬ್ರಹ್ಮಶಬ್ದೇನ ಸರ್ವೇಷಾಂ **ಗುಣಾನಾಂ** ಗ್ರಹಣಂ ಭವೇತ್ - ಬ್ರಹ್ಮಶಬ್ದದಿಂದ ಎಲ್ಲ ಗುಣಗಳ ಗ್ರಹಣ ಅಂದರೆ ಜ್ಞಾನವು ಉಂಟಾಗುವುದೋ, ಅತಃ - ಆದ್ದರಿಂದ ಎಲ್ಲ ಗುಣಗಳ ಜ್ಞಾನಕ್ಕೋಸ್ಕರವಾಗಿ ತಸ್ಮಿನ್ ಬ್ರಹ್ಮಶಬ್ದಃ ಪ್ರಯುಜ್ಯತೇ - ಆ ವಿಷ್ಣುವಿನಲ್ಲಿ ಬ್ರಹ್ಮಶಬ್ದವು ಪ್ರಯೋಗಿ-ಸಲ್ಪಡುವುದು. 'ತಸ್ಮಿನ್ ಬ್ರಹ್ಮಶಬ್ದಃ ಪ್ರಯುಜ್ಯತೇ' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ. ಯಾವ ಕಾರಣದಿಂದಾಗಿ ಬ್ರಹ್ಮಶಬ್ದದಿಂದ ಎಲ್ಲ ಗುಣಗಳ ಜ್ಞಾನವುಂಟಾಗುವುದೋ ಆ ಕಾರಣದಿಂದಾಗಿ ಬ್ರಹ್ಮಶಬ್ದವು ಸಮಸ್ತಭಗವದ್ಗುಣವಾಚಕವಾದ ಶಬ್ದವಾಗಿದೆ. ಬ್ರಹ್ಮ-ಶಬ್ದಕ್ಕೆ ಸರ್ವಗುಣಗಳಲ್ಲಿ ವೃತ್ತಿ - ಅಂದರೆ ವಾಚಕತ್ವಸಂಬಂಧವು ಇಲ್ಲದೇ ಇದ್ದರೆ ಆ ಶಬ್ದದಿಂದ ಎಲ್ಲ ಗುಣಗಳ ಜ್ಞಾನ ಬರಲು ಸಾಧ್ಯವಿಲ್ಲ ಎಂದು ಭಾವ. ಯಸ್ಮಾತ್ - ಯಾವ ಕಾರಣದಿಂದಾಗಿ, ವಿಭುಂ ತಂ ಋತೇ- ವಿಭುವಾದ ಆ ವಿಷ್ಣುವನ್ನು ಬಿಟ್ಟು, ಅನ್ಯೇಷಾಂ ನ ಅಮಿತಾ ಗುಣಾಃ - ಉಳಿದವರಿಗೆ ಅಮಿತಗುಣಗಳು ಇಲ್ಲವೋ, ಕಿಂತು ವಿಷ್ಣುವಿಗೇ ಸರ್ವಗುಣಗಳಿರುವುದೋ, 'ಹಿ'ಶಬ್ದವು ಈ ವಿಷಯದಲ್ಲಿ ಪ್ರಮಾಣಪ್ರಸಿದ್ಧಿಯನ್ನು ಸೂಚಿಸುವುದು. ಏತಸ್ಮಾತ್ - ಈ ಕಾರಣದಿಂದ, ಅಯಂ ಬ್ರಹ್ಮಶಬ್ದಃ - ಈ ಬ್ರಹ್ಮಶಬ್ದವು, ವಿಷ್ಣೋರೇವ ವಿಶೇಷಣಂ - ವಿಷ್ಣುವಿಗೇ ಮುಖ್ಯ-

ವಾಚಕವಾದ ಶಬ್ದವಾಗಿದೆ ಇತರರಿಗಲ್ಲ ಎಂದು ಅರ್ಥ. ಭಾಷ್ಯದಲ್ಲಿ ಬ್ರಾಹ್ಮೇ ಎಂಬ ಪದದ ನಂತರ 'ಬ್ರಹ್ಮಶಬ್ದಸ್ಯ ಭಗವದೇಕವಾಚಿತ್ವಮುಕ್ತಮ್' - ಬ್ರಹ್ಮಶಬ್ದಕ್ಕೆ ಕೇವಲ ಭಗವದ್ವಾಚಕತ್ವವಿರುವುದೆಂದು ಹೇಳಲಾಗಿದೆ ಎಂಬ ವಾಕ್ಯವು ಶೇಷವಾಗಿ ಸೇರುವುದು.

**ಭಾ– ನ ಚ ಜೀವೇ ಸಮನ್ವಯೋಽಭಿಧೀಯತೇ ।**

ಈ ಅಧ್ಯಾಯದಲ್ಲಿ ಜೀವನಲ್ಲಿ ಶ್ರುತಿಗಳ ಸಮನ್ವಯವು ಹೇಳಲ್ಪಡುವುದಿಲ್ಲವಷ್ಟೇ !

(ಭಾ.ದೀ.) ಅತ್ರ ಪರೈಃ 'ಪಿಬಂತೌ ಬುದ್ಧಿಜೀವೌ' ಇತಿ ಪೂರ್ವಪಕ್ಷೇ ಪ್ರಾಪ್ತೇ 'ಜೀವೇಶ್ವರೌ ಏವ' ಇತಿ ವ್ಯಾಖ್ಯಾತಮ್ । ತನ್ನಿರಾಕರೋತಿ – **ನ ಚೇತಿ** ॥ 'ಅತ್ರ' ಇತಿ ಶೇಷಃ । 'ಅಸ್ಮಿನ್ನಧ್ಯಾಯೇ' ಇತಿ ತದರ್ಥಃ । ಹೇತೌ ಸ್ವವ್ಯಾಖ್ಯಾನೇನ ಸಹ ಪರವ್ಯಾಖ್ಯಾನನಿರಾಕರಣಸ್ಯ ಸಮುಚ್ಚಯೇ ವಾ ಚಶಬ್ದಃ । ತಥಾ ಚಾಸಂಗತಿರಿತಿ ಭಾವಃ ।

ಈ ಅಧಿಕರಣದಲ್ಲಿ ಇತರರು ಋತಪಾನಕರ್ತೃಗಳು ಬುದ್ಧಿ ಮತ್ತು ಜೀವರು ಎಂದು ಪೂರ್ವಪಕ್ಷ ಪ್ರಾಪ್ತವಾದಾಗ 'ಜೀವ ಮತ್ತು ಈಶ್ವರರೇ ಋತಪಾನಕರ್ತೃಗಳು' ಎಂದು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುವರು. ಅದನ್ನು 'ನ ಚ' ಎಂಬ ವಾಕ್ಯದಿಂದ ಭಾಷ್ಯದಲ್ಲಿ ನಿರಾಕರಿಸುತ್ತಿದ್ದಾರೆ. 'ಅತ್ರ' ಎಂಬ ಪದವು ಈ ಭಾಷ್ಯವಾಕ್ಯಕ್ಕೆ ಶೇಷವಾಗಿ ಸೇರುವುದು. 'ಈ ಅಧ್ಯಾಯದಲ್ಲಿ' ಎಂದು ಅದರ ಅರ್ಥ. ಚಶಬ್ದವು ಹೇತ್ವರ್ಥಕವಾಗಿದೆ. ಅಥವಾ ತಮ್ಮ ವ್ಯಾಖ್ಯಾನಕ್ಕೆ ಪರವ್ಯಾಖ್ಯಾನನಿರಾಕರಣೆಯ ಸಮುಚ್ಚಯವನ್ನು ಚಶಬ್ದವು ಹೇಳುವುದು. ತಥಾಚ ಜೀವೇಶ್ವರರು ಋತಪಾನಕರ್ತೃಗಳೆಂದು ಸಿದ್ಧಾಂತಮಾಡಿದರೆ ಅಸಂಗತವೆಂದು ಭಾಷ್ಯದ ಭಾವ.

**ಭಾ– 'ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ ಮೈವಾರುವಣ್ಯೋ ಮೈವಾರುವಣ್ಯೋ ಮೈವಾರುವಣ್ಯಃ'**
**– ಇತಿ ಪೈಂಗಿಶ್ರುತಿಃ ।**

ಪರಬ್ರಹ್ಮನು ಸತ್ಯನಾಗಿದ್ದಾನೆ; ಜೀವನೂ ಸತ್ಯನಾಗಿದ್ದಾನೆ; ಅವರಿಬ್ಬರ

ಭೇದವೂ ಸತ್ಯವಾದದ್ದು, ಭೇದವನ್ನು ಅಸತ್ಯವೆಂದು ತಿಳಿಯುವ ಅನ್ಯಥಾಜ್ಞಾನಿಗಳಿಂದ ವಿಷ್ಣುವು ಸರ್ವಥಾ ಭಜನೀಯನಲ್ಲ ಎಂದು ಪೈಂಗಿಶ್ರುತಿ ತಿಳಿಸುತ್ತಿದೆ.

(ಭಾ.ದೀ.) ನನು ನಾತ್ರ ಜೀವೇ ಸಮನ್ವಯಕಥನಮಸಂಗತಮ್ । ಜೀವೇಶ್ವರ-ಭೇದಸ್ಯ ಅಸತ್ಯತ್ವೇನ ತಯೋರೈಕ್ಯಾತ್ । ಜೀವಸಮನ್ವಯಸ್ಯೈವ ಬ್ರಹ್ಮಸಮನ್ವಯ-ರೂಪತ್ವಾತ್ ಇತ್ಯತ ಆಹ – **ಸತ್ಯ ಇತಿ** ॥ 'ಸತ್ಯಂ' ಸತ್ಯಾ 'ಭಿದಾ' ಭೇದಃ । ಯದ್ಯಪಿ ಅತ್ರ ಆತ್ಮಜೀವಯೋಃ ಸತ್ಯತ್ವವಚನೇನೈವ ತತ್ಸ್ವರೂಪಭೇದಸ್ಯಾಪಿ ಸತ್ಯತ್ವಮುಕ್ತಂ ಭವತಿ । ತಥಾಽಪಿ ಪುನಃ 'ಸತ್ಯಂ ಭಿದಾ' ಇತ್ಯುಕ್ತಿರ್ದರ್ಶನಪ್ರತೀತಾಭೇದಪ್ರತೀತಿ-ನಿರಾಸತಾತ್ಪರ್ಯಾರ್ಥಾ ಶಪಥಾವೃತ್ತಿಃ।

ಕೇಚಿದ್ ಭೇದಮ್ ಅಸತ್ಯಮಾಹುಃ । ತತ್ ಕಥಮೇತದಿತ್ಯತಃ ತೇಷಾಂ ಪಕ್ಷೇ ಶ್ರುತಿರಭೀಕ್ಷ್ಣಂ ದೂಷಣಮಭಿಧತ್ತೇ – **ಮೈವೇತಿ** ॥ **'ಆರುವಣ್ಯಃ'** ಅರಾ ದೋಷಾಃ ತದ್ವಂತಃ, ಆ ಸಮಂತಾದರಶೀಲಾ ವಾ ಆರಯಃ, ತೈರಸತ್ಯಭೇದಜ್ಞಾನಿಭಿಃ ವಿಷ್ಣುಃ ಸರ್ವಥಾ ವನ್ಯೋ ಭಜನೀಯೋ ನ – ಇತ್ಯರ್ಥಃ। **'ಇತಿ ಪೈಂಗಿಶ್ರುತಿಃ'** ಇತ್ಯನಂತರಂ 'ಯತಃ' ಇತಿ ಶೇಷಃ । ಅಸ್ಯ ನಾಸತ್ಯೋ ಭೇದ ಇತ್ಯುತ್ತರೇಣಾನ್ವಯಃ । ಏವಂ ಭಾಲ್ಲವೇಯಶ್ರುತಿರಿತ್ಯಸ್ಯಾಪಿ।

'ಜೀವನಲ್ಲಿ ಸಮನ್ವಯವನ್ನು ಈ ಅಧಿಕರಣದಲ್ಲಿ ಹೇಳಿದರೆ ಅದು ಅಸಂಗತ' ಎನ್ನುವುದು ಸರಿಯಲ್ಲ. ಏಕೆಂದರೆ, ಜೀವೇಶ್ವರರ ಭೇದ ಅಸತ್ಯವಾಗಿದ್ದು ಅವರಿಬ್ಬ-ರಿಗೂ ಅಭೇದವಿದೆ. ಆದ್ದರಿಂದ ಜೀವನಲ್ಲಿ ಶ್ರುತಿಸಮನ್ವಯ ಮಾಡಿದರೆ ಅದು ಬ್ರಹ್ಮನಲ್ಲಿ ಮಾಡುವ ಸಮನ್ವಯವೇ ಆಗುವುದು'' ಎಂಬ ಶಂಕೆಗೆ ಉತ್ತರವಾಗಿ ಸತ್ಯ ಆತ್ಮಾ ಎಂದು ಭಾಷ್ಯವಾಕ್ಯವು ಪ್ರವೃತ್ತವಾಗಿದೆ. ಸತ್ಯಂ ಭಿದಾ ಎಂಬಲ್ಲಿ ಸತ್ಯಂ ಎಂದರೆ ಸತ್ಯಾ - ಸತ್ಯವಾದದ್ದು, ಭಿದಾ ಎಂದರೆ ಭೇದ. ಯದ್ಯಪಿ ಈ ಶ್ರುತಿಯಲ್ಲಿ ಬ್ರಹ್ಮ ಮತ್ತು ಜೀವರು ಸತ್ಯರೆಂದು ಹೇಳಿದ್ದರಿಂದಲೇ ಅವರ ಸ್ವರೂಪವಾದ ಭೇದವು ಸತ್ಯವೆಂದು ಹೇಳಿದಂತಾಗುವುದು. ಆದರೂ ಪುನಃ 'ಸತ್ಯಂ ಭಿದಾ' ಎಂದು ಹೇಳಿರು-

ವುದು ಇತರ ದರ್ಶನಗಳಿಂದ ಉಂಟಾಗುವ ಅಭೇದಭ್ರಾಂತಿಯನ್ನು ನಿರಾಕರಿಸುವ ಅಭಿಪ್ರಾಯದಿಂದ ಮಾಡಿದ ಶಪಥದ ಆವೃತ್ತಿಯೇ ಆಗಿದೆ.

ಕೆಲವರು ಭೇದವನ್ನು ಅಸತ್ಯವೆಂದು ಹೇಳುವರು. ಆದ್ದರಿಂದ ಭೇದವು ಸತ್ಯವೆಂದು ಹೇಳುವುದು ಹೇಗೆ ಎಂಬ ಶಂಕೆಗೆ ಉತ್ತರವಾಗಿ ಅವರ ಪಕ್ಷಕ್ಕೆ ''ಮೈವಾರುವಣ್ಯಃ'' ಎಂಬ ಶ್ರುತಿಯು ಪುನಃ ಪುನಃ ದೂಷಣವನ್ನು ಹೇಳುತ್ತಿದೆ. ಆರುವಣ್ಯಃ - ಅರಾ ಎಂದರೆ ದೋಷಗಳು, ಅದನ್ನು ಹೊಂದಿದವರು ಅಥವಾ ಆ ಎಂದರೆ ಅತ್ಯಂತವಾಗಿ ದೋಷಸ್ವಭಾವವುಳ್ಳವರು ಆರುಗಳು, ಅವರಿಂದ ಅಂದರೆ ಭೇದವು ಅಸತ್ಯ ಎಂದು ತಿಳಿದವರಿಂದ ವಿಷ್ಣುವು ಸರ್ವಥಾ ವನ್ಯ - ಅಂದರೆ ಭಜನೀಯನು ಅಲ್ಲ ಎಂದು ಶ್ರುತಿಯ ಅರ್ಥ. 'ಇತಿ ಪೈಂಗಿಶ್ರುತಿಃ' ಎಂಬ ಪದಗಳ ಅನಂತರ 'ಯತಃ' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ ಮುಂದೆ ಬರುವ 'ನ ಅಸತ್ಯೋ ಭೇದಃ' ಎಂಬ ಪದಗಳೊಂದಿಗೆ ಅನ್ವಯ. ಇದೇ ರೀತಿಯಾಗಿ ಭಾಷ್ಯದಲ್ಲಿ ಮುಂದೆ ಬರುವ 'ಭಾಲ್ಲ-ವೇಯಶ್ರುತಿಃ' ಎಂಬ ಪದದ ನಂತರವೂ 'ಯತಃ' ಎಂಬ ಪದವು ಶೇಷವಾಗಿದ್ದು, ಅದಕ್ಕೆ 'ನ ಅಸತ್ಯೋ ಭೇದಃ' ಎಂಬ ಪದಗಳೊಂದಿಗೆ ಅನ್ವಯ.

(ಭಾ.ದೀ.) ಅತ್ರ ಯದ್ಯಪಿ **ಭಾಗವತತಾತ್ಪರ್ಯೇ** – ಸತ್ಯತ್ವಂ ಚ ಭೇದಸ್ಯೋಕ್ತಂ ಭಾಲ್ಲವೇಯಶ್ರುತೌ । ಸ್ಥಾಣುರ್ಹೋಚ್ಚಕ್ರಾಮ ಸ ಪ್ರಜಾಪತಿಮುವಾಚ ಕೋಽಸಿ ಕೇಸ್ಮಃ ಕಃ ಸ ಇತಿ । ಸ ಹೋವಾಚ ಯೋಽಸ್ಮಿ ಯೇ ಸ್ಥ ಯಃ ಸ ಇತಿ । ಅಥೈನಮುಪಾ-ಕ್ರೋಶತ್ ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ' ಇತ್ಯಾದಿನಾ 'ಸತ್ಯಮ್' ಇತಿ ವಾಕ್ಯಂ ಭಾಲ್ಲವೇಯಶ್ರುತ್ಯಂತರ್ಗತತಯಾ ಪಠ್ಯತೇ । ಭಾಷ್ಯಪುಸ್ತಕೇಽಪಿ ಕ್ವಚಿತ್ 'ಸತ್ಯಮ್' ಇತಿ ವಾಕ್ಯಮ್ 'ಆತ್ಮಾ ಹಿ' ಇತಿ ವಾಕ್ಯಂ ಚ ಭಾಲ್ಲವೇಯಶ್ರುತಿತ್ವೇನ ಪಠ್ಯತೇ । ನ ತು ಶ್ರುತಿದ್ವಯಸ್ಥತ್ವೇನ । ತಥಾಽಪಿ ಅನಯೋಸ್ತಾತ್ಪರ್ಯಾನುಸಾರೇ-ಣೈಕಶ್ರುತಿಸ್ಥತ್ವಂ, ಬಹುತರಪಾಠಬಲಾತ್ 'ಸತ್ಯ ಆತ್ಮಾ' ಇತಿ ಪೈಂಗಿಶ್ರುತಿಃ। 'ಆತ್ಮಾ ಹಿ' ಭಾಲ್ಲವೇಯಶ್ರುತಿಃ । ತಾತ್ಪರ್ಯೋದಾಹೃತಾ ತ್ವನ್ಯಾ ತತ್ಸಮಾಖ್ಯಾರೂಪಾ ಚೇತ್ಯ-ದೋಷಃ।

'ಸ್ಥಾಣುಃ' ರುದ್ರಃ 'ಉಚ್ಚಕ್ರಾಮ' ಊರ್ಧ್ವಂ ಜಗಾಮ । 'ಸಃ' ರುದ್ರಃ 'ಪ್ರಜಾಪತಿಂ' ಬ್ರಹ್ಮಾಣಮ್ ಉಪಾಕ್ರೋಶತ್ ಉವಾಚ । ಕಿಮಿತಿ? ತ್ವಂ 'ಕಃ' ಕೀದೃಶಃ? ವಯಂ 'ಕೇ' ಕೀದೃಶಾಃ? ಸ ವಿಷ್ಣುಃ 'ಕಃ' ಕೀದೃಶಃ? 'ಕಿಂ ಭಿನ್ನಃ ಉತಾಭಿನ್ನಃ?' ಇತ್ಯಾಶಯಃ । ಕ್ರಮೇಣೋತ್ತರಮಾಹ – ಅಹಂ 'ಯಃ' ಯಾದೃಶೋಽಗ್ರೇ ಸರ್ವದಾ ತಾದೃಶೋಽಸ್ಮಿ । ಯೂಯಂ 'ಯೇ' ಯಾದೃಶಾಃ ತಾದೃಶಾಃ ಸ್ಥ । 'ಸಃ' ವಿಷ್ಣುಃ ಯಾದೃಶೋ ಮಯಾ ಭವದಾದಿಭಿಶ್ಚ ಭಿನ್ನಃ ತಾದೃಶ ಏವ – ಇತಿ ಶ್ರುತ್ಯರ್ಥಃ।

ಯದ್ಯಪಿ ಭಾಗವತತಾತ್ಪರ್ಯದಲ್ಲಿ – 'ಭಾಲ್ಲವೇಯಶ್ರುತಿಯಲ್ಲಿ ಭೇದದ ಸತ್ಯತ್ವವನ್ನು ಹೇಳಲಾಗಿದೆ. ''ಸ್ಥಾಣುರ್ಹೋಚ್ಚಕ್ರಾಮ ಸ ಪ್ರಜಾಪತಿಮುವಾಚ ಕೋಽಸಿ ಕೇ ಸ್ಮಃ ಕಃ ಸ ಇತಿ । ಸ ಹೋವಾಚ ಯೋಽಸ್ಮಿ ಯೇ ಸ್ಥ ಯಃ ಸ ಇತಿ । ಅಥೈನಮುಪಾಕ್ರೋಶತ್ ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ'' ಇತ್ಯಾದಿಯಾಗಿ' ಎಂದು. 'ಸತ್ಯಂ ಭಿದಾ' ಎಂಬ ವಾಕ್ಯವು ಭಾಲ್ಲವೇಯಶ್ರುತಿಯಲ್ಲಿರುವುದೆಂದು ಪಠಿಸಲಾಗಿದೆ. ಭಾಷ್ಯಪುಸ್ತಕದಲ್ಲೂ ಕೆಲವು ಕಡೆ 'ಸತ್ಯಂ ಭಿದಾ' ಎನ್ನುವ ವಾಕ್ಯ ಹಾಗೆಯೇ 'ಆತ್ಮಾ ಹಿ ಪರಮಃ' ಎಂದು ಇಲ್ಲೇ ಮುಂದೆ ಉದಾಹರಿಸಲ್ಪಡುವ ಶ್ರುತಿವಾಕ್ಯವು ಭಾಲ್ಲವೇಯಶ್ರುತಿಯೆಂಬುದಾಗಿ ಪಠಿಸಲಾಗಿದೆ. ಆದರೆ ಈ ವಾಕ್ಯಗಳು ಒಂದು ಪೈಂಗಿಶ್ರುತಿ, ಇನ್ನೊಂದು ಭಾಲ್ಲವೇಯ ಶ್ರುತಿ ಎಂಬ ಎರಡು ಶ್ರುತಿಗಳಲ್ಲಿರುವಂತೆ ಪಠಿತವಾಗಿಲ್ಲ. ತಥಾಪಿ - ಈ ಎರಡು ವಾಕ್ಯಗಳು ಭಾಗವತತಾತ್ಪರ್ಯಾನುಸಾರೇಣ ಒಂದೇ ಶ್ರುತಿಯಲ್ಲಿ ಇರುವುದೆಂದು, ಮತ್ತು ಅನೇಕ ಕಡೆ ದೊರಕುವ ಪಾಠವನ್ನನುಸರಿಸಿ 'ಸತ್ಯ ಆತ್ಮಾ' ಎಂಬುದು ಪೈಂಗಿಶ್ರುತಿಯೆಂದೂ, 'ಆತ್ಮಾ ಹಿ' ಎಂಬ ಶ್ರುತಿಯು ಭಾಲ್ಲವೇಯಶ್ರುತಿ ಎಂದು ತಿಳಿಯಬೇಕು. ಭಾಗವತತಾತ್ಪರ್ಯದಲ್ಲಿ ಉದಾಹೃತವಾದ ಶ್ರುತಿಯಾದರೋ ಪೈಂಗಿಶ್ರುತಿಗೆ ಸದೃಶವಾದ ಪಾಠವುಳ್ಳ ಬೇರೆಯ ಶ್ರುತಿಯೇ ಆಗಿದೆ; ಆದ್ದರಿಂದ ಯಾವ ದೋಷವೂ ಇಲ್ಲ.

ಸ್ಥಾಣುಃ - ರುದ್ರನು, ಉಚ್ಚಕ್ರಾಮ - ಊರ್ಧ್ವಲೋಕಕ್ಕೆ ಹೋದನು; ಸಃ - ಆ ರುದ್ರನು, ಪ್ರಜಾಪತಿಂ - ಚತುರ್ಮುಖಬ್ರಹ್ಮನ ಬಳಿ ಸಾರಿ, ಉವಾಚ - ಹೇಳಿದನು; ಏನೆಂದು? ಕೋಽಸಿ - ನೀನು ಎಂತಹವನು, ಕೇ ಸ್ಮಃ - ನಾವು ಎಂತಹವರು? ಕಃ ಸ

ಇತಿ - ಆ ವಿಷ್ಣುವು ಎಂತಹವನು ಎಂದು. ಅವನು ನಮ್ಮಿಂದ ಭಿನ್ನನೋ ಅಭಿನ್ನನೋ ಎಂದು ಪ್ರಶ್ನೆಯ ಭಾವ. ಪ್ರಜಾಪತಿಯು ಕ್ರಮವಾಗಿ ಈ ಪ್ರಶ್ನೆಗಳಿಗೆ ಉತ್ತರ ಹೇಳಿದನು. ಯೋಽಸ್ಮಿ - ನಾನು ಯಃ ಅಂದರೆ ಮೊದಲು ಹೇಗಿದ್ದನೋ ಎಲ್ಲ ಕಾಲದಲ್ಲೂ ಹಾಗೆಯೇ ಇರುವೆನು. ಯೇ ಸ್ಥ - ನೀವು ಹೇಗಿದ್ದಿರೋ ಹಾಗೆಯೇ ಇರುವಿರಿ. ಯಃ ಸ ಇತಿ - ಆ ವಿಷ್ಣುವು ನನ್ನಿಂದ ಮತ್ತು ನೀನೇ ಮೊದಲಾದವರಿಂದ ಭಿನ್ನನಾಗಿ ಹೇಗಿದ್ದನೋ ಹಾಗೆಯೇ ಇರುವನು - ಎಂದು ಶ್ರುತಿಯ ಅರ್ಥ.

ಭಾ– 'ಆತ್ಮಾ ಹಿ ಪರಮಃ ಸ್ವತಂತ್ರೋಽಧಿಗುಣೋ
ಜೀವೋಽಲ್ಪಶಕ್ತಿರಸ್ವತಂತ್ರೋಽವರಃ' ಇತಿ ಚ ಭಾಲ್ಲವೇಯಶ್ರುತಿಃ ।

ಪರಮಾತ್ಮನು ಸ್ವತಂತ್ರನೂ, ಪೂರ್ಣಶಕ್ತನೂ ಆಗಿರುವನು. ಜೀವನಾದರೋ ಅಲ್ಪಶಕ್ತನೂ ಅಸ್ವತಂತ್ರನೂ ಅವರನೂ ಆಗಿರುವನು - ಎಂದು ಭಾಲ್ಲವೇಯಶ್ರುತಿ.

(ಭಾ.ದೀ.) ಅತ್ರೋಕ್ತಭೇದಸಾಧಕಪ್ರಮಾಣತ್ವೇನ ವಿರುದ್ಧಗುಣೋಪನ್ಯಾಸಾಯ 'ಆತ್ಮಾ' ಇತಿ ದ್ವಿತೀಯವಾಕ್ಯಂ ಪ್ರವೃತ್ತಮ್ । 'ಆತ್ಮಾ' ಪರಮಾತ್ಮಾ, 'ಪರಮಃ' ಸ್ವತಂತ್ರಃ । 'ಅಧಿಗುಣಃ' ಪೂರ್ಣಶಕ್ತಿಃ । ಅತ ಏವೋತ್ತರತ್ರ ಪರಮತ್ವ-ಸ್ವತಂತ್ರತ್ವ-ಪೂರ್ಣಶಕ್ತಿತ್ವವಿರುದ್ಧಾನಾಂ ಧರ್ಮಾಣಾಮ್ ಅಲ್ಪಶಕ್ತಿರಿತ್ಯಾದಿಪದೈರ್ವ್ಯತ್ಕ್ರಮೇಣಾಭಿಧಾನಂ ಕೃತಮ್ ।

ಹಿಂದೆ ಉದಾಹೃತವಾದ ಶ್ರುತಿಯಲ್ಲಿ ಹೇಳಿದ ಭೇದವನ್ನು ಸಮರ್ಥಿಸುವ ಪ್ರಮಾಣರೂಪವಾಗಿ ಜೀವಪರಮಾತ್ಮರಲ್ಲಿ ವಿರುದ್ಧಗುಣಗಳು ಇರುವುದೆಂದು ಹೇಳುವುದಕ್ಕೋಸ್ಕರ 'ಆತ್ಮಾ' ಎಂದು ಎರಡನೆಯ ವಾಕ್ಯವು ಹೊರಟಿದೆ. ಆತ್ಮಾ - ಪರಮಾತ್ಮನು, ಪರಮಃ - ಸರ್ವೋತ್ತಮನು, ಸ್ವತಂತ್ರಃ - ನಿರವಧಿಕವಾದ ಸ್ವಾತಂತ್ರ್ಯವುಳ್ಳವನು. ಅಧಿಗುಣಃ - ಪೂರ್ಣಶಕ್ತಿಯುಳ್ಳವನು. ಆದ್ದರಿಂದಲೇ ಮುಂದೆ ಪರಮತ್ವ, ಸ್ವತಂತ್ರತ್ವ, ಪೂರ್ಣಶಕ್ತಿತ್ವವೆಂಬ ಧರ್ಮಗಳಿಗೆ ವಿರುದ್ಧವಾದ ಧರ್ಮಗಳನ್ನು ಕ್ರಮವ್ಯತ್ಯಾಸಮಾಡಿ ಅಲ್ಪಶಕ್ತಿಃ ಇತ್ಯಾದಿ ಪದಗಳಿಂದ ಹೇಳಲಾಗಿದೆ.

ಭಾ– 'ಯಥೇಶ್ವರಸ್ಯ ಜೀವಸ್ಯ ಭೇದಃ ಸತ್ಯೋ ವಿನಿಶ್ಚಯಾತ್ ।
ಏವಮೇವ ಹಿ ಮೇ ವಾಚಂ ಸತ್ಯಾಂ ಕರ್ತುಮಿಹಾರ್ಹಸಿ' ॥ (ಪದ್ಮ.ಪು.)

'ಯಥೇಶ್ವರಶ್ಚ ಜೀವಶ್ಚ ಸತ್ಯಭೇದೌ ಪರಸ್ಪರಮ್ ।
ತೇನ ಸತ್ಯೇನ ಮಾಂ ದೇವಾಸ್ತ್ರಾಯಂತು ಸಹಕೇಶವಾಃ ॥'(ಸ್ಕಾಂದ.ಪು.)

ಇತ್ಯಾದೇರ್ನಾಸತ್ಯೋ ಭೇದಃ ॥ ೧೨ ॥

'ಹೇಗೆ ಈಶ್ವರನ ಮತ್ತು ಜೀವನ ಮಧ್ಯೆ ಇರುವ ಭೇದವು ನಿಶ್ಚಯವಾಗಿಯೂ ಸತ್ಯವೇ ಆಗಿರುವುದೋ ಹಾಗೆಯೇ ನನ್ನ ಮಾತನ್ನು ನೀನು ಸತ್ಯವನ್ನಾಗಿಸಬೇಕು' - (ಪದ್ಮ.ಪು.)

'ಹೇಗೆ ಈಶ್ವರ ಮತ್ತು ಜೀವರು ಸತ್ಯವಾದ ಪರಸ್ಪರಭೇದವನ್ನು ಪಡೆದಿರುವರೋ ಹಾಗೆಯೇ ಸತ್ಯವಾದ ಭೇದವನ್ನು ಸತ್ಯವೆಂದು ಗ್ರಹಿಸುವ ನಮ್ಮ ಜ್ಞಾನವೆಂಬ ನಿಮಿತ್ತದಿಂದ ಕೇಶವಸಹಿತರಾದ ಎಲ್ಲ ದೇವತೆಗಳು ನಮ್ಮನ್ನು ರಕ್ಷಿಸಲಿ' - (ಸ್ಕಾಂದ.ಪು.)

ಇದೇ ಮೊದಲಾದ ಪ್ರಮಾಣಗಳಿಂದ ಭೇದವು ಅಸತ್ಯವಲ್ಲ.

(ಭಾ.ದೀ.) ಅತ್ರೈವಾರ್ಥೇ ಪುರಾಣವಾಕ್ಯೇ ಪಠತಿ – **ಯಥೇತಿ** ॥ ಅತ್ರ ಷಷ್ಠ್ಯಂತಂ ವಾಕ್ಯಂ ಪಾದ್ಮಸ್ಥಂ, ಪ್ರಥಮಾಂತಂ ಸ್ಕಾಂದಗತಮಿತಿ ತತ್ತ್ವಪ್ರದೀಪೋಕ್ತೇಃ 'ಮೇ ಮಾಮ್' ಇತ್ಯಾಭ್ಯಾಂ ತತ್ಕ್ರತೋ ಗ್ರಾಹ್ಯಃ । 'ವಿನಿಶ್ಚಯಾತ್' ಏವಾರ್ಥೋಽಯಂ ಶಬ್ದಃ।

ಸತ್ಯಭೇದೌ ಇತಿ ಬಹುವ್ರೀಹಿಃ । ಯಥಾ ಸತ್ಯಭೇದೌ ತಥೈವ ವಿದ್ಯಮಾನಾನತಿಕ್ರಮೇಣ ಜ್ಞಾತೇನ 'ಸತ್ಯೇನ' ಸತ್ಯಭೇದೇನ, ಭೇದಸತ್ಯತ್ವಜ್ಞಾನಾಖ್ಯಕಾರಣೇನೇತಿ ಯಾವತ್, 'ಸಹಕೇಶವಾಃ' ಇತ್ಯೇಕಂ ಪದಂ, ಕೇಶವಸಹಿತಾ ದೇವಾಃ 'ತ್ರಾಯಂತು' ಅಸ್ಮಾನ್ ರಕ್ಷಂತು ಇತ್ಯರ್ಥಃ। ಇತ್ಯಾದೇರ್ವಾಕ್ಯಾತ್ ನಾಸತ್ಯೋ ಭೇದಃ, ಕಿಂತು – ಸತ್ಯ ಏವೇತಿ ಜ್ಞಾಯತೇ ಇತ್ಯರ್ಥಃ।

**ಅತ್ರ ಪೂರ್ವವಾಕ್ಯೇ ಜೀವೇಶಭೇದಸ್ಯ ದೃಷ್ಟಾಂತತ್ವೇನೋಪಾದಾನಾತ್ ಪ್ರಾಮಾಣಿಕತ್ವಂ ಜ್ಞಾಯತೇ, ತಾದೃಶಸ್ಯೈವ ದೃಷ್ಟಾಂತತ್ವಾತ್ । ದ್ವಿತೀಯೇ ತು ವಿಷಯಾನತಿಕ್ರಮೇಣ ಭೇದಸತ್ಯತ್ವಜ್ಞಾನಸ್ಯ ತ್ರಾಣಕಾರಣತ್ವೋಕ್ತ್ಯಾ ಭೇದಸತ್ಯತ್ವಮಪಿ ಜ್ಞಾಯತೇ ಇತಿ ಪ್ರಕೃತಸಂಗತಿಃ।**

ಇದೇ ವಿಷಯದಲ್ಲಿ ಎರಡು ಪುರಾಣವಾಕ್ಯಗಳನ್ನು 'ಯಥಾ' ಎಂದು ಭಾಷ್ಯಕಾರರು ಪಠಿಸುತ್ತಿದ್ದಾರೆ. ಈ ಎರಡು ವಾಕ್ಯಗಳಲ್ಲಿ ಷಷ್ಠೀವಿಭಕ್ತ್ಯಂತಪದಗಳಿರುವ ವಾಕ್ಯ ಪದ್ಮಪುರಾಣದಲ್ಲಿರುವುದೆಂದು, ಪ್ರಥಮಾಂತಪದಗಳಿರುವ ವಾಕ್ಯ ಸ್ಕಾಂದಪುರಾಣದಲ್ಲಿರುವುದೆಂದು ತತ್ತ್ವಪ್ರದೀಪದಲ್ಲಿ ಹೇಳಿರುವುದರಿಂದ, ಮೊದಲನೆಯ ಶ್ಲೋಕದಲ್ಲಿರುವ '**ಮೇ**' - ನನ್ನ ಎಂಬ ಪದದಿಂದ ಹಾಗೂ ಎರಡನೆಯ ಶ್ಲೋಕದಲ್ಲಿರುವ '**ಮಾಮ್**'- ನನ್ನನ್ನು ಎಂಬ ಪದದಿಂದ ಆಯಾ ಪುರಾಣಗಳಲ್ಲಿ ಪ್ರಕೃತನಾದವನನ್ನು ಗ್ರಹಿಸಬೇಕು.

**ಸತ್ಯಭೇದೌ** ಎಂಬ ಪದವು 'ಸತ್ಯವಾದ ಭೇದವನ್ನು ಹೊಂದಿರುವ' ಎಂಬ ಅರ್ಥವನ್ನು ಕೊಡುವ ಬಹುವ್ರೀಹಿ ಸಮಾಸವಾಗಿದೆ. ಯಾವ ರೀತಿಯಲ್ಲಿ ಸತ್ಯವಾದ ಭೇದವನ್ನು ಪಡೆದಿರುವರೋ ಹಾಗೆಯೇ ವಸ್ತುಸ್ಥಿತಿಯನ್ನು ಅತಿಕ್ರಮಿಸದೇ ತಿಳಿಯಲಾದ **ಸತ್ಯೇನ** - ಸತ್ಯವಾದ ಭೇದದಿಂದ, 'ಭೇದಸತ್ಯತ್ವಜ್ಞಾನವೆಂಬ ಕಾರಣದಿಂದ' ಎಂದು ಭಾವ. **ಸಹಕೇಶವಾಃ** ಎಂಬ ಪದವು ಒಂದೇ ಸಮಾಸಪದವಾಗಿದೆ. ಕೇಶವಸಹಿತರಾದ ದೇವತೆಗಳು **ತ್ರಾಯಂತು** ನಮ್ಮನ್ನು ರಕ್ಷಿಸಲಿ ಎಂದು ಅರ್ಥ. **ಇತ್ಯಾದೇಃ** - ಇದೇ ಮೊದಲಾದ ವಾಕ್ಯದಿಂದ ಭೇದವು ಅಸತ್ಯವಲ್ಲ, ಕಿಂತು ಸತ್ಯವೆಂದೇ ತಿಳಿದು ಬರುವುದು ಎಂದು ಅರ್ಥ.

ಈ ಮೇಲಿನ ಎರಡು ವಾಕ್ಯಗಳ ಮಧ್ಯೆ ಮೊದಲನೆಯ ವಾಕ್ಯದಲ್ಲಿ ಜೀವೇಶಭೇದವನ್ನು ದೃಷ್ಟಾಂತವಾಗಿ ಸ್ವೀಕರಿಸಿರುವುದರಿಂದ ಭೇದವು ಪ್ರಾಮಾಣಿಕವೆಂದು ತಿಳಿದು ಬರುವುದು. ಏಕೆಂದರೆ, ಹಾಗೆ ಪ್ರಾಮಾಣಿಕವಾದುದೇ ದೃಷ್ಟಾಂತವಾಗುವುದು. ಎರಡನೆಯ ವಾಕ್ಯದಲ್ಲಾದರೋ ವಿಷಯವನ್ನು ಅತಿಕ್ರಮಿಸದೇ ಭೇದವನ್ನು ಸತ್ಯವೆಂದು

ಗ್ರಹಿಸುವ ಜ್ಞಾನವು ನಮ್ಮ ರಕ್ಷಣೆಗೆ ಕಾರಣವಾದುದೆಂದು ಹೇಳಿರುವುದರಿಂದ ಭೇದಸತ್ಯತ್ವವು ತಿಳಿದುಬರುವುದು; ಆದಕಾರಣ ಈ ಎರಡೂ ಪ್ರಮಾಣಗಳನ್ನು ಉದಾಹರಿಸಿರುವುದು ಪ್ರಕೃತವಿಷಯಕ್ಕೆ ಸಂಗತವಾಗಿದೆ.

(ಭಾ.ದೀ.) ಆದಿಪದೇನ ಗ್ರಾಹ್ಯವಚನಾನಿ **ತತ್ತ್ವಪ್ರದೀಪೇ** ಉದಾಹೃತಾನಿ । ತಥಾಹಿ –

ಭಾಷ್ಯದಲ್ಲಿ 'ಇತ್ಯಾದಿನಾ' ಎಂಬಲ್ಲಿರುವ ಆದಿಪದದಿಂದ ಗ್ರಹಿಸಬೇಕಾದ ವಚನಗಳು ತತ್ತ್ವಪ್ರದೀಪದಲ್ಲಿ ಮುಂದೆ ತೋರಿಸಿದಂತೆ ಉದಾಹರಿಸಲ್ಪಟ್ಟಿವೆ.

(ಭಾ.ದೀ.) 'ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥
ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ॥' - ಇತ್ಯಾರಭ್ಯ

'ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥'
ಇತಿ ಭಗವದ್ವಚನಂ (ಭ.ಗೀ.೧೬.೬-೨೯)

'ಈ ಲೋಕದಲ್ಲಿ ಜೀವರ ಸೃಷ್ಟಿಯು ದೈವ, ಆಸುರ ಎಂಬುದಾಗಿ ಎರಡು ವಿಧವಾಗಿದೆ. ದೈವಸೃಷ್ಟಿಯನ್ನು ವಿಸ್ತಾರವಾಗಿ ಹೇಳಲಾಗಿದೆ. ಹೇ ಪಾರ್ಥ! ಆಸುರ ಸೃಷ್ಟಿಯನ್ನು ಹೇಳುವೆನು ಕೇಳು. ಆ ಅಸುರರು ಈ ಜಗತ್ತನ್ನು ಅಸತ್ಯವೆಂದೂ, ಅಶಾಶ್ವತವೆಂದೂ ಈಶ್ವರರಹಿತವೆಂದೂ ಹೇಳುವರು' – ಎಂದಾರಂಭಿಸಿ,

'ನಾನು ನನ್ನನ್ನು ದ್ವೇಷಿಸುವ ಕ್ರೂರರಾದ ಆ ನರಾಧಮರನ್ನು ಸಂಸಾರಗಳಲ್ಲೇ ಹಾಕುವೆನು; ಅತ್ಯಂತ ಅಮಂಗಳರಾದ ಅವರನ್ನು ಆಸುರಯೋನಿಗಳಲ್ಲೇ ಹುಟ್ಟುವಂತೆ ಮಾಡುವೆನು' ಎಂದು ಭಗವಂತನ ವಾಕ್ಯ (ಗೀತೆ).

'ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ತ ಆಸುರಾಃ ಸ್ವಯಂ ನಷ್ಟಾಃ ಜಗತಃ ಕ್ಷಯಕಾರಿಣಃ ॥ – ಇತಿ ವ್ಯಾಸಸ್ಮೃತಿಃ

'ಅವರು ಜಗತ್ತನ್ನು ಅಸತ್ಯವೆಂದೂ, ಅಶಾಶ್ವತವೆಂದೂ, ಈಶ್ವರರಹಿತವೆಂದು ಹೇಳುವರು. ಆ ಅಸುರರು ತಾವು ನಾಶವಾಗುವುದಲ್ಲದೇ ಜಗತ್ತನ್ನು ನಾಶಗೊಳಿಸುವರು' ಎಂದು ವ್ಯಾಸಸ್ಮೃತಿ.

'ಇಂದ್ರಾಸೋಮಾ ತಪತಂ ರಕ್ಷ ಉಜ್ಜತಂ ನ್ಯರ್ಪಯತಂ ವೃಷಣಾ ತಮೋವೃಧಃ।
ಪರಾಶೃಣೀತಮಚಿತೋ ನ್ಯೋಷತಂ ಹತಂ ನುದೇಥಾಂ ನಿಶಿಶೀತಮತ್ರಿಣಃ॥'

(ಋ.೭-೧೦೪-೧)

'ಇಂದ್ರಾಸೋಮಾ ವರ್ತಯತಂ ದಿವಸ್ಪರ್ಯಗ್ನಿತಪ್ತೇಭಿರ್ಯುವಮಶ್ಮಹನ್ಮಭಿಃ।
ತಪುರ್ವಧೇಭಿರಜರೇಭಿರತ್ರಿಣಃ॥' (ಋ.೭-೧೦೪-೫) ಇತ್ಯಾದಿಕಾ ಶ್ರುತಿಃ।

ಯೇಷಾಂ ಭಿಜ್ಜಗದೀಶ್ವರಜೀವಾನಾಂ ನಾಸ್ತಿ ತೇಽತ್ರಿಣಃ।
ಸ್ವಾಜ್ಞಾನಕಲ್ಪಿತಜಗತ್ಪರಮೇಶ್ವರಸ್ಯ ಜೀವಸ್ಯ ಭೇದಕಲುಷೀಕೃತಭೂಮಭಾವೇ॥
ಇತಿ ಹಿ ಮಾಯಿನೋ ವದಂತಿ।

'ಆಚ್ಛಾದ್ಯ ವಿಕ್ಷಿಪತಿ ಸಂಸ್ಫುರದಾತ್ಮತತ್ತ್ವಮ್।
ಜೀವೇಶ್ವರಸ್ಯ ಜಗದಾಕೃತಿ ತನ್ಮೃಷೈವ॥' ಇತ್ಯಾದಿ ಚ।

'ತ್ರಿರ್ಯಾತುಧಾನಃ ಪ್ರಸಿತಿಂ ತಯೇತ್ವೃತಂ ಯೋ ಅಗ್ನೇ ಅನೃತೇನ ಹಂತಿ।'

(ಋ.೧೦-೮೭-೧೧)

'ವಾಚಾ ಸ್ತೇನಂ ಶರವ ಋಚ್ಛಂತು ಮರ್ಮನ್ ವಿಶ್ವಸ್ಯೈತು ಪ್ರಸಿತಿಂ ಯಾತುಧಾನಃ।'

(ಋ.೧೦.೮೭-೧೫)

'ಅಥ ಜ್ಞಾನೋಪಸರ್ಗಾಃ' ಇತ್ಯಾರಭ್ಯ 'ಯೇ ಚಾನ್ಯೇ ಮಿಥ್ಯಾತರ್ಕೈರ್ದೃಷ್ಟಾಂತೈಃ ಕುಹಕೇಂದ್ರಜಾಲೈರ್ವೈದಿಕೇಷು ಪರಿಸ್ಥಾತುಮಿಚ್ಛಂತಿ ತೈಃ ಸಹ ನ ಸಂವಸೇತ್। ಪ್ರಕಾಶ್ಯಾ ಹ್ಯೇತೇ ತಸ್ಕರಾ ಅಸ್ವರ್ಗ್ಯಾಃ' (ಮೈತ್ರೀ.೭-೮) ಇತ್ಯಾದಿಶ್ರುತಿಶತೈರಂಧಂತಮ ಏವ ಮಾಯಿನಾಂ ಗತಿರಿತಿ ನಿಶ್ಚೀಯತೇ।

ತಥಾ ಚ ಸ್ಕಾಂದೇ –

'ಸರ್ವಬ್ರಹ್ಮತ್ವವೇತ್ತಾರೋ ಜೀವಬ್ರಹ್ಮತ್ವವೇದಿನಃ।
ಅನ್ಯಸಾಮ್ಯವಿದೋ ವಿಷ್ಣೋಃ ವಿಷ್ಣುದ್ವೇಷ್ಟಾರ ಏವ ಚ।
ಸರ್ವೇ ಯಾಂತಿ ತಮೋ ಘೋರಂ ನ ತೇಷಾಮುತ್ಥಿತಿಃ ಕ್ವಚಿತ್ ॥' ಇತಿ।

ಎಲ್ಲವನ್ನೂ ಬ್ರಹ್ಮವೆಂದು ತಿಳಿಯುವವರು, ಜೀವನನ್ನು ಬ್ರಹ್ಮನೆಂದು ತಿಳಿಯುವವರು, ವಿಷ್ಣುವು ಇತರ ಚೇತನರ ಸಾಮ್ಯವನ್ನು ಪಡೆದಿರುವನೆಂದು ಹೇಳುವವರು, ಹಾಗೆಯೇ ವಿಷ್ಣುವನ್ನು ದ್ವೇಷಿಸುವವರು ಇವರೆಲ್ಲರೂ ಘೋರವಾದ ತಮಸ್ಸನ್ನು ಸೇರುವರು. ಅವರಿಗೆ ಎಂದೂ ಆ ತಮಸ್ಸಿನಿಂದ ಹಿಂದಿರುಗುವಿಕೆ ಇರುವುದಿಲ್ಲ - ಎಂದು.

॥ ಇತಿ ಗುಹಾಧಿಕರಣಮ್ ॥ ૩ ॥

*****

## ೪. ಅಥ ಅಂತರಾಧಿಕರಣಮ್

ಭಾ- ಆದಿತ್ಯೇ ವಿಷ್ಣುರಿತ್ಯುಕ್ತಮ್। 'ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮಿ' (ಛಾಂ-೪-೧೧) ಇತ್ಯಾದಾವಗ್ನೀನಾಮೇವಾದಿತ್ಯಸ್ಥತ್ವಮುಚ್ಯತೇ।

ಆನಂದಮಯಾಧಿಕರಣದಲ್ಲಿ ಉದಾಹರಿಸಲಾದ (ಯಶ್ಚಾಸಾವಾದಿತ್ಯೇ ಎಂಬ) ಶ್ರುತಿಯಲ್ಲಿ ವಿಷ್ಣುವು ಆದಿತ್ಯನಲ್ಲಿರುವನೆಂದು ಹೇಳಿದೆ. ಆದರೆ 'ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮಿ' ಇತ್ಯಾದಿ ಶ್ರುತಿಯಲ್ಲಿ ಅಗ್ನಿಗಳಿಗೇ ಆದಿತ್ಯಾದಿಗಳಲ್ಲಿ ಇರುವಿಕೆಯನ್ನು ಹೇಳಲಾಗಿದೆ.

(ಭಾ.ದೀ.) ಅತ್ರಾಧಿಕರಣೇ ಚಕ್ಷುರಂತಃಸ್ಥತ್ವಲಿಂಗಂ ಬ್ರಹ್ಮಣಿ ಸಮನ್ವೀಯತೇ। ಶ್ರುತ್ಯಾದಿಸಂಗತಿಂ ವಿಷಯವಾಕ್ಯಂ ವಿಷಯಸಂಶಯೌ ಸಯುಕ್ತಿಕಂ ಪೂರ್ವಪಕ್ಷಂ ಚ

ದರ್ಶಯತಿ– **ಆದಿತ್ಯ ಇತಿ** ॥ 'ಯಶ್ಚಾಸಾವಾದಿತ್ಯೇ' ಇತ್ಯಾನಂದಮಯಾಧಿಕರಣೋ-ದಾಹೃತಾಯಾಂ ತಥಾ 'ಅಂತರಾದಿತ್ಯೇ' ಇತ್ಯಂತರ್ನಯೋದಾಹೃತಾಯಾಂ ಚ ಶ್ರುತೌ ಆನಂದಮಯೋಽಂತಃಸ್ಥೋ ವಿಷ್ಣುರಾದಿತ್ಯೇಽಸ್ತೀತ್ಯುಕ್ತಮಿತ್ಯರ್ಥಃ । ತತಃ ಕಿಮ್? ಇತ್ಯತ ಆಹ – **ಯ ಇತಿ** ॥ 'ತತ್' ಇತ್ಯಾದೌ ಸಂಯೋಜ್ಯಮ್ । 'ಸೋಽಹಂ ಸ ಏವಾಹಮ್' ಇತ್ಯಭ್ಯಾಸೋಪನ್ಯಾಸಃ ಪೂರ್ವಪಕ್ಷಯುಕ್ತಿಪ್ರದರ್ಶನಾರ್ಥಃ। ಪ್ರಥಮಾ -ದಿಪದೇನ 'ಅಥೈನಮನ್ವಾಹಾರ್ಯಪಚನೋಽನುಶಶಾಸ । ಯ ಏಷ ಚಂದ್ರಮಸಿ ಪುರುಷೋ ದೃಶ್ಯತೇ। ಸೋಽಹಮಸ್ಮಿ ಸ ಏವಾಹಮಸ್ಮಿ।' 'ಅಥೈನಮಾಹವನೀಯೋ-ಽನುಶಶಾಸ। ಯ ಏಷ ವಿದ್ಯುತಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮಿ' ಇತಿ ಚ ವಾಕ್ಯದ್ವಯಂ ಗೃಹ್ಯತೇ। ದ್ವಿತೀಯಾದಿಪದೇನ ಚಂದ್ರವಿದ್ಯುತ್ಸ್ಥತ್ವಮ್।

ಯದ್ಯಪಿ ಆದಿತ್ಯಸ್ಥತ್ವಸ್ಯೇವ ಚಂದ್ರವಿದ್ಯುತ್ಸ್ಥತ್ವಯೋರಗ್ನೇರಕ್ಷಿಸ್ಥತ್ವಸಾಧಕತ್ವಾ-ಭಾವಾತ್ ತದುಪಾದಾನಂ ನ ಪ್ರಕೃತೋಪಯುಕ್ತಮ್ । ತಥಾ 'ಅಗ್ನೀನಾಮ್' ಇತಿ ಬಹುವಚನಂ ಚಾನುಪಯುಕ್ತಮ್ । ಪೂರ್ವಪಕ್ಷೇ ಗಾರ್ಹಪತ್ಯಸ್ಯೈವ ಅಕ್ಷಿಸ್ಥತ್ವ-ಸಾಧನೇನ ಗಾರ್ಹಪತ್ಯಾದೀನಾಂ ತ್ರಯಾಣಾಂ ತಸ್ಯಾಸಾಧನಾತ್ । ಚಂದ್ರ-ವಿದ್ಯುತೋರಕ್ಷ್ಯೇಕವಿಧತ್ವಾಭಾವೇನ ತತ್ಸ್ಥತ್ವಸ್ಯಾಕ್ಷಿತ್ವಾಸಾಧಕತ್ವಾಚ್ಚ । ತಥಾಪಿ ಆದಿಶಬ್ದದ್ವಯಂ ಬಹುವಚನಂ ಚ ಪೂರ್ವಪಕ್ಷೇ ಗಾರ್ಹಪತ್ಯಾದಿಬಹ್ವಗ್ನಿಶ್ರುತಿರೂಪ-ಯುಕ್ತಿಸೂಚನಾರ್ಥಮ್ । ಯಥಾ ಅನ್ವಾಹಾರ್ಯಪಚನಾಖ್ಯದಕ್ಷಿಣಾಗ್ನ್ಯಾಹವ-ನೀಯಯೋಃ ಚಂದ್ರವಿದ್ಯುತ್ಸ್ಥತ್ವಮುಚ್ಯತೇ ಏವಂ ಗಾರ್ಹಪತ್ಯಸ್ಯಾಪಿ ಆದಿತ್ಯಸ್ಥತ್ವ-ಮುಚ್ಯತ ಇತಿ ದೃಷ್ಟಾಂತಾರ್ಥಂ ಗಾರ್ಹಪತ್ಯಾದೀನಾಂ ತ್ರಯಾಣಾಂ ಕ್ರಮೇಣ ಆದಿತ್ಯಾದಿತ್ರಿತಯಸ್ಥತ್ವೇ ಪ್ರಸಿದ್ಧಗಾರ್ಹಪತ್ಯಸ್ಯೈವ ಆದಿತ್ಯಸ್ಥತ್ವಮುಖೇನಾಕ್ಷಿಸ್ಥತ್ವಮ್ ಆಗಚ್ಛತೀತಿ ಯುಕ್ತಿಪ್ರದರ್ಶನಾರ್ಥಂ ವಾ ತದುಪಾದಾನಮಿತಿ ನ ವೈಯರ್ಥ್ಯಮಿತಿ ಧ್ಯೇಯಮ್।

ಈ ಅಧಿಕರಣದಲ್ಲಿ ಚಕ್ಷುರಂತಃಸ್ಥತ್ವವೆಂಬ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುವುದು. ಶ್ರುತಿ ಮೊದಲಾದವುಗಳ ಸಂಗತಿಯನ್ನು, ವಿಷಯವಾಕ್ಯವನ್ನು,

ಈ ಅಧಿಕರಣದ ವಿಷಯ ಮತ್ತು ಸಂಶಯಗಳನ್ನು ಹಾಗೆಯೇ ಸಯುಕ್ತಿಕವಾದ ಪೂರ್ವಪಕ್ಷವನ್ನು ''ಆದಿತ್ಯೇ'' ಎಂಬ ವಾಕ್ಯದಿಂದ ಭಾಷ್ಯಕಾರರು ತೋರಿಸುತ್ತಿದ್ದಾರೆ. 'ಯಶ್ಚಾಸಾವಾದಿತ್ಯೇ' ಎಂಬ ಆನಂದಮಯಾಧಿಕರಣದಲ್ಲಿ ಉದಾಹರಿಸಿರುವ ಶ್ರುತಿಯಲ್ಲಿ ಹಾಗೆಯೇ 'ಅಂತರಾದಿತ್ಯೇ' ಎಂಬ ಅಂತಃಸ್ಥತ್ವಾಧಿಕರಣದಲ್ಲಿ ಉದಾಹರಿಸಲಾದ ಶ್ರುತಿಯಲ್ಲಿ ಆನಂದಮಯನೂ, ಅಂತಃಸ್ಥನೂ ಆದ ವಿಷ್ಣುವು ಆದಿತ್ಯನಲ್ಲಿರುವನೆಂದು ಹೇಳಲಾಗಿದೆ ಎಂದು ಅರ್ಥ. ಮುಂದೇನು? ಎಂಬ ಶಂಕೆಗೆ ಉತ್ತರವಾಗಿ 'ಯ ಏಷ ಆದಿತ್ಯೇ' ಎಂದು ಭಾಷ್ಯದಲ್ಲಿ ಹೇಳಿದೆ. 'ತತ್' ಎಂಬ ಪದವನ್ನು ಈ ವಾಕ್ಯದ ಆದಿಯಲ್ಲಿ ಸೇರಿಸಬೇಕು. 'ಸೋಽಹಂ ಸ ಏವಾಹಮ್' ಎಂದು ಅಭ್ಯಾಸವಿರುವ ವಾಕ್ಯವನ್ನು ಉದಾಹರಿಸಿರುವುದು ಪೂರ್ವಪಕ್ಷದ ಯುಕ್ತಿಯನ್ನು ತೋರಿಸುವ ಉದ್ದೇಶದಿಂದ. ಭಾಷ್ಯದಲ್ಲಿ 'ಇತ್ಯಾದೌ' ಎಂಬಲ್ಲಿರುವ ಮೊದಲನೆಯ ಆದಿಪದದಿಂದ ''ಅಥೈನಮನ್ವಾಹಾರ್ಯಪಚನೋಽನುಶಶಾಸ । ಯ ಏಷ ಚಂದ್ರಮಸಿ ಪುರುಷೋ ದೃಶ್ಯತೇ । ಸೋಽಹಮಸ್ಮಿ ಸ ಏವಾಹಮಸ್ಮಿ ।' 'ಅಥೈನಮಾಹವನೀಯೋಽನುಶಶಾಸ । ಯ ಏಷ ವಿದ್ಯುತಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮಿ' ಎಂಬ ಎರಡು ವಾಕ್ಯಗಳು ಗ್ರಹಿಸಲ್ಪಡುತ್ತವೆ. ಆದಿತ್ಯಾದಿಸ್ಥತ್ವಮುಚ್ಯತೇ ಎಂಬಲ್ಲಿರುವ ಎರಡನೆಯ ಆದಿಪದದಿಂದ 'ಚಂದ್ರಸ್ಥತ್ವ ಮತ್ತು ವಿದ್ಯುತ್ಸ್ಥತ್ವಗಳು ಗ್ರಹಿಸಲ್ಪಡುತ್ತವೆ.

ಯದ್ಯಪಿ ಆದಿತ್ಯಸ್ಥತ್ವವು ಹೇಗೆ ಅಗ್ನಿಯು ಅಕ್ಷಿಸ್ಥನೆಂದು ಸಾಧಿಸುವುದೋ ಹಾಗೆ ಚಂದ್ರಸ್ಥತ್ವ ಮತ್ತು ವಿದ್ಯುತ್ಸ್ಥತ್ವಗಳು ಅಗ್ನಿಯೇ ಅಕ್ಷಿಸ್ಥನಾಗಿರುವನೆಂದು ಸಾಧಿಸಲು ಸಹಾಯಕವಾಗದಿರುವುದರಿಂದ ಭಾಷ್ಯದಲ್ಲಿ ಅವುಗಳನ್ನು ಹೇಳಿರುವುದು ಪ್ರಕೃತಕ್ಕೆ ಉಪಯುಕ್ತವಲ್ಲ. ಹಾಗೆಯೇ 'ಅಗ್ನೀನಾಮ್' ಎಂದು ಭಾಷ್ಯದಲ್ಲಿ ಪ್ರಯೋಗಿಸಿರುವ ಬಹುವಚನವೂ ಅನುಪಯುಕ್ತವೇ ಆಗಿದೆ. ಏಕೆಂದರೆ, ಪೂರ್ವಪಕ್ಷದಲ್ಲಿ ಗಾರ್ಹಪತ್ಯಾಗ್ನಿಗೆ ಮಾತ್ರ ಅಕ್ಷಿಸ್ಥತ್ವವನ್ನು ಸಾಧಿಸಲಾಗುವುದೇ ಹೊರತು ಗಾರ್ಹಪತ್ಯ ಮೊದಲಾದ ಮೂರು ಅಗ್ನಿಗಳಿಗೂ ಅಕ್ಷಿಸ್ಥತ್ವವನ್ನು ಸಾಧಿಸುವುದಿಲ್ಲ. ಅಲ್ಲದೇ ಚಂದ್ರ ಮತ್ತು ವಿದ್ಯುತ್ತುಗಳು ಅಕ್ಷಿಯಿಂದ ಏಕರೂಪತೆಯನ್ನು ಹೊಂದಿಲ್ಲವಾದ್ದರಿಂದ ಚಂದ್ರಸ್ಥತ್ವ

ವಿದ್ಯುತ್ಸ್ಥತ್ವಗಳು ಅಕ್ಷಿಸ್ಥತ್ವಕ್ಕೆ ಸಾಧಕಗಳೂ ಆಗಿಲ್ಲ. ಆದರೂ ಎರಡು ಆದಿಶಬ್ದಗಳು ಮತ್ತು ಬಹುವಚನವನ್ನು ಗಾರ್ಹಪತ್ಯ ಮೊದಲಾದ ಅನೇಕ ಅಗ್ನಿಗಳನ್ನು ಹೇಳುವ ಶಬ್ದಗಳಿವೆ ಎಂಬ ಪೂರ್ವಪಕ್ಷದಲ್ಲಿ ಯುಕ್ತಿಸೂಚನೆಗಾಗಿ ಪ್ರಯೋಗಿಸಲಾಗಿದೆ. ಅಥವಾ, ಹೇಗೆ ಅನ್ವಾಹಾರ್ಯಪಚನವೆಂದು ಕರೆಯಲ್ಪಡುವ ದಕ್ಷಿಣಾಗ್ನಿ ಮತ್ತು ಆಹ-ವನೀಯಾಗ್ನಿಗಳಿಗೆ ಕ್ರಮವಾಗಿ ಚಂದ್ರಸ್ಥತ್ವ, ವಿದ್ಯುತ್ಸ್ಥತ್ವಗಳು ಹೇಳಲ್ಪಡುತ್ತವೋ, ಹಾಗೆಯೇ ಗಾರ್ಹಪತ್ಯಾಗ್ನಿಗೂ ಆದಿತ್ಯಸ್ಥತ್ವವು ಹೇಳಲ್ಪಟ್ಟಿದೆ ಎಂದು ದೃಷ್ಟಾಂತವನ್ನು ಹೇಳುವ ಸಲುವಾಗಿ ಅಥವಾ ಗಾರ್ಹಪತ್ಯ ಮೊದಲಾದ ಮೂರು ಅಗ್ನಿಗಳಿಗೆ ಕ್ರಮವಾಗಿ ಆದಿತ್ಯ ಮೊದಲಾದ ಮೂರರಲ್ಲಿ ಇರುವಿಕೆಯನ್ನು ಹೇಳಿದಾಗ ಪ್ರಸಿದ್ಧ ಗಾರ್ಹ-ಪತ್ಯಾಗ್ನಿಗೇ ಆದಿತ್ಯಸ್ಥತ್ವದ ಮೂಲಕವಾಗಿ ಅಕ್ಷಿಸ್ಥತ್ವವೂ ಲಭಿಸುವುದು ಎಂಬ ಪೂರ್ವ-ಪಕ್ಷಯುಕ್ತಿಯನ್ನು ಪ್ರದರ್ಶಿಸುವ ಸಲುವಾಗಿ ಎರಡು ಆದಿಶಬ್ದಗಳನ್ನು ಬಹು-ವಚನವನ್ನೂ ಪ್ರಯೋಗಿಸಲಾಗಿದೆಯಾದ್ದರಿಂದ ಅವುಗಳಿಗೆ ವೈಯರ್ಥ್ಯವಿಲ್ಲ ಎಂದು ತಿಳಿಯಬೇಕು.

**ಭಾ– ಅತೋಽಕ್ಷ್ಯಾದಿತ್ಯಯೋರೈಕ್ಯಾದ್ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಇತ್ಯತ್ರಾಪ್ಯಗ್ನಿರೇವೋಚ್ಯತೇ।**

ಆದ್ದರಿಂದ ಅಕ್ಷಿ ಮತ್ತು ಆದಿತ್ಯರಿಗೆ ಅಭೇದವಿರುವುದರಿಂದ ''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ'' ಎಂಬ ವಾಕ್ಯದಲ್ಲೂ ಅಕ್ಷಿಸ್ಥನೆಂದು ಅಗ್ನಿಯೇ ಹೇಳಲ್ಪಟ್ಟಿದ್ದಾನೆ.

(ಭಾ.ದೀ.) ತತೋಽಪಿ ಕಿಮ್? ಇತ್ಯತ ಆಹ – **ಅತ ಇತಿ ॥** ಅಸ್ಯ, ನ ಸನ್ನಿಹಿತೇನ 'ಐಕ್ಯಾತ್' ಇತ್ಯನೇನಾನ್ವಯಃ। ಪ್ರಕೃತಸ್ಯ 'ಅತಃ' ಇತ್ಯನೇನ ಪರಾಮೃಷ್ಟಸ್ಯ ಆದಿತ್ಯಾಂತಃಸ್ಥತ್ವಸ್ಯ ಐಕ್ಯೇ ಹೇತುತ್ವಾಯೋಗಾತ್ । ಕಿಂತು ವ್ಯವಹಿತೇನ 'ಅತ್ರಾಪ್ಯಗ್ನಿ-ರೇವೋಚ್ಯತೇ' ಇತ್ಯನೇನಾನ್ವಯಃ। 'ನ ಕೇವಲಮಾದಿತ್ಯವಾಕ್ಯೇ' ಇತ್ಯಪೇರರ್ಥಃ।

ತಥಾಚ – ಯತ್ ಆನಂದಮಯಾಖ್ಯವಿಷ್ಣುನಿಷ್ಠತಯೋಕ್ತಮಾದಿತ್ಯಸ್ಥತ್ವಂ ತತ್ ಛಾಂದೋಗ್ಯೇ 'ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ' ಇತ್ಯಾದೌ ಅಗ್ನೀನಾಂ

ಗಾರ್ಹಪತ್ಯಾಖ್ಯಾಗ್ನೇರೇವ 'ಉಚ್ಯತೇ' ಪ್ರತೀಯತೇ ನ ವಿಷ್ಣೋಃ । ಕುತಃ? ಯತೋಽತ್ರ 'ಅಗ್ನೀನಾಂ' ಗಾರ್ಹಪತ್ಯದಕ್ಷಿಣಾಗ್ನ್ಯಾಹವನೀಯಾನಾಂ ತ್ರಯಾಣಾಂ ಕ್ರಮೇಣ ಆದಿತ್ಯಾದಿಸ್ಥತ್ವಮುಚ್ಯತೇ ಅತಃ। ತತಃ ಕಿಮ್? ಯತೋಽತ್ರ ಗಾರ್ಹಪತ್ಯಾ-ಖ್ಯಾಗ್ನೇರೇವಾಽದಿತ್ಯಸ್ಥತ್ವಮುಚ್ಯತೇಽತೋ 'ಯ ಏಷೋಽಂತರಿಕ್ಷಿಣಿ ಪುರುಷೋ ದೃಶ್ಯತೇ' ಇತಿ ವಾಕ್ಯೇಽಪಿ ಅಕ್ಷಿಸ್ಥತ್ವೇನ ಗಾರ್ಹಪತ್ಯಾಗ್ನಿರೇವ ಉಚ್ಯತೇ ನ ಸ ವಿಷ್ಣುಃ। ಶ್ರುತಿಗತಾಹಂಶಬ್ದೇನಾಪಿ ಸ ಏವೋಚ್ಯತೇ ಇತಿ ಯೋಜನಾ।

ತಥಾಚ – ಪೂರ್ವಪಕ್ಷೇ ಶ್ರುತಿಗತಾಹಂಶಬ್ದೋಽಗ್ನಾವೇವ ಮುಖ್ಯ ಇತಿ ತಸ್ಯೈವ ಗ್ರಹಣಮ್ ಇತಿ ಭಾವಃ । ನನ್ವಗ್ನೇರಾದಿತ್ಯಸ್ಥತ್ವೇಽಪಿ ಕುತೋಽಕ್ಷಿಸ್ಥತ್ವಪ್ರಾಪ್ತಿಃ? ಇತ್ಯತ ಆಹ– **ಅಕ್ಷ್ಯಾದಿತ್ಯಯೋರಿತಿ ॥** 'ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್' ಇತ್ಯೈ-ತರೇಯಶ್ರುತೇರಚೇತನಾಕ್ಷ್ಯಾದಿತ್ಯಮಂಡಲಯೋರಾದಿತ್ಯಚಕ್ಷುಃಪದೋದಿತೈಕ-ಚೇತನಾಧಿಷ್ಠಿತತ್ವರೂಪೈಕಧರ್ಮೇಣೈಕವಿಧತ್ವಾದಿತ್ಯರ್ಥಃ।

ಯದ್ವಾ– ಅಂಶನಯೋರುದಾಹೃತಾದಿತ್ಯಸ್ತ್ರಿವೃತ್ ಸ್ತ್ರಿವೃದಿವ ವೈ ಚಕ್ಷುಃ ಶುಕ್ಲಂ ಕೃಷ್ಣಂ ಕನೀನಿಕಾ ಇತಿ ಶ್ರುತ್ಯನುಸಾರೇಣ ತಯೋಸ್ತ್ರಿವೃತ್ತ್ವಧರ್ಮೇಣೈಕವಿಧತ್ವಾದಿತ್ಯರ್ಥಃ । ತಥಾಚ – ಆದಿತ್ಯಸ್ಥತ್ವೋಕ್ತಾವರ್ಥಾದಕ್ಷಿಸ್ಥತ್ವಮಪಿ ಪ್ರಾಪ್ತಮೇವ ಇತಿ ಭಾವಃ । ಯದ್ಯಪಿ 'ಸ ಯಶ್ಚಾಯಮ್' ಇತಿ ಪೂರ್ವೋದಾಹೃತತೈತ್ತಿರೀಯಶ್ರುತಿಸ್ಥಾದಿತ್ಯಶಬ್ದಃ ಉತ್ಕೃಷ್ಟಚೇತನಮಾತ್ರೋಪಲಕ್ಷಕತಯಾ ವ್ಯಾಖ್ಯಾತಃ । ತಥಾಽಪಿ ಅತ್ರಾಧಿಕರಣೇ ಸೂರ್ಯಾಭಿಮನ್ಯಮಾನಾದಿತ್ಯಮಂಡಲಪರತ್ವಮಪಿ ಅಸ್ಯ ಅಂಗೀಕೃತ್ಯ ಆಕ್ಷೇಪಪರಿ-ಹಾರೌ ಕೃತೌ । ಅತ ಏವ ಟೀಕಾಯಾಮಕ್ಷ್ಯಾದಿತ್ಯಯೋರೇಕವಿಧತ್ವಾದ್ಯುಕ್ತಮ್ । ತತ್ತ್ವಪ್ರದೀಪೇ ತು 'ಅಕ್ಷೀಂದ್ರಿಯಪ್ರೇರಕಾದಿತ್ಯಯೋರೇಕತ್ವಾತ್' ಇತಿ ಯಥಾಶ್ರುತ-ಮೇವ ವ್ಯಾಖ್ಯಾತಮ್ ।

ಅಗ್ನಿಗಳೇ ಆದಿತ್ಯಾದಿಸ್ಥರೆಂದು ಹೇಳಿದ್ದರಿಂದಲೂ ಏನು ಬಾಧಕ? ಎಂಬ ಶಂಕೆಗೆ ಉತ್ತರವಾಗಿ ಅತಃ ಎಂದು ಹೇಳಲಾಗಿದೆ. ಅತಃ ಎಂಬ ಈ ಪದಕ್ಕೆ ಸಮೀಪದಲ್ಲಿರುವ

**ಐಕ್ಯಾತ್** ಎಂಬ ಪದದೊಂದಿಗೆ ಅನ್ವಯವಾಗುವುದಿಲ್ಲ. ಏಕೆಂದರೆ, ಪ್ರಕೃತವಾದ '**ಅತಃ**' ಎಂಬ ಪದದಿಂದ ಪರಾಮರ್ಶಿಸಲ್ಪಡುವ ಆದಿತ್ಯಾಂತಃಸ್ಥತ್ವವು ಅಕ್ಷ್ಯಾದಿತ್ಯಸ್ಥಗಳ ಅಭೇದಕ್ಕೆ ಹೇತುವಾಗಲು ಸಾಧ್ಯವಿಲ್ಲ. ಆದ್ದರಿಂದ ಸ್ವಲ್ಪದೂರದಲ್ಲಿರುವ '**ಅತ್ರಾಪಿ ಅಗ್ನಿರೇವೋಚ್ಯತೇ**', ಎಂಬ ವಾಕ್ಯದೊಂದಿಗೆ ಈ ಪದಕ್ಕೆ ಅನ್ವಯವಾಗುವುದು. 'ಇತ್ಯ-ತ್ರಾಪಿ' ಎಂಬಲ್ಲಿರುವ ಅಪಿಶಬ್ದಕ್ಕೆ 'ಆದಿತ್ಯವಾಕ್ಯದಲ್ಲಿ ಮಾತ್ರವಲ್ಲ; ಯ ಏಷೋಂತ-ರಕ್ಷಿಣಿ ಎಂಬ ವಾಕ್ಯದಲ್ಲೂ' ಎಂದು ಅರ್ಥ.

ತಥಾಚ – ಆನಂದಮಯನೆಂದು ಕರೆಯಲ್ಪಡುವ ವಿಷ್ಣುವಿನಲ್ಲಿ ಇರುವುದೆಂದು ಯಾವ ಆದಿತ್ಯಸ್ಥತ್ವವನ್ನು ಹೇಳಲಾಗಿದೆಯೋ ಅದು ಛಾಂದೋಗ್ಯದಲ್ಲಿ '**ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ**' ಇತ್ಯಾದಿವಾಕ್ಯಗಳಲ್ಲಿ, **ಅಗ್ನೀನಾಂ** - ಗಾರ್ಹ-ಪತ್ಯವೆಂಬ ಅಗ್ನಿಗೇ, **ಉಚ್ಯತೇ** - ಇರುವುದೆಂದು ತೋರುವುದು ಹೊರತು ವಿಷ್ಣುವಿ-ಗಲ್ಲ. ಏಕೆಂದರೆ? ಈ ವಾಕ್ಯಗಳಲ್ಲಿ '**ಅಗ್ನೀನಾಂ**' - ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವ-ನೀಯವೆಂಬ ಮೂರು ಅಗ್ನಿಗಳಿಗೆ ಕ್ರಮವಾಗಿ ಆದಿತ್ಯಾದಿಸ್ಥತ್ವವನ್ನು ಹೇಳಲಾಗಿದೆ; ಆದ್ದರಿಂದ. ಅದರಿಂದೇನು? ಯಾವ ಕಾರಣಕ್ಕಾಗಿ ಈ ವಾಕ್ಯದಲ್ಲಿ ಗಾರ್ಹಪತ್ಯಾಗ್ನಿಗೇ ಆದಿತ್ಯಸ್ಥತ್ವವನ್ನು ಹೇಳಲಾಗಿದೆಯೋ ಆದ್ದರಿಂದ '**ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ**' ಎಂಬ ವಾಕ್ಯದಲ್ಲೂ ಅಕ್ಷಿಸ್ಥನೆಂದು ಗಾರ್ಹಪತ್ಯಾಗ್ನಿಯೇ ಹೇಳ-ಲ್ಪಟ್ಟಿದ್ದಾನೆ. ಹೊರತು ವಿಷ್ಣುವಲ್ಲ. '**ಸೋಽಹಂ**' ಎಂಬ ಶ್ರುತಿಯಲ್ಲಿರುವ ಅಹಂ-ಶಬ್ದದಿಂದಲೂ ಅವನೇ ಹೇಳಲ್ಪಡುವನು - ಎಂದು ಯೋಜನೆ.

ತಥಾಚ - ಪೂರ್ವಪಕ್ಷದಲ್ಲಿ ಶ್ರುತಿಯಲ್ಲಿರುವ ಅಹಂಶಬ್ದವು ಅಗ್ನಿಗೇ ಮುಖ್ಯ-ವಾದುದರಿಂದ ಅಗ್ನಿಯನ್ನೇ ಆ ಶಬ್ದದಿಂದ ಗ್ರಹಿಸಬೇಕೆಂದು ಭಾವ. ಅಗ್ನಿಯು ಆದಿತ್ಯಸ್ಥ-ನೆಂದು ಸಿದ್ಧವಾದರೂ ಅವನಿಗೆ ಅಕ್ಷಿಸ್ಥತ್ವವು ಹೇಗೆ ಲಭಿಸುವುದು? ಎಂಬ ಶಂಕೆಗೆ ಉತ್ತರವಾಗಿ - '**ಅಕ್ಷ್ಯಾದಿತ್ಯಯೋಃ**' ಎಂದು ಹೇಳಲಾಗಿದೆ. '**ಆದಿತ್ಯಃ ಚಕ್ಷು-ರ್ಭೂತ್ವಾಽಕ್ಷಿಣೀ ಪ್ರಾವಿಶತ್**' - ಆದಿತ್ಯನು ಚಕ್ಷುಸ್ಸಾಗಿ ಅಕ್ಷಿಗಳನ್ನು ಪ್ರವೇಶಿಸಿದನು-ಎಂದು ಐತರೇಯಶ್ರುತಿಯಿಂದ ಅಚೇತನವಾದ ಅಕ್ಷಿ ಮತ್ತು ಆದಿತ್ಯಮಂಡಲಗಳು ಆದಿತ್ಯ ಮತ್ತು ಚಕ್ಷುಸ್ಸು ಎಂಬ ಪದಗಳು ಹೇಳುವ ಒಬ್ಬನೇ ಚೇತನನಿಂದ ಅಧಿಷ್ಠಿತ-

ವಾಗಿವೆ. ಆದ್ದರಿಂದ ಏಕಚೇತನಾಧಿಷ್ಠಿತತ್ವವೆಂಬ ಒಂದು ಧರ್ಮವನ್ನು ಪಡೆದು ಏಕ-ವಿಧವಾಗಿವೆಯಾದ್ದರಿಂದ ಎಂದು ಅರ್ಥ.

ಅಥವಾ – ''ಅಂಶನಯೋದಾಹೃತಾದಿತ್ಯಃ ತ್ರಿವೃತ್ ತ್ರಿವೃದಿವ ವೈ ಚಕ್ಷುಃ ಶುಕ್ಲಂ ಕೃಷ್ಣಂ ಕನೀನಿಕಾ'' ಎಂಬ ಶ್ರುತಿಯಲ್ಲಿ ಹೇಳಿರುವಂತೆ ಅಕ್ಷಿ ಮತ್ತು ಆದಿತ್ಯರಿಗೆ ತ್ರಿವೃತ್ತ್ವವೆಂಬ ಧರ್ಮದ ಮೂಲಕ ಏಕವಿಧತ್ವವಿರುವುದರಿಂದ(೧) ಎಂದು ಅರ್ಥ. ತಥಾ ಚ – ಅಗ್ನಿಗೆ ಆದಿತ್ಯಸ್ಥತ್ವವನ್ನು ಹೇಳಿದಾಗ ಅರ್ಥಾತ್ ಅಕ್ಷಿಸ್ಥತ್ವವೂ ಪ್ರಾಪ್ತವಾಗುವು-ದೆಂದು ಭಾವ. ಯದ್ಯಪಿ 'ಸ ಯಶ್ಚಾಯಂ ಪುರುಷೇ' ಎಂದು ಹಿಂದೆ ಉದಾಹರಿಸಲಾದ ತೈತ್ತಿರೀಯ ಶ್ರುತಿಯಲ್ಲಿರುವ ಆದಿತ್ಯಶಬ್ದವು ಉತ್ಕೃಷ್ಟಚೇತನವನ್ನು ಮಾತ್ರ ಲಕ್ಷಣಾವೃತ್ತಿ-ಯಿಂದ ಹೇಳುವುದೆಂದು ವ್ಯಾಖ್ಯಾನಮಾಡಲಾಗಿದೆ. ಆದರೂ ಈ ಅಧಿಕರಣದಲ್ಲಿ ಆದಿತ್ಯಶಬ್ದವು ಸೂರ್ಯನಿಂದ ಅಭಿಮನ್ಯಮಾನವಾದ ಆದಿತ್ಯಮಂಡಲಪರವೂ ಆಗಿದೆ ಎಂದು ಅಂಗೀಕರಿಸಿ ಆಕ್ಷೇಪಪರಿಹಾರಗಳನ್ನು ಮಾಡಲಾಗಿದೆ. ಆದ್ದರಿಂದಲೇ ತತ್ತ್ವ-ಪ್ರಕಾಶಿಕೆಯಲ್ಲಿ ಅಕ್ಷ್ಯಾದಿತ್ಯರಿಗೆ ಏಕವಿಧತ್ವವನ್ನು ಹೇಳಲಾಗಿದೆ. ತತ್ತ್ವಪ್ರದೀಪ-ದಲ್ಲಾದರೋ ಚಕ್ಷುರಿಂದ್ರಿಯಪ್ರೇರಕದೇವತೆ ಮತ್ತು ಆದಿತ್ಯ ಇವರಿಬ್ಬರೂ ಒಬ್ಬರೇ ಆಗಿರುವರೆಂದು ಯಥಾಶ್ರುತವಾಗಿಯೇ ವ್ಯಾಖ್ಯಾನಮಾಡಲಾಗಿದೆ.

(೧) ಅಂಶಾಧಿಕರಣಭಾಷ್ಯದಲ್ಲಿ, 'ಅಸಾವಾದಿತ್ಯಃ ತ್ರಿವೃತ್ ತ್ರಿವೃದಿವ ಚಕ್ಷುಃ ಶುಕ್ಲಂ ಕೃಷ್ಣಂ ಕನೀನಿಕಾ' ಎಂಬ ಐತರೇಯೋಪನಿಷದ್ವಾಕ್ಯವನ್ನು ಉದಾ-ಹರಿಸಲಾಗಿದೆ. ಆ ಶ್ರುತಿಯಲ್ಲಿ ಅಕ್ಷಿ ಮತ್ತು ಆದಿತ್ಯರಿಗೆ ತ್ರಿವೃತ್ತ್ವ ಅಂದರೆ ಶುಕ್ಲ ಮೊದಲಾದ ರೂಪತ್ರಯದಿಂದ ಸಾಮ್ಯವನ್ನು ಹೇಳಿದೆ. ಆ ಏಕವಿಧತ್ವವು ಇಲ್ಲಿ ವಿವಕ್ಷಿತವೆಂದು ಭಾವ.

(ಭಾ.ದೀ.) **ಚಂದ್ರಿಕಾಯಾಮ**ಪಿ – ತತ್ತ್ವಪ್ರದೀಪಾನುಸಾರೇಣ ದೇವತಾಪರ-ಮೇವಾಕ್ಷಿಪದಮ್ । ಅತ ಏವ ಭಾಷ್ಯೇ ಸನ್ನ್ಯಾಯರತ್ನಾವಲ್ಯಾಂ ಚ 'ಅಕ್ಷ್ಯಾದಿತ್ಯ-ಯೋರೈಕ್ಯಾತ್' ಇತ್ಯೇವೋಕ್ತಮ್, ನ ತ್ವೇಕವಿಧತ್ವಾತ್ ಇತಿ । 'ಅಕ್ಷ್ಯಾದಿತ್ಯಯೋರೇಕ-ವಿಧತ್ವಾತ್' ಇತಿ ಟೀಕಾಽಪಿ ಭಾಷ್ಯಾನುಸಾರೇಣ ಪ್ರಕಾರಭೇದನಿಷೇಧಮುಖೇನ ಪ್ರಕಾರ್ಯೈಕ್ಯಪರಾ ನೇಯೇತಿ ಪಕ್ಷಾಂತರಮಪ್ಯುಕ್ತಮ್ । ತಥಾಚ – ದೇವತಾಪರತ್ವೇ

'ಆದಿತ್ಯೇ ವಿಷ್ಣುರಿತ್ಯುಕ್ತಮ್' ಇತಿ ಭಾಷ್ಯಶ್ರುತಿಸ್ಥಾಕ್ಷ್ಯಾದಿತ್ಯಪದಯೋಶ್ಚ ಯಥಾಶ್ರುತ ಏವಾರ್ಥಃ। ಮಂಡಲಪರತ್ವೇ ತದ್ಭಾಷ್ಯಸ್ಥಾದಿತ್ಯಪದಂ ಪೂರ್ವೋದಾಹೃತತೈತ್ತಿರೀಯ-ಶ್ರುತಿಸ್ಥಾದಿತ್ಯಪದಂ ಚ ಮಂಡಲಪರತಯಾ ವ್ಯಾಖ್ಯೇಯಮಿತಿ ವಿವೇಕಃ।

ಅನೇನ ಛಂದೋಗಶ್ರುತ್ಯುಕ್ತಾಕ್ಷಿಸ್ಥಸ್ಯ ಅನ್ಯನಿಷ್ಠತ್ವಾಕ್ಷೇಪಮುಖೇನ ಆನಂದ-ಮಯನಯೋದಾಹೃತಾಯಾಂ ತೈತ್ತಿರೀಯಶ್ರುತೌ ಅರ್ಥಾದುಕ್ತಸ್ಯಾಪಿ ತಸ್ಯ ಅನ್ಯ-ನಿಷ್ಠತ್ವಾಕ್ಷೇಪಾತ್ ಆನಂದಮಯಾಧಿಕರಣೇನಾಸ್ಯ ಆಕ್ಷೇಪಿಕೀ ಸಂಗತಿರುಕ್ತಾ ಭವತಿ।

ತಾತ್ಪರ್ಯಚಂದ್ರಿಕೆಯಲ್ಲೂ ಕೂಡ – ತತ್ವಪ್ರದೀಪವನ್ನನುಸರಿಸಿ ''ಅಕ್ಷಿಪದವು ದೇವತಾಪರವೇ ಆಗಿದೆ. ಆದ್ದರಿಂದಲೇ ಭಾಷ್ಯದಲ್ಲಿ ಮತ್ತು ಸನ್ನ್ಯಾಯರತ್ನಾವಲಿಯಲ್ಲಿ ಅಕ್ಷಿ ಮತ್ತು ಆದಿತ್ಯರಿಗೆ ಅಭೇದವಿರುವುದರಿಂದ ಎಂದೇ ಹೇಳಲಾಗಿದೆ ಹೊರತು ಅವರಿಬ್ಬರೂ ಏಕವಿಧರಾಗಿರುವುದರಿಂದ ಎಂದು ಹೇಳಿಲ್ಲ. 'ಅಕ್ಷ್ಯಾದಿತ್ಯಯೋರೇಕ-ವಿಧತ್ವಾತ್' - ಅಕ್ಷಿ ಮತ್ತು ಆದಿತ್ಯರು ಏಕವಿಧರಾಗಿರುವುದರಿಂದ- ಎಂಬ ಟೀಕಾ ವಾಕ್ಯವನ್ನು ಕೂಡ ಭಾಷ್ಯವನ್ನು ಅನುಸರಿಸಿ ಧರ್ಮದಲ್ಲಿರುವ ಭೇದವನ್ನು ನಿಷೇಧಿಸುವ ಮೂಲಕ ಧರ್ಮಿಗಳಾದ ಅಕ್ಷಿ ಮತ್ತು ಆದಿತ್ಯರ ಐಕ್ಯವನ್ನು ಹೇಳುವ ಅಭಿಪ್ರಾಯ ಉಳ್ಳದ್ದೆಂದೇ ವ್ಯಾಖ್ಯಾನಮಾಡಬೇಕು'' ಎಂಬುದಾಗಿ ಪಕ್ಷಾಂತರವನ್ನೂ ಹೇಳಲಾಗಿದೆ. ತಥಾಚ - ಅಕ್ಷಿ ಮತ್ತು ಆದಿತ್ಯಶಬ್ದಗಳು ದೇವತಾವಾಚಕಗಳಾಗಿದ್ದ ಪಕ್ಷದಲ್ಲಿ 'ಆದಿತ್ಯೇ ವಿಷ್ಣುರಿತ್ಯುಕ್ತಮ್' ಎಂಬ ಭಾಷ್ಯ ಮತ್ತು ಶ್ರುತಿಯಲ್ಲಿರುವ ಅಕ್ಷಿ, ಆದಿತ್ಯಪದಗಳಿಗೆ ಯಥಾಶ್ರುತಾರ್ಥವೇ ಇರುವುದು. ಆದಿತ್ಯಶಬ್ದವು ಆದಿತ್ಯಮಂಡಲವನ್ನು ಹೇಳುವ ಅಭಿಪ್ರಾಯವಿದ್ದಲ್ಲಿ ಭಾಷ್ಯದಲ್ಲಿರುವ ಆದಿತ್ಯಪದ ಮತ್ತು ಹಿಂದೆ ಉದಾಹರಿಸಲಾಗಿ-ರುವ ತೈತ್ತಿರೀಯಶ್ರುತಿಯಲ್ಲಿರುವ ಆದಿತ್ಯಪದವನ್ನು ಆದಿತ್ಯಮಂಡಲ ಪರವಾಗಿ ವ್ಯಾಖ್ಯಾನಮಾಡಬೇಕೆಂದು ವಿಮರ್ಶಿಸಿ ತಿಳಿಯಬೇಕು.

ಇದರಿಂದ – ಛಂದೋಗಶ್ರುತಿಯಲ್ಲಿ ಹೇಳಲಾಗಿರುವ ಅಕ್ಷಿಸ್ಥತ್ವವು ಅಗ್ನಿಯಲ್ಲಿ-ರುವುದು ಹೊರತು ವಿಷ್ಣುವಿನಲ್ಲಿ ಅಲ್ಲವೆಂದು ಆಕ್ಷೇಪಿಸುವ ಮೂಲಕ ಆನಂದ-ಮಯಾಧಿಕರಣದಲ್ಲಿ ಉದಾಹರಿಸಲಾಗಿರುವ ತೈತ್ತಿರೀಯಶ್ರುತಿಯಲ್ಲಿ ಆನಂದಮಯ-

ನಿಗೆ ಅರ್ಥಾತ್ ಉಕ್ತವಾಗಿರುವ ಅಕ್ಷಿಸ್ಥತ್ವವೂ ವಿಷ್ಣುಭಿನ್ನನಿಗೇ ಇರುವುದೆಂದು ಆಕ್ಷೇಪ ಮಾಡುವುದರಿಂದ ಆನಂದಮಯಾಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿ ಇರುವುದೆಂದು ಹೇಳಿದಂತಾಗುವುದು.

(ಭಾ.ದೀ.) ಅಕ್ಷಿಸ್ಥತ್ವಂ ವಿಷಯಃ । ಕಿಮಗ್ನೇರ್ವಿಷ್ಣೋರ್ವಾ ಇತಿ ಸಂದೇಹಃ । ಅಗ್ನೀನಾಮೇವ ಅಕ್ಷಿಸ್ಥತ್ವಮಿತಿ ಪೂರ್ವಃ ಪಕ್ಷಃ । ಅತ್ರ ಆದಿತ್ಯಸ್ಥತ್ವರೂಪಯುಕ್ತಿಶ್ಚೋಕ್ತಾ ಭವತಿ । ಅತ್ರ 'ಯ ಏಷ ಆದಿತ್ಯೇ ಪುರುಷಃ', 'ಯ ಏಷೋಽಂತರಕ್ಷಿಣಿ ಪುರುಷಃ' ಇತ್ಯನಯೋರ್ವಾಕ್ಯಯೋಃ 'ಆದಿತ್ಯಶ್ಚಕ್ಷುರ್ಭೂತ್ವಾ' ಇತಿ ವಾಕ್ಯದ್ವಾರಾ ಏಕಾರ್ಥತ್ವ-ಮುಪಪಾದ್ಯ ತನ್ಮುಖೇನ 'ಯ ಏಷ ಆದಿತ್ಯೇ' ಇತಿ ವಾಕ್ಯೇನ 'ಯಶ್ಚಾಸಾವಾದಿತ್ಯೇ' ಇತಿ ವಾಕ್ಯಸ್ಯ ಸಂಗತಿಂ ಸಂಪಾದ್ಯ ತದ್ದ್ವಾರಾಽರ್ಥಾಕ್ಷಿಪ್ತತದರ್ಥಾರ್ಥಕಸ್ಯ 'ಯ ಏಷೋಽಂತರಕ್ಷಿಣಿ' ಇತಿ ವಾಕ್ಯಸ್ಯಾಪಿ ತೇನ ಸಂಗತಿರಿತ್ಯೇವಂ ವಕ್ರಸಂಗತ್ಯೈತದ-ಧಿಕರಣಾರಂಭ ಆದಿತ್ಯಸ್ಥತ್ವಲಿಂಗಸ್ಯಾಪಿ ಸಮನ್ವಯಸಿದ್ಧ್ಯರ್ಥಮ್ । ಅನ್ಯಥಾ 'ನೇತ-ರೋಽನುಪಪತ್ತೇಃ' ಇತ್ಯಾದೌ ವಿಷ್ಣುಜ್ಞಾನಾತ್ ಮೋಕ್ಷಃ ಇತ್ಯುಕ್ತಮ್, ಸ ಮೋಕ್ಷಃ 'ತದ್ಯಥಾ' ಇತಿ ವಾಕ್ಯೇನ 'ಯ ಏಷೋಽಂತರಿಕ್ಷಿಣಿ' ಇತ್ಯುಕ್ತಾಕ್ಷಿಸ್ಥಜ್ಞಾನಾತ್ ಪ್ರತೀ-ಯತೇ ಇತಿ ವಕ್ಷ್ಯಮಾಣಋಜುಸಂಗತ್ಯೈವ ಅಧಿಕರಣಮಾರಂಭಣೀಯಂ ಸ್ಯಾದಿತಿ ಧ್ಯೇಯಮ್ ।

ಈ ಅಧಿಕರಣದಲ್ಲಿ ಅಕ್ಷಿಸ್ಥತ್ವವು ವಿಷಯವಾಗಿದೆ. ಅದು ಅಗ್ನಿಗಿರುವುದೋ ಅಥವಾ ವಿಷ್ಣುವಿಗೋ ಎಂದು ಸಂದೇಹ. ಅಗ್ನಿಗಳಿಗೇ ಅಕ್ಷಿಸ್ಥತ್ವವಿರುವುದು ಎಂದು ಪೂರ್ವಪಕ್ಷ. ಈ ವಿಷಯದಲ್ಲಿ ಆದಿತ್ಯಸ್ಥತ್ವ ಎಂಬ ಯುಕ್ತಿಯೂ ಉಕ್ತವಾಗಿದೆ. ಇಲ್ಲಿ 'ಯ ಏಷ ಆದಿತ್ಯೇ ಪುರುಷಃ' ಹಾಗೂ 'ಯ ಏಷೋಽಂತರಕ್ಷಿಣಿ ಪುರುಷಃ' ಎಂಬ ವಾಕ್ಯಗಳಿಗೆ 'ಆದಿತ್ಯಶ್ಚಕ್ಷುರ್ಭೂತ್ವಾ' ಎಂಬ ವಾಕ್ಯದ ಮೂಲಕ ಒಂದೇ ಅರ್ಥವಿರುವು-ದೆಂದು ಉಪಪಾದಿಸಿ ಅದರ ಮೂಲಕವಾಗಿ 'ಯ ಏಷ ಆದಿತ್ಯೇ' ಎಂಬ ವಾಕ್ಯದಿಂದ 'ಯಶ್ಚಾಸಾವಾದಿತ್ಯೇ' ಎಂಬ ವಾಕ್ಯಕ್ಕೆ ಸಂಗತಿಯನ್ನು ಸಂಪಾದಿಸಿ, ಅದರ ಮೂಲಕವಾಗಿ ಅರ್ಥಾತ್ ಅದೇ ಅರ್ಥವುಳ್ಳ 'ಯ ಏಷೋಂತರಕ್ಷಿಣಿ' ಎಂಬ ವಾಕ್ಯಕ್ಕೂ 'ಯ ಏಷ

ಆದಿತ್ಯೇ' ಎಂಬ ವಾಕ್ಯದಿಂದ ಸಂಗತಿ ಇರುವುದು ಎಂಬುದಾಗಿ ವಕ್ರಸಂಗತಿಯನ್ನು ತೋರಿಸಿ, ಈ ಅಧಿಕರಣವನ್ನು ಆರಂಭಿಸಿರುವುದು ಆದಿತ್ಯಸ್ಥತ್ವಲಿಂಗಕ್ಕೂ ವಿಷ್ಣುವಿನಲ್ಲಿ ಸಮನ್ವಯವನ್ನು ಸಾಧಿಸುವ ಉದ್ದೇಶ್ಯದಿಂದ. ಆ ಅಭಿಪ್ರಾಯವಿಲ್ಲದಿದ್ದಲ್ಲಿ 'ನೇತ-ರೋಽನುಪಪತ್ತೇಃ' ಇತ್ಯಾದಿ ಸೂತ್ರಗಳಲ್ಲಿ ವಿಷ್ಣುಜ್ಞಾನದಿಂದ ಮೋಕ್ಷವೆಂದು ಹೇಳ-ಲಾಗಿದೆ, ಆ ಮೋಕ್ಷವು 'ತದ್ಯಥಾ' ಎಂಬ ವಾಕ್ಯದಿಂದ 'ಯ ಏಷೋಽಂತರಕ್ಷಿಣಿ' ಎಂಬಲ್ಲಿ ಹೇಳಿರುವ ಅಕ್ಷಿಸ್ಥನ ಜ್ಞಾನದಿಂದ ಲಭಿಸುವುದೆಂದು ತಿಳಿಯುವುದು ಎಂಬುದಾಗಿ ಮುಂದೆ ಹೇಳುವ ನೇರಸಂಗತಿಯಿಂದಲೇ ಈ ಅಧಿಕರಣವನ್ನು ಆರಂಭಿಸಬಹುದಾಗಿತ್ತೆಂದು ತಿಳಿಯಬೇಕು.

**ಭಾ– ಅತಃ – 'ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ' (ಛಾಂ.೪-೧೪) ಇತ್ಯಗ್ನಿಜ್ಞಾನಾದೇವ ಸರ್ವಪಾಪಾಶ್ಲೇಷಾನ್ಮೋಕ್ಷೋಪಪತ್ತಿರಿತಿ ।**

ಆದ್ದರಿಂದ, ಹೇಗೆ ಕಮಲಪತ್ರದಲ್ಲಿ ನೀರು ಅಂಟುವುದಿಲ್ಲವೋ ಹಾಗೆಯೇ ಈ ಅಗ್ನಿಯನ್ನು ತಿಳಿದವನಲ್ಲಿ ಪಾಪಕರ್ಮವು ಅಂಟುವು-ದಿಲ್ಲ- ಎಂಬುದಾಗಿ ಅಗ್ನಿಜ್ಞಾನದಿಂದಲೇ ಎಲ್ಲ ಪಾಪಗಳ ಸಂಬಂಧವು ಇಲ್ಲವಾಗುವುದರಿಂದ ಮೋಕ್ಷಪ್ರಾಪ್ತಿಯೂ ಯುಕ್ತವಾಗುವುದು - ಎಂದು.

(ಭಾ.ದೀ.) ನ ಕೇವಲಮಕ್ಷಿಸ್ಥತ್ವಸಿದ್ಧ್ಯೌ ಅಗ್ನೇಃ ಆನಂದಮಯತ್ವಪ್ರಾಪ್ತಿಃ । ಕಿಂತು ಯತ್ಪೂರ್ವಂ 'ನೇತರಃ' ಇತ್ಯಾದೌ 'ವಿಷ್ಣುಜ್ಞಾನಾತ್ ಮೋಕ್ಷಃ' ಇತ್ಯುಕ್ತಂ, ತದಪಿ ಬಾಧಿತಂ ಸ್ಯಾತ್ ಇತ್ಯಾಹ – **ಅತ ಇತಿ** ॥ 'ಅಗ್ನಿಜ್ಞಾನಾದಿತ್ಯೇತತ್' 'ಸರ್ವಪಾಪಾ-ಶ್ಲೇಷಾತ್' ಇತ್ಯನೇನೇವ 'ಮೋಕ್ಷ' ಇತ್ಯನೇನಾಪಿ ಸಂಬಧ್ಯತೇ । ತಥಾಚ – ಯತಃ - ಯತೋಽಗ್ನಿಃ ಅಕ್ಷಿಸ್ಥಃ, ಅತಸ್ತಜ್ಜ್ಞಾನಾದೇವ ಮೋಕ್ಷೋಽಪಿ ಭವೇತ್ ನ ವಿಷ್ಣು-ಜ್ಞಾನಾತ್ । ಕುತ ಏತತ್? ಅಕ್ಷಿಸ್ಥಾಗ್ನಿಜ್ಞಾನಾತ್ ಸರ್ವಪಾಪಾಶ್ಲೇಷಾತ್ । ನ ಚ ತಸ್ಯಾಸಿದ್ಧಿಃ । 'ತದ್ಯಥಾ' ಇತಿ ತದರ್ಥವಾದೇ ಅಗ್ನಿಜ್ಞಾನಾದೇವ ಸರ್ವಪಾಪಾ-

ಶ್ಲೇಷೋಕ್ತೇಃ । ನ ಚ ತಜ್ಜ್ಞಾನಾತ್ ಸರ್ವಪಾಪಾಶ್ಲೇಷಮಾತ್ರೇಣ ಕಥಂ ಮೋಕ್ಷಃ? ಇತಿ ವಾಚ್ಯಮ್ । ಯತಃ ತಜ್ಜ್ಞಾನಾತ್ ಮೋಕ್ಷಂ ವಿನಾ ಸರ್ವಪಾಪಾಶ್ಲೇಷಾ-ಸಂಭವೇನ ತದನ್ಯಥಾನುಪಪತ್ತ್ಯೈವ ಮೋಕ್ಷಸ್ಯಾಪ್ಯುಪಪತ್ತಿಃ – ಇತಿ ಯೋಜನಾ । ಏವಂ ಚ ಪೂರ್ವಪಕ್ಷೇ ಅಗ್ನೇರಕ್ಷಿಸ್ಥತ್ವೇನ 'ತದ್ಯಥಾ' ಇತ್ಯಕ್ಷಿಸ್ಥಸ್ಯೋಕ್ತಂ ಮುಕ್ತಿಹೇತು-ಜ್ಞಾನವಿಷಯತ್ವಮಪಿ ತಸ್ಯೈವ ಪ್ರಾಪ್ನೋತೀತಿ, 'ನೇತರಃ' ಇತ್ಯುಕ್ತಮಯುಕ್ತಮಿತಿ ಭಾವಃ । ಅನೇನ ಋಜುಸಂಗತಿರಪ್ಯಸ್ಯ ದರ್ಶಿತಾ ಭವತಿ ॥

ಅಗ್ನಿಯು ಅಕ್ಷಿಸ್ಥನೆಂದಾದರೆ ಅವನಿಗೇ ಆನಂದಮಯತ್ವವು ಪ್ರಾಪ್ತವಾಗುವುದು ಎಂದಿಷ್ಟೇ ಅಲ್ಲ; ಕಿಂತು ಹಿಂದೆ 'ನೇತರೋಽನುಪಪತ್ತೇಃ' ಇತ್ಯಾದಿ ಸೂತ್ರಗಳಲ್ಲಿ ವಿಷ್ಣುಜ್ಞಾನದಿಂದ ಮೋಕ್ಷವು ಪ್ರಾಪ್ತಿಯಾಗುವುದೆಂದು ಏನು ಹೇಳಲ್ಪಟ್ಟಿತೋ ಅದು ಬಾಧಿತವಾಗುವುದು - ಎಂದು ಅತಃ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಭಾಷ್ಯದಲ್ಲಿ ಅಗ್ನಿಜ್ಞಾನಾತ್ ಎಂಬ ಪದವು ಸರ್ವಪಾಪಾಶ್ಲೇಷಾತ್ ಎಂಬ ಪದದೊಂದಿಗೆ ಹೇಗೋ ಹಾಗೆಯೇ 'ಮೋಕ್ಷಃ' ಎಂಬ ಪದದೊಂದಿಗೂ ಸಂಬಂಧಿಸುವುದು. ತಥಾಚ ಯಾವ ಕಾರಣದಿಂದಾಗಿ ಅಗ್ನಿಯು ಅಕ್ಷಿಸ್ಥನಾಗಿರುವನೋ ಆ ಕಾರಣದಿಂದ ಅಗ್ನಿಯ ಜ್ಞಾನದಿಂದಲೇ ಮೋಕ್ಷವು ಉಂಟಾಗುವುದು. ವಿಷ್ಣುಜ್ಞಾನದಿಂದಲ್ಲ. ಹೀಗೇಕೆ? ಏಕೆಂ-ದರೆ, ಅಕ್ಷಿಸ್ಥನಾದ ಅಗ್ನಿಯ ಜ್ಞಾನದಿಂದ ಸರ್ವಪಾಪಗಳ ಸಂಬಂಧವು ಇಲ್ಲದಂತಾಗು-ವುದು. ಈ ಹೇತುವು ಅಸಿದ್ಧವೆಂದು ಶಂಕಿಸತಕ್ಕದ್ದಲ್ಲ. ಏಕೆಂದರೆ 'ತದ್ಯಥಾ ಪುಷ್ಕರ-ಪಲಾಶೇ' ಎಂಬ ಅರ್ಥವಾದ ವಾಕ್ಯದಲ್ಲಿ ಅಗ್ನಿಜ್ಞಾನದಿಂದಲೇ ಸರ್ವಪಾಪಗಳ ಸಂಬಂಧದ ನಾಶವನ್ನು ಹೇಳಲಾಗಿದೆ. ಅಗ್ನಿಜ್ಞಾನದಿಂದ ಸಮಸ್ತಪಾಪಗಳ ಅಶ್ಲೇಷ ಉಂಟಾಗುವ ಮಾತ್ರದಿಂದ ಮೋಕ್ಷಪ್ರಾಪ್ತಿಯಾಗುವುದು ಹೇಗೆ? ಎಂದು ಶಂಕಿಸ-ತಕ್ಕದ್ದಲ್ಲ. ಏಕೆಂದರೆ, ಅಗ್ನಿಜ್ಞಾನದಿಂದ ಮೋಕ್ಷವಾಗದಿದ್ದರೆ ಎಲ್ಲ ಪಾಪಗಳಿಂದ ಅಶ್ಲೇಷವು ಉಂಟಾಗಲು ಸಾಧ್ಯವಿಲ್ಲದ್ದರಿಂದ ಸರ್ವಪಾಪಗಳ ಅಶ್ಲೇಷವು ಮೋಕ್ಷ-ವಾಗದಿದ್ದರೆ ಅನುಪಪನ್ನವಾಗುವ ಕಾರಣದಿಂದಲೇ ಮೋಕ್ಷವು ಅಗ್ನಿಜ್ಞಾನದಿಂದ ಲಭಿಸುವುದೆಂದು ಹೇಳುವುದು ಉಪಪನ್ನವಾಗುವುದು ಎಂದು ಭಾಷ್ಯವಾಕ್ಯದ ಯೋಜನೆಯಾಗಿದೆ. ಹೀಗೆ ಪೂರ್ವಪಕ್ಷದಲ್ಲಿ ಅಗ್ನಿಯು ಅಕ್ಷಿಸ್ಥನಾಗಿರುವುದರಿಂದ

ಆದಿತ್ಯೇ' ಎಂಬ ವಾಕ್ಯದಿಂದ ಸಂಗತಿ ಇರುವುದು ಎಂಬುದಾಗಿ ವಕ್ರಸಂಗತಿಯನ್ನು ತೋರಿಸಿ, ಈ ಅಧಿಕರಣವನ್ನು ಆರಂಭಿಸಿರುವುದು ಆದಿತ್ಯಸ್ಥತ್ವಲಿಂಗಕ್ಕೂ ವಿಷ್ಣುವಿನಲ್ಲಿ ಸಮನ್ವಯವನ್ನು ಸಾಧಿಸುವ ಉದ್ದೇಶ್ಯದಿಂದ. ಆ ಅಭಿಪ್ರಾಯವಿಲ್ಲದಿದ್ದಲ್ಲಿ 'ನೇತರೋಽನುಪಪತ್ತೇಃ' ಇತ್ಯಾದಿ ಸೂತ್ರಗಳಲ್ಲಿ ವಿಷ್ಣುಜ್ಞಾನದಿಂದ ಮೋಕ್ಷವೆಂದು ಹೇಳಲಾಗಿದೆ, ಆ ಮೋಕ್ಷವು 'ತದ್ಯಥಾ' ಎಂಬ ವಾಕ್ಯದಿಂದ 'ಯ ಏಷೋಽಂತರಕ್ಷಿಣಿ' ಎಂಬಲ್ಲಿ ಹೇಳಿರುವ ಅಕ್ಷಿಸ್ಥನ ಜ್ಞಾನದಿಂದ ಲಭಿಸುವುದೆಂದು ತಿಳಿಯುವುದು ಎಂಬುದಾಗಿ ಮುಂದೆ ಹೇಳುವ ನೇರಸಂಗತಿಯಿಂದಲೇ ಈ ಅಧಿಕರಣವನ್ನು ಆರಂಭಿಸಬಹುದಾಗಿತ್ತೆಂದು ತಿಳಿಯಬೇಕು.

**ಭಾ– ಅತಃ – 'ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ'** (ಛಾಂ.೪-೧೪) **ಇತ್ಯಗ್ನಿಜ್ಞಾನಾದೇವ ಸರ್ವಪಾಪಾಶ್ಲೇಷಾನ್ಮೋಕ್ಷೋಪಪತ್ತಿರಿತಿ।**

ಆದ್ದರಿಂದ, ಹೇಗೆ ಕಮಲಪತ್ರದಲ್ಲಿ ನೀರು ಅಂಟುವುದಿಲ್ಲವೋ ಹಾಗೆಯೇ ಈ ಅಗ್ನಿಯನ್ನು ತಿಳಿದವನಲ್ಲಿ ಪಾಪಕರ್ಮವು ಅಂಟುವುದಿಲ್ಲ- ಎಂಬುದಾಗಿ ಅಗ್ನಿಜ್ಞಾನದಿಂದಲೇ ಎಲ್ಲ ಪಾಪಗಳ ಸಂಬಂಧವು ಇಲ್ಲವಾಗುವುದರಿಂದ ಮೋಕ್ಷಪ್ರಾಪ್ತಿಯೂ ಯುಕ್ತವಾಗುವುದು - ಎಂದು.

(ಭಾ.ದೀ.) ನ ಕೇವಲಮಕ್ಷಿಸ್ಥತ್ವಸಿದ್ಧ್ಯೌ ಅಗ್ನೇಃ ಆನಂದಮಯತ್ವಪ್ರಾಪ್ತಿಃ। ಕಿಂತು ಯತ್ಪೂರ್ವಂ 'ನೇತರಃ' ಇತ್ಯಾದೌ 'ವಿಷ್ಣುಜ್ಞಾನಾತ್ ಮೋಕ್ಷಃ' ಇತ್ಯುಕ್ತಂ, ತದಪಿ ಬಾಧಿತಂ ಸ್ಯಾತ್ ಇತ್ಯಾಹ – **ಅತ ಇತಿ** ॥ 'ಅಗ್ನಿಜ್ಞಾನಾದಿತ್ಯೇತತ್' 'ಸರ್ವಪಾಪಾಶ್ಲೇಷಾತ್' ಇತ್ಯನೇನೇವ 'ಮೋಕ್ಷ' ಇತ್ಯನೇನಾಪಿ ಸಂಬಧ್ಯತೇ। ತಥಾಚ – ಯತಃ – ಯತೋಽಗ್ನಿಃ ಅಕ್ಷಿಸ್ಥಃ, ಅತಸ್ತಜ್ಜ್ಞಾನಾದೇವ ಮೋಕ್ಷೋಽಪಿ ಭವೇತ್ ನ ವಿಷ್ಣುಜ್ಞಾನಾತ್ । ಕುತ ಏತತ್? ಅಕ್ಷಿಸ್ಥಾಗ್ನಿಜ್ಞಾನಾತ್ ಸರ್ವಪಾಪಾಶ್ಲೇಷಾತ್ । ನ ಚ ತಸ್ಯಾಸಿದ್ಧಿಃ । 'ತದ್ಯಥಾ' ಇತಿ ತದರ್ಥವಾದೇ ಅಗ್ನಿಜ್ಞಾನಾದೇವ ಸರ್ವಪಾಪಾ-

ಶ್ಲೇಷೋಕ್ತೇಃ । ನ ಚ ತಜ್ಜ್ಞಾನಾತ್ ಸರ್ವಪಾಪಾಶ್ಲೇಷಮಾತ್ರೇಣ ಕಥಂ ಮೋಕ್ಷಃ? ಇತಿ ವಾಚ್ಯಮ್ । ಯತಃ ತಜ್ಜ್ಞಾನಾತ್ ಮೋಕ್ಷಂ ವಿನಾ ಸರ್ವಪಾಪಾಶ್ಲೇಷಾಸಂಭವೇನ ತದನ್ಯಥಾನುಪಪತ್ತ್ಯೈವ ಮೋಕ್ಷಸ್ಯಾಪ್ಯುಪಪತ್ತಿಃ - ಇತಿ ಯೋಜನಾ । ಏವಂ ಚ ಪೂರ್ವಪಕ್ಷೇ ಅಗ್ನೇರಕ್ಷಿಸ್ಥತ್ವೇನ 'ತದ್ಯಥಾ' ಇತ್ಯಕ್ಷಿಸ್ಥಸ್ಯೋಕ್ತಂ ಮುಕ್ತಿಹೇತುಜ್ಞಾನವಿಷಯತ್ವಮಪಿ ತಸ್ಯೈವ ಪ್ರಾಪ್ನೋತೀತಿ, 'ನೇತರಃ' ಇತ್ಯುಕ್ತಮಯುಕ್ತಮಿತಿ ಭಾವಃ। ಅನೇನ ಋಜುಸಂಗತಿರಪ್ಯಸ್ಯ ದರ್ಶಿತಾ ಭವತಿ ॥

ಅಗ್ನಿಯು ಅಕ್ಷಿಸ್ಥನೆಂದಾದರೆ ಅವನಿಗೇ ಆನಂದಮಯತ್ವವು ಪ್ರಾಪ್ತವಾಗುವುದು ಎಂದಿಷ್ಟೇ ಅಲ್ಲ; ಕಿಂತು ಹಿಂದೆ 'ನೇತರೋಽನುಪಪತ್ತೇಃ' ಇತ್ಯಾದಿ ಸೂತ್ರಗಳಲ್ಲಿ ವಿಷ್ಣುಜ್ಞಾನದಿಂದ ಮೋಕ್ಷವು ಪ್ರಾಪ್ತಿಯಾಗುವುದೆಂದು ಏನು ಹೇಳಲ್ಪಟ್ಟಿತೋ ಅದು ಬಾಧಿತವಾಗುವುದು - ಎಂದು ಅತಃ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಭಾಷ್ಯದಲ್ಲಿ ಅಗ್ನಿಜ್ಞಾನಾತ್ ಎಂಬ ಪದವು ಸರ್ವಪಾಪಾಶ್ಲೇಷಾತ್ ಎಂಬ ಪದದೊಂದಿಗೆ ಹೇಗೋ ಹಾಗೆಯೇ 'ಮೋಕ್ಷಃ' ಎಂಬ ಪದದೊಂದಿಗೂ ಸಂಬಂಧಿಸುವುದು. ತಥಾಚ ಯಾವ ಕಾರಣದಿಂದಾಗಿ ಅಗ್ನಿಯು ಅಕ್ಷಿಸ್ಥನಾಗಿರುವನೋ ಆ ಕಾರಣದಿಂದ ಅಗ್ನಿಯ ಜ್ಞಾನದಿಂದಲೇ ಮೋಕ್ಷವು ಉಂಟಾಗುವುದು. ವಿಷ್ಣುಜ್ಞಾನದಿಂದಲ್ಲ. ಹೀಗೇಕೆ? ಏಕೆಂದರೆ, ಅಕ್ಷಿಸ್ಥನಾದ ಅಗ್ನಿಯ ಜ್ಞಾನದಿಂದ ಸರ್ವಪಾಪಗಳ ಸಂಬಂಧವು ಇಲ್ಲದಂತಾಗುವುದು. ಈ ಹೇತುವು ಅಸಿದ್ಧವೆಂದು ಶಂಕಿಸತಕ್ಕದ್ದಲ್ಲ. ಏಕೆಂದರೆ 'ತದ್ಯಥಾ ಪುಷ್ಕರಪಲಾಶೇ' ಎಂಬ ಅರ್ಥವಾದ ವಾಕ್ಯದಲ್ಲಿ ಅಗ್ನಿಜ್ಞಾನದಿಂದಲೇ ಸರ್ವಪಾಪಗಳ ಸಂಬಂಧದ ನಾಶವನ್ನು ಹೇಳಲಾಗಿದೆ. ಅಗ್ನಿಜ್ಞಾನದಿಂದ ಸಮಸ್ತಪಾಪಗಳ ಅಶ್ಲೇಷ ಉಂಟಾಗುವ ಮಾತ್ರದಿಂದ ಮೋಕ್ಷಪ್ರಾಪ್ತಿಯಾಗುವುದು ಹೇಗೆ? ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಅಗ್ನಿಜ್ಞಾನದಿಂದ ಮೋಕ್ಷವಾಗದಿದ್ದರೆ ಎಲ್ಲ ಪಾಪಗಳಿಂದ ಅಶ್ಲೇಷವು ಉಂಟಾಗಲು ಸಾಧ್ಯವಿಲ್ಲದ್ದರಿಂದ ಸರ್ವಪಾಪಗಳ ಅಶ್ಲೇಷವು ಮೋಕ್ಷವಾಗದಿದ್ದರೆ ಅನುಪಪನ್ನವಾಗುವ ಕಾರಣದಿಂದಲೇ ಮೋಕ್ಷವು ಅಗ್ನಿಜ್ಞಾನದಿಂದ ಲಭಿಸುವುದೆಂದು ಹೇಳುವುದು ಉಪಪನ್ನವಾಗುವುದು ಎಂದು ಭಾಷ್ಯವಾಕ್ಯದ ಯೋಜನೆಯಾಗಿದೆ. ಹೀಗೆ ಪೂರ್ವಪಕ್ಷದಲ್ಲಿ ಅಗ್ನಿಯು ಅಕ್ಷಿಸ್ಥನಾಗಿರುವುದರಿಂದ

'ತದ್ಯಥಾ' ಎಂಬ ವಾಕ್ಯದಲ್ಲಿ ಆಕ್ಷಿಪ್ತನಿಗೆ ಹೇಳಲಾದ ಮೋಕ್ಷಸಾಧನವಾದ ಜ್ಞಾನಕ್ಕೆ ವಿಷಯವಾಗುವಿಕೆಯು ಅಗ್ನಿಗೇ ಇರುವುದೆಂದು ಪ್ರಾಪ್ತವಾಗುವುದು ಆದ್ದರಿಂದ 'ನೇತರಃ' ಎಂಬ ಸೂತ್ರದಲ್ಲಿ ಹೇಳಿರುವುದು ಅಯುಕ್ತವೆಂದು ಭಾವ. ಇದರಿಂದ ಈ ಅಧಿಕರಣಕ್ಕೆ ಋಜು(ನೇರ)ಸಂಗತಿಯು ಕೂಡ ತೋರಿಸಿದಂತಾಗುವುದು.

(ಭಾ.ದೀ.) ಛಾಂದೋಗ್ಯೇ ಹಿ ಇತ್ಥಮಾಖ್ಯಾಯಿಕಾ – (ಛಾಂ.೪-೧-೫) ಕಮಲಾಯನಸ್ಯಾಪತ್ಯಂ ಕಾಮಲಾಯನಃ ನಾಮತಃ ಉಪಕೋಸಲಃ ಸತ್ಯಕಾಮಾಖ್ಯೇ ಗುರೌ ಬ್ರಹ್ಮಚರ್ಯಮುದ್ದಿಶ್ಯೋವಾಸ । ಸ ಆಚಾರ್ಯಸ್ಯಾಗ್ನೀನ್ ಗಾರ್ಹಪತ್ಯಾದೀನ್ ದ್ವಾದಶವರ್ಷಪರ್ಯಂತಂ ಪರ್ಯಚಾರೀತ್ । ಸತ್ಯಕಾಮಸ್ತು ಅಂತೇವಾಸಿನಃ ಸ್ವಾಧ್ಯಾಯಂ ಗ್ರಾಹಯನ್ ಏನಮೇಕಮೇವ ನಾಧ್ಯಾಪಯತ್ । ಪುನಃ ಸ್ವಜಾಯಯಾ ಉಕ್ತೋಽಪಿ ಅನುಕ್ತ್ವೈವ ವಿದ್ಯಾಂ ಪ್ರವಾಸಾಯ ಪ್ರಾತಿಷ್ಠತ । ತದೋಪಕೋಸಲೋ ವ್ಯಾಧಿಪೀಡಿತೋ ವಿದ್ಯಾಪ್ರಾಪ್ತಿಚಿಂತಯಾ ಸ್ವಾಚಾರ್ಯಭಾರ್ಯಯಾ ಅಶಾನ ಇತ್ಯುಕ್ತೋಽಪಿ ನಾಶ್ನಾತ್ । ಏವಂ ಬ್ರಹ್ಮಚಾರಿಣ್ಯನಶ್ನತಿ ತೂಷ್ಣೀಂಭೂತೇ ಸತಿ ತದಾ ಗಾರ್ಹಪತ್ಯಾದ್ಯಗ್ನಯಃ ಕಾರುಣ್ಯಾವಿಷ್ಟಾಃ ತ್ರಯೋಽಪಿ ವಯಮಸ್ಮೈ ಬ್ರಹ್ಮಚಾರಿಣೇ ವಿದ್ಯಾಂ ಪ್ರಬ್ರುವಾಮ ಇತಿ ಪ್ರತಿಜ್ಞಾಯ ಮಿಲಿತಾಃ ಸಂತೋ ವಿದ್ಯಾಮೂಚುಃ 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಇತ್ಯಾದಿ ।

ಏವಂ ಸಂಭೂಯೋಪದೇಶಾನಂತರಮೇನಂ ಪ್ರತ್ಯೇಕಮ್ ಅಗ್ನಯಃ ಉಪದಿದಿಶುಃ ಇತ್ಯುಚ್ಯತೇ ವೇದಪುರುಷೇಣ – 'ಅಥ ಹೈನಂ ಗಾರ್ಹಪತ್ಯೋಽನುಶಶಾಸ .. ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮಿ' ಇತ್ಯಾದಿನಾ । ಏವಂ ತ್ರಿಭಿರಗ್ನಿಭಿಃ ಪ್ರತ್ಯೇಕಮುಪದಿಷ್ಟ ಉಪಕೋಸಲಃ ಅಥಾಸ್ಮಾಭಿರುಕ್ತಂ ಜ್ಞೇಯಮೇವ, ನೋಪಾಸ್ಯಮ್, ತತ್ತು ತ್ವದಾಚಾರ್ಯ ಆಗತ್ಯ ವಕ್ಷ್ಯತೀತಿ ತೈರುಕ್ತೋಽಭೂತ್ । ಏವಂ ಸ್ಥಿತೇ, ಅಥಾಽಚಾರ್ಯಃ ಸತ್ಯಕಾಮ ಆಜಗಾಮ । ಆಗತ್ಯ ಚೋಪಕೋಸಲೋಕ್ತಂ ಶ್ರುತ್ವಾ ಪ್ರತ್ಯುವಾಚ । ಕಿಮಿತಿ? ಯತ್ ಅಗ್ನಿಭಿಃ ತುಭ್ಯಮುಪದಿಷ್ಟಂ ತತ್ ತ್ವಯಾ ಜ್ಞೇಯಮೇವ ನ ತೂಪಾಸ್ಯಮ್, ತತ್ತ್ವಮಹಮುಪದೇಕ್ಷ್ಯೇ ಇತ್ಯೇವಂ

ಪ್ರತಿಜ್ಞಾಯ ಆದರಜನನಾಯ ವಕ್ಷ್ಯಮಾಣಮ್ ಅಸ್ತೌತ್ 'ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ' ಇತಿ ।

ಏವಂ ಸ್ತುತ್ವಾ ಉಪಕೋಸಲಾಯ ವಿದ್ಯಾಮುಪಾದಿಶತ್ ಸತ್ಯಕಾಮಃ । ಕಿಮಿತಿ? 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ । ಏತದ್ ಅಮೃತಮ್ ಏತದ್ ಅಭಯಮ್ ಏತದ್ ಬ್ರಹ್ಮೇತಿ' । ಅಥ ಸಂಭೂಯೋಪ-ದೇಶಾನಂತರಂ ಏನಮ್ ಉಪಕೋಸಲಂ ಗಾರ್ಹಪತ್ಯೋಽನುಶಶಾಸ । ಕಿಮಿತಿ? ಪೃಥಿವ್ಯಗ್ನ್ಯನ್ನಾಖ್ಯಂ ಬ್ರಹ್ಮೇತಿ।

ಏವಂ ವ್ಯಾಪ್ತವಿದ್ಯಾಮುಕ್ತ್ವಾ ಅಂತರ್ಯಾಮಿವಿದ್ಯಾಮಾಹ – **ಯ ಇತಿ ॥** ಅತ್ರ ಸೋಽಹಮಸ್ಮಿ ಇತ್ಯಸ್ಯ ದ್ವಿಕರ್ತೃಕತ್ವಾದ್ ಗಾರ್ಹಪತ್ಯಾದ್ಯಂತರ್ಯಾಮೀ ಭಗವಾನ್ ಸ್ವಸ್ಯ ಆದಿತ್ಯಾದ್ಯಂತರ್ಯಾಮಿಣಾ ಗಾರ್ಹಪತ್ಯಾದಿಃ ಸ್ವಾಂತರ್ಯಾಮಿಣಃ ಆದಿತ್ಯಾ-ದ್ಯಂತರ್ಯಾಮಿಣಾ ಐಕ್ಯಮಾಹ ಇತ್ಯುಚ್ಯತೇ । ತಥಾಚ – ಅಹೇಯತ್ವಾತ್ ಪ್ರತ್ಯ-ಕ್ತ್ವಾಚ್ಚ ಅಹಂ ಮದಂತರ್ಯಾಮೀ । ಆದಿತ್ಯೇ ಚ ಏಷ ಪುರುಷಃ ಪೂರ್ಣಷಡ್ಗುಣೋ ಭಗವಾನ್ ದೃಶ್ಯತೇ ದಿವ್ಯದೃಷ್ಟ್ಯಾ ಸೋಽಸ್ಮೀತ್ಯರ್ಥಃ । ಆದಿತ್ಯಸ್ಥಸ್ಯ ವಿಷ್ಣೋಃ ಮದಂತರ್ಯಾಮಿಣಶ್ಚ ವಿರುದ್ಧಧರ್ಮಾದಿವದಭೇದಮಾತ್ರಂ ನ; ಕಿಂತು ವಿಶೇಷಾ-ಭಾವಶ್ಚೇತ್ಯಾಹ – **ಸ ಏವೇತಿ ॥**

ಏವಮುಪಾಸಕಸ್ಯ ಫಲಮಾಹ – ಸ ಏತದೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀ ಭವತಿ ಸರ್ವಮಾಯುರೇತಿ ಜ್ಯೋಗ್ ಜೀವತಿ' ಇತಿ । 'ಪಾಪಕೃತ್ಯಾಂ' ಪಾಪಕಾರ್ಯಂ 'ಲೋಕೀ' ಭಗವಲ್ಲೋಕೀ ಭವತಿ । ಸರ್ವಂ - ಸಂಪೂರ್ಣಂ ಚಾಽಯುಃ ಪ್ರಾಪ್ನೋತಿ । 'ಜ್ಯೋಕ್' ಸರ್ವಜ್ಞಃ ಸನ್ ಜೀವತೀತಿ । ಏವಂ 'ಯ ಏಷ ಚಂದ್ರಮಸಿ' 'ಯ ಏಷ ವಿದ್ಯುತಿ' ಇತ್ಯನಯೋಃ ಅರ್ಥೋಽ-ವಗಂತವ್ಯಃ।

ತತ್ - ತತ್ರಾರ್ಥೇ ವಕ್ಷ್ಯಮಾಣದೃಷ್ಟಾಂತೋ 'ಪುಷ್ಕರಪಲಾಶೇ' ಪದ್ಮಪತ್ರೇ

ಆಪೋ ಯಥಾ 'ನ ಶ್ಲಿಷ್ಯಂತೇ' ನ ಸಜ್ಜಂತೇ 'ತಥಾ ಏವಂವಿದಿ' ವಕ್ಷ್ಯಮಾಣಾಕ್ಷಿಸ್ಥತ್ವೇನ ಬ್ರಹ್ಮಾಪರೋಕ್ಷಜ್ಞಾನಿನಿ ಜ್ಞಾನೋತ್ತರಂ ಪಾಪಂ ಕರ್ಮ ನ ಶ್ಲಿಷ್ಯತೇ – ಇತ್ಯರ್ಥಃ। ಯ ಏಷೋಽಕ್ಷಿಣ್ಯಂತಃಪುರುಷೋ ದೃಶ್ಯತೇ ದಿವ್ಯದೃಷ್ಟ್ಯಾ ಏಷ ಆತ್ಮಾ ವಾಮನಾಖ್ಯ ಇತಿ ಹೋವಾಚ ಉಪಕೋಸಲಂ ಪ್ರತಿ ಸತ್ಯಕಾಮಃ। 'ಏತದಮೃತಂ' ಸ್ವತೋ ಮೃತಿಶೂನ್ಯಂ ನಿತ್ಯಮುಕ್ತಮ್, 'ಏತದಭಯಂ' ಸ್ವತೋ ಭಯಶೂನ್ಯಂ, 'ಏತದ್ ಬ್ರಹ್ಮ' ಗುಣಪೂರ್ಣಮ್ ಇತಿ ಸಿದ್ಧಾಂತರೀತ್ಯಾ ಶ್ರುತ್ಯರ್ಥಃ। ಪೂರ್ವಪಕ್ಷೀ ತು ಏತತ್ಪ್ರಕರಣಮಗ್ನಿಪರಂ ಮನ್ಯತೇ॥

ಛಾಂದೋಗ್ಯದಲ್ಲಿ ಬರುವ ಆಖ್ಯಾಯಿಕೆಯಾದರೋ ಹೀಗಿದೆ – ಕಮಲಾಯನನ ಮಗ ಕಾಮಲಾಯನ, ಅವನ ಹೆಸರು ಉಪಕೋಸಲ; ಅವನು ಸತ್ಯಕಾಮನೆಂಬ ಗುರುವಿನ ಬಳಿಯಲ್ಲಿ ವೇದಾಧ್ಯಯನವನ್ನು ಉದ್ದೇಶಿಸಿ ವಾಸ ಮಾಡಿದನು. ಆ ಉಪಕೋಸಲನು ಆಚಾರ್ಯ ಸತ್ಯಕಾಮನ ಗಾರ್ಹಪತ್ಯ ಮೊದಲಾದ ಅಗ್ನಿಗಳನ್ನು ಹನ್ನೆರಡು ವರ್ಷಗಳ ಕಾಲ ಸೇವಿಸಿದನು. ಸತ್ಯಕಾಮನಾದರೋ ತನ್ನ ಇತರ ಶಿಷ್ಯರಿಗೆ ವೇದವನ್ನು ಉಪದೇಶಿಸಿದರೂ ಇವನೊಬ್ಬನಿಗೆ ಉಪದೇಶ ಮಾಡಲಿಲ್ಲ. ವೇದೋಪದೇಶವಾಗಲೆಂದು ಪುನಃ ತನ್ನ ಪತ್ನಿಯಿಂದ ಹೇಳಲ್ಪಟ್ಟರೂ ವಿದ್ಯೆಯನ್ನು ಉಪದೇಶಿಸದೇ ಪ್ರವಾಸ ಮಾಡಲು ಹೊರಟನು. ಆಗ ಉಪಕೋಸಲನು ವಿದ್ಯೆ ಲಭಿಸದ ಚಿಂತೆಯಿಂದ ವ್ಯಾಧಿಪೀಡಿತನಾಗಿ ತನ್ನ ಆಚಾರ್ಯನ ಪತ್ನಿಯಿಂದ ಆಹಾರ ಸ್ವೀಕರಿಸು ಎಂದು ಹೇಳಲ್ಪಟ್ಟರೂ ಆಹಾರವನ್ನು ಸ್ವೀಕರಿಸಲಿಲ್ಲ. ಹೀಗೆ ಬ್ರಹ್ಮಚಾರಿಯು ಊಟ ಮಾಡದೇ ಮೌನದಿಂದಿರಲು ಗಾರ್ಹಪತ್ಯ ಮೊದಲಾದ ಮೂರು ಅಗ್ನಿಗಳು ಕರುಣೆ ತುಂಬಿದವರಾಗಿ ನಾವು ಈ ಬ್ರಹ್ಮಚಾರಿಗೆ ವಿದ್ಯೆಯನ್ನು ಉಪದೇಶಿಸೋಣ ಎಂದು ಪ್ರತಿಜ್ಞೆಮಾಡಿ, ಎಲ್ಲರೂ ಸೇರಿ 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಇತ್ಯಾದಿಯಾಗಿ ವಿದ್ಯೆಯನ್ನು ಉಪದೇಶಿಸಿದರು.

ಹೀಗೆ ಅವರೆಲ್ಲರೂ ಸೇರಿ ಉಪದೇಶಿಸಿದ ನಂತರ ಅವನನ್ನು ಕುರಿತು ಪ್ರತ್ಯೇಕವಾಗಿಯೂ ಅಗ್ನಿಗಳು ಉಪದೇಶ ಮಾಡಿದರು ಎಂದು ವೇದಪುರುಷನು ''ಅಥ ಹೈನಂ ಗಾರ್ಹಪತ್ಯೋಽನುಶಶಾಸ .. ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ

ಸ ಏವಾಹಮಸ್ಮಿ'' ಇತ್ಯಾದಿ ವಾಕ್ಯಗಳಿಂದ ಹೇಳುವನು. ಹೀಗೆ ಮೂರು ಅಗ್ನಿಗಳಿಂದ ಉಪದೇಶ ಹೊಂದಿದ ಉಪಕೋಸಲನನ್ನು ಕುರಿತು ಆ ಅಗ್ನಿಗಳು 'ನಾವು ಉಪದೇಶ-ಮಾಡಿದ್ದು ಕೇವಲ ಜ್ಞಾನಕ್ಕೋಸ್ಕರವಾಗಿ, ಉಪಾಸನೆಗಲ್ಲ. ಉಪಾಸನೆ ಮಾಡಬೇಕಾ-ದುದನ್ನು ನಿನ್ನ ಆಚಾರ್ಯರೇ ಬಂದು ಹೇಳುವರು' ಎಂದು ತಿಳಿಸಿದರು. ಹೀಗಿರಲಾಗಿ, ಅನಂತರ ಆಚಾರ್ಯ ಸತ್ಯಕಾಮನು ಆಗಮಿಸಿದನು. ಬಂದು ಉಪಕೋಸಲನು ಹೇಳಿ-ದುದನ್ನು ಕೇಳಿ ಪ್ರತಿಯಾಗಿ ಹೇಳಿದನು. ಏನೆಂದು? ''ಅಗ್ನಿಗಳು ನಿನಗೆ ಯಾವುದನ್ನು ಉಪದೇಶಿಸಿರುವರೋ ಅದು ನಿನಗೆ ಕೇವಲ ಜ್ಞೇಯವಾದ ವಿಷಯವಾಗಿದೆ ಹೊರತು ಉಪಾಸನೆಗಲ್ಲ. ನೀನು ಉಪಾಸನೆ ಮಾಡಬೇಕಾದುದನ್ನು ನಾನು ಉಪದೇಶಿಸುವೆನು ಎಂದು ಪ್ರತಿಜ್ಞೆ ಮಾಡಿ, ತಾನು ಹೇಳುವ ವಿಷಯದಲ್ಲಿ ಆದರವನ್ನು ಹುಟ್ಟಿಸಲು ಮುಂದೆ ತಾನು ಹೇಳುವ ವಿಷಯವನ್ನು ''ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ'' ಎಂಬುದಾಗಿ ಪ್ರಶಂಸೆ ಮಾಡಿದನು.

ಹೀಗೆ ಪ್ರಶಂಸೆ ಮಾಡಿ ಉಪಕೋಸಲನಿಗೆ ಸತ್ಯಕಾಮನು ವಿದ್ಯೆಯನ್ನು ಉಪ-ದೇಶಿಸಿದನು. ಏನೆಂದು? ''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ । ಏತದ್ ಅಮೃತಮ್ ಏತದ್ ಅಭಯಮ್ ಏತದ್ ಬ್ರಹ್ಮೇತಿ'' ಎಂಬುದಾಗಿ. ಅಗ್ನಿಗಳು ಎಲ್ಲರೂ ಸೇರಿ ಉಪದೇಶ ಮಾಡಿದ ನಂತರ ಉಪಕೋಸಲನನ್ನು ಕುರಿತು ಗಾರ್ಹಪತ್ಯಾಗ್ನಿಯು ಉಪದೇಶ ಮಾಡಿದನು. ಏನೆಂದು? ಬ್ರಹ್ಮನು ಪೃಥಿವಿ, ಅಗ್ನಿ, ಅನ್ನ ಎಂದು ಕರೆಯಲ್ಪಡುವನು - ಎಂದು.

ಹೀಗೆ ವ್ಯಾಪ್ತವಿದ್ಯೆಯನ್ನು ಉಪದೇಶಿಸಿ, ಅನಂತರ 'ಯ ಏಷ ಆದಿತ್ಯೇ' ಎಂಬ ವಾಕ್ಯದಿಂದ ಅಂತರ್ಯಾಮಿವಿದ್ಯೆಯನ್ನು ಉಪದೇಶಿಸುವನು. ಇಲ್ಲಿ 'ಸೋಹಮಸ್ಮಿ' ಎಂಬ ಉಪದೇಶವು ಇಬ್ಬರು ಕರ್ತೃಗಳನ್ನು ಹೊಂದಿರುವುದರಿಂದ ಗಾರ್ಹಪತ್ಯಾದಿಗಳ ಅಂತರ್ಯಾಮಿಯಾದ ಭಗವಂತನು ತನಗೆ ಆದಿತ್ಯಾದಿಗಳ ಅಂತರ್ಯಾಮಿಯಿಂದ. ಹಾಗೆಯೇ ಗಾರ್ಹಪತ್ಯಾದಿ ಅಗ್ನಿಗಳು ತಮ್ಮ ಅಂತರ್ಯಾಮಿಗೆ ಆದಿತ್ಯಾದ್ಯಂತ-ರ್ಯಾಮಿಯಿಂದ ಅಭೇದವಿರುವುದೆಂದು ಹೇಳಿದರು – ಎಂದು ಅಭಿಪ್ರಾಯ. ತಥಾ-

ಚ – ಅಹೇಯನಾದುದರಿಂದ ಮತ್ತು ಶರೀರದ ಒಳಗಿರುವ ಕಾರಣದಿಂದ ಅಹಂ ಎಂದೆನಿಸುವ ನನ್ನ ಅಂತರ್ಯಾಮಿಯು, ಆದಿತ್ಯನಲ್ಲಿ ಯಾವ ಪುರುಷನು ಅಂದರೆ ಪೂರ್ಣಷಡ್ಗುಣಸಂಪನ್ನನಾದ ಭಗವಂತನು ದಿವ್ಯದೃಷ್ಟಿಯಿಂದ ತೋರುವನೋ ಅವನೇ ಆಗಿರುವನು ಎಂದು ಅರ್ಥ. ಆದಿತ್ಯಸ್ಥನಾದ ವಿಷ್ಣುವಿಗೂ ನನ್ನ ಅಂತರ್ಯಾಮಿಗೂ, ವಿದುರನಿಗೂ ಧರ್ಮರಾಜನಿಗೂ ಇರುವಂತೆ ಕೇವಲ ಅಭೇದವಷ್ಟೇ ಅಲ್ಲ; ಕಿಂತು ವಿಶೇಷವೂ ಇರುವುದಿಲ್ಲ ಎಂದು 'ಸ ಏವಾಹಮಸ್ಮಿ' ಎಂಬ ವಾಕ್ಯದಿಂದ ಹೇಳಲಾಗಿದೆ.

ಹೀಗೆ ಉಪಾಸನೆ ಮಾಡತಕ್ಕವನಿಗೆ ಲಭಿಸುವ ಫಲವನ್ನು 'ಸ ಏತದೇವಂ ವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀ ಭವತಿ ಸರ್ವಮಾಯುರೇತಿ ಜ್ಯೋಗ್ ಜೀವತಿ' ಎಂಬ ವಾಕ್ಯದಿಂದ ಹೇಳಲಾಗಿದೆ. ಇಲ್ಲಿ ಪಾಪಕೃತ್ಯಾಂ ಎಂದರೆ ಪಾಪಕಾರ್ಯವನ್ನು ಎಂದು ಅರ್ಥ. ಲೋಕೀ ಭವತಿ ಎಂದರೆ ಭಗವಲ್ಲೋಕವನ್ನು ಹೊಂದುವನು ಎಂದು ಅರ್ಥ. 'ಸರ್ವಮಾಯುರೇತಿ' ಸಂಪೂರ್ಣವಾದ ಆಯು-ಸ್ಸನ್ನು ಹೊಂದುವನು. 'ಜ್ಯೋಕ್' ಎಂದರೆ ಸರ್ವಜ್ಞನಾಗಿ, ಜೀವತಿ - ಜೀವಿಸುವನು ಎಂದು ಅರ್ಥ. ಇದೇ ರೀತಿಯಾಗಿ 'ಯ ಏಷ ಚಂದ್ರಮಸಿ' 'ಯ ಏಷ ವಿದ್ಯುತಿ' ಎಂಬ ವಾಕ್ಯಗಳಿಗೂ ಅರ್ಥವನ್ನು ತಿಳಿಯಬೇಕು.

'ತತ್' - ಆ ವಿಷಯದಲ್ಲಿ ಮುಂದೆ ಹೇಳುವ ದೃಷ್ಟಾಂತವು ಹೀಗಿರುವುದು. ಪುಷ್ಕರಪಲಾಶೇ- ಪದ್ಮಪತ್ರದಲ್ಲಿ, ಆಪಃ- ಜಲವು, ಯಥಾ- ಹೇಗೆ, ನ ಶ್ಲಿಷ್ಯಂತೇ - ಅಂಟುವುದಿಲ್ಲವೋ ತಥಾ ಏವಂವಿದಿ - ಹಾಗೆ ಮುಂದೆ ಅಕ್ಷಿಸ್ಥನೆಂದು ಹೇಳಲ್ಪಡುವ ಬ್ರಹ್ಮನ ಅಪರೋಕ್ಷಜ್ಞಾನಿಯಲ್ಲಿ ಜ್ಞಾನೋತ್ತರಕಾಲದಲ್ಲಿ ಪಾಪಕರ್ಮವು ಅಂಟುವುದಿಲ್ಲ ಎಂದು ಅರ್ಥ. ''ಯ ಏಷೋಽಕ್ಷಿಣ್ಯಂತಃಪುರುಷೋ ದೃಶ್ಯತೇ ದಿವ್ಯದೃಷ್ಟ್ಯಾ ಏಷ ಆತ್ಮಾ ವಾಮನಾಖ್ಯಃ'' - 'ಈ ಅಕ್ಷಿಯ ಒಳಗೆ ಪೂರ್ಣಷಡ್ಗುಣನಾದ ಭಗ-ವಂತನು ದಿವ್ಯದೃಷ್ಟಿಯಿಂದ ಕಾಣಲ್ಪಡುವನೋ ಏಷ ಆತ್ಮಾ' - ಅವನು, ವಾಮ-ನಾಖ್ಯನಾದ ಪರಮಾತ್ಮನು ಎಂದು ಉಪಕೋಸಲನನ್ನು ಕುರಿತು ಸತ್ಯಕಾಮನು ಉಪದೇಶಿಸಿದನು. ಏತದಮೃತಂ- ಆ ಭಗವಂತನು, ಸ್ವಭಾವತಃ ಮರಣಶೂನ್ಯನು ಅಂದರೆ ನಿತ್ಯಮುಕ್ತನು; ಏತದಭಯಂ- ಇವನು ಸ್ವಭಾವತಃ ಭಯರಹಿತನು; ಏತದ್

ಬ್ರಹ್ಮ - ಇವನು ಗುಣಪೂರ್ಣನಾದವನು ಎಂದು ಸಿದ್ಧಾಂತರೀತ್ಯಾ ಈ ಶ್ರುತಿಯ ಅರ್ಥ. ಪೂರ್ವಪಕ್ಷಿಯಾದರೋ ಈ ಪ್ರಕರಣವನ್ನು ಅಗ್ನಿಪರವೆಂದು ತಿಳಿಯುವನು.

ಭಾ– ಅತೋಽಬ್ರವೀತ್ –

॥ ಓಂ ಅಂತರ ಉಪಪತ್ತೇಃ ಓಂ ॥ ೧೩ ॥

ಚಕ್ಷುರಂತಸ್ಥೋ ವಿಷ್ಣುರೇವ ।

ಈ ಆಕ್ಷೇಪದ ಪರಿಹಾರಕ್ಕಾಗಿ ಸೂತ್ರಕಾರರು – ಓಂ ಅಂತರ ಉಪಪತ್ತೇಃ ಓಂ ಎಂದು ಹೇಳಿರುವರು. ನಿರವಕಾಶವಾದ ಲಿಂಗಗಳಿರುವುದರಿಂದ ಚಕ್ಷುರಂತಃಸ್ಥನು ವಿಷ್ಣುವೇ ಆಗಿದ್ದಾನೆ.

(ಭಾ.ದೀ.) ಸಿದ್ಧಾಂತಯತ್ಸೂತ್ರಮವತಾರ್ಯ ವ್ಯಾಚಷ್ಟೇ – **ಅತ ಇತಿ** ॥ 'ಇತಿ ಸಂಗತಿಸದ್ಭಾವಾತ್ ಶಂಕಾಸದ್ಭಾವಾಚ್ಚ । ಅತಃ ತತ್ಪರಿಹಾರಾಯ ಉತ್ತರಮಬ್ರವೀತ್ ಸೂತ್ರಕಾರಃ' ಇತ್ಯರ್ಥಃ । 'ಚಕ್ಷುರಂತಃಸ್ಥಃ' ಇತ್ಯನೇನ ಅಂತರ ಇತ್ಯಂಶಃ, 'ವಿಷ್ಣುರೇವ' ಇತ್ಯನೇನ ಅನುವೃತ್ತಃ 'ತತ್ತು' ಇತ್ಯಂಶಶ್ಚ ವ್ಯಾಖ್ಯಾತಃ । ಯದ್ಯಪಿ ಅನುವ್ಯಾಖ್ಯಾನೇ ಶಬ್ದವೈಯರ್ಥ್ಯಪರಿಹಾರಾಯ 'ಅಂತಃ ಸ್ಥಿತ್ವಾ ರಮಣಕೃತ್' ಇತಿ ವ್ಯಾಖ್ಯಾನಾದ್ ಅತ್ರಾಪಿ ತದನುಸಾರೇಣ ರಮಣಕೃಚ್ಚೇತಿ ವಕ್ತವ್ಯಮ್ । ತಥಾಽಪಿ ಅತ್ರ ರಮಣಕ್ರಿಯಾಬೋಧಕಾತ್ಮಶಬ್ದಸ್ಯ ಹೇತುಕರಣಾತ್ ನ ತದರ್ಥಸ್ಯ ಪ್ರತಿಜ್ಞಾಯಾಮನ್ವಯಃ ಸಂಭವತೀತಿ 'ಅಂತಃಸ್ಥ' ಇತ್ಯೇವೋಕ್ತಮ್ । ತತ್ರ ತು ಆತ್ಮಶಬ್ದಾರ್ಥಸ್ಯ ಹೇತುತ್ವಾವಿವಕ್ಷಣಾತ್ ಸಾಧ್ಯಾನ್ವಯೋ ನ(?) ಯುಜ್ಯತ ಇತಿ 'ರಮಣಕೃತ್' ಇತ್ಯಪ್ಯುಕ್ತಮ್ ।

ವಸ್ತುತಸ್ತು– ಸೂತ್ರೇ 'ಅಂತಃ' ಇತ್ಯನುಕ್ತ್ವಾ 'ಅಂತರಃ' ಇತ್ಯಧಿಕೋಕ್ತೇಃ ಸಾರ್ಥಕ್ಯಾಯ ಅತ್ರಾಪಿ 'ರಮಣಕೃಚ್ಚ' ಇತ್ಯಪಿ ಉಪಲಕ್ಷಣಯಾ ವಾಚ್ಯಮ್ । ಅವಯವಾರ್ಥವಿವಕ್ಷಾವಿವಕ್ಷಾಭ್ಯಾಮ್ ಆತ್ಮಶಬ್ದಸ್ಯ ಸಾಧ್ಯಸಮರ್ಪಕತಾ ಹೇತುತ್ವಂ ಚ ಯುಜ್ಯತ ಇತಿ ಧ್ಯೇಯಮ್ ।

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ 'ಅತಃ' ಎಂಬುದಾಗಿ ವ್ಯಾಖ್ಯಾನಮಾಡುತ್ತಿದ್ದಾರೆ. ಇತಿ- ಹೀಗೆ ಸಂಗತಿ ಇರುವುದರಿಂದ ಮತ್ತು ಶಂಕೆ ಇರುವುದರಿಂದ. ಅತಃ - ಆ ಶಂಕೆಯ ಪರಿಹಾರಕ್ಕಾಗಿ ಸೂತ್ರಕಾರರು ಉತ್ತರವನ್ನು ಹೇಳಿದರೆಂದು ಅರ್ಥ. ಭಾಷ್ಯದಲ್ಲಿ ಚಕ್ಷುರಂತಃಸ್ಥಃ ಎಂಬ ಪದದಿಂದ ಸೂತ್ರದ ಅಂತರಃ ಎಂಬ ಅಂಶವು ಹಾಗೆಯೇ 'ವಿಷ್ಣುರೇವ' ಎಂಬ ಪದಗಳಿಂದ ತತ್ತು ಸಮನ್ವಯಾತ್ ಎಂಬ ಸೂತ್ರದಿಂದ ಅನುವೃತ್ತಿಯನ್ನು ಹೊಂದಿರುವ ತತ್ತು ಎಂಬ ಅಂಶದ ವ್ಯಾಖ್ಯಾನವನ್ನು ಮಾಡಲಾಗಿದೆ. ಯದ್ಯಪಿ ಅನುವ್ಯಾಖ್ಯಾನದಲ್ಲಿ ಸೂತ್ರದಲ್ಲಿರುವ ಅಂತರಪದದ ರ ಎಂಬ ಶಬ್ದದ ವೈಯರ್ಥ್ಯವನ್ನು ಪರಿಹರಿಸುವುದಕ್ಕಾಗಿ 'ಅಂತಃ ಸ್ಥಿತ್ವಾ ರಮಣಕೃತ್' ಎಂದು ಅಂತರಪದದ ವ್ಯಾಖ್ಯಾನವನ್ನು ಮಾಡಲಾಗಿದೆ. ಆದ್ದರಿಂದ ಅದಕ್ಕನುಸಾರವಾಗಿ ಇಲ್ಲೂ ಕೂಡ ರಮಣಕೃಚ್ಚ ಎಂಬುದಾಗಿ ಭಾಷ್ಯದಲ್ಲಿ ಹೇಳಬೇಕಾಗಿತ್ತು. ಆದರೂ ಭಾಷ್ಯದಲ್ಲಿ ವಿಷ್ಣುವೇ ಚಕ್ಷುರಂತಃಸ್ಥನೆಂದು ಸಾಧಿಸಲು ರಮಣಕ್ರಿಯೆಯನ್ನು ಹೇಳುವ ಆತ್ಮಶಬ್ದವನ್ನು ಹೇತುವನ್ನಾಗಿ ಮಾಡಿಕೊಂಡಿರುವುದರಿಂದ ಆತ್ಮಶಬ್ದಾರ್ಥವಾದ ರಮಣಕ್ರಿಯೆಗೆ 'ವಿಷ್ಣುವು ರಮಣಕರ್ತೃವಾಗಿದ್ದಾನೆ' ಎಂಬ ಪ್ರತಿಜ್ಞೆಯಲ್ಲಿ ಅನ್ವಯವಾಗುವುದಿಲ್ಲ ಎಂಬ ಅಭಿಪ್ರಾಯದಿಂದ 'ಅಂತಃಸ್ಥಃ' ಎಂದಿಷ್ಟೇ ಹೇಳಲಾಗಿದೆ. ಅನುವ್ಯಾಖ್ಯಾನದಲ್ಲಾದರೋ ಆತ್ಮಶಬ್ದಾರ್ಥವನ್ನು ಹೇತುವಾಗಿ ಅಭಿಪ್ರಾಯಪಟ್ಟಿಲ್ಲವಾದ್ದರಿಂದ ಸಾಧ್ಯದೊಂದಿಗೆ ಅನ್ವಯವು ಹೊಂದುವುದು ಎಂಬ ಅಭಿಪ್ರಾಯದಿಂದ ಅಂತಃ ಸ್ಥಿತ್ವಾ ಎಂಬುದರ ಜೊತೆಗೆ ರಮಣಕೃತ್ ಎಂದೂ ಹೇಳಲಾಗಿದೆ.

ವಸ್ತುತಸ್ತು – ಸೂತ್ರದಲ್ಲಿ 'ಅಂತಃ' ಎಂದಿಷ್ಟೇ ಹೇಳದೆ 'ಅಂತರಃ' ಎಂಬುದಾಗಿ ಒಂದು ಅಕ್ಷರವನ್ನು ಅಧಿಕವಾಗಿ ಹೇಳಿರುವುದರ ಸಾರ್ಥಕತೆಗಾಗಿ ಇಲ್ಲೂ ಕೂಡ ಭಾಷ್ಯದಲ್ಲಿರುವ ಪುನಃ ತನ್ನ ಪತ್ನಿಯಿಂದ 'ಅಂತಃಸ್ಥ' ಎಂಬ ಪದವು ಉಪಲಕ್ಷಣಯಾ 'ರಮಣಕೃತ್' ಎಂಬ ಅಂಶವನ್ನೂ ಹೇಳುವುದೆಂದು ಸ್ವೀಕರಿಸಬೇಕು. ಆತ್ಮಶಬ್ದದ ಅವಯವಾರ್ಥವನ್ನು ವಿವಕ್ಷಿಸುವ ಅಥವಾ ವಿವಕ್ಷಿಸದಿರುವ ದೃಷ್ಟಿಯಿಂದ ಆತ್ಮಶಬ್ದಕ್ಕೆ ಸಾಧ್ಯವನ್ನು ಒದಗಿಸುವಿಕೆ ಅಥವಾ ಹೇತುತ್ವವು ಹೊಂದುವುದು ಎಂದು ತಿಳಿಯಬೇಕು[೧].

ಭಾ– 'ತ್ರಿಪಾದಸ್ಯಾಮೃತಂ ದಿವಿ' (ಋ.೧೦-೯೦-೩) ಇತ್ಯಾದಿನಾ ತಸ್ಯೈವ ಅಮೃತತ್ವಾದ್ಯುಪಪತ್ತೇಃ ।

'ತ್ರಿಪಾದಸ್ಯಾಮೃತಂ ದಿವಿ' ಇತ್ಯಾದಿ ಶ್ರುತಿಗಳಿಂದ ಅಮೃತತ್ವ ಮೊದ-ಲಾದ ಲಿಂಗಗಳು ವಿಷ್ಣುವಿನಲ್ಲೇ ಯುಕ್ತವಾಗುವುದರಿಂದ (ವಿಷ್ಣುವೇ ಚಕ್ಷುರಂತಃಸ್ಥನು).

(ಭಾ.ದೀ.) 'ಉಪಪತ್ತೇಃ' ಇತ್ಯೇತದನೇಕಲಿಂಗಪರತಯಾ ಲಿಂಗಾನಾಂ ನಿರವ-ಕಾಶತ್ವೋಕ್ತಿಪರತಯಾ ಚ ವ್ಯಾಚಷ್ಟೇ – **ತ್ರಿಪಾದಿತಿ ॥** 'ಇತ್ಯಾದಿನಾ ವಾಕ್ಯೇನ ಉಕ್ತಸ್ಯ' ಇತಿ ಶೇಷಃ । 'ತಸ್ಯ' ಇತಿ ವಿಪರಿಣತಂ ಪದಮಾವರ್ತತೇ । 'ಅಮೃತತ್ವಾದಿ' ಇತ್ಯೇತದಿ-ಹಾಪಿ ಷಷ್ಠ್ಯಂತತಯಾ ಬುದ್ಧ್ಯಾ ವಿವಿಕ್ತಂ ಸಂಬಧ್ಯತೇ । ಪ್ರಥಮೇನಾಽಽದಿಪದೇನ 'ಅಭಯಂ ತಿತೀರ್ಷತಾಂ ಪಾರಮ್' (ಕಠ.ಉ.೩-೨), 'ಅಮೃತೈವೈಷಾ ದೇವತಾ', 'ಆತ್ಮಾಽಜರೋಽಮೃತೋಽಭಯೋ ಬ್ರಹ್ಮ' (ಬೃ.೬-೪-೨೫) ಇತ್ಯಾದಿವಾಕ್ಯಂ ದ್ವಿತೀಯೇನಾಭಯತ್ವಾದಿಕಂ ಗೃಹ್ಯತೇ । ತಥಾಚ – ತ್ರಿಪಾದಿತ್ಯಾದಿನಾ ಶ್ರುತ್ಯಂತರ-ವಾಕ್ಯೇನ ತಸ್ಯ ವಿಷ್ಣೋರೇವ ಉಕ್ತಸ್ಯ 'ಏತದಮೃತಮ್' ಇತಿ ವಾಕ್ಯೇಽಂತಃಸ್ಥ-ನಿಷ್ಠತ್ವೇನೋಕ್ತಸ್ಯ ಅಮೃತತ್ವಾದ್ಯುಪಪತ್ತೇರ್ಲಿಂಗಸ್ಯ ತಸ್ಮಿನ್ ವಿಷ್ಣಾವೇವ ಉಪಪತ್ತೇ-ರ್ಯುಕ್ತತ್ವಾತ್ ಅನ್ಯತ್ರಾಯುಕ್ತತ್ವಾತ್ - ಇತಿ ಯೋಜನಾ । ಅನೇನ ಲಿಂಗಸ್ಯ ನಿರವ-ಕಾಶತ್ವಾನೇಕತ್ವಾಭ್ಯಾಂ ಪ್ರಾಬಲ್ಯಮುಕ್ತಂ ಭವತಿ ।

'ಅಮೃತಂ'- ಮೃತಿರಹಿತಂ, ಯದಭಯಂ- ಭಯರಹಿತಂ, ಯಚ್ಚ ತಿತೀರ್ಷತಾಂ - ಸಂಸಾರತರಣೇಚ್ಛೂನಾಂ, ಪಾರಂ - ಸಂಸಾರಸ್ಯ ಪಾರಸ್ಥಂ ತದುತ್ತರಾವಧಿಭೂತೇ ಶ್ವೇತದ್ವೀಪಾದೌ ಸ್ಥಿತಂ ಮುಕ್ತಪ್ರಾಪ್ಯಂ ಪರಂ ಬ್ರಹ್ಮ ತದ್ ಧ್ಯಾತುಂ ಸಾಧನಂ ವಕ್ತುಂ ವಯಂ ಶಕೇಮಹಿ - ಶಕ್ತಾಃ ಸ್ಮ - ಇತಿ ಕಠಶ್ರುತ್ಯರ್ಥಃ ।

ಸೂತ್ರದಲ್ಲಿರುವ 'ಉಪಪತ್ತೇಃ' ಎಂಬ ಪದವನ್ನು, ಅದು ಅನೇಕ ಲಿಂಗಗಳನ್ನು ಹೇಳುವ ತಾತ್ಪರ್ಯವುಳ್ಳದ್ದು ಮತ್ತು ಆ ಲಿಂಗಗಳಿಗೆ ನಿರವಕಾಶತ್ವವನ್ನು ಹೇಳುವ

ತಾತ್ಪರ್ಯವನ್ನು ಹೊಂದಿರುವುದು ಎಂಬ ಅಭಿಪ್ರಾಯದಿಂದ ''ತ್ರಿಪಾತ್'' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಇತ್ಯಾದಿನಾ' ಎಂಬ ಪದದ ನಂತರ 'ವಾಕ್ಯೇನ ಉಕ್ತಸ್ಯ' ಎಂಬ ಪದಗಳು ಶೇಷವಾಗಿ ಸೇರುತ್ತವೆ. 'ತಸ್ಯ' ಎಂಬ ಪದವು ವಿಭಕ್ತಿವ್ಯತ್ಯಾಸವನ್ನು ಪಡೆದು ಆವೃತ್ತಿಯನ್ನು ಪಡೆಯುತ್ತದೆ. 'ಅಮೃತತ್ವಾದಿ' ಎಂಬ ಪದವು ಷಷ್ಠಿ-ವಿಭಕ್ತ್ಯಂತವಾಗಿ ಪ್ರತ್ಯೇಕಿಸಲ್ಪಟ್ಟು ಇಲ್ಲೂ ಸಂಬಂಧವನ್ನು ಪಡೆಯುತ್ತದೆ. 'ಇತ್ಯಾದಿನಾ' ಎಂಬಲ್ಲಿರುವ ಮೊದಲನೆಯ ಆದಿಪದದಿಂದ **ಅಭಯಂ ತಿತೀರ್ಷತಾಂ ಪಾರಮ್** (ಕಠ.ಉ.೩-೨), **'ಅಮೃತೈವೈಷಾ ದೇವತಾ', 'ಆತ್ಮಾऽಜರೋऽಮೃತೋऽಭಯೋ ಬ್ರಹ್ಮ'**(ಬೃ.೬-೪-೨೫) ಇತ್ಯಾದಿ ವಾಕ್ಯಗಳು, ಅಮೃತತ್ವಾದಿ ಎಂಬಲ್ಲಿರುವ ಎರಡನೆಯ ಆದಿಪದದಿಂದ ಅಭಯತ್ವ ಮೊದಲಾದವುಗಳು ಗ್ರಹಿಸಲ್ಪಡುತ್ತವೆ. ತಥಾ-ಚ – **ತ್ರಿಪಾತ್** ಇತ್ಯಾದಿಯಾದ ಇನ್ನೊಂದು ಶ್ರುತಿಯ ವಾಕ್ಯದಿಂದ, **ತಸ್ಯ** ವಿಷ್ಣುವಿಗೇ **ಉಕ್ತಸ್ಯ** - ಹೇಳಲಾದ, 'ಏತದಮೃತಮ್' ಎಂಬ ವಾಕ್ಯದಲ್ಲಿ ಅಂತಃಸ್ಥನಲ್ಲಿ ಇರುವು-ದೆಂದು ಹೇಳಲಾದ, **ಅಮೃತತ್ವಾದೇಃ ಲಿಂಗಸ್ಯ** - ಅಮೃತತ್ವಾದಿಲಿಂಗಗಳು, **ತಸ್ಮಿನ್**-ವಿಷ್ಣುವಿನಲ್ಲೇ, **ಉಪಪತ್ತೇಃ** - ಯುಕ್ತವಾಗುವುದರಿಂದ ಬೇರೆಡೆಯಲ್ಲಿ ಅಯುಕ್ತವಾಗಿ-ರುವುದರಿಂದ ಎಂದು ಯೋಜನೆ. ಇದರಿಂದ ಲಿಂಗಕ್ಕೆ ನಿರವಕಾಶತ್ವ ಮತ್ತು ಬಹುತ್ವ ಎಂಬ ಎರಡು ಕಾರಣಗಳಿಂದ ಪ್ರಾಬಲ್ಯವನ್ನು ಹೇಳಿದಂತಾಗುವುದು.

**ಅಮೃತಂ** - ಮರಣರಹಿತವಾದ, **ಯದಭಯಂ** - ಭಯರಹಿತವಾದ ಯಾವುದು, **ತಿತೀರ್ಷತಾಂ** - ಸಂಸಾರವನ್ನು ದಾಟಲು ಬಯಸುವವರಿಗೆ, **ಪಾರಂ** - ಸಂಸಾರದ ಪಾರದಲ್ಲಿರುವ ಅಂದರೆ ಸಂಸಾರದ ಇನ್ನೊಂದು ಕೊನೆಯಾಗಿರುವ ಶ್ವೇತ-ದ್ವೀಪವೇ ಮೊದಲಾದವುಗಳಲ್ಲಿ ಇರುವ ಮುಕ್ತರಿಂದ ಹೊಂದಲ್ಪಡುವ ಪರಬ್ರಹ್ಮನನ್ನು ಧ್ಯಾನಮಾಡಲು ಮತ್ತು ಅವನನ್ನು ಹೊಂದಲು ಸಾಧನವನ್ನು ಹೇಳಲು ನಾವು **ಶಕೇಮಹಿ** - ಸಮರ್ಥರಾಗಿದ್ದೇವೆ ಎಂದು ಕಠಶ್ರುತಿಯ ಅರ್ಥ.

**ಭಾ– ಬ್ರಹ್ಮಶಬ್ದಾದ್ಯುಪಪತ್ತೇಶ್ಚ।**

ಈ ಪ್ರಕರಣದಲ್ಲಿ ಬರುವ ಬ್ರಹ್ಮಶಬ್ದ ಮೊದಲಾದವುಗಳೂ ಆ ವಿಷ್ಣು-ವಿನಲ್ಲೇ ಉಪಪನ್ನವಾಗಿರುವುದರಿಂದ (ಚಕ್ಷುರಂತಃಸ್ಥನು ವಿಷ್ಣುವೇ).

(ಭಾ.ದೀ.) ಯದ್ಯೇವಂ ನಿರವಕಾಶತ್ವಾನೇಕತ್ವಾಭ್ಯಾಂ ಬಲವಲ್ಲಿಂಗಬಲಾತ್ ಚಕ್ಷುರಂತಃಸ್ಥಸ್ಯ ವಿಷ್ಣುತ್ವನಿಶ್ಚಯಃ, ಕಿಮು ತದೋಭಯಥಾ ಸ್ವಭಾವನಿರವಕಾಶತ್ವಾಭ್ಯಾಮ್ ಅನೇಕತ್ವಾಚ್ಚ ಬಲವಚ್ಛ್ರುತಿತೋಽಪೀತಿ ಭಾವೇನ ಸೌತ್ರಮ್ 'ಉಪಪತ್ತೇಃ' ಇತ್ಯಂಶಂ ಬ್ರಹ್ಮಾದಿಶ್ರುತಿರೂಪಹೇತ್ವಂತರಪರತಯಾ ತಸ್ಯ ಪ್ರಾಬಲ್ಯೋಪಯೋಗಿನಿರವಕಾಶತ್ವೋಪಪಾದನಪರತಯಾ ಚ ಪ್ರಕಾರಾಂತರೇಣ ವ್ಯಾಚಷ್ಟೇ – ಬ್ರಹ್ಮೇತಿ ॥ 'ಆದಿ'ಪದೇನಾಽತ್ಮಶಬ್ದೋ ಗೃಹ್ಯತೇ । 'ಬ್ರಹ್ಮಾತ್ಮಾದಿ' ಇತಿ ಪಾಠೇ ಆದಿಶಬ್ದೇನ ಪುರುಷಶಬ್ದೋ ಗ್ರಾಹ್ಯಃ । ಅತ್ರ 'ಶ್ರುತ' ಇತ್ಯಾದೌ ಸಂಯೋಜ್ಯಮ್ । 'ತಸ್ಯೈವ' ಇತ್ಯನುಷಜ್ಯತೇ । ತಥಾಚ – ಅತ್ರಾಂತಃಸ್ಥಪ್ರಕರಣೇ ಶ್ರುತಬ್ರಹ್ಮಶಬ್ದಾದೇಸ್ತಸ್ಯ ವಿಷ್ಣೋರೇವ ಉಪಪತ್ತೇರನ್ಯಸ್ಯಾನುಪಪತ್ತೇರಿತ್ಯರ್ಥಃ । ಗುಣಪೂರ್ತಿವಾಚಿಬ್ರಹ್ಮಶಬ್ದಸ್ಯ ವಿಷ್ಣಾವೇವ ಮುಖ್ಯತ್ವಾತ್ ಆತ್ಮಶಬ್ದಸ್ಯಾಪಿ ಆದೇಯಮುಪಾದೇಯಂ ಸುಖಂ ಮಾತ್ಯನುಭವತೀತಿ ವ್ಯುತ್ಪತ್ತ್ಯಾ ತತ್ರೈವ ಮುಖ್ಯತ್ವಾದಿತಿ ಭಾವಃ ।

ಅನೇನ 'ಯ ಏಷೋಽಂತರಕ್ಷಿಣಿ' ಇತಿ ಶ್ರುತ್ಯುಕ್ತೋಽಂತರಃ ತತ್ತು ತತ್ತಜ್ಜೀವಪ್ರೇರಕತ್ವೇನ ತತ್ತಚ್ಚಕ್ಷುರಂತಃಸ್ಥಿತೋ ವಿಷ್ಣುರೇವ, ನ ತ್ವಗ್ನಿಃ । ಕುತಃ? ಉಪಪತ್ತೇಃ । ಅತ್ರ 'ಏತದಮೃತಮಭಯಮೇತದ್ ಬ್ರಹ್ಮೈಷ ಆತ್ಮಾ' ಇತ್ಯಮೃತತ್ವಾಭಯತ್ವಾದಿಲಿಂಗಶ್ರವಣಾದ್ ಬ್ರಹ್ಮಾದಿಶಬ್ದಶ್ರುತೇಶ್ಚ ತೇಷಾಂ ಚ ವಿಷ್ಣಾವೇವೋಪಪತ್ತೇಃ, ಅನ್ಯತ್ರಾನುಪಪತ್ತೇರಿತಿ ಸೂತ್ರಾರ್ಥ ಉಕ್ತೋ ಭವತಿ ।

ಹೀಗೆ ಯಾವಾಗ ನಿರವಕಾಶತ್ವ ಮತ್ತು ಅನೇಕತ್ವ ಎಂಬ ಎರಡು ಕಾರಣಗಳಿಂದಾಗಿ ಪ್ರಬಲವಾಗಿರುವ ಲಿಂಗಗಳಿಂದ ಚಕ್ಷುರಂತಃಸ್ಥನು ವಿಷ್ಣುವೆಂದು ನಿಶ್ಚಿತವಾಗುವನೋ, ಆಗ ಸ್ವಭಾವ ಮತ್ತು ನಿರವಕಾಶತ್ವ ಎಂಬ ಎರಡು ಪ್ರಕಾರಗಳಿಂದಲೂ ಹಾಗೆಯೇ ಬಹುತ್ವದ ಕಾರಣದಿಂದಲೂ ಪ್ರಬಲವಾಗಿರುವ ಶ್ರುತಿಯಿಂದಲೂ ಚಕ್ಷುರಂತಃಸ್ಥನು ವಿಷ್ಣುವೆಂದೇ ಸಿದ್ಧನಾಗುವನು- ಎಂದು ಹೇಳುವುದೇನು? ಎಂಬ ಆಶಯದಿಂದ ಸೂತ್ರದಲ್ಲಿರುವ ಉಪಪತ್ತೇಃ ಎಂಬ ಅಂಶವನ್ನು ಬ್ರಹ್ಮ ಮೊದಲಾದ ಶಬ್ದರೂಪವಾದ ಮತ್ತೊಂದು ಹೇತುಪರವಾಗಿ ಮತ್ತು ಅದಕ್ಕಿರುವ ಪ್ರಾಬಲ್ಯಕ್ಕೆ ನಿಮಿತ್ತ-

ವಾದ ನಿರವಕಾಶತ್ವವನ್ನು ಹೇಳುವ ಅಭಿಪ್ರಾಯವುಳ್ಳದ್ದಾಗಿಯೂ ಇನ್ನೊಂದು ರೀತಿಯಿಂದ ಬ್ರಹ್ಮ ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಭಾಷ್ಯದಲ್ಲಿ ಆದಿಪದದಿಂದ ಆತ್ಮಶಬ್ದವು ಗ್ರಹಿಸಲ್ಪಡುವುದು. 'ಬ್ರಹ್ಮಾತ್ಮಾದಿ' ಎಂಬ ಪಾಠವಿರುವುದಾದರೆ ಆದಿಶಬ್ದದಿಂದ ಪುರುಷಶಬ್ದವು ಗ್ರಾಹ್ಯವಾಗುವುದು. ಈ ವಾಕ್ಯದ ಆರಂಭದಲ್ಲಿ 'ಅತ್ರ ಶ್ರುತ' ಎಂಬ ಪದಗಳನ್ನು ಸೇರಿಸಬೇಕು. 'ತಸ್ಯೈವ' ಎಂಬ ಪದಗಳು ಅನುವೃತ್ತಿಯನ್ನು ಪಡೆಯುತ್ತವೆ. ತಥಾಚ – ಅತ್ರ- ಅಂತಃಸ್ಥಪ್ರಕರಣದಲ್ಲಿ ಶ್ರುತವಾಗಿರುವ ಬ್ರಹ್ಮಶಬ್ದವೇ ಮೊದಲಾದವುಗಳು, ತಸ್ಯೈವ - ಆ ವಿಷ್ಣುವಿಗೇ ಉಪಪನ್ನವಾಗುವುದರಿಂದ ಮತ್ತು ಇತರರಿಗೆ ಅನುಪಪನ್ನವಾಗಿರುವುದರಿಂದ ಎಂದು ಅರ್ಥ. ಗುಣಪೂರ್ಣತ್ವವನ್ನು ಹೇಳುವ ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿರುವುದರಿಂದ, ಹಾಗೆಯೇ ಆದೇಯಂ - ಅಂದರೆ ಉಪಾದೇಯವಾದ ಸುಖವನ್ನು, ಮಾತಿ - ಅನುಭವಿಸುತ್ತಾನೆ ಎಂಬ ವ್ಯುತ್ಪತ್ತಿಯಿಂದ ಆತ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿರುವುದರಿಂದ ಎಂದು ಭಾವ.

ಇದರಿಂದ 'ಯ ಏಷೋ ಅಂತರಕ್ಷಿಣಿ' ಎಂಬ ಶ್ರುತಿಯಲ್ಲಿ ಹೇಳಿರುವ ಅಂತರನು 'ತತ್ತು' ಆಯಾಯಾ ಜೀವರಿಗೆ ಪ್ರೇರಕನಾಗಿ ಆಯಾಯಾ ಜೀವರ ಚಕ್ಷುಸ್ಸಿನ ಒಳಗೆ ಇರುವ ವಿಷ್ಣುವೇ ಆಗಿದ್ದಾನೆ; ಹೊರತು ಅಗ್ನಿಯಲ್ಲ. ಏಕೆಂದರೆ, ಉಪಪತ್ತೇಃ - ಈ ಪ್ರಕರಣದಲ್ಲಿ 'ಏತದಮೃತಮ್ ಅಭಯಮ್ ಏತದ್ ಬ್ರಹ್ಮ ಏಷ ಆತ್ಮಾ' ಎಂದು ಅಮೃತತ್ವ, ಅಭಯತ್ವ ಮೊದಲಾದ ಲಿಂಗಗಳು ಶ್ರುತವಾಗಿರುವುದರಿಂದ ಮತ್ತು ಬ್ರಹ್ಮ ಮೊದಲಾದ ಶಬ್ದಗಳು ಶ್ರುತವಾಗಿರುವುದರಿಂದ ಅವುಗಳಿಗೆ ವಿಷ್ಣುವಿನಲ್ಲೇ ಉಪಪತ್ತಿ ಇರುವುದರಿಂದ ಅನ್ಯತ್ರ ಅನುಪಪತ್ತಿ ಇರುವುದರಿಂದ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

**ಭಾ– 'ಸೋಽಹಮಸ್ಮಿ' ಇತ್ಯಾದಿ ತ್ವಂತರ್ಯಾಮ್ಯಪೇಕ್ಷಯಾ ।**
**'ಅಂತರ್ಯಾಮಿಣಮೀಶೇಶಮಪೇಕ್ಷ್ಯಾಹಂ ತ್ವಮಿತ್ಯಪಿ ।**
**ಸರ್ವೇ ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇಽಪಿ ವಸ್ತುಷು'**
**– ಇತಿ ಮಹಾಕೌರ್ಮೇ ॥ ೧೩

'ಸೋಽಹಮಸ್ಮಿ' ಮೊದಲಾದ ವಾಕ್ಯಗಳಾದರೋ ಅಂತರ್ಯಾಮಿಯ ದೃಷ್ಟಿಯಿಂದ ಹೊರಟಿವೆ. "ಅಂತರ್ಯಾಮಿಯಾದ, ನಿಯಾಮಕರಾದ ಬ್ರಹ್ಮಾದಿದೇವತೆಗಳಿಗೂ ನಿಯಾಮಕನಾದ ಭಗವಂತನ ದೃಷ್ಟಿಯಿಂದ ಅಹಂ ಮತ್ತು ತ್ವಂ ಎಂದಿವೆ ಮೊದಲಾದ ಎಲ್ಲ ಶಬ್ದಗಳೂ ಜೀವಬ್ರಹ್ಮರಲ್ಲಿ ಭೇದವಿದ್ದರೂ ಪ್ರಯೋಗಿಸಲ್ಪಡುತ್ತವೆ ಎಂದು ಮಹಾಕೌರ್ಮದಲ್ಲಿ ಹೇಳಿದೆ.

(ಭಾ.ದೀ.) ನನು ನಿರವಕಾಶಶ್ರುತಿಲಿಂಗಬಲಾದ್ ಯದಿ ವಿಷ್ಣುರೇವ ಅಕ್ಷಿಸ್ಥಃ ತದಾ ಆದಿತ್ಯೋಽಪಿ ಸ ಏವ ಸ್ಯಾತ್ । ತರ್ಹಿ 'ಸೋಽಹಮಸ್ಮಿ ಸ ಏವಾಹಮಸ್ಮಿ' ಇತ್ಯಹಮಾದಿಶ್ರುತೇಃ ಕಾ ಗತಿಃ? ಇತ್ಯತ ಆಹ – **ಸೋಽಹಮಸ್ಮೀತ್ಯಾದಿ ಇತಿ ॥** ಆದಿಪದೇನ ಗಾರ್ಹಪತ್ಯಾದಿಶಬ್ದಾನಾಂ ಗ್ರಹಣಮ್ । ತಥಾಚ ಇತ್ಯಾದಿವಾಕ್ಯಸ್ಥಮಹಮಾದಿಪದಜಾತಮಿತ್ಯರ್ಥಃ । 'ಅಪೇಕ್ಷ್ಯ' ಇತ್ಯನಂತರಂ 'ಪ್ರವೃತ್ತಮ್' ಇತಿ ಶೇಷಃ।

ಅಂತರ್ಯಾಮಿಣಿ ಅಹಮಾದಿಶಬ್ದಪ್ರವೃತ್ತಿಂ ಸ್ಮಾರಯತಿ – **ಅಂತರ್ಯಾಮಿಣಮಿತಿ ॥** ಆದ್ಯೋಽಪಿಃ ಸಮುಚ್ಚಯೇ । ದ್ವಿತೀಯೋ ಯದ್ಯಪಿ ತಥಾಽಪೀತ್ಯರ್ಥೇ । ಈಶಾನಾಂ - ಬ್ರಹ್ಮಾದೀನಾಮ್; ಈಶಮಿತ್ಯಂತರ್ಯಾಮಿತ್ವೋಪಪಾದಕಮ್ । ತಥಾಚ– 'ವಸ್ತುಷು' ಅಗ್ನ್ಯಾದಿಜೀವೇಷು ಈಶಾದ್ ಭೇದೇ ಸತ್ಯಪಿ ತದಭೇದಬೋಧಕೋಽಹಮಿತಿ ಶಬ್ದಃ ತ್ವಮಿತಿ ಶಬ್ದಃ, ಕಿಂ ಬಹುನಾಽಭೇದಸಾಧಕಾಃ ಸರ್ವೇ ತತ್ತಚ್ಛಬ್ದಾಃ ಪ್ರಯುಜ್ಯಂತೇ । ಕಥಮ್? ಯತೋಽಂತರ್ಯಾಮಿಣಮಪೇಕ್ಷ್ಯೈವ ಏತೇ ಶಬ್ದಾಃ ಪ್ರಯುಜ್ಯಂತೇ। ನೈತಾವತಾಽಗ್ನ್ಯಾದಿಜೀವಾನಾಂ ಈಶಾಭೇದಃ ಶಂಕ್ಯಃ। ಯತಃ ಸೋಽಂತರ್ಯಾಮೀ ಈಶೇಶೋ ಬ್ರಹ್ಮಾದ್ಯುತ್ತಮ ಇತ್ಯರ್ಥಃ । 'ಮಹಾಕೌರ್ಮೇ' ಇತ್ಯಸ್ಯ 'ಉಕ್ತತ್ವಾತ್' ಇತ್ಯಧ್ಯಾಹಾರೇಣ 'ಸೋಽಹಮ್' ಇತಿ ಪೂರ್ವವಾಕ್ಯೇನ ಅನ್ವಯಃ।

ನಿರವಕಾಶವಾದ ಶ್ರುತಿ ಮತ್ತು ಲಿಂಗಗಳ ಬಲದಿಂದ ವಿಷ್ಣುವೇ ಆಕ್ಷಿಪ್ತನೆಂದಾದರೆ ಆಗ ಆದಿತ್ಯಸ್ಥನೂ ಅವನೇ ಆಗಬೇಕು. ಹಾಗಿದ್ದಲ್ಲಿ 'ಸೋಽಹಮಸ್ಮಿ, ಸ ಏವಾಹ-ಮಸ್ಮಿ' ಎಂಬಲ್ಲಿರುವ ಅಹಂ ಮೊದಲಾದ ಪದಗಳಿಗೆ ಏನು ಗತಿ? ಎಂಬ ಶಂಕೆಗೆ ಉತ್ತರವಾಗಿ ''ಸೋಹಮಸ್ಮೀತ್ಯಾದಿ'' ಎಂಬ ವಾಕ್ಯವು ಹೊರಟಿದೆ. ಇತ್ಯಾದಿ ಎಂಬ-ಲ್ಲಿರುವ ಆದಿಪದದಿಂದ ಗಾರ್ಹಪತ್ಯ ಮೊದಲಾದ ಶಬ್ದಗಳನ್ನು ಗ್ರಹಿಸಬೇಕು. ತಥಾಚ – ಇತ್ಯಾದಿ ಎಂದರೆ 'ಸೋಹಮಸ್ಮಿ' ಇತ್ಯಾದಿ ವಾಕ್ಯದಲ್ಲಿರುವ ಅಹಂ ಮೊದಲಾದ ಪದಸಮೂಹವು ಎಂದು ಅರ್ಥ. 'ಅಪೇಕ್ಷ್ಯ' ಎಂಬ ಪದದ ನಂತರ 'ಪ್ರವೃತ್ತಂ' ಎಂಬ ಪದವು ಶೇಷವಾಗಿದೆ.

ಅಂತರ್ಯಾಮಿಯನ್ನು ಕುರಿತು ಅಹಮಾದಿಶಬ್ದಗಳ ಪ್ರಯೋಗವಿರುವುದನ್ನು ''ಅಂತರ್ಯಾಮಿಣಂ'' ಎಂಬ ಸ್ಮೃತಿವಾಕ್ಯದಿಂದ ತಿಳಿಸುತ್ತಿದ್ದಾರೆ. ಈ ಸ್ಮೃತಿವಾಕ್ಯ-ದಲ್ಲಿ ಮೊದಲನೆಯ ಅಪಿಶಬ್ದವು ಸಮುಚ್ಚಯವನ್ನು ಹೇಳುವುದು. ಎರಡನೆಯ ಅಪಿಶಬ್ದವು ಯದ್ಯಪಿ ತಥಾಪಿ ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಈಶೇಶಂ - ಅಂದರೆ ಈಶಾನಾಂ ನಿಯಾಮಕರಾದ ಬ್ರಹ್ಮಾದಿಗಳಿಗೆ, ಈಶಂ -ನಿಯಾಮಕನೆಂದು ವಿಷ್ಣುವಿಗೆ ಅಂತರ್ಯಾಮಿತ್ವವನ್ನು ಉಪಪಾದಿಸುವ ವಿಶೇಷಣವಾಗಿದೆ. ತಥಾಚ – ವಸ್ತುಷು - ಅಗ್ನಿಮೊದಲಾದ ಜೀವರಲ್ಲಿ, ಈಶನಾದ ಪರಮಾತ್ಮನಿಂದ ಭೇದೇ ಸತ್ಯಪಿ - ಭೇದವಿದ್ದರೂ ಅವನ ಅಭೇದವನ್ನು ಬೋಧಿಸುವ ಅಹಂ ಎಂಬ ಶಬ್ದ, ಮತ್ತು ತ್ವಮ್ ಎಂಬ ಶಬ್ದ; ಹೆಚ್ಚೇನು ಅಭೇದಸಾಧಕವಾದ ಆಯಾಯಾ ಎಲ್ಲ ಶಬ್ದಗಳೂ ಪ್ರಯೋಗಿಸಲ್ಪಡುತ್ತವೆ. ಹೇಗೆ? ಏಕೆಂದರೆ ಅಂತರ್ಯಾಮಿಯನ್ನು ಉದ್ದೇಶಿಸಿಯೇ ಈ ಶಬ್ದಗಳು ಪ್ರಯೋಗಿಸಲ್ಪಡುತ್ತವೆ. ಇಷ್ಟುಮಾತ್ರದಿಂದ ಅಗ್ನಿ ಮೊದಲಾದ ಜೀವರಿಗೆ ಈಶನಿಂದ ಅಭೇದವಿರುವುದು ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಆ ಅಂತ-ರ್ಯಾಮಿಯು, ಈಶೇಶಃ- ಬ್ರಹ್ಮಾದಿಗಳಿಗಿಂತಲೂ ಉತ್ತಮನಾಗಿದ್ದಾನೆ ಎಂದು ಅರ್ಥ. ಮಹಾಕೌರ್ಮೇ ಎಂಬ ಪದಕ್ಕೆ ಉಕ್ತತ್ವಾತ್ ಎಂಬ ಅಧ್ಯಾಹಾರದೊಂದಿಗೆ ಸೋಽ-ಹಮ್ ಎಂಬ ಹಿಂದಿನ ವಾಕ್ಯದಿಂದ ಅನ್ವಯವಾಗುವುದು.

ಸೂ– ॥ ಓಂ ಸ್ಥಾನಾದಿವ್ಯಪದೇಶಾಚ್ಚ ಓಂ ॥ ೧೪ ॥

ಸ್ಥಾನವಾದ ಅಕ್ಷಿ ಮೊದಲಾದವುಗಳ ಅಧಿಷ್ಠಾತೃವಾದ ಪರಮಾತ್ಮನ ಉಲ್ಲೇಖವಿರುವುದರಿಂದ ಅಂತರನು ಬ್ರಹ್ಮನೇ ಆಗಿರುವನು.

ಭಾ– 'ತದ್ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ' ಇತ್ಯಾದಿಸ್ಥಾನಶಕ್ತಿಃ 'ವಾಮನಿರ್ಭಾಮನಿಃ' ಇತ್ಯಾದ್ಯಾತ್ಮಶಕ್ತಿಶ್ಚೋಚ್ಯತೇ। ತಸ್ಯ ಹ್ಯೇತಲ್ಲಿಂಗಮ್।

ಈ ಪ್ರಕರಣದಲ್ಲಿ 'ತದ್ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ' ಎಂಬುದಾಗಿ ಅಕ್ಷಿಸ್ಥಾನದ ಶಕ್ತಿ ಹಾಗೂ ವಾಮನಿರ್ಭಾಮನಿಃ ಇತ್ಯಾದಿಯಾಗಿ ಪರಮಾತ್ಮನ ಶಕ್ತಿಯು ಹೇಳಲ್ಪಟ್ಟಿದೆ. ಸ್ಥಾನಶಕ್ತಿ ಹಾಗೂ ಆದಿಶಬ್ದದಿಂದ ತೆಗೆದುಕೊಳ್ಳುವ ಶಕ್ತಿ ಇವುಗಳು ಆ ವಿಷ್ಣುವಿನ ಅಸಾಧಾರಣಧರ್ಮಗಳೇ ಆಗಿವೆ.

(ಭಾ.ದೀ.) ಯುಕ್ತ್ಯಂತರೇಣ ವಿಷ್ಣೋಃ ಚಕ್ಷುರಂತಃಸ್ಥತ್ವಂ ಸಾಧಯತ್ಸೂತ್ರಮುಪನ್ಯಸ್ಯ ವ್ಯಾಚಷ್ಟೇ – **ಸ್ಥಾನಾದೀತಿ** ॥ 'ಸರ್ಪಿಃ' ಇತ್ಯತಃ ಪೂರ್ವಂ 'ತದ್ಯದಸ್ಮಿನ್' ಇತಿ ಶ್ರುತಿವಾಕ್ಯಪಾಠಃ। **ತತ್ತ್ವಪ್ರದೀಪೇ** ತು – 'ಯದಿದಂ ಚಕ್ಷುಷಿ' ಇತಿ ಪಾಠಭೇದೇನ ಪೂರ್ವವಾಕ್ಯಮುದಾಹೃತಮ್। 'ಇತ್ಯಾದಿ' ಇತಿ ಲುಪ್ತವಿಭಕ್ತಿಕಮ್। 'ಇತ್ಯಾದೌ' ಇತ್ಯರ್ಥಃ। ಏವಮುತ್ತರತ್ರಾಪಿ। 'ಆದಿ'ಪದೇನ 'ವರ್ತ್ಮನೀ ಏವ ಗಚ್ಛತಿ' ಇತ್ಯಾದೇರ್ಗ್ರಹಣಮ್।

**ಸ್ಥಾನಶಕ್ತಿರಿತಿ** ॥ ಬ್ರಹ್ಮಸ್ಥಾನಭೂತಯೋಃ ಅಕ್ಷ್ಣೋರಕ್ಷಿಸ್ಥಪರಮಪುರುಷಸಂಬಂಧಾತ್ ಅಸಂಗತ್ವಾಖ್ಯಶಕ್ತಿರಿತ್ಯರ್ಥಃ। 'ಉಚ್ಯತೇ' ಇತ್ಯತ್ರಾಪಿ ಸಂಬಧ್ಯತೇ। ಅನೇನ ಸೌತ್ರಂ ಸ್ಥಾನಪದಂ ಪರಮಾತ್ಮಸ್ಥಾನಶಕ್ತ್ಯುಪಲಕ್ಷಕತಯಾ ವ್ಯಾಖ್ಯಾತಮ್। 'ಉಚ್ಯತೇ' ಇತ್ಯನೇನಾಸಿದ್ಧಿಪರಿಹಾರಕವ್ಯಪದೇಶಶಬ್ದಾರ್ಥೋ ದರ್ಶಿತಃ।

ಮತ್ತೊಂದು ಯುಕ್ತಿಯಿಂದ ವಿಷ್ಣುವಿಗೆ ಚಕ್ಷುರಂತಃಸ್ಥತ್ವವನ್ನು ಸಾಧಿಸುವ ಸ್ಥಾನಾದಿ ಎಂಬ ಸೂತ್ರವನ್ನು ಉಲ್ಲೇಖಿಸಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

ನಿರವಕಾಶವಾದ ಶ್ರುತಿ ಮತ್ತು ಲಿಂಗಗಳ ಬಲದಿಂದ ವಿಷ್ಣುವೇ ಅಕ್ಷಿಸ್ಥನೆಂದಾದರೆ ಆಗ ಆದಿತ್ಯಸ್ಥನೂ ಅವನೇ ಆಗಬೇಕು. ಹಾಗಿದ್ದಲ್ಲಿ 'ಸೋಽಹಮಸ್ಮಿ, ಸ ಏವಾಹ-ಮಸ್ಮಿ' ಎಂಬಲ್ಲಿರುವ ಅಹಂ ಮೊದಲಾದ ಪದಗಳಿಗೆ ಏನು ಗತಿ? ಎಂಬ ಶಂಕೆಗೆ ಉತ್ತರವಾಗಿ ''ಸೋಹಮಸ್ಮೀತ್ಯಾದಿ'' ಎಂಬ ವಾಕ್ಯವು ಹೊರಟಿದೆ. ಇತ್ಯಾದಿ ಎಂಬ-ಲ್ಲಿರುವ ಆದಿಪದದಿಂದ ಗಾರ್ಹಪತ್ಯ ಮೊದಲಾದ ಶಬ್ದಗಳನ್ನು ಗ್ರಹಿಸಬೇಕು. ತಥಾಚ – ಇತ್ಯಾದಿ ಎಂದರೆ 'ಸೋಹಮಸ್ಮಿ' ಇತ್ಯಾದಿ ವಾಕ್ಯದಲ್ಲಿರುವ ಅಹಂ ಮೊದಲಾದ ಪದಸಮೂಹವು ಎಂದು ಅರ್ಥ. 'ಅಪೇಕ್ಷ್ಯ' ಎಂಬ ಪದದ ನಂತರ 'ಪ್ರವೃತ್ತಂ' ಎಂಬ ಪದವು ಶೇಷವಾಗಿದೆ.

ಅಂತರ್ಯಾಮಿಯನ್ನು ಕುರಿತು ಅಹಮಾದಿಶಬ್ದಗಳ ಪ್ರಯೋಗವಿರುವುದನ್ನು ''ಅಂತರ್ಯಾಮಿಣಂ'' ಎಂಬ ಸ್ಮೃತಿವಾಕ್ಯದಿಂದ ತಿಳಿಸುತ್ತಿದ್ದಾರೆ. ಈ ಸ್ಮೃತಿವಾಕ್ಯ-ದಲ್ಲಿ ಮೊದಲನೆಯ ಅಪಿಶಬ್ದವು ಸಮುಚ್ಚಯವನ್ನು ಹೇಳುವುದು. ಎರಡನೆಯ ಅಪಿಶಬ್ದವು ಯದ್ಯಪಿ ತಥಾಪಿ ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಈಶೇಶಂ - ಅಂದರೆ ಈಶಾನಾಂ ನಿಯಾಮಕರಾದ ಬ್ರಹ್ಮಾದಿಗಳಿಗೆ, ಈಶಂ -ನಿಯಾಮಕನೆಂದು ವಿಷ್ಣುವಿಗೆ ಅಂತರ್ಯಾಮಿತ್ವವನ್ನು ಉಪಪಾದಿಸುವ ವಿಶೇಷಣವಾಗಿದೆ. ತಥಾಚ – ವಸ್ತುಷು - ಅಗ್ನಿಮೊದಲಾದ ಜೀವರಲ್ಲಿ, ಈಶನಾದ ಪರಮಾತ್ಮನಿಂದ ಭೇದೇ ಸತ್ಯಪಿ - ಭೇದವಿದ್ದರೂ ಅವನ ಅಭೇದವನ್ನು ಬೋಧಿಸುವ ಅಹಂ ಎಂಬ ಶಬ್ದ, ಮತ್ತು ತ್ವಮ್ ಎಂಬ ಶಬ್ದ; ಹೆಚ್ಚೇನು ಅಭೇದಸಾಧಕವಾದ ಆಯಾಯಾ ಎಲ್ಲ ಶಬ್ದಗಳೂ ಪ್ರಯೋಗಿಸಲ್ಪಡುತ್ತವೆ. ಹೇಗೆ? ಏಕೆಂದರೆ ಅಂತರ್ಯಾಮಿಯನ್ನು ಉದ್ದೇಶಿಸಿಯೇ ಈ ಶಬ್ದಗಳು ಪ್ರಯೋಗಿಸಲ್ಪಡುತ್ತವೆ. ಇಷ್ಟುಮಾತ್ರದಿಂದ ಅಗ್ನಿ ಮೊದಲಾದ ಜೀವರಿಗೆ ಈಶನಿಂದ ಅಭೇದವಿರುವುದು ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಆ ಅಂತ-ರ್ಯಾಮಿಯು, ಈಶೇಶಃ- ಬ್ರಹ್ಮಾದಿಗಳಿಗಿಂತಲೂ ಉತ್ತಮನಾಗಿದ್ದಾನೆ ಎಂದು ಅರ್ಥ. ಮಹಾಕೌರ್ಮೇ ಎಂಬ ಪದಕ್ಕೆ ಉಕ್ತತ್ವಾತ್ ಎಂಬ ಅಧ್ಯಾಹಾರದೊಂದಿಗೆ ಸೋಽ-ಹಮ್ ಎಂಬ ಹಿಂದಿನ ವಾಕ್ಯದಿಂದ ಅನ್ವಯವಾಗುವುದು.

ಸೂ– ॥ ಓಂ ಸ್ಥಾನಾದಿವ್ಯಪದೇಶಾಚ್ಚ ಓಂ ॥ ೧೪ ॥

ಸ್ಥಾನವಾದ ಅಕ್ಷಿ ಮೊದಲಾದವುಗಳ ಅಧಿಷ್ಠಾತೃವಾದ ಪರಮಾತ್ಮನ ಉಲ್ಲೇಖವಿರುವುದರಿಂದ ಅಂತರನು ಬ್ರಹ್ಮನೇ ಆಗಿರುವನು.

ಭಾ– 'ತದ್ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ' ಇತ್ಯಾದಿಸ್ಥಾನಶಕ್ತಿಃ 'ವಾಮನಿರ್ಭಾಮನಿಃ' ಇತ್ಯಾದ್ಯಾತ್ಮಶಕ್ತಿಶ್ಚೋಚ್ಯತೇ। ತಸ್ಯ ಹ್ಯೇತಲ್ಲಿಂಗಮ್ ।

ಈ ಪ್ರಕರಣದಲ್ಲಿ 'ತದ್ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ' ಎಂಬುದಾಗಿ ಅಕ್ಷಿಸ್ಥಾನದ ಶಕ್ತಿ ಹಾಗೂ ವಾಮನಿರ್ಭಾಮನಿಃ ಇತ್ಯಾದಿಯಾಗಿ ಪರಮಾತ್ಮನ ಶಕ್ತಿಯು ಹೇಳಲ್ಪಟ್ಟಿದೆ. ಸ್ಥಾನಶಕ್ತಿ ಹಾಗೂ ಆದಿಶಬ್ದದಿಂದ ತೆಗೆದುಕೊಳ್ಳುವ ಶಕ್ತಿ ಇವುಗಳು ಆ ವಿಷ್ಣುವಿನ ಅಸಾಧಾರಣಧರ್ಮಗಳೇ ಆಗಿವೆ.

(ಭಾ.ದೀ.) ಯುಕ್ತ್ಯಂತರೇಣ ವಿಷ್ಣೋಃ ಚಕ್ಷುರಂತಃಸ್ಥತ್ವಂ ಸಾಧಯತ್ಸೂತ್ರಮುಪನ್ಯಸ್ಯ ವ್ಯಾಚಷ್ಟೇ – **ಸ್ಥಾನಾದೀತಿ** ॥ 'ಸರ್ಪಿಃ' ಇತ್ಯತಃ ಪೂರ್ವಂ 'ತದ್ಯದಸ್ಮಿನ್' ಇತಿ ಶ್ರುತಿವಾಕ್ಯಪಾಠಃ । **ತತ್ತ್ವಪ್ರದೀಪೇ** ತು – 'ಯದಿದಂ ಚಕ್ಷುಷಿ' ಇತಿ ಪಾಠಭೇದೇನ ಪೂರ್ವವಾಕ್ಯಮುದಾಹೃತಮ್ । 'ಇತ್ಯಾದಿ' ಇತಿ ಲುಪ್ತವಿಭಕ್ತಿಕಮ್ । 'ಇತ್ಯಾದೌ' ಇತ್ಯರ್ಥಃ । ಏವಮುತ್ತರತ್ರಾಪಿ । 'ಆದಿ'ಪದೇನ 'ವರ್ತ್ಮನೀ ಏವ ಗಚ್ಛತಿ' ಇತ್ಯಾದೇರ್ಗ್ರಹಣಮ್ ।

**ಸ್ಥಾನಶಕ್ತಿರಿತಿ** ॥ ಬ್ರಹ್ಮಸ್ಥಾನಭೂತಯೋಃ ಅಕ್ಷ್ಣೋರಕ್ಷಿಸ್ಥಪರಮಪುರುಷಸಂಬಂಧಾತ್ ಅಸಂಗತ್ವಾಖ್ಯಶಕ್ತಿರಿತ್ಯರ್ಥಃ । 'ಉಚ್ಯತೇ' ಇತ್ಯತ್ರಾಪಿ ಸಂಬಧ್ಯತೇ । ಅನೇನ ಸೌತ್ರಂ ಸ್ಥಾನಪದಂ ಪರಮಾತ್ಮಸ್ಥಾನಶಕ್ತ್ಯುಪಲಕ್ಷಕತಯಾ ವ್ಯಾಖ್ಯಾತಮ್ । 'ಉಚ್ಯತೇ' ಇತ್ಯನೇನಾಸಿದ್ಧಿಪರಿಹಾರಕವ್ಯಪದೇಶಶಬ್ದಾರ್ಥೋ ದರ್ಶಿತಃ।

ಮತ್ತೊಂದು ಯುಕ್ತಿಯಿಂದ ವಿಷ್ಣುವಿಗೆ ಚಕ್ಷುರಂತಃಸ್ಥತ್ವವನ್ನು ಸಾಧಿಸುವ ಸ್ಥಾನಾದಿ ಎಂಬ ಸೂತ್ರವನ್ನು ಉಲ್ಲೇಖಿಸಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

'ಸರ್ಪಿಃ' ಎಂಬ ಪದದ ಮುಂಚೆ 'ತದ್ಯದಸ್ಮಿನ್' ಎಂಬುದಾಗಿ ಶ್ರುತಿವಾಕ್ಯದ ಪಾಠವಿದೆ. ತತ್ತ್ವಪ್ರದೀಪದಲ್ಲಾದರೋ 'ಯದಿದಂ ಚಕ್ಷುಷಿ' ಎಂಬುದಾಗಿ ಪಾಠಭೇದವನ್ನು ಗ್ರಹಿಸಿ ಹಿಂದಿನ ವಾಕ್ಯವನ್ನು ಉದಾಹರಿಸಲಾಗಿದೆ. 'ಇತ್ಯಾದಿ ಸ್ಥಾನಶಕ್ತಿಃ' ಎಂಬಲ್ಲಿ ಇತ್ಯಾದಿ ಎಂಬ ಪದವು ಲುಪ್ತವಿಭಕ್ತಿಕವಾದ ಪದವಾಗಿದೆ. ಇತ್ಯಾದೌ ಎಂದು ಅದರ ಅರ್ಥ. ಹೀಗೆ ಮುಂದಿನ ವಾಕ್ಯದಲ್ಲೂ ತಿಳಿಯತಕ್ಕದ್ದು. ಆದಿಪದದಿಂದ 'ವರ್ತ್ಮನೀ ಏವ ಗಚ್ಛತಿ' ಇತ್ಯಾದಿವಾಕ್ಯಗಳನ್ನು ಗ್ರಹಿಸಬೇಕು.

ಸ್ಥಾನಶಕ್ತಿ ಎಂದರೆ - ಬ್ರಹ್ಮನ ಸ್ಥಾನಗಳಾಗಿರುವ ಎರಡು ಅಕ್ಷಿಗೋಲಕಗಳಿಗೆ ಅಕ್ಷಿಸ್ಥನಾದ ಪರಮಪುರುಷನ ಸಂಬಂಧವಿರುವುದರಿಂದ ಲಭಿಸಿರುವ ಅಸಂಗತ್ವವೆಂಬ ಶಕ್ತಿ ಎಂದು ಅರ್ಥ. 'ಉಚ್ಯತೇ' ಎಂಬ ಪದವು ಇಲ್ಲೂ ಸಂಬಂಧವನ್ನು ಪಡೆಯು-ವುದು. ಇದರಿಂದ ಸೂತ್ರದಲ್ಲಿರುವ ಸ್ಥಾನಪದವು ಲಕ್ಷಣಾವೃತ್ತಿಯಿಂದ ಪರಮಾತ್ಮನ ಸ್ಥಾನಶಕ್ತಿ ಎಂಬ ಅರ್ಥವನ್ನು ಹೇಳುವುದೆಂದು ವ್ಯಾಖ್ಯಾನ ಮಾಡಿದಂತಾಯಿತು. ಉಚ್ಯತೇ ಎಂಬ ಪದದಿಂದ ಇಲ್ಲಿ ಹೇಳಿರುವ ಅಸಾಧಾರಣಧರ್ಮಗಳಿಗೆ ಅಸಿದ್ಧಿ-ದೋಷವನ್ನು ಪರಿಹರಿಸುವ ಸೂತ್ರದಲ್ಲಿರುವ ವ್ಯಪದೇಶಶಬ್ದದ ಅರ್ಥವು ಪ್ರದರ್ಶಿತ-ವಾಗಿದೆ.

(ಭಾ.ದೀ.) ಆದಿಪದೇನ 'ಏತಂ ಸಂಯದ್ವಾಮ ಇತ್ಯಾಚಕ್ಷತೇ । ಏತಂ ಹಿ ಸರ್ವಾಣಿ ವಾಮಾನ್ಯಭಿಸಂಯಂತಿ ... ಏಷ ಉ ಏವ ವಾಮನಿರೇಷ ಹಿ ಸರ್ವಾಣಿ ವಾಮಾನಿ ನಯತಿ । ಏಷ ಉ ಏವ ಭಾಮನಿರೇಷ ಹಿ ಸರ್ವೇಷು ಲೋಕೇಷು ಭಾತಿ' ಇತಿ ಸಮಗ್ರವಾಕ್ಯಂ ಗೃಹ್ಯತೇ । ಆತ್ಮಶಕ್ತಿರಿತಿ ॥ ಸಂಯದ್ವಾಮತ್ವರೂಪಸಾಮರ್ಥ್ಯಮ್ ಇತ್ಯರ್ಥಃ । ಅನೇನ ಸೌತ್ರಾದಿಶಬ್ದೋ ಹ್ಯಧಿಷ್ಠಾತೃಪರಮಾತ್ಮಪರಃ ಸನ್ ತಚ್ಛಕ್ತ್ಯುಪಲಕ್ಷಕ ಇತಿ ವ್ಯಾಖ್ಯಾತೋ ಭವತಿ । ಚೋ ಹೇತುಸಮುಚ್ಚಯೇ ಶಕ್ತಿಸಮುಚ್ಚಯೇ ಚಾಽದ್ಯೋ ಭಿನ್ನಕ್ರಮಃ । 'ಉಚ್ಯತೇ ಯತಃ' ಇತಿ ಶೇಷಃ । ಅಸ್ಯಾತೋಽಪಿ ಚಕ್ಷುರಂತಃಸ್ಥಃ ವಿಷ್ಣು-ರೇವೇತಿ ಪೂರ್ವಪ್ರತಿಜ್ಞಾವಾಕ್ಯೇನಾನ್ವಯಃ । ಯಸ್ಮಾತ್ ಅಸಂಗೋಽಯಂ ಪುರು-ಷೋಽಕ್ಷಿಣಿ ವಿದ್ಯತೇ ನಿಯಾಮಕತಯಾ ತತ್ ತಸ್ಮಾತ್ ಯದಿ 'ಅಸ್ಮಿನ್' ಚಕ್ಷುಷಿ

'ಸರ್ಪಿಃ' ಘೃತಮುದಕಂ ವಾ 'ಸಿಂಚತಿ' ಸಿಂಚೇತ್ ಕಶ್ಚಿದಪಿ ತರ್ಹಿ ತದ್ವರ್ತ್ಮನೀ ಉಭಯಮಾರ್ಗೌ ಪ್ರತ್ಯೇವ ಗಚ್ಛತಿ ನ ಚಕ್ಷುಃ ಸ್ಪೃಶತೀತ್ಯರ್ಥಃ।

ಏತಂ ಚಾಕ್ಷುಷಂ ವಾಮನಾಖ್ಯಂ ವಿಷ್ಣುಂ ಸಂಯದ್ವಾಮ ಇತ್ಯಾಚಕ್ಷತೇ ವಿದ್ವಾಂಸಃ। ಕುತಃ? ಹಿ ಯಸ್ಮಾದ್ ಏತಂ 'ಸರ್ವಾಣಿ ವಾಮಾನಿ' ಸ್ತ್ರೀರೂಪಾಣಿ ಅಭಿಸಂಯಂತಿ ಪ್ರಾಪ್ನುವಂತಿ । ಅನೇನ ಸಂಯಂತಿ ವಾಮಾನಿ ಏನಮಿತಿ ವಿಗ್ರಹೋ ದರ್ಶಿತಃ । 'ಏಷ ಉ' ಚಕ್ಷುರ್ಗತ ಏವ ಮುಖ್ಯತೋ ವಾಮನಿರಿತ್ಯುಚ್ಯತೇ। ಕುತಃ? ಹಿ ಯಸ್ಮಾದ್ ಏಷಃ 'ಸರ್ವಾಣಿ ವಾಮಾನಿ' ಸುಂದರರಮಾದಿಸ್ತ್ರೀರೂಪಾಣಿ 'ನಯತಿ' ಪ್ರೇರಯತಿ । ಏಷ ಉ ಏವ ಚಾಕ್ಷುಷಃ ಪುರುಷೋ 'ಭಾಮನಿಃ' ಮುಖ್ಯತಃ ತಚ್ಛಬ್ದವಾಚ್ಯಃ । ಕುತಃ? ಹಿ ಯಸ್ಮಾದೇವ 'ಸರ್ವೇಷು ಲೋಕೇಷು' ಪುರುಷೇಷು ಭಾತಿ ತದೀಯತೇಜಃಪ್ರಕಾಶಕ-ತಯಾ ತತ್ರ ದೀಪ್ಯತ ಇತ್ಯರ್ಥಃ । ಯಥೋಕ್ತಂ ತತ್ತ್ವಪ್ರದೀಪೇ – 'ವಾಮಂ ಸೌಂದರ್ಯಂ, ಭಾಮಂ ತೇಜಃ, ತತ್ಪ್ರಧಾನತ್ವಾತ್ ಸ್ತ್ರೀಪುರುಷಾ ವಾಮಭಾಮ-ಶಬ್ದಿತಾಸ್ತನ್ನೇತಾ ವಾಮನಿರ್ಭಾಮನಿಶ್ಚ' - ಇತಿ।

ಏತಲ್ಲಿಂಗದ್ವಯಸದ್ಭಾವೇಽಪಿ ಕುತೋಽಕ್ಷಿಸ್ಥಸ್ಯ ವಿಷ್ಣುತ್ವನಿಶ್ಚಯಃ? ಇತ್ಯತ ಆಹ – **ತಸ್ಯೈತಿ ॥** 'ಹಿ' ಯಸ್ಮಾತ್ 'ತಸ್ಯ' ವಿಷ್ಣೋಃ 'ಏತತ್' ಸ್ವಸಂಬಂಧೇನ ಅಕ್ಷ್ಣೋ-ರಸಂಗತ್ವಾಪಾದಕತ್ವಂ ಸರ್ವಸೌಂದರ್ಯಾಧಿಷ್ಠಾನಸ್ತ್ರೀರೂಪನೇತೃತ್ವಂ ಚ 'ಲಿಂಗಂ' ಅಸಾಧಾರಣೋ ಧರ್ಮಃ ತಸ್ಮಾತ್ ನಾಪ್ರಯೋಜಕತ್ವಮಿತಿ ತೇನ ವಿಷ್ಣುತ್ವನಿಶ್ಚಯೋ-ಪಪತ್ತಿಃ – ಇತಿ ವಾಕ್ಯಶೇಷಃ।

'ಇತ್ಯಾದ್ಯಾತ್ಮಶಕ್ತಿಃ' ಎಂಬಲ್ಲಿ ಆದಿಪದದಿಂದ 'ಏತಂ ಸಂಯದ್ವಾಮ ಇತ್ಯಾ-ಚಕ್ಷತೇ । ಏತಂ ಹಿ ಸರ್ವಾಣಿ ವಾಮಾನ್ಯಭಿಸಂಯಂತಿ ... ಏಷ ಉ ಏವ ವಾಮನಿರೇಷ ಹಿ ಸರ್ವಾಣಿ ವಾಮಾನಿ ನಯತಿ। ಏಷ ಉ ಏವ ಭಾಮನಿರೇಷ ಹಿ ಸರ್ವೇಷು ಲೋಕೇಷು ಭಾತಿ' ಎಂಬ ಸಮಗ್ರವಾಕ್ಯವು ಗ್ರಹಿಸಲ್ಪಡುವುದು. ಆತ್ಮಶಕ್ತಿ ಎಂದರೆ ಸಂಯದ್ವಾಮತ್ವವೆಂಬ ಪರಮಾತ್ಮನ ಸಾಮರ್ಥ್ಯ ಎಂದರ್ಥ.

ಇದರಿಂದ ಸೂತ್ರದಲ್ಲಿರುವ ಆದಿಶಬ್ದವು ಚಕ್ಷುಸ್ಸಿಗೆ ಅಧಿಷ್ಠಾತೃವಾದ ಪರಮಾತ್ಮ-ವಾಚಕವಾಗಿದ್ದು, ಲಕ್ಷಣಯಾ ಅವನ ಶಕ್ತಿಯನ್ನು ಹೇಳುವುದೆಂದು ವ್ಯಾಖ್ಯಾನ ಮಾಡಿ-ದಂತಾಗುವುದು. ಚಶಬ್ದವು ಹೇತುಸಮುಚ್ಚಯವನ್ನು ಹಾಗೂ ಶಕ್ತಿಸಮುಚ್ಚಯವನ್ನು ಹೇಳುವುದು. ಮೊದಲನೆಯದಾದ ಹೇತುಸಮುಚ್ಚಯವು (೧)ಬೇರೆಡೆಯಲ್ಲಿ ಅನ್ವಯ-ವನ್ನು ಹೊಂದುವುದು. 'ಉಚ್ಯತೇ' ಎಂಬ ಪದದ ನಂತರ 'ಯತಃ' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ 'ಅತೋಽಪಿ ಚಕ್ಷುರಂತಃಸ್ಥೋ ವಿಷ್ಣುರೇವ' 'ಆದ್ದರಿಂದಲೂ ಚಕ್ಷುರಂತಃಸ್ಥನು ವಿಷ್ಣುವೇ ಆಗಿದ್ದಾನೆ' ಎಂದು ಹಿಂದೆ ಬಂದಿರುವ ಪ್ರತಿಜ್ಞಾವಾಕ್ಯ-ದೊಂದಿಗೆ ಅನ್ವಯವಾಗುವುದು. ಯತ್ - ಯಾವ ಕಾರಣದಿಂದಾಗಿ, ಅಸಂಗನಾದ ಈ ಪುರುಷನು ಅಕ್ಷಿಯಲ್ಲಿ ನಿಯಾಮಕನಾಗಿ ಇರುವನೋ, ತತ್ - ಆ ಕಾರಣದಿಂದ, ಯದಿ ಅಸ್ಮಿನ್ - ಒಂದು ಪಕ್ಷದಲ್ಲಿ ಈ ಚಕ್ಷುಸ್ಸಿನಲ್ಲಿ 'ಸರ್ಪಿರ್ವಾ ಉದಕಂ ವಾ ಸಿಂಚತಿ' ಘೃತವನ್ನಾಗಲೀ ಜಲವನ್ನಾಗಲೀ ಯಾರಾದರೂ ಸೇಚನೆ ಮಾಡಿದ್ದಾದರೆ ಆ ಘೃತ ಅಥವಾ ಜಲವು, ತದ್ವರ್ತ್ಮನೀ - ಆ ಚಕ್ಷುಸ್ಸಿನ ಬದಿಯ ಮಾರ್ಗಗಳನ್ನು ಕುರಿತೇ, ಗಚ್ಛತಿ - ಹೋಗುವುದು, ಹೊರತು ಆ ಚಕ್ಷುಸ್ಸನ್ನು ಸ್ಪರ್ಶಿಸುವುದಿಲ್ಲ ಎಂದು ಶ್ರುತಿಯ ಅರ್ಥ.

ಏತಂ - ಈ ಚಕ್ಷುಸ್ಸಿನಲ್ಲಿರುವ ವಾಮನಾಖ್ಯನಾದ ವಿಷ್ಣುವನ್ನು ಜ್ಞಾನಿಗಳು, ಸಂಯದ್ವಾಮ ಇತ್ಯಾಚಕ್ಷತೇ - ಸಂಯದ್ವಾಮನೆಂದು ಹೇಳುವರು. ಏಕೆಂದರೆ, ಹಿ - ಯಾವ ಕಾರಣದಿಂದಾಗಿ, ಏತಂ - ಈ ವಿಷ್ಣುವನ್ನು, 'ಸರ್ವಾಣಿ ವಾಮಾನಿ' ಎಲ್ಲ ಸ್ತ್ರೀರೂಪಗಳೂ, ಅಭಿಸಂಯಂತಿ - ಹೊಂದುತ್ತವೆ. ಈ ವಿವರಣೆಯಿಂದ ಸಂಯ-ದ್ವಾಮ ಪದಕ್ಕೆ 'ಸಂಯಂತಿ ವಾಮಾನಿ ಏನಮ್' ಇತಿ ಸಂಯದ್ವಾಮ ಎಂದು ವಿಗ್ರಹವು ದರ್ಶಿತವಾಗುವುದು. 'ಏಷ ಉ ಏವ'- ಈ ಚಕ್ಷುಸ್ಸಿನಲ್ಲಿರುವ ಪರಮಾತ್ಮನೇ, ವಾಮನಿಃ = ಮುಖ್ಯವಾಗಿ ವಾಮನಿ ಎಂದು ಕರೆಯಲ್ಪಡುವನು. ಏಕೆ? ಹಿ- ಯಾವ ಕಾರಣದಿಂದಾಗಿ, 'ಏಷ ಉ'- ಈ ಪರಮಾತ್ಮನೇ 'ಸರ್ವಾಣಿ ವಾಮಾನಿ' ಸುಂದರಿ-ಯರಾದ ರಮೆ ಮೊದಲಾದ ಎಲ್ಲ ಸ್ತ್ರೀರೂಪಗಳನ್ನು, ನಯತಿ- ಪ್ರೇರಿಸುವನು. 'ಏಷ ಉ ಏವ' ಈ ಚಕ್ಷುಸ್ಸಿನಲ್ಲಿರುವ ಪುರುಷನೇ 'ಭಾಮನಿಃ' ಮುಖ್ಯವಾಗಿ ಭಾಮನಿ-ಶಬ್ದವಾಚ್ಯನಾಗಿದ್ದಾನೆ. ಏಕೆ? ಹಿ - ಯಾವ ಕಾರಣದಿಂದಾಗಿ, 'ಸರ್ವೇಷು

**ಲೋಕೇಷು**'- ಎಲ್ಲ ಪುರುಷರಲ್ಲಿ, ಭಾತಿ - ಅವರ ತೇಜಸ್ಸಿಗೆ ಪ್ರಕಾಶಕನಾಗಿ ಅವರಲ್ಲಿ ಬೆಳಗುವನೋ ಆದ್ದರಿಂದ ಎಂದರ್ಥ. ತತ್ವಪ್ರದೀಪದಲ್ಲಿ ಹೀಗೆ ಹೇಳಿದೆ – ವಾಮ ಎಂದರೆ ಸೌಂದರ್ಯ, ಭಾಮ ಎಂದರೆ ತೇಜಸ್ಸು, ಸೌಂದರ್ಯವನ್ನು ಪ್ರಧಾನವಾಗಿ ಹೊಂದಿರುವುದರಿಂದ ಸ್ತ್ರೀಯರು ವಾಮಶಬ್ದದಿಂದಲೂ, ತೇಜಸ್ಸನ್ನು ಪ್ರಧಾನವಾಗಿ ಹೊಂದಿರುವುದರಿಂದ ಪುರುಷರು ಭಾಮಶಬ್ದದಿಂದಲೂ ವಾಚ್ಯರಾಗಿ-ದ್ದಾರೆ. ಅವರಿಗೆ ನಿಯಾಮಕನಾದ ಪರಮಾತ್ಮನು ವಾಮನಿಯೂ, ಭಾಮನಿಯೂ ಆಗಿದ್ದಾನೆ - ಎಂದು.

ಈ ಎರಡು ಲಿಂಗಗಳೂ ಈ ಪ್ರಕರಣದಲ್ಲಿ ಇದ್ದರೂ ಅಕ್ಷಿಸ್ಥನು ವಿಷ್ಣುವೇ ಎಂದು ನಿಶ್ಚಯಿಸುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ - 'ತಸ್ಯ' ಎಂಬ ವಾಕ್ಯವು ಹೊರಟಿದೆ. ಹಿ – ಯಾವ ಕಾರಣದಿಂದಾಗಿ, 'ತಸ್ಯ' - ಆ ವಿಷ್ಣುವಿಗೆ, ಏತತ್ - ತನ್ನ ಸಂಬಂಧದಿಂದ ಅಕ್ಷಿಗಳಿಗೆ ಅಸಂಗತ್ವವನ್ನು ತಂದು ಕೊಡುವಿಕೆ, ಹಾಗೂ ಎಲ್ಲ ಸೌಂದ-ರ್ಯಕ್ಕೆ ಅಧಿಷ್ಠಾನರಾದ ಸ್ತ್ರೀರೂಪಗಳ ನಿಯಾಮಕತ್ವವು, ಲಿಂಗಮ್ - ಅಸಾಧಾರಣ-ಧರ್ಮವಾಗಿರುವುದೋ ಆದ್ದರಿಂದ ಈ ಲಿಂಗಗಳಿಗೆ ಅಪ್ರಯೋಜಕತ್ವವಿಲ್ಲ. ಆದ್ದರಿಂದ ಅಕ್ಷಿಸ್ಥನಾದ ಪುರುಷನು ವಿಷ್ಣುವೆಂದು ನಿಶ್ಚಯಿಸುವುದು ಯುಕ್ತವೇ ಆಗಿದೆ ಎಂದು ವಾಕ್ಯಶೇಷವಾಗಿದೆ.

**ಭಾ– 'ಸ ಈಶಃ ಸೋಽಸಪತ್ನಃ ಸ ಹರಿಃ ಸ ಪರಃ ಸ ಪರೋವರೀಯಾನ್ ಯದಿದಂ ಚಕ್ಷುಷಿ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ಸ ವಾಮನಃ ಸ ಭಾಮನಃ ಸ ಆನಂದಃ ಸೋಽಚ್ಯುತಃ'**

**– ಇತಿ ಚತುರ್ವೇದಶಿಖಾಯಾಮ್ ।**

'ಸ ಈಶಃ ಸೋಽಸಪತ್ನಃ ಸ ಹರಿಃ ಸ ಪರಃ ಸ ಪರೋವರೀಯಾನ್ ಯದಿದಂಚಕ್ಷುಷಿ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ಸ ವಾಮನಃ ಸ ಭಾಮನಃ ಸ ಆನಂದಃ ಸೋಽಚ್ಯುತಃ' ಹೀಗೆ ಚತುರ್ವೇದಶಿಖೆಯಲ್ಲಿ ಹೇಳಿದೆ.

(ಭಾ.ದೀ.) ಕುತ ಏತಸ್ಯ ತಲ್ಲಿಂಗಮಿತಿ ಜ್ಞಾಯತೇ? ಇತ್ಯತ ಆಹ – ಸ ಇತಿ ।। ಲಿಂಗಸ್ಯ ವಿಷ್ಣುನಿಷ್ಠತಾಜ್ಞಾಪನಾಯ 'ಸ ಹರಿಃ' ಇತ್ಯಾದೇಃ 'ಸೋಽಚ್ಯುತಃ' ಇತ್ಯಂಶ-ಶ್ಲೋಕ್ತಿಃ। 'ಇದಂಚಕ್ಷುಷಿ' ಇತಿ ಸಮಸ್ತಂ ಪದಮ್ । ಅನ್ಯಥಾ ಸರ್ಪಿರಾದಿವಿಶೇಷಣತ್ವಂ ಪ್ರತೀಯತೇ, ತತಶ್ಚ ಪ್ರತ್ಯಕ್ಷಸಿದ್ಧಗೋಳಕವಿಶೇಷಣತ್ವಂ ನ ಜ್ಞಾಯೇತ। 'ಅಸ್ಮಿನ್ ಚಕ್ಷುಷಿ' ಇತ್ಯೇತತ್ಪ್ರಕರಣಗತಶ್ರುತಿವಿಸಂವಾದಶ್ಚ ಸ್ಯಾತ್ । ಚೇತ್ತರ್ಹ್ಯೋರಧ್ಯಾಹಾರಃ।

ತಥಾಚ – ಯದ್ ಯಸ್ಮಾತ್ ಸನ್ನಿಹಿತಾಧಿಷ್ಠಾತುಃ ಯಸ್ಯ ಸಾಮರ್ಥ್ಯಾದಿತಿ ಯಾವತ್ । 'ಇದಂಚಕ್ಷುಷಿ' ಅಸ್ಮಿಂಶ್ಚಕ್ಷುಷಿ ಸರ್ಪಿರುದಕಂ ವಾ ಸಿಂಚತಿ ಚೇತ್ ಕಶ್ಚಿತ್ ತರ್ಹಿ ತದ್ವರ್ತ್ಮನೀ ಪ್ರತ್ಯೇವ ಗಚ್ಛತಿ । ಸ ಈಶಃ । 'ಸೋಽಸಪತ್ನಃ' ಶತ್ರುರಹಿತಃ । 'ಸ ಪರಃ' ಲೋಕವಿಲಕ್ಷಣಃ। ಪರೋವರೀಯಾನ್ । ಇದಮೇಕಂ ಪದಮ್ । ರುದ್ರಾದೇಃ ಪರತೋ ವಾಣ್ಯಾಃ ಪರಾತ್ ಚತುರ್ಮುಖಾತ್ ಪರತಃ ಶ್ರೀತತ್ವಾದ್ ವರ ಉತ್ತಮಃ। ಸ ಏವ ವಾಮನಭಾಮನಾನಂದಾಚ್ಯುತಶಬ್ದವಾಚ್ಯ ಇತ್ಯರ್ಥಃ। ವಿಧೇಯಾನೇಕತ್ವಾತ್ ಸ ಇತ್ಯಸಕೃದಾವೃತ್ತಿಃ।

'ಪರೋವರೀಯಾನ್' ಇತ್ಯತ್ರಾಪಿ ತಚ್ಛಬ್ದೋಽನುಷಂಜನೀಯಃ । ಏಕದೇಶ-ವಿಕೃತಸ್ಯಾನನ್ಯತ್ವಾದ್ ವಾಮನಿಭಾಮನಿಶಬ್ದಾರ್ಥ ಏವ ವಾಮನಭಾಮನಶಬ್ದಯೋ-ರರ್ಥಃ। 'ಚತುರ್ವೇದಶಿಖಾಯಾಮ್' ಇತ್ಯನಂತರಮ್ 'ಉಕ್ತತ್ವಾತ್' ಇತಿ ಶೇಷಃ। ಅಸ್ಯ 'ತಸ್ಯೈತಲ್ಲಿಂಗಮಿತಿ ಜ್ಞಾಯತೇ' ಇತಿ ಪೂರ್ವೇಣಾನ್ವಯಃ।।

ಈ ಅಸಂಗತ್ವಾಪಾದಕತ್ವವಾಗಲೀ, ಸಂಯದ್ವಾಮತ್ವವಾಗಲೀ ವಿಷ್ಣುವಿನ ಲಿಂಗ-ವಾಗಿದೆ ಎನ್ನುವುದು ಯಾವ ಪ್ರಮಾಣದಿಂದ ತಿಳಿದು ಬರುವುದು ಎಂಬ ಶಂಕೆಗೆ ಉತ್ತರವಾಗಿ 'ಸಃ' ಎಂಬ ಭಾಷ್ಯವಾಕ್ಯವು ಹೊರಟಿದೆ. ಈ ಲಿಂಗಗಳು ವಿಷ್ಣುವಿನಲ್ಲಿರುವ ಲಿಂಗಗಳು ಎಂದು ತಿಳಿಸಲು 'ಸ ಹರಿಃ' ಎಂಬ ಅಂಶ, ಮತ್ತು 'ಸೋಽಚ್ಯುತಃ' ಎಂಬ ಅಂಶವು ಉಕ್ತವಾಗಿವೆ. 'ಇದಂಚಕ್ಷುಷಿ' ಎಂಬ ಪದವು ಸಮಾಸವನ್ನು ಹೊಂದಿದ ಒಂದೇ ಪದವಾಗಿದೆ. ಹಾಗೆ ಹೇಳದಿದ್ದರೆ, ಇದಂ ಎಂಬ ಪದವು ಸರ್ಪಿ ಮೊದಲಾದ-ವುಗಳಿಗೆ ವಿಶೇಷಣವಾಗಿ ತಿಳಿದುಬರುವುದು. ಆದರಿಂದಾಗಿ ಪ್ರತ್ಯಕ್ಷಸಿದ್ಧವಾದ

ಅಕ್ಷಿಗೋಳಕಕ್ಕೆ ವಿಶೇಷಣವಾಗಿ ತಿಳಿಯಲಾರದು. ಅಷ್ಟೇ ಅಲ್ಲದೆ ಈ ಪ್ರಕರಣದಲ್ಲಿರುವ 'ಅಸ್ಮಿನ್ ಚಕ್ಷುಷಿ' ಎಂಬ ಶ್ರುತಿಯ ವಿಸಂವಾದವೂ ಉಂಟಾದೀತು. 'ಚೇತ್, ತರ್ಹಿ' ಎಂಬ ಎರಡು ಪದಗಳನ್ನು ಇಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು.

ತಥಾಚ – **ಯತ್** - ಯಾವ ಕಾರಣದಿಂದಾಗಿ - ಅಕ್ಷಿಯಲ್ಲಿ ಸನ್ನಿಹಿತನಾದ, ಅದರ ಅಧಿಷ್ಠಾತೃವಾದ ಯಾರ ಸಾಮರ್ಥ್ಯದಿಂದಾಗಿ ಎಂದು ಭಾವ. **'ಇದಂಚಕ್ಷುಷಿ'** - ಈ ಚಕ್ಷುಸ್ಸಿನಲ್ಲಿ, **ಸರ್ಪಿಃ ಉದಕಂ ವಾ ಸಿಂಚತಿ ಚೇತ್ ತರ್ಹಿ**- ಯಾರಾದರೂ ಘೃತವನ್ನಾಗಲೀ ಜಲವನ್ನಾಗಲೀ ಸೇಚನ ಮಾಡಿದ್ದೇ ಆದರೆ, **ತದ್ ವರ್ತ್ಮನೀ ಪ್ರತ್ಯೇವ ಗಚ್ಛತಿ** - ಅದು ಚಕ್ಷುಸ್ಸಿನ ಎರಡು ಬದಿಯಲ್ಲಿರುವ ಮಾರ್ಗಗಳ ಕಡೆಗೇ ಹೋಗುವುದು. **ಸಃ** - ಆ ಭಗವಂತನು, **ಈಶಃ** - ನಿಯಾಮಕನು, **ಸಃ ಅಸಪತ್ನಃ** - ಅವನು ಶತ್ರುರಹಿತನು, **ಸಃ ಪರಃ** - ಅವನು ಲೋಕವಿಲಕ್ಷಣನು. **ಸಃ ಪರೋವರೀಯಾನ್** - ಈ ಪರೋವರೀಯಾನ್ ಎಂಬ ಪದವು ಒಂದೇ ಪದವಾಗಿರುವುದು. ರುದ್ರಾದಿಗಳಿಗಿಂತ ಪರಳಾದ ಅಂದರೆ ಉತ್ತಮಳಾದ ವಾಣಿದೇವಿಯಿಂದಲೂ ಪರನಾದ ಚತುರ್ಮುಖನಿಗಿಂತಲೂ ಉತ್ತಮವಾದ ಶ್ರೀತತ್ವಕ್ಕಿಂತಲೂ, **ವರಃ** - ವರನು ಅಂದರೆ ಉತ್ತಮನು ಎಂದರ್ಥ. **ಸ ವಾಮನಃ, ಸ ಭಾಮನಃ, ಸ ಆನಂದಃ, ಸೋಽಚ್ಯುತಃ** - ಅವನೇ ವಾಮನ, ಭಾಮನ, ಆನಂದ, ಅಚ್ಯುತ ಎಂಬ ಶಬ್ದಗಳಿಂದ ವಾಚ್ಯನಾಗಿದ್ದಾನೆ ಎಂದು ಅರ್ಥ. ಇಲ್ಲಿ ವಿಧೇಯವಾದ ವಾಮನ ಮೊದಲಾದ ಶಬ್ದವಾಚ್ಯತ್ವಗಳು ಅನೇಕವಾಗಿರುವುದರಿಂದ ಸಃ ಎಂಬ ಶಬ್ದಕ್ಕೆ ಒಂದಕ್ಕಿಂತಲೂ ಹೆಚ್ಚುಬಾರಿ ಆವೃತ್ತಿಯಾಗುವುದು.

'ಪರೋವರೀಯಾನ್' ಎಂಬಲ್ಲಿಯೂ 'ಸಃ' ಎಂಬ ಶಬ್ದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. **ಏಕದೇಶವಿಕೃತಸ್ಯ ಅನನ್ಯತ್ವಮ್** - ಒಂದು ಅಂಶದಲ್ಲಿ ವ್ಯತ್ಯಾಸವನ್ನು ಪಡೆದರೂ ಅದು ಬೇರೆ ಪದವಾಗುವುದಿಲ್ಲ ಎಂಬ ನ್ಯಾಯವನ್ನು ಅನುಸರಿಸಿ ವಾಮನಿ, ಭಾಮನಿ ಶಬ್ದಗಳ ಅರ್ಥವೇ ವಾಮನಭಾಮನಶಬ್ದಗಳ ಅರ್ಥವೂ ಆಗಿರುವುದು. 'ಚತುರ್ವೇದಶಿಖಾಯಾಂ' ಎಂಬ ಪದದ ನಂತರ 'ಉಕ್ತತ್ವಾತ್' ಎಂಬ ಪದವು ಶೇಷವಾಗಿದೆ. ಈ ಪದಕ್ಕೆ 'ತಸ್ಯ ಏತಲ್ಲಿಂಗಮಿತಿ ಜ್ಞಾಯತೇ' ಇವು ವಿಷ್ಣುವಿನ ಲಿಂಗವೆಂದು ತಿಳಿಯಲ್ಪಡುತ್ತವೆ ಎಂಬ ಹಿಂದಿನ ವಾಕ್ಯದೊಂದಿಗೆ ಅನ್ವಯ.

ಭಾ– 'ಯತ್ಸ್ಥಾನತ್ವಾದಿದಂ ಚಕ್ಷುರಸಂಗಂ ಸರ್ವವಸ್ತುಭಿಃ।
ಸ ವಾಮನಃ ಪರೋಽಸ್ಮಾಕಂ ಗತಿರಿತ್ಯೇವ ಚಿಂತಯೇತ್'
ಇತಿ ವಾಮನೇ ॥ ೧೪ ॥

'ಯಾರ ಸ್ಥಾನವಾಗಿರುವುದರಿಂದಾಗಿ ಈ ಚಕ್ಷುರಿಂದ್ರಿಯದ ಗೋಲಕವು ಘೃತ ಮೊದಲಾದ ಎಲ್ಲ ವಸ್ತುಗಳಿಂದ ಲೇಪವನ್ನು ಪಡೆಯದೇ ಇರುವುದೋ ಆ ವಾಮನನು ನಮಗೆ ಅಂತಿಮವಾಗಿ ಪ್ರಾಪ್ಯನಾಗಿ-ದ್ದಾನೆ ಎಂದು ಚಿಂತಿಸಬೇಕು' ಎಂದು ವಾಮನಪುರಾಣದಲ್ಲಿ ಹೇಳಿದೆ.

(ಭಾ.ದೀ.) ಲಿಂಗಸ್ವರೂಪಸ್ಯ ತಸ್ಯ ವಿಷ್ಣುರೂಪವ್ಯಕ್ತಿವಿಶೇಷನಿಷ್ಠತಾಯಾಶ್ಚ ಶ್ರುತಾವಸ್ಫುಟತ್ವಾತ್ ತದರ್ಥಮತ್ರಾರ್ಥೇ ಸ್ಮೃತಿಂ ಚಾಽಹ – **ಯದಿತಿ** ॥ ಯಸ್ಯ ಸ್ಥಾನತ್ವಾತ್ ಇತ್ಯರ್ಥಃ। ಅಸ್ಯ ಯಚ್ಛಬ್ದಸ್ಯ ಸ ಇತಿ ತಚ್ಛಬ್ದೇನಾನ್ವಯಃ। 'ಸರ್ವವಸ್ತುಭಿಃ' ಸರ್ಪಿರಾದಿಭಿಃ । 'ವಾಮನಃ' ಸುಂದರಸ್ತ್ರೀನೇತಾ ವಾಮನಾಖ್ಯೋ ವಿಷ್ಣುರೇವ, 'ಅಸ್ಮಾಕಂ' ಭಕ್ತಾನಾಂ 'ಪರಃ' ಪರಾ 'ಗತಿಃ' ಪ್ರಾಪ್ಯ ಇತಿ ಚಿಂತಯೇದಿತ್ಯರ್ಥಃ। ಯದ್ವಾ – ವಾಮನ ಇತ್ಯನೇನ ಪ್ರಾಪ್ತಾಲ್ಪತ್ವಶಂಕಾವಾರಣಾಯ 'ಪರಃ' ಪೂರ್ಣ ಇತ್ಯುಕ್ತಮ್। **ವಾಮನ ಇತಿ** ॥ 'ವಾಮನಾಖ್ಯಪುರಾಣೇ' ಇತ್ಯರ್ಥಃ। ಅಸ್ಯ ಚತುರ್ವೇದಶಿಖಾಯಾ-ಮಿತಿವದನ್ವಯಃ। ಸ್ಪಷ್ಟಃ ಸೂತ್ರಾರ್ಥಃ।

ಲಿಂಗದ ಸ್ವರೂಪವು ಮತ್ತು ವಿಷ್ಣು ಎಂಬ ವ್ಯಕ್ತಿವಿಶೇಷದಲ್ಲಿ ಆ ಲಿಂಗದ ಇರುವಿಕೆಯು ಶ್ರುತಿಯಲ್ಲಿ ಸ್ಪಷ್ಟವಾಗಿಲ್ಲದ ಕಾರಣ ಸ್ಪಷ್ಟತೆಗಾಗಿ ಆ ವಿಷಯದಲ್ಲಿ ಯತ್ ಎಂಬುದಾಗಿ ಸ್ಮೃತಿಯನ್ನು ಭಾಷ್ಯಕಾರರು ಉದಾಹರಿಸುತ್ತಿದ್ದಾರೆ. 'ಯತ್ಸ್ಥಾನತ್ವಾತ್' ಎಂದರೆ 'ಯಾರ ಸ್ಥಾನವಾದುದರಿಂದ' ಎಂದು ಅರ್ಥ. ಈ ಯತ್‌ಶಬ್ದಕ್ಕೆ ಮುಂದೆ ಸಃ ಎಂಬ ತಚ್ಛಬ್ದದಿಂದ ಅನ್ವಯವಾಗುವುದು. ಸರ್ವವಸ್ತುಭಿಃ - ಘೃತವೇ ಮೊದಲಾದ ವಸ್ತುಗಳಿಂದ. ವಾಮನಃ - ಸುಂದರಸ್ತ್ರೀಯರಿಗೆ ನಿಯಾಮಕನಾದ ವಾಮನನೆಂದೆ-ನಿಸುವ ವಿಷ್ಣುವೇ, ಅಸ್ಮಾಕಂ - ನಮಗೆ ಭಕ್ತರಿಗೆ, ಪರಃ ಗತಿಃ - ಉತ್ತಮವಾದ ಪ್ರಾಪ್ಯನಾಗಿದ್ದಾನೆ ಎಂದು ಚಿಂತಿಸಬೇಕು ಎಂದು ಅರ್ಥ. ಅಥವಾ ವಾಮನಶಬ್ದದಿಂದ

ಬರಬಹುದಾದ ಅವನು ಅಲ್ಲನು ಎಂಬ ಶಂಕೆಯ ಪರಿಹಾರಕ್ಕಾಗಿ 'ಪರಃ' - ಅಂದರೆ ಪೂರ್ಣನು ಎಂದು ಹೇಳಲಾಗಿದೆ. 'ಇತಿ ವಾಮನೇ' ಎಂಬಲ್ಲಿ ವಾಮನೇ ಎಂದರೆ ವಾಮನವೆಂಬ ಹೆಸರಿನ ಪುರಾಣದಲ್ಲಿ ಎಂದರ್ಥ. ಈ ಪದಗಳಿಗೆ 'ಚತುರ್ವೇದ-ಶಿಖಾಯಾಮ್' ಎಂಬ ಪದಕ್ಕೆ ಅನ್ವಯವಿರುವಂತೆ ಅನ್ವಯವಾಗುವುದು. ಸೂತ್ರಾ-ರ್ಥವು ಸ್ಪಷ್ಟವಾಗಿದೆ.

**ಸೂ– ॥ ಓಂ ಸುಖವಿಶಿಷ್ಟಾಭಿಧಾನಾದೇವ ಚ ಓಂ ॥ ೧೫ ॥**

ಈ ಪ್ರಕರಣದಲ್ಲಿ ಪೂರ್ಣತ್ವವಿಶಿಷ್ಟವಾದ ಸುಖರೂಪತ್ವವನ್ನು ಅಕ್ಷಿಸ್ಥ-ನಿಗೆ ಹೇಳಿರುವುದರಿಂದಲೂ ಚಕ್ಷುರಂತಃಸ್ಥನು ವಿಷ್ಣುವೇ ಆಗಿರು-ವನು.

**ಭಾ–** 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮೇತಿ',

'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮೇತಿ' ಎಂಬುದಾಗಿ ಪೂರ್ಣ-ಸುಖವನ್ನು ಹೇಳಿರುವುದರಿಂದಲೂ ಈ ಪ್ರಕರಣವು ವಿಷ್ಣುಪ್ರಕರಣ-ವೆಂದು ಸಿದ್ಧವಾಗುವುದು.

(ಭಾ.ದೀ.) ಪ್ರಕರಣಬಲಾತ್ ಚಕ್ಷುರಂತಃಸ್ಥತ್ವಂ ವಿಷ್ಣೋಃ ಪ್ರತಿಪಾದಯತ್ ಸೂತ್ರಮುಪನ್ಯಸ್ಯ ತದುಪಾತ್ತಶ್ರುತಿಮೇವ ಉದಾಹರತಿ – **ಸುಖೇತಿ** ॥ 'ಖಂ ಬ್ರಹ್ಮೇತಿ' ಇತ್ಯಂತಸ್ಯ ಸೂತ್ರೇಣಾನ್ವಯಃ । ಉಪಕ್ರಮೇ ಪ್ರಾಣಸ್ಯ ಶ್ರುತತ್ವೇಽಪಿ ನೈತತ್ಪ್ರಕರಣಸ್ಯ ತತ್ಪರತ್ವಮ್, ಪೂರ್ವಸೂತ್ರೋಕ್ತವಿಷ್ಣುಶ್ರುತಿಲಿಂಗಾದಿಬಾಧಕಸದ್ಭಾವಾದಿತಿ ಪ್ರತಿ-ಪಾದಯಿತುಮ್ ಉತ್ತರತ್ರ ಶ್ರೌತ'ಕ'ಶಬ್ದೇನ ಪ್ರಾಣಬ್ರಹ್ಮಣೋಸ್ತಂತ್ರೇಣೋ-ಪಾದಾನಸೂಚನಾರ್ಥಂ ಚ 'ಪ್ರಾಣೋ ಬ್ರಹ್ಮ' ಇತ್ಯಂಶೋದಾಹರಣಮ್ । ಸೂತ್ರೇ ಚಶಬ್ದಃ ಪೂರ್ವೋಕ್ತಹೇತೋರಿಹ 'ಪ್ರಕರಣಬಲಾಚ್ಚ' ಇತ್ಯಧ್ಯಾಹೃತಹೇತೋಶ್ಚ ಸಮುಚ್ಚಯೇ । ಸೂತ್ರೋದಾಹೃತಹೇತೋಸ್ತ್ವಧ್ಯಾಹೃತಸಾಧ್ಯೇನಾನ್ವಯಃ । ವಿಶಿಷ್ಟಂ ಚ ತತ್ಸುಖಂ ಚ ಸುಖವಿಶಿಷ್ಟಮ್ । ವಿಶೇಷಣಸ್ಯ ಪರನಿಪಾತಃ । ಸುಖೇನ ವಿಶಿಷ್ಟ ಇತಿ ವಾ,

ಸುಖೇಷು ವಿಶಿಷ್ಟ ಇತಿ ವಾ ವಿಗ್ರಹಃ । ತತ್ರ ದ್ವಿತೀಯೇ ಶ್ರೈಷ್ಠ್ಯರೂಪಂ ವೈಶಿಷ್ಟ್ಯ-ಮರ್ಥಾತ್ ಸುಖೇಽಪ್ಯನ್ವೇತಿ । ಅತ್ರ ಪ್ರಕರಣೇ ಹಿ ಮುಖ್ಯಪ್ರಾಣೋ ಬ್ರಹ್ಮಾಽಖಿಲ-ಜೀವೇಭ್ಯಃ ಪೂರ್ಣ ಇತಿ ಮುಖ್ಯಪ್ರಾಣಸ್ಯ ಪೂರ್ಣತ್ವಮುಕ್ತ್ವಾ 'ಕಂ ಬ್ರಹ್ಮ ಖಂ ಬ್ರಹ್ಮ' ಇತ್ಯನೇನ 'ಕಂ' ಸುಖಂ 'ಬ್ರಹ್ಮ' ಪೂರ್ಣಂ 'ಖಂ' ಜ್ಞಾನಂ ಬ್ರಹ್ಮ ಪೂರ್ಣಮಿತಿ ಸುಖಸಂವಿದೋರಪಿ ಪೂರ್ಣತ್ವಮುಚ್ಯತೇ । ತಥಾ ಚ ನ ಕೇವಲಮುಕ್ತಹೇತುಬಲಾತ್ ಚಕ್ಷುರಂತಃಸ್ಥೋ ವಿಷ್ಣುಃ, ಕಿಂತು ಪ್ರಕರಣಬಲಾಚ್ಚ । ನ ಚ ಪ್ರಕರಣಸ್ಯ ವೈಷ್ಣವತ್ವಾಸಿದ್ಧಿಃ । ಅಸ್ಯೋಪಕ್ರಮೇ 'ಸುಖವಿಶಿಷ್ಟಾಭಿಧಾನಾತ್' ಪೂರ್ಣಸುಖೋಕ್ತೇರಿತಿ ಸೂತ್ರಾರ್ಥಃ । ಯದ್ಯೇವಮುಪಕ್ರಮೇ 'ಕಂ ಬ್ರಹ್ಮ' ಇತಿ ಪೂರ್ಣಸುಖಾಭಿಧಾನಾದೇವಾಸ್ಯ ಪ್ರಕರಣಸ್ಯ ವೈಷ್ಣವತ್ವಂ ಸಿದ್ಧ್ಯತಿ ಕಿಮುತ ತದಾ 'ಖಂ ಬ್ರಹ್ಮ' ಇತಿ ಪೂರ್ಣಜ್ಞಾನಾದಪಿ ಇತಿ ಕೈಮುತ್ಯನ್ಯಾಯಸೂಚನಾಯ ಸೂತ್ರೇ ಏವಕಾರಃ । ಯದ್ಯಪಿ ಛಾಂದೋಗ್ಯಭಾಷ್ಯೇ 'ಪ್ರಾಣೋ ಬ್ರಹ್ಮ' ಬಲರೂಪಂ ಬ್ರಹ್ಮ । 'ಕಂ' ಪೂರ್ಣಾನಂದರೂಪಂ ಬ್ರಹ್ಮ । 'ಖಂ' ಪೂರ್ಣಜ್ಞಾನರೂಪಂ 'ಬ್ರಹ್ಮ' - ಪರಂ ಬ್ರಹ್ಮೇತಿ ವ್ಯಾಖ್ಯಾತಮ್ । ತಥಾಽಪಿ ತದ್ ಬ್ರಹ್ಮಶಬ್ದಸ್ಯ ಪರಾಪರಯೋಃ ರೂಢ್ಯಾ ವೃತ್ತ್ಯಾ ವ್ಯಾಖ್ಯಾನಾಂತರಮಿತ್ಯದೋಷಃ ।

ಪ್ರಕರಣಬಲದಿಂದ ಚಕ್ಷುರಂತಃಸ್ಥನು ವಿಷ್ಣುವೇ ಆಗಿದ್ದಾನೆ ಎಂದು ಪ್ರತಿಪಾದಿಸುವ ಸೂತ್ರವನ್ನು ಉಲ್ಲೇಖಿಸಿ ಆ ಸೂತ್ರವು ಗ್ರಹಿಸಿರುವ ಶ್ರುತಿಯನ್ನು ಭಾಷ್ಯಕಾರರು 'ಸುಖ' ಎಂದು ಉದಾಹರಿಸುತ್ತಿದ್ದಾರೆ. 'ಖಂ ಬ್ರಹ್ಮ' ಎಂದು ಕೊನೆಗೊಳ್ಳುವ ಭಾಷ್ಯವಾಕ್ಯಕ್ಕೆ ಸೂತ್ರದೊಂದಿಗೆ ಅನ್ವಯವಾಗುವುದು. ಉಪಕ್ರಮದಲ್ಲಿ ಪ್ರಾಣನು ಶ್ರುತವಾಗಿದ್ದರೂ ಈ ಪ್ರಕರಣಕ್ಕೆ ಮುಖ್ಯಪ್ರಾಣನಲ್ಲಿ ತಾತ್ಪರ್ಯವಿಲ್ಲ. ಏಕೆಂದರೆ ಇಲ್ಲಿನ ಸೂತ್ರದಲ್ಲಿ ಹೇಳಲಾದ ವಿಷ್ಣುವನ್ನು ಹೇಳುವ ಶ್ರುತಿ ಮತ್ತು ಅವನ ಅಸಾಧಾರಣಧರ್ಮಗಳೇ ಮೊದಲಾದ ಬಾಧಕವಿರುವುದರಿಂದ ಎಂದು ಪ್ರತಿಪಾದಿಸಲು, ಮತ್ತು ಮುಂದೆ ಶ್ರುತಿ-ಯಲ್ಲಿರುವ 'ಕ'ಶಬ್ದದಿಂದ ಪ್ರಾಣ ಮತ್ತು ಬ್ರಹ್ಮ ಇಬ್ಬರನ್ನೂ [೧]ತಂತ್ರನ್ಯಾಯದಿಂದ ಗ್ರಹಿಸಿರುವುದನ್ನು ಸೂಚಿಸುವುದಕ್ಕಾಗಿ ಪ್ರಾಣೋ ಬ್ರಹ್ಮ ಎಂಬಂಶವನ್ನೂ ಕೂಡ ಭಾಷ್ಯದಲ್ಲಿ ಉದಾಹರಿಸಲಾಗಿದೆ. ಸೂತ್ರದಲ್ಲಿ ಚಶಬ್ದವು ಹಿಂದಿನ ಸೂತ್ರದಲ್ಲಿ ಹೇಳಿರುವ ಹೇತುವಿಗೂ ಮತ್ತು ಪ್ರಕರಣಬಲಾತ್ ಎಂಬುದಾಗಿ ಇಲ್ಲಿ ಅಧ್ಯಾಹಾರ

ಮಾಡಿಕೊಳ್ಳಲಾಗುವ ಹೇತುವಿಗೂ ಸಮುಚ್ಚಯವನ್ನು ಹೇಳುವುದು. ಸೂತ್ರದಲ್ಲಿ ಉಕ್ತವಾಗಿರುವ ಹೇತುವಿಗಾದರೋ ಅಧ್ಯಾಹಾರಮಾಡಿಕೊಳ್ಳಲಾಗುವ ಸಾಧ್ಯದೊಂದಿಗೆ ಅನ್ವಯ. ಸೂತ್ರದಲ್ಲಿರುವ ಸುಖವಿಶಿಷ್ಟವೆಂಬ ಸಮಾಸಪದಕ್ಕೆ ವಿಶಿಷ್ಟಂ ಚ ತತ್ ಸುಖಂ ಚ - ಎಂದು ವಿಗ್ರಹ. ಇಲ್ಲಿ ವಿಶೇಷಣವಾದ ವಿಶಿಷ್ಟಪದಕ್ಕೆ ಸಮಾಸದಲ್ಲಿ ಪರನಿಪಾತ ಬಂದಿದೆ. ಅಥವಾ ಸುಖೇನ ವಿಶಿಷ್ಟಃ ಸುಖವಿಶಿಷ್ಟಃ - ಸುಖದಿಂದ ವಿಶಿಷ್ಟನಾದವನು, ಅಥವಾ ಸುಖೇಷು ವಿಶಿಷ್ಟಃ ಸುಖವಿಶಿಷ್ಟಃ - ಸುಖಗಳಲ್ಲಿ ವಿಶಿಷ್ಟನಾದವನು ಎಂದು ವಿಗ್ರಹ. ಈ ಎರಡನೆಯ ವಿಗ್ರಹದಲ್ಲಿ ವಿಶಿಷ್ಟತ್ವವು ಶ್ರೇಷ್ಠತ್ವರೂಪವಾಗಿದ್ದು ಸುಖಕ್ಕೂ ಅನ್ವಯಿಸುವುದು. ಈ ಪ್ರಕರಣದಲ್ಲಿ ಮುಖ್ಯಪ್ರಾಣನು ಅಂದರೆ ಚತುರ್ಮುಖನು ಎಲ್ಲ ಜೀವರಿಗಿಂತ ಪೂರ್ಣನಾಗಿರುವನು ಎಂದು ಮುಖ್ಯಪ್ರಾಣನಿಗೆ ಪೂರ್ಣತ್ವವನ್ನು ಹೇಳಿ ಕಂ ಬ್ರಹ್ಮ, ಖಂ ಬ್ರಹ್ಮ ಎಂಬ ವಾಕ್ಯಗಳಿಂದ ಕಂ ಎಂದರೆ ಸುಖವು, ಬ್ರಹ್ಮ-ಪೂರ್ಣವಾದುದು; ಖಂ ಎಂದರೆ ಜ್ಞಾನವು ಬ್ರಹ್ಮ- ಪೂರ್ಣವಾದುದು ಎಂಬುದಾಗಿ ಸುಖ ಮತ್ತು ಜ್ಞಾನಗಳಿಗೆ ಪೂರ್ಣತ್ವವನ್ನು ಹೇಳಲಾಗಿದೆ. ತಥಾಚ – ಹಿಂದೆ ಹೇಳಿದ ಹೇತುವಿನಿಂದಾಗಿ ಮಾತ್ರವೇ ಚಕ್ಷುರಂತಃಸ್ಥನು ವಿಷ್ಣುವಲ್ಲ ಕಿಂತು ಪ್ರಕರಣದ ಬಲದಿಂದಲೂ ಚಕ್ಷುರಂತಃಸ್ಥನು ವಿಷ್ಣುವೇ ಆಗಿದ್ದಾನೆ. ಈ ಪ್ರಕರಣವು ವೈಷ್ಣವ-ಪ್ರಕರಣವೆಂದು ಸಿದ್ಧವಾಗಿಲ್ಲ ಎಂದು ಹೇಳಬಾರದು. ಏಕೆಂದರೆ ಈ ಪ್ರಕರಣದ ಉಪಕ್ರಮದಲ್ಲಿ 'ಸುಖವಿಶಿಷ್ಟಾಭಿಧಾನಾತ್'- ಪೂರ್ಣಸುಖವನ್ನು ಹೇಳಿರುವುದ-ರಿಂದ ಎಂದು ಸೂತ್ರದ ಅರ್ಥ. ಯಾವಾಗ ಉಪಕ್ರಮದಲ್ಲಿ 'ಕಂ ಬ್ರಹ್ಮ' ಎಂದು ಪೂರ್ಣಸುಖವನ್ನು ಹೇಳಿರುವುದರಿಂದಲೇ ಈ ಪ್ರಕರಣವು ವೈಷ್ಣವಪ್ರಕರಣವೆಂದು ಸಿದ್ಧವಾಗುವುದೋ ಆಗ 'ಖಂ ಬ್ರಹ್ಮ' ಎಂದು ಪೂರ್ಣಜ್ಞಾನವನ್ನು ಹೇಳಿರುವುದ-ರಿಂದಲೂ ಅದು ಸಿದ್ಧಿಸುವುದೆಂದು ಹೇಳುವುದೇನು ಎಂದು ಕೈಮುತ್ಯ ನ್ಯಾಯವನ್ನು ಸೂಚಿಸಲು ಸೂತ್ರದಲ್ಲಿ 'ಏವ'ಕಾರವಿರುವುದು. ಯದ್ಯಪಿ ಛಾಂದೋಗ್ಯ ಭಾಷ್ಯದಲ್ಲಿ 'ಪ್ರಾಣೋ ಬ್ರಹ್ಮ' ಎಂದರೆ ಪರಬ್ರಹ್ಮನು ಬಲರೂಪನಾಗಿದ್ದಾನೆ. 'ಕಂ ಬ್ರಹ್ಮ' ಬ್ರಹ್ಮನು ಪೂರ್ಣಾನಂದರೂಪನಾಗಿದ್ದಾನೆ. 'ಖಂ ಬ್ರಹ್ಮ' ಪರಬ್ರಹ್ಮನು ಪೂರ್ಣ ಜ್ಞಾನಸ್ವರೂಪ-ನಾಗಿದ್ದಾನೆ ಎಂದು ವ್ಯಾಖ್ಯಾನ ಮಾಡಲಾಗಿದೆ. ಆದರೂ ಆ ಬ್ರಹ್ಮಶಬ್ದಕ್ಕೆ ಪರಬ್ರಹ್ಮ ಅಪರಬ್ರಹ್ಮ ಇಬ್ಬರಲ್ಲೂ ರೂಢಿಯಿರುವುದರಿಂದ ಇಲ್ಲಿ ಇನ್ನೊಂದು ರೀತಿಯಿಂದ ವ್ಯಾಖ್ಯಾನಮಾಡಲಾಗಿದೆಯಾದ್ದರಿಂದ ದೋಷವಿಲ್ಲ.

(೧) 'ಸಕೃದುಕ್ತಸ್ಯ ಅನೇಕೋಪಕಾರತ್ವಂ ತಂತ್ರನ್ಯಾಯಃ' – ಒಮ್ಮೆ ಉಚ್ಚರಿಸಿದ ಪದವು ಅನೇಕ ಅರ್ಥಗಳನ್ನು ಹೇಳುವ ಮೂಲಕ ಉಪಕಾರಕವಾಗುವುದು ತಂತ್ರನ್ಯಾಯವೆಂದೆನಿಸುವುದು.

**ಭಾ– 'ವಿಜ್ಞಾನಮಾನಂದಂ ಬ್ರಹ್ಮ'(ಬೃ.೫-೯-೨೮), 'ಆನಂದೋ ಬ್ರಹ್ಮೇತಿ ವ್ಯಜಾನಾತ್'(ತೈ.೩-೬) ಇತ್ಯಾದೇಸ್ತಸ್ಯೈವ ಹಿ ತಲ್ಲಕ್ಷಣಮ್ ।**

'ವಿಜ್ಞಾನಮಾನಂದಂ ಬ್ರಹ್ಮ', 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಇತ್ಯಾದಿ ಶ್ರುತಿಗಳಿಂದ ಪೂರ್ಣಸುಖ, ಪೂರ್ಣಜ್ಞಾನಗಳು ವಿಷ್ಣುವಿನ ಲಕ್ಷಣವೇ ಆಗಿರುವವೆಂದು ತಿಳಿದು ಬರುವುದು.

(ಭಾ.ದೀ.) ನನು ಉಪಕ್ರಮೇ ಪೂರ್ಣಸುಖಸಂವಿದೋರಭಿಧಾನೇಽಪಿ ಕುತೋಽಸ್ಯ ಪ್ರಕರಣಸ್ಯ ವೈಷ್ಣವತ್ವಮ್? ಇತ್ಯಾಶಂಕ್ಯ, ತಯೋಸ್ತಲ್ಲಕ್ಷಣತ್ವಾತ್ ತದ್ರೂಪತ್ವಾತ್ ಉಪಕ್ರಮೇ ತದಭಿಧಾನೇ ಬ್ರಹ್ಮೈವೋಪಕ್ರಾಂತಂ ಸ್ಯಾದಿತಿ ಭಾವೇನ ಪೂರ್ಣಸುಖಜ್ಞಾನಯೋರ್ಬ್ರಹ್ಮಲಕ್ಷಣತ್ವಂ ಶ್ರುತ್ಯಾ ದರ್ಶಯತಿ – **ವಿಜ್ಞಾನಮಿತಿ ॥** 'ವಿಜ್ಞಾನಾದಿರೂಪಂ ಬ್ರಹ್ಮ' ಇತ್ಯರ್ಥಃ । ಅತ್ರ ವಿಜ್ಞಾನಾದಿಪದಂ ಪೂರ್ಣಜ್ಞಾನಾದಿ-ವಾಚಿ, ಸಂಕೋಚೇ ಕಾರಣಾಭಾವಾದಿತಿ ಪ್ರಕೃತಸಂಗತಿಃ । ಇದಂ ವಾಜಸನೇಯೇ ಶ್ರುತಮ್ । 'ಆನಂದೋ ಬ್ರಹ್ಮ' ಇತಿ । ತೈತ್ತಿರೀಯವಾಕ್ಯಾತ್ ಇತಿ ಶೇಷಃ । ಆದಿಶಬ್ದೇನ 'ಅಥೈಷ ಏವ ಪರಮ ಆನಂದಃ', 'ಸತ್ಯಂ ಜ್ಞಾನಮ್' ಇತ್ಯಾದಿಕಂ ಗೃಹ್ಯತೇ । ತಥಾ ಚ ಇತ್ಯಾದೇರ್ವಾಕ್ಯಾತ್ 'ತಸ್ಯ' ಬ್ರಹ್ಮಣಃ 'ತತ್' ಪೂರ್ಣಾನಂದಾದಿಕಂ 'ಲಕ್ಷಣಂ' ಸ್ವಲಕ್ಷಣಂ ಜ್ಞಾಯತ ಇತ್ಯರ್ಥಃ । ತಥಾಚ – ಶ್ರುತ್ಯಂತರೇ ಬ್ರಹ್ಮಲಕ್ಷಣತ್ವೇನಾವ-ಗತಯೋಃ ಪೂರ್ಣಜ್ಞಾನಸುಖಯೋರತ್ರ ಪ್ರಕರಣೇಽಭಿಧಾನಾದ್ ಅಸ್ಯ ವೈಷ್ಣವತ್ವ-ಸಿದ್ಧಿರಿತಿ ಭಾವಃ ।

ಛಾಂದೋಗ್ಯದ ಈ ಪ್ರಕರಣದ ಉಪಕ್ರಮದಲ್ಲಿ ಪೂರ್ಣಸುಖ ಮತ್ತು ಪೂರ್ಣ ಜ್ಞಾನಗಳನ್ನು ಹೇಳಿದ್ದರೂ ಈ ಪ್ರಕರಣವು ವಿಷ್ಣುಪ್ರಕರಣವೆಂದೇ ಹೇಳುವುದು ಹೇಗೆ? ಎಂದು ಶಂಕಿಸಿ, ಆ ಪೂರ್ಣಸುಖ ಪೂರ್ಣಜ್ಞಾನಗಳು ವಿಷ್ಣುವಿನ ಲಕ್ಷಣವಾದುದರಿಂದ

ಅಂದರೆ ವಿಷ್ಣುವಿನ ಸ್ವರೂಪವೇ ಆಗಿರುವುದರಿಂದ ಉಪಕ್ರಮದಲ್ಲಿ ಅವುಗಳನ್ನು ಹೇಳಿದ್ದ ಪಕ್ಷದಲ್ಲಿ ಬ್ರಹ್ಮನನ್ನೇ ಉಪಕ್ರಮದಲ್ಲಿ ಹೇಳಿದಂತಾಗುವುದು ಎಂಬ ಅಭಿಪ್ರಾಯ -ದಿಂದ ಪೂರ್ಣಸುಖ, ಪೂರ್ಣಜ್ಞಾನಗಳು ಪರಬ್ರಹ್ಮನ ಲಕ್ಷಣವಾಗಿವೆ ಎಂಬುದನ್ನು ಶ್ರುತಿಗಳಿಂದ ''ವಿಜ್ಞಾನಮ್'' ಎಂಬುದಾಗಿ ತೋರಿಸುತ್ತಿದ್ದಾರೆ. 'ವಿಜ್ಞಾನಮಾ-ನಂದಂ ಬ್ರಹ್ಮ' ಎಂದರೆ ಬ್ರಹ್ಮನು ವಿಜ್ಞಾನಾದಿ ಸ್ವರೂಪನು ಎಂದರ್ಥ. ಈ ಶ್ರುತಿ-ಯಲ್ಲಿ ವಿಜ್ಞಾನ ಮೊದಲಾದ ಪದಗಳು ಪೂರ್ಣಜ್ಞಾನ ಮೊದಲಾದವುಗಳನ್ನು ಹೇಳುವ ಶಬ್ದಗಳಾಗಿವೆ. ಏಕೆಂದರೆ ಅವುಗಳ ಅರ್ಥಕ್ಕೆ ಸಂಕೋಚವನ್ನು ಮಾಡಲು ಕಾರಣವಿಲ್ಲ-ದ್ದರಿಂದ. ಆದ್ದರಿಂದ ಈ ಶ್ರುತಿಗಳನ್ನು ಉದಾಹರಿಸುವುದು ಪ್ರಕೃತಕ್ಕೆ ಸಂಗತವಾಗಿದೆ. 'ವಿಜ್ಞಾನಂ' ಎಂಬ ಶ್ರುತಿಯು ಬೃಹದಾರಣ್ಯಕೋಪನಿಷತ್ತಿನಲ್ಲಿ ಶ್ರುತವಾಗಿದೆ. 'ಆನಂದೋ ಬ್ರಹ್ಮ' ಎಂಬ ವಾಕ್ಯದ ನಂತರ 'ಇತಿ ತೈತ್ತಿರೀಯವಾಕ್ಯಾತ್' 'ಹೀಗೆ ತೈತ್ತಿರೀಯವಾಕ್ಯದಿಂದ' ಎಂಬ ಪದಗಳು ಶೇಷವಾಗಿವೆ. ಇತ್ಯಾದೇಃ ಎಂಬಲ್ಲಿರುವ ಆದಿಶಬ್ದದಿಂದ 'ಅಥೈಷ ಏವ ಪರಮ ಆನಂದಃ', 'ಸತ್ಯಂ ಜ್ಞಾನಮ್' ಇತ್ಯಾದಿ ಶ್ರುತಿಗಳು ಗ್ರಹಿಸಲ್ಪಡುತ್ತವೆ. ತಥಾಚ ಇತ್ಯಾದೇಃ - ಇವೇ ಮೊದಲಾದ ವಾಕ್ಯಗಳಿಂದ ತಸ್ಯ- ಆ ಬ್ರಹ್ಮನಿಗೆ, 'ತತ್'- ಪೂರ್ಣಾನಂದಾದಿಗಳು, ಲಕ್ಷಣಂ- ಸ್ವರೂಪಭೂತ-ವಾದ ಲಕ್ಷಣಗಳೆಂದು ತಿಳಿದುಬರುತ್ತವೆ ಎಂದು ಅರ್ಥ. ತಥಾಚ – ಬೇರೆ ಶ್ರುತಿಗಳಲ್ಲಿ ಬ್ರಹ್ಮಲಕ್ಷಣವೆಂದು ತಿಳಿದುಬರುವ ಪೂರ್ಣಜ್ಞಾನ, ಪೂರ್ಣಸುಖಗಳನ್ನು ಈ ಪ್ರಕರಣದಲ್ಲಿ ಹೇಳಿರುವುದರಿಂದ ಈ ಪ್ರಕರಣವು ವಿಷ್ಣುಪ್ರಕರಣವೆಂದು ಸಿದ್ಧಿಸುವುದು ಎಂದು ಭಾವ.

**ಭಾ– 'ಲಕ್ಷಣಂ ಪರಮಾನಂದೋ ವಿಷ್ಣೋರೇವ ನ ಸಂಶಯಃ।**
**ಅವ್ಯಕ್ತಾದಿತೃಣಾಂತಾಸ್ತು ವಿಪ್ರುಡಾನಂದಭಾಗಿನಃ' ಇತಿ ಬ್ರಹ್ಮವೈವರ್ತೇ॥**

ಪರಮಾನಂದವು ವಿಷ್ಣುವಿಗೇ ಲಕ್ಷಣವಾಗಿದೆ. ಇದರಲ್ಲಿ ಸಂಶಯ-ವಿಲ್ಲ. ಅವ್ಯಕ್ತತತ್ವಾಭಿಮಾನಿಯಾದ ಶ್ರೀದೇವಿಯನ್ನಾರಂಭಿಸಿ ಮನು-ಷ್ಯೋತ್ತಮಪರ್ಯಂತವಾಗಿ ಎಲ್ಲರೂ ಅಲ್ಪಾನಂದವನ್ನು ಹೊಂದಿ-ರುವವರು - ಎಂದು ಬ್ರಹ್ಮವೈವರ್ತಪುರಾಣದಲ್ಲಿ ಹೇಳಿದೆ.

(ಭಾ.ದೀ.) ನನು ಸಕಲಚೇತನಾನಾಮಪಿ ಪೂರ್ಣಾನಂದತ್ವಾತ್ ಕಥಮೇತದ್ ವಿಷ್ಣುಲಕ್ಷಣಮ್? ಇತ್ಯತ ಆಹ – **ಲಕ್ಷಣಮಿತಿ** ॥ ಸ್ವರೂಪಧರ್ಮೋಭಯಾರ್ಥ-ಕೋಽಯಮ್ । ಪರಮಾನಂದಃ- ನಿರವಧಿಕಪೂರ್ಣಾನಂದ ಏವೇಹ ಲಕ್ಷಣತ್ವೇನಾ-ಭಿಪ್ರೇತಃ ನ ಪೂರ್ಣಾನಂದಮಾತ್ರಮ್ । ಸ ಚ ವಿಷ್ಣೋರೇವ ನಾನ್ಯೇಷಾಮ್ । ಅನ್ಯೇಷಾಂ ತ್ವಾಪೇಕ್ಷಿಕಮೇವ ಪೂರ್ಣಂ ಸುಖಂ ನ ವಿಷ್ಣುವನ್ನಿರವಧಿಕಂ ಪೂರ್ಣ-ಮಿತ್ಯರ್ಥಃ । ಕುತಃ? ಇತ್ಯತ ಆಹ – **ಯತೋಽವ್ಯಕ್ತಾದೀತಿ** ॥ ಅವ್ಯಕ್ತಾ ಶ್ರೀಃ ಸೈವಾಽದಿರ್ಯೇಷಾಂ ತೇ ತಥೋಕ್ತಾಃ । ಏವಂ ತೃಣಜೀವಾ ಮನುಷ್ಯೋತ್ತಮಾ ಏವಾಂತೇ ಯೇಷಾಂ ತೇ ತಥೋಕ್ತಾಃ। ಅವ್ಯಕ್ತಾದಯಶ್ಚ ತೇ ತೃಣಾಂತಾಶ್ಚೇತಿ ಕರ್ಮ-ಧಾರಯಃ। ತುಶಬ್ದೋ ವಿಶೇಷಾರ್ಥಃ।

**ವಿಷ್ಣ್ವಾಡಾನಂದಭಾಗಿನಃ** ತಾರತಮ್ಯೇನ ಬ್ರಹ್ಮಾನಂದಪ್ರತಿಬಿಂಬಾಪೇಕ್ಷಿಕಾನಂದ-ಯುಕ್ತಾ ಇತ್ಯರ್ಥಃ । 'ಚೇತನಾಃ' ಇತಿ ಶೇಷಃ । 'ನ ಸಂಶಯಃ' ಇತ್ಯಸ್ಯಾರ್ಥಸ್ಯ ಸಾವಧಾರಣತ್ವಮಾಹ । 'ಬ್ರಹ್ಮವೈವರ್ತೇ' ಇತ್ಯಸ್ಯ 'ಉಕ್ತತ್ವಾತ್' ಇತ್ಯಧ್ಯಾಹಾರೇಣ 'ತಸ್ಯೈವ ತಲ್ಲಕ್ಷಣಮ್' ಇತಿ ಸಾವಧಾರಣಪೂರ್ವವಾಕ್ಯೇನಾನ್ವಯಃ।

ಎಲ್ಲ ಚೇತನರೂ ಪೂರ್ಣಾನಂದರೇ ಆಗಿರುವುದರಿಂದ ಅದು ವಿಷ್ಣುವಿನ ಲಕ್ಷಣ-ವೆಂದು ಹೇಳುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ 'ಲಕ್ಷಣಂ ಪರಮಾನಂದಃ' ಎಂಬ ವಾಕ್ಯವು ಪ್ರವೃತ್ತವಾಗಿದೆ. ಇಲ್ಲಿ ಲಕ್ಷಣಶಬ್ದವು ಸ್ವರೂಪ ಹಾಗೂ ಧರ್ಮ ಎಂಬ ಎರಡೂ ಅರ್ಥವುಳ್ಳದ್ದು. ಪರಮಾನಂದಃ ಏವ- ನಿರವಧಿಕ ಪೂರ್ಣಾನಂದವೇ ಇಲ್ಲಿ ಲಕ್ಷಣವೆಂದು ಅಭಿಪ್ರೇತವಾಗಿದೆ ಹೊರತು ಪೂರ್ಣಾನಂದ ಮಾತ್ರವಲ್ಲ. ಆ ನಿರವಧಿಕಪೂರ್ಣಾನಂದವಾದರೋ ವಿಷ್ಣುವಿಗೇ ಹೊರತು ಇತರರಿಗಿಲ್ಲ. ಇತರರಿಗಾ-ದರೋ ಆಪೇಕ್ಷಿಕವಾದ ಪೂರ್ಣಸುಖವೇ ಹೊರತು ವಿಷ್ಣುವಿನಂತೆ ನಿರವಧಿಕಪೂರ್ಣ-ವಾದದ್ದಲ್ಲ ಎಂದು ಅರ್ಥ. ಹೀಗೇಕೆ? ಎಂಬ ಪ್ರಶ್ನೆಗೆ ಉತ್ತರವಾಗಿ ಯತಃ ಅವ್ಯಕ್ತಾದಿ ಎಂದು ಹೇಳಿದೆ. ಅವ್ಯಕ್ತಳೆಂದರೆ ಶ್ರೀದೇವಿ. ಅವಳೇ ಯಾರಿಗೆ ಆದಿಯಾಗಿರುವಳೋ ಅವರು ಅವ್ಯಕ್ತಾದಿಗಳು. ಹಾಗೆಯೇ ತೃಣಜೀವಾಃ ಅಂದರೆ ಮನುಷ್ಯೋತ್ತಮರೇ

ಅಂತದಲ್ಲಿ ಯಾರಿಗೆ ಇರುವರೋ ಅವರು ತೃಣಜೀವಾಂತರು. ಅವ್ಯಕ್ತಾದಯಶ್ಚ ತೇ ತೃಣಾಂತಾಶ್ಚ - ಎಂಬುದಾಗಿ ಕರ್ಮಧಾರಯ ಸಮಾಸ. ತುಶಬ್ದವು ವಿಶೇಷ ಎಂಬ ಅರ್ಥವುಳ್ಳದ್ದು. ವಿಪ್ರುಡಾನಂದಭಾಗಿನಃ ಅಂದರೆ ತಾರತಮ್ಯಕ್ಕನುಗುಣವಾಗಿ ಬ್ರಹ್ಮಾನಂದಕ್ಕೆ ಪ್ರತಿಬಿಂಬವಾಗಿರುವ ಆಪೇಕ್ಷಿಕವಾದ ಅಂದರೆ ಸಾವಧಿಕವಾದ ಆನಂದ-ವನ್ನು ಹೊಂದಿದವರು ಎಂದು ಅರ್ಥ. 'ಚೇತನಾಃ' ಎಂಬ ಪದವು ಇಲ್ಲಿ ಶೇಷವಾಗಿದೆ. 'ನ ಸಂಶಯಃ' ಎಂಬ ಪದಗಳಿಂದ ಈ ವಿಷಯವು ಹೀಗೆಯೇ ಎಂಬುದಾಗಿ ಸಾವಧಾರಣತ್ವವನ್ನು ಹೇಳುವುದು. 'ಬ್ರಹ್ಮವೈವರ್ತೇ' ಎಂಬ ಪದಕ್ಕೆ ಉಕ್ತತ್ವಾತ್ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಸೇರಿಸಿ, 'ತಸ್ಯೈವ ತಲ್ಲಕ್ಷಣಮ್' ಎಂಬ ಏವಕಾರಸಹಿತವಾದ ಹಿಂದಿನ ವಾಕ್ಯದೊಂದಿಗೆ ಅನ್ವಯವಾಗುವುದು.

ಭಾ– ನ ಚ ಮುಖ್ಯೇ ಸತ್ಯಮುಖ್ಯಂ ಯುಜ್ಯತೇ ॥ ೧೫ ॥

ಮುಖ್ಯವಾದ ಅರ್ಥವನ್ನು ಹೇಳಲು ಸಾಧ್ಯವಿರುವಾಗ ಅಮುಖ್ಯಾ-ರ್ಥವನ್ನು ಗ್ರಹಿಸುವುದು ಯುಕ್ತವಲ್ಲ.

(ಭಾ.ದೀ.) ನನು ಅಗ್ನ್ಯಾದಿಸುಖಸ್ಯಾಽಪೇಕ್ಷಿಕತಯಾಽಪಿ ಪೂರ್ಣತ್ವಸದ್ಭಾವಾತ್ ತೇಷಾಂ ಪೂರ್ಣಸುಖಮಿದಂ ಕಿಂ ನ ಸ್ಯಾತ್? ತಥಾ ತೇಷಾಂ ತಲ್ಲಕ್ಷಣಂ ಕಿಂ ನ ಸ್ಯಾತ್? ತಥಾ ತೇಷಾಮೇವೇದಂ ಪ್ರಕರಣಂ ಕಿಂ ನ ಸ್ಯಾತ್? ಇತ್ಯತ ಆಹ – ನ **ಚೇತಿ** ॥ 'ಮುಖ್ಯೇ' ನಿರವಧಿಕಪೂರ್ಣತ್ವೇ 'ಕಂ ಬ್ರಹ್ಮ' ಇತಿ ಶ್ರುತ್ಯರ್ಥತಯಾ ತಲ್ಲಕ್ಷಣೇ ಸಂಭವತಿ ಸತಿ 'ಅಮುಖ್ಯಮ್' ಆಪೇಕ್ಷಿಕಮನ್ಯಾಧೀನಂ ಪೂರ್ಣತ್ವಂ ನ ಯುಜ್ಯತ ಇತ್ಯರ್ಥಃ।

ಅಗ್ನಿ ಮೊದಲಾದ ದೇವತೆಗಳ ಸುಖವು ಸಾವಧಿಕವಾಗಿದ್ದರೂ ಪೂರ್ಣವೂ ಆಗಿರುವುದರಿಂದ ಆ ಅಗ್ನ್ಯಾದಿದೇವತೆಗಳಿಗೂ ಈ ಪೂರ್ಣಸುಖವು ಏಕಿರಬಾರದು? ಹಾಗೆಯೇ ಅವರಿಗೆ ಇದು ಲಕ್ಷಣವೇಕಾಗಬಾರದು? ಹಾಗೆಯೇ ಈ ಪ್ರಕರಣವು ಅವರದ್ದೇ ಪ್ರಕರಣವೇಕಾಗಬಾರದು? ಎಂಬ ಶಂಕೆಗೆ ಉತ್ತರವಾಗಿ ''ನ ಚ'' ಎಂದು ಹೇಳುತ್ತಿದ್ದಾರೆ. ಮುಖ್ಯೇ – ನಿರವಧಿಕಪೂರ್ಣತ್ವವು, ಕಂ ಬ್ರಹ್ಮ ಎಂಬ ಶ್ರುತಿಯ

ಅರ್ಥವಾಗಿ ಪರಬ್ರಹ್ಮನ ಲಕ್ಷಣವಾಗಿರಲು ಸಾಧ್ಯವಿರುವಾಗ, ಅಮುಖ್ಯಂ - ಆಪೇಕ್ಷಿಕವಾದ ಅಂದರೆ ಇತರರಿಗೆ ಅಧೀನವಾದ ಪೂರ್ಣತ್ವವು ಇಲ್ಲಿ ವಿವಕ್ಷಿತವೆಂದು ಹೇಳುವುದು ಯುಕ್ತವಲ್ಲ ಎಂದು ಅರ್ಥ.

**॥ ಓಂ ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ಓಂ ॥ ೧೬ ॥**

ಈ ವಿದ್ಯೆಯನ್ನು ತಿಳಿದ ಪುರುಷರಿಗೆ ವಾಯುವಿನಿಂದ ಬ್ರಹ್ಮಪ್ರಾಪ್ತಿ ಆಗುವುದೆಂದು ಹೇಳಿರುವುದರಿಂದಲೂ ಚಕ್ಷುರಂತರನು ಬ್ರಹ್ಮನೇ ಆಗಿದ್ದಾನೆ.

**ಭಾ– 'ಸ ಏನಾನ್ ಬ್ರಹ್ಮ ಗಮಯತಿ' (ಛಾಂ.೪.೧೫) ಇತಿ।**

'ಸ ಏನಾನ್ ಬ್ರಹ್ಮ ಗಮಯತಿ' ಎಂಬ ವಾಕ್ಯದಿಂದ ಈ ವಿದ್ಯೆಯನ್ನು ತಿಳಿದ ಪುರುಷರಿಗೆ ವಾಯುವಿನಿಂದ ಬ್ರಹ್ಮಪ್ರಾಪ್ತಿ ಆಗುವುದೆಂದು ಹೇಳಿರುವುದರಿಂದಲೂ - ಚಕ್ಷುರಂತರನು ಬ್ರಹ್ಮನೇ ಆಗಿದ್ದಾನೆ.

(ಭಾ.ದೀ.) ನನು ಏತದುಪಕ್ರಮೇ ಪೂರ್ಣಸುಖಜ್ಞಾನಯೋರಭಿಧಾನೇऽಪಿ ನಾಕ್ಷಿಸ್ಥಪ್ರಕರಣಸ್ಯ ವೈಷ್ಣವತ್ವಂ ಯುಕ್ತಮ್ । ಛಾಂದೋಗ್ಯೇ 'ಪ್ರಾಣೋ ಬ್ರಹ್ಮ ಕಮ್' ಇತಿ ವಿದ್ಯಾಂ 'ಯ ಏಷ ಆದಿತ್ಯೇ ಪುರುಷಃ' ಇತಿ ವಿದ್ಯಾಂ ಚೋಕ್ತ್ವಾ ಅಗ್ನಿಭಿರುಪಕೋಸಲಂ ಪ್ರತಿ 'ಉಪಕೋಸಲೈಷಾ ಸೋಮ್ಯ ತೇऽಸ್ಮದ್ವಿದ್ಯಾ ಚಾऽತ್ಮವಿದ್ಯಾ ಚೋಕ್ತಾ' ಇತ್ಯುಕ್ತತ್ವೇನ 'ಕಮ್' ಇತ್ಯಾದ್ಯವಿದ್ಯಾಯಾ ವಿಷ್ಣುವಿಷಯತ್ವಸ್ಯ 'ಯ ಏಷಃ' ಇತಿ ದ್ವಿತೀಯಾಯಾಶ್ಚಾಗ್ನಿವಿಷಯತ್ವಸ್ಯೈವ ಯುಕ್ತತ್ವಾತ್ । ನ ಚ 'ಅಸ್ಮದ್ವಿದ್ಯಾ' ಇತ್ಯುಕ್ತಾದಿತ್ಯವಿದ್ಯಾಯಾ ಅಗ್ನಿವಿಷಯತ್ವೇऽಪಿ ನಾಕ್ಷಿಸ್ಥವಿದ್ಯಾಯಾಸ್ತದ್ಯುಕ್ತಮಿತಿ ವಾಚ್ಯಮ್ । 'ಯ ಏಷೋऽಂತರಕ್ಷಿಣಿ' ಇತ್ಯಕ್ಷಿಸ್ಥವಿದ್ಯಾಯಾ ಆದಿತ್ಯವಿದ್ಯಯೈಕಾರ್ಥತ್ವಾತ್ । ನ ಚೋಪಕ್ರಮವಿರೋಧಃ । ಯಥಾ 'ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ' ಇತ್ಯತ್ರಾಗ್ನೇರುಪಕ್ರಮೇऽಪಿ 'ಸವಿತಾರಮೂತಯೇ', 'ಹಿರಣ್ಯಯೇನ ಸವಿತಾ ರಥೇನ' ಇತ್ಯಾದಿಸವಿತೃಶ್ರುತಿಲಿಂಗಾದಿನಾ ತತ್ಪ್ರಕರಣಂ ಸಾವಿತ್ರಮಿತಿ ಪ್ರಕರಣವಿಚ್ಛೇದಃ ತಥಾ

ಅತ್ರಾಪಿ ಬ್ರಹ್ಮಣ ಉಪಕ್ರಮೇಽಪಿ 'ಅಸ್ಮದ್ವಿದ್ಯಾ' ಇತ್ಯಗ್ನೇರಸ್ಮಚ್ಛಬ್ದೇನೋಕ್ತತ್ವಾತ್ ಅಗ್ನೀನಾಮೇವೇದಂ ಪ್ರಕರಣಂ ನ ವಿಷ್ಣೋಃ । ನ ಚ 'ಅಸ್ಮದ್ವಿದ್ಯಾ' ಇತ್ಯೇತದ್ ಅಂತರ್ಯಾಮಿಪರತಯಾ ಯೋಜ್ಯಮ್ । ತಥಾ ಸತಿ 'ಆತ್ಮವಿದ್ಯಾ' ಇತಿ ಪೃಥಗುಕ್ತ್ಯಯೋಗಾತ್ । ತಸ್ಮಾದಗ್ನಿವಿಷಯತ್ವಮೇವ ಚಕ್ಷುರಂತಃಸ್ಥವಿದ್ಯಾಯಾ ಇತ್ಯಾಶಂಕಾಂ ಪರಿಹರತ್ ಸೂತ್ರಂ ಪಠಿತ್ವಾ ತದುಪಾತ್ತಶ್ರುತಿಮೇವೋದಾಹರತಿ – **ಶ್ರುತೇತಿ** ॥

'ಇತಿ' ಇತ್ಯಸ್ಯ ಪೂರ್ವೇಣಾನ್ವಯಃ । ಅತ್ರ ಸೂತ್ರೇ ಶ್ರುತೇತ್ಯುಪಲಕ್ಷಣಂ, ಮತಧ್ಯಾತೇತ್ಯಪಿ ದ್ರಷ್ಟವ್ಯಮ್ । ಕೇತಿ ವಾಯುರುಚ್ಯತೇ । 'ಕೋ ವಾಯುರಿತಿ ಶಬ್ದಿತಃ' ಇತಿ ಅಭಿಧಾನಾತ್ । ಕಶಬ್ದಸ್ಯಾಽವೃತ್ತ್ಯಾ 'ಗತಿಃ' ಇತ್ಯನೇನಾಪಿ ಸಂಬಂಧೇ ಕಗತಿರಿತಿ ಪರಬ್ರಹ್ಮಗತಿರುಚ್ಯತೇ । 'ಕಂ ಬ್ರಹ್ಮ' ಇತಿ ವಾಕ್ಯಬೋಧಿತಪರಬ್ರಹ್ಮಪ್ರಕರಣಾದೇತದರ್ಥನಿಶ್ಚಯಾತ್ । ತಥಾಚ – ಶ್ರುತೋಪನಿಷದಾಂ ಶ್ರುತಮತಧ್ಯಾತೈತದ್ವಿದ್ಯಾನಾಂ ಪುಂಸಾಂ ಕೇನ ವಾಯುನಾ ಕಗತೇಃ 'ಕಂ ಬ್ರಹ್ಮ' ಇತಿ ವಾಕ್ಯಬೋಧಿತಬ್ರಹ್ಮಪ್ರಾಪ್ತೇಃ 'ಸ ಏನಾನ್ ಬ್ರಹ್ಮ ಗಮಯತಿ' ಇತ್ಯುಪಸಂಹಾರೇ ಅಭಿಧಾನಾದ್ ವಿಷ್ಣುವಿಷಯೈವಾಕ್ಷಿಸ್ಥವಿದ್ಯಾ, ನ ತ್ವಗ್ನಿವಿಷಯೇತಿ ಸೂತ್ರಾರ್ಥಃ।

ಈ ಪ್ರಕರಣದ ಉಪಕ್ರಮದಲ್ಲಿ ಪೂರ್ಣಸುಖಜ್ಞಾನಗಳನ್ನು ಹೇಳಿದ್ದರೂ ಈ ಅಕ್ಷಿಸ್ಥನನ್ನು ಹೇಳುವ ಪ್ರಕರಣವು ವಿಷ್ಣುಪ್ರಕರಣವೆಂದು ಹೇಳುವುದು ಯುಕ್ತವಲ್ಲ. ಏಕೆಂದರೆ, ಛಾಂದೋಗ್ಯದಲ್ಲಿ 'ಪ್ರಾಣೋ ಬ್ರಹ್ಮ ಕಮ್' ಎಂಬ ವಿದ್ಯೆಯನ್ನು, ಹಾಗೆಯೇ 'ಯ ಏಷ ಆದಿತ್ಯೇ ಪುರುಷಃ' ಎಂಬ ವಿದ್ಯೆಯನ್ನು ಹೇಳಿ, ಅಗ್ನಿಗಳು ಉಪಕೋಸಲನನ್ನು ಕುರಿತು 'ಉಪಕೋಸಲ ಏಷಾ ಸೋಮ್ಯ ತೇಽಸ್ಮದ್ವಿದ್ಯಾ ಚಾಽತ್ಮವಿದ್ಯಾ ಚ ಉಕ್ತಾ' - 'ಹೇ ಸೋಮ್ಯ ಉಪಕೋಸಲ! ನಿನಗೆ ನಮ್ಮ ವಿದ್ಯೆಯು, ಹಾಗೂ ಬ್ರಹ್ಮವಿದ್ಯೆಯು ಉಪದೇಶಿಸಲ್ಪಟ್ಟಿದೆ' ಎಂದು ಹೇಳಿರುವುದರಿಂದ, 'ಕಮ್' ಎಂಬ ಮೊದಲನೆಯ ವಿದ್ಯೆಯು ವಿಷ್ಣುವಿಷಯಕವಾದ ವಿದ್ಯೆಯಾಗಿರುವುದು, ಹಾಗೂ 'ಯ ಏಷ' ಎಂಬ ಎರಡನೆಯ ವಿದ್ಯೆಯು ಅಗ್ನಿವಿಷಯಕವಾಗಿರುವುದೇ ಯುಕ್ತವಾಗಿದೆ. ಅಸ್ಮದ್ವಿದ್ಯಾ ಎಂದು ಹೇಳಲಾದ ಆದಿತ್ಯವಿದ್ಯೆಯು ಅಗ್ನಿವಿಷಯಕವಾಗಿದ್ದರೂ

'ಯ ಏಷಃ ಅಂತರಕ್ಷಿಣಿ' ಎಂಬುದಾಗಿ ಉಪದೇಶಿಸಲಾದ ಅಕ್ಷಿಸ್ಥವಿದ್ಯೆಯು ಅಗ್ನಿವಿಷಯಕವಾದದ್ದಲ್ಲ ಎಂದು ಮಾತ್ರ ಹೇಳಬಾರದು. ಏಕೆಂದರೆ, 'ಯ ಏಷೋಽಂತರಕ್ಷಿಣಿ' ಎಂಬ ಅಕ್ಷಿಸ್ಥವಿದ್ಯೆಯು ಮತ್ತು ಆದಿತ್ಯವಿದ್ಯೆಯು ಒಂದೇ ವಿಷಯವನ್ನು ಒಳಗೊಂಡಿರುವುದರಿಂದ ಅಕ್ಷಿಸ್ಥವಿದ್ಯೆಯು ಕೂಡ ಅಗ್ನಿವಿದ್ಯೆಯೇ ಆಗುವುದು.

ಹೀಗೆ ಹೇಳಿದಲ್ಲಿ, ಉಪಕ್ರಮವಿರೋಧ ಬರುವುದೆಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಹೇಗೆ 'ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ' ಎಂಬ ಶ್ರುತಿಯಲ್ಲಿ ಉಪಕ್ರಮದಲ್ಲಿ ಅಗ್ನಿಯನ್ನು ಹೇಳಿದ್ದರೂ 'ಸವಿತಾರಮೂತಯೇ', 'ಹಿರಣ್ಯಯೇನ ಸವಿತಾ ರಥೇನ' ಇತ್ಯಾದಿ ವಾಕ್ಯಗಳಲ್ಲಿ ಸವಿತೃಶಬ್ದ ಮತ್ತು ಅವನಿಗೆ ಸಂಬಂಧಿಸಿದ ಅಸಾಧಾರಣಧರ್ಮಗಳು ಶ್ರುತವಾಗಿರುವುದರಿಂದ ಆ ಪ್ರಕರಣವು ಸವಿತೃದೇವತೆಯ ಪ್ರಕರಣವೆಂಬುದಾಗಿ ಪ್ರಕರಣದ ವಿಚ್ಛೇದವನ್ನು ಹೇಳುವರೋ ಹಾಗೆಯೇ ಈ ಪ್ರಕರಣದಲ್ಲೂ ಕೂಡ ಉಪಕ್ರಮದಲ್ಲಿ ಬ್ರಹ್ಮನನ್ನು ಹೇಳಿದ್ದರೂ ಕೂಡ ಅಗ್ನಿಗಳು ಅಸ್ಮದ್ವಿದ್ಯಾ ಎಂಬುದಾಗಿ ಈ ವಿದ್ಯೆಯನ್ನು ತಮ್ಮ ವಿದ್ಯೆ ಎಂಬುದಾಗಿ ಹೇಳಿರುವುದರಿಂದ ಈ ಪ್ರಕರಣವೂ ಅಗ್ನಿಗಳ ಪ್ರಕರಣವೇ ಹೊರತು ವಿಷ್ಣುಪ್ರಕರಣವಲ್ಲ. ಅಸ್ಮದ್ವಿದ್ಯಾ ಎಂದರೆ ನಮ್ಮ ಅಂತರ್ಯಾಮಿಯಾದ ವಿಷ್ಣುವಿನ ವಿದ್ಯೆ ಎಂಬ ಅಭಿಪ್ರಾಯವಿದೆ ಎಂದು ಯೋಜನೆ ಮಾಡುವುದೂ ಸರಿಯಲ್ಲ. ಹಾಗೆ ಹೇಳಿದಲ್ಲಿ ಈ ವಿದ್ಯೆಯೂ 'ಆತ್ಮವಿದ್ಯೆ'ಯೇ ಆಗುವುದರಿಂದ ಇನ್ನೊಂದು ವಿದ್ಯೆಯನ್ನು ಪ್ರತ್ಯೇಕವಾಗಿ 'ಆತ್ಮವಿದ್ಯೆ' ಎಂದು ಹೇಳವುದು ಯುಕ್ತವಾಗುವುದಿಲ್ಲ. ಆದ್ದರಿಂದ ಚಕ್ಷುರಂತಃಸ್ಥವಿದ್ಯೆಯು ಅಗ್ನಿವಿದ್ಯೆಯೇ ಆಗಿದೆ ಎಂಬ ಶಂಕೆಯನ್ನು ಪರಿಹರಿಸುವ ಶ್ರುತೋಪನಿಷತ್ ಇತ್ಯಾದಿ ಸೂತ್ರವನ್ನು ಆಚಾರ್ಯರು ಪಠಿಸಿ, ಆ ಸೂತ್ರವು ಸ್ವೀಕರಿಸಿರುವ ಶ್ರುತಿಯನ್ನು ಭಾಷ್ಯದಲ್ಲಿ ಉದಾಹರಿಸುತ್ತಿದ್ದಾರೆ.

ಭಾಷ್ಯದಲ್ಲಿ 'ಇತಿ'ಶಬ್ದಕ್ಕೆ ಸೂತ್ರದೊಂದಿಗೆ ಅನ್ವಯವಾಗುವುದು. ಈ ಸೂತ್ರದಲ್ಲಿ ಶ್ರುತ ಎಂಬ ಪದವು ಉಪಲಕ್ಷಣವಾಗಿದ್ದು ಮತ, ಧ್ಯಾತವೆಂಬ ಅರ್ಥವನ್ನು ಪಡೆದಿದೆ. 'ಕೋ ವಾಯುರಿತಿ ಶಬ್ದಿತಃ' ಎಂಬ ಕೋಷವನ್ನನುಸರಿಸಿ ಸೂತ್ರದಲ್ಲಿ 'ಕ'ಶಬ್ದವು ವಾಯುವನ್ನು ಹೇಳುವುದು. ಕಶಬ್ದಕ್ಕೆ ಆವೃತ್ತಿಮಾಡಿಕೊಂಡು 'ಗತಿಃ' ಎಂಬ ಪದದೊಂದಿಗೂ ಸಂಬಂಧವನ್ನು ಹೇಳಿದಾಗ 'ಕಗತಿಃ' ಅಂದರೆ ಪರಬ್ರಹ್ಮಗತಿ ಎಂಬ

ಅರ್ಥವು ಉಕ್ತವಾಗುವುದು. 'ಕಂ ಬ್ರಹ್ಮ' ಎಂಬ ವಾಕ್ಯದಿಂದ ಈ ಪ್ರಕರಣವು ಪರಬ್ರಹ್ಮ ಪ್ರಕರಣವೆಂದು ತಿಳಿದುಬರುವುದರಿಂದ ಈ ಅರ್ಥದ ನಿಶ್ಚಯವಾಗುವುದು. ತಥಾಚ – ಶ್ರುತೋಪನಿಷದಾಂ- ಈ ವಿದ್ಯೆಯನ್ನು ಶ್ರವಣ ಮಾಡಿದ ಮನನ ಮಾಡಿದ ಹಾಗೂ ಉಪಾಸನೆ ಮಾಡಿದ ಪುರುಷರಿಗೆ, ಕೇನ - ವಾಯುವಿನಿಂದ, ಕಗತೇಃ - 'ಕಂ ಬ್ರಹ್ಮ' ಎಂಬ ವಾಕ್ಯದಿಂದ ಬೋಧಿತನಾದ ಬ್ರಹ್ಮನ ಪ್ರಾಪ್ತಿಯಾಗುವುದೆಂದು 'ಸ ಏನಾನ್ ಬ್ರಹ್ಮ ಗಮಯತಿ'- ಆ ವಾಯುವು ಈ ಜ್ಞಾನಿಗಳನ್ನು ಬ್ರಹ್ಮನ ಬಳಿಗೆ ಒಯ್ಯುವನು ಎಂದು ಉಪಸಂಹಾರದಲ್ಲಿ ಹೇಳಿರುವುದರಿಂದ ಅಕ್ಷಿಸ್ಥವಿದ್ಯೆಯು ವಿಷ್ಣುವಿದ್ಯೆಯೇ ಆಗಿದೆ ಹೊರತು ಅಗ್ನಿವಿಷಯಕವಾದ ವಿದ್ಯೆಯಲ್ಲ ಎಂದು ಸೂತ್ರದ ಅರ್ಥವಾಗಿದೆ.

(ಭಾ.ದೀ.) ಯದ್ವಾ – ಶ್ರುತೋಪನಿಷದಮುಪಕೋಸಲಂ ಪ್ರತ್ಯಗ್ನಿಭಿರೇತದ್ ವಿದ್ಯಾಫಲತ್ವೇನ ಬ್ರಹ್ಮಗತ್ಯಭಿಧಾನಾತ್ ವೈಷ್ಣವಮೇವೇದಂ ಪ್ರಕರಣಂ, ನ ತ್ವಗ್ನಿ-ವಿಷಯಮಿತ್ಯರ್ಥಃ । ತತ್ತ್ವಪ್ರದೀಪೇ ತು – 'ಸ ಏನಾನ್ ಬ್ರಹ್ಮ ಗಮಯತಿ' ಇತಿ ಶ್ರುತೋಪನಿಷತ್ಕಾನಾಂ ಶ್ರುತೋಪನಿಷದ್ಗತೋಪಾಸನಾನಾಂ ಬ್ರಹ್ಮಗತ್ಯಭಿಧಾನಾಚ್ಚ ಆಂತರೋ ವಿಷ್ಣುರೇವ । ಅಸ್ಯಾಮುಪನಿಷೀದತಿ ಬ್ರಹ್ಮೇತ್ಯುಪನಿಷತ್ ಉಪಾಸನಾ । ಅನಯಾ ಬ್ರಹ್ಮ ಉಪನಿಷೀದತೀತಿ ವಾ ಇತ್ಯುಕ್ತಮ್ । ಶ್ರುತವಿಷಯಿಣೀ ಯಾ ಉಪ-ನಿಷತ್ ಮತಿಧ್ಯಾನರೂಪೋಪಾಸನಾ ತತ್ಕಾನಾಂ ತದ್ಗತಂ ತದ್ವಿಷಯಕಂ ಧ್ಯಾನ-ರೂಪೋಪಾಸನಂ ತದ್ವತಾಮಿತ್ಯರ್ಥಃ । ಅನೇನ ಉಪನಿಷಚ್ಛಬ್ದೋ ಮತಿಧ್ಯಾನ-ರೂಪೋಪಾಸನಾಪರಃ । ಬ್ರಹ್ಮೇತ್ಯನೇನ ಬಹುವ್ರೀಹಿಸಮಾಸಾವಯವಭೂತಃ ಕಶಬ್ದ ಆವೃತ್ತೋ ಬ್ರಹ್ಮವಾಚಕ ಇತ್ಯುಕ್ತಂ ಭವತಿ । ಅತ ಏವಾಽಹ ಟೀಕಾಕೃತ್ – ಶ್ರುತಪದಂ ಮನನನಿದಿಧ್ಯಾಸನಯೋರುಪಲಕ್ಷಕಮ್ ಇತ್ಯಾದಿನಾ । ತತ್ತ್ವಪ್ರದೀಪಪಕ್ಷೇ – ಉಪ-ನಿಷಚ್ಛಬ್ದ ಉಪಾಸನಾಪರಃ । ಟೀಕಾಕೃತ್ಪಕ್ಷೇ ವಿದ್ಯಾಪರಃ । ಟೀಕಾಯಾಂ ವಾಶಬ್ದ-ಶ್ಚಾರ್ಥಃ ।

ಯದ್ಯಪ್ಯಸ್ಯ ಸೂತ್ರಸ್ಯ ಪ್ರಕರಣವಿಚ್ಛೇದಾಶಂಕಾಪರಿಹಾರಾಯ ಉಪಸಂಹಾರಸ್ಥ-ಲಿಂಗೋಕ್ತಿಪರತ್ವೇನ ಪರಮಸಾಧ್ಯೇ ಯುಕ್ತ್ಯಂತರಪ್ರತಿಪಾದಕತ್ವಾಭಾವಾದತ್ರ ಚಶಬ್ದೋ

ನ ಪ್ರಯೋಜ್ಯಃ । ತಥಾಽಪಿ 'ಸ ಏನಾನ್ ಬ್ರಹ್ಮ' ಇತ್ಯುಪಸಂಹಾರಸ್ಥಸ್ಯೈತದ್‌ವಿದ್ಯಾವೇತ್ತ್ರೃಣಾಂ ಬ್ರಹ್ಮಪ್ರಾಪ್ತಿರೂಪಲಿಂಗಸ್ಯ ಚಕ್ಷುರಂತರೋ ವಿಷ್ಣುರೇವೇತಿ ಪರಮಸಾಧ್ಯೇಽಪಿ ಸಾಕ್ಷಾದನ್ವಯಾದಸ್ಯ ಚ ಲಿಂಗಸ್ಯ ಆದ್ಯಸೂತ್ರೋಕ್ತಾಮೃತತ್ವಲಿಂಗಾಪೇಕ್ಷಯೋತ್ತರವಾಕ್ಯಸ್ಥದ್ವಿತೀಯಸೂತ್ರೋಕ್ತಲಿಂಗಾಪೇಕ್ಷಯಾ ತೃತೀಯಸೂತ್ರೋಕ್ತಪ್ರಕರಣಾಪೇಕ್ಷಯಾ ಯುಕ್ತ್ಯಂತರತ್ವಾತ್ ತದ್ವಿವಕ್ಷಯಾ ಸೂತ್ರೇ ಚಶಬ್ದಪ್ರಯೋಗೋಪಪತ್ತಿರಿತಿ ಕೇಚಿದಾಹುಃ ।

ವಸ್ತುತಸ್ತು – ಅತ್ರ ಪ್ರಕರಣವಿಚ್ಛೇದಾಶಂಕಾಪರಿಹಾರೇಽಪಿ ಪೂರ್ವಸೂತ್ರೇಽತ್ರ ಚೈತತ್ ಪ್ರಕರಣಸ್ಯ ವೈಷ್ಣವತ್ವರೂಪಾಧ್ಯಾಹೃತಾವಾಂತರಸಾಧ್ಯಸ್ಯೈಕತ್ವೇನ ತತ್ರಾನೇನ ಯುಕ್ತ್ಯಂತರಾಭಿಧಾನಾಚ್ಚಶಬ್ದೋಪಪತ್ತಿಃ ।

ಅಥವಾ - ಶ್ರುತೋಪನಿಷದಂ ಪ್ರತಿ - ವಿದ್ಯೆಯನ್ನು ಶ್ರವಣ ಮಾಡಿದ ಉಪಕೋಸಲನನ್ನು ಕುರಿತು ಅಗ್ನಿಗಳಿಂದ ಈ ವಿದ್ಯೆಯ ಫಲವೆಂದು, ಕಗತ್ಯಭಿಧಾನಾತ್ - ಬ್ರಹ್ಮಪ್ರಾಪ್ತಿಯನ್ನು ಹೇಳಿರುವುದರಿಂದ ಈ ಪ್ರಕರಣವು ವಿಷ್ಣುಪ್ರಕರಣವೇ ಹೊರತು ಅಗ್ನಿವಿಷಯಕವಲ್ಲ ಎಂದು ಅರ್ಥ. ತತ್ವಪ್ರದೀಪದಲ್ಲಾದರೋ – 'ಸ ಏನಾನ್ ಬ್ರಹ್ಮ ಗಮಯತಿ' ಎಂಬುದಾಗಿ, ಶ್ರುತೋಪನಿಷತ್ಕಾನಾಂ - ಶ್ರವಣಮಾಡಿದ ಉಪನಿಷತ್ತಿನಲ್ಲಿ ಇರುವ ವಿಷಯದ ಉಪಾಸನೆಯನ್ನು ಮಾಡಿದವರಿಗೆ, ಬ್ರಹ್ಮಪ್ರಾಪ್ತಿಯನ್ನು ಹೇಳಿರುವುದರಿಂದಲೂ ಚಕ್ಷುರಂತಃಸ್ಥನು ವಿಷ್ಣುವೇ ಆಗಿದ್ದಾನೆ. ಅಸ್ಯಾಂ ಉಪನಿಷೀದತಿ ಬ್ರಹ್ಮ - 'ಈ ಉಪಾಸನೆಯಲ್ಲಿ ಬ್ರಹ್ಮನು ವಿಷಯನಾಗುವನು' ಎಂಬ ವ್ಯುತ್ಪತ್ತಿಯನ್ನು ಅನುಸರಿಸಿ ಉಪನಿಷತ್ ಎಂದರೆ ಉಪಾಸನೆ ಎಂದರ್ಥವಾಗುವುದು. ಅಥವಾ ಅನಯಾ ಬ್ರಹ್ಮ ಉಪನಿಷೀದತಿ - 'ಈ ಉಪಾಸನೆಯಿಂದ ಬ್ರಹ್ಮನು ವಿಷಯೀಕರಿಸಲ್ಪಡುವನು' ಎಂಬ ವಿವರಣೆಗನುಗುಣವಾಗಿ ಉಪನಿಷತ್ ಶಬ್ದಕ್ಕೆ ಉಪಾಸನೆ ಎಂದರ್ಥ - ಎಂದು ಹೇಳಿದೆ. ಶ್ರುತೋಪನಿಷತ್ಕಾನಾಂ ಎಂದರೆ ಶ್ರುತವಿಷಯಿಣೀ ಯಾ ಉಪನಿಷತ್- ಶ್ರವಣಮಾಡಿದ ವಿಷಯವನ್ನೇ ವಿಷಯವಾಗುಳ್ಳ ಮನನಧ್ಯಾನರೂಪವಾದ ಉಪನಿಷತ್ ಅಂದರೆ ಉಪಾಸನೆ ಯಾವುದಿದೆಯೋ, ತತ್ಕಾನಾಂ - ಅದನ್ನು ಹೊಂದಿದವರಿಗೆ, ಅಂದರೆ ಶ್ರುತವಿಷಯಕವಾದ ಧ್ಯಾನರೂಪವಾದ ಉಪಾಸನೆಯನ್ನು

ಹೊಂದಿದವರಿಗೆ ಎಂದು ಅರ್ಥ. ಇದರಿಂದ ಉಪನಿಷತ್‌ಶಬ್ದವು ಮನನಧ್ಯಾನರೂಪವಾದ ಉಪಾಸನೆಯನ್ನು ಹೇಳುವ ತಾತ್ಪರ್ಯವುಳ್ಳದ್ದು. ಭಾಷ್ಯದಲ್ಲಿ ಉದಾಹರಿಸಿರುವ ಶ್ರುತಿಯಲ್ಲಿ 'ಬ್ರಹ್ಮ' ಎಂಬ ಪದದಿಂದ ಶ್ರುತೋಪನಿಷತ್ಕ ಎಂಬ ಬಹುವ್ರೀಹಿಸಮಾಸದ ಭಾಗವಾಗಿರುವ ಕಶಬ್ದವು ಆವೃತ್ತಿಯನ್ನು ಪಡೆದು ಬ್ರಹ್ಮವಾಚಕವಾಗಿದೆ ಎಂದು ಹೇಳಿದಂತಾಗುವುದು. ಆದ್ದರಿಂದಲೇ ಟೀಕಾಕೃತ್ಪಾದರು – 'ಶ್ರುತಪದಂ ಮನನನಿಧಿಧ್ಯಾಸನಯೋರುಪಲಕ್ಷಕಮ್' 'ಸೂತ್ರದಲ್ಲಿ ಶ್ರುತಪದವು ಮನನ ಮತ್ತು ನಿಧಿಧ್ಯಾಸನಗಳಿಗೂ ಉಪಲಕ್ಷಕವಾಗಿದೆ' ಇತ್ಯಾದಿಯಾಗಿ ಹೇಳಿರುವರು. ತತ್ವಪ್ರದೀಪಪಕ್ಷದಲ್ಲಿ ಉಪನಿಷತ್‌ಶಬ್ದವು ಉಪಾಸನೆಯನ್ನು ಹೇಳುವ ತಾತ್ಪರ್ಯವುಳ್ಳದ್ದು. ಟೀಕಾಕಾರರ ಪಕ್ಷದಲ್ಲಿ ಉಪನಿಷತ್‌ಶಬ್ದವು ವಿದ್ಯೆಯೆಂಬ ಅರ್ಥವನ್ನು ಹೊಂದಿದೆ. ತತ್ವಪ್ರಕಾಶಿಕೆಯಲ್ಲಿ ಕೇನ ವಾಯುನಾ ಗತಿಃ ಇತಿ ವಾ ಎಂಬ ವಾಕ್ಯದಲ್ಲಿ ವಾಶಬ್ದವು ಚ ಎಂಬ ಅರ್ಥವುಳ್ಳದ್ದು.

ಯದ್ಯಪಿ ಈ ಸೂತ್ರವು, ಪ್ರಕರಣವಿಚ್ಛೇದವಾಗುವುದು ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಪ್ರಕರಣದ ಉಪಸಂಹಾರದಲ್ಲಿರುವ ಲಿಂಗವನ್ನು ಹೇಳುವ ಅಭಿಪ್ರಾಯವನ್ನು ಹೊಂದಿರುವುದರಿಂದ, ಚಕ್ಷುರಂತಃಸ್ಥನು ವಿಷ್ಣುವೇ ಆಗಿದ್ದಾನೆ ಎಂಬ ಅಂತಿಮವಾದ ಸಾಧ್ಯದ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳದಿರುವುದರಿಂದ ಈ ಸೂತ್ರದಲ್ಲಿ ಚಶಬ್ದವನ್ನು ಪ್ರಯೋಗಿಸಬೇಕಾಗಿಲ್ಲ. ಆದರೂ 'ಸ ಏನಾನ್ ಬ್ರಹ್ಮ ಗಮಯತಿ' ಎಂದು ಉಪಸಂಹಾರದಲ್ಲಿ ಇರುವ 'ಈ ವಿದ್ಯೆಯನ್ನು ತಿಳಿದವರಿಗೆ ಬ್ರಹ್ಮಪ್ರಾಪ್ತಿಯಾಗುವುದು' ಎಂಬ ಲಿಂಗಕ್ಕೆ ಚಕ್ಷುರಂತಃಸ್ಥನು ವಿಷ್ಣುವೇ ಆಗಿರುವನು ಎಂಬ ಪರಮಸಾಧ್ಯದ ವಿಷಯದಲ್ಲೂ ಸಾಕ್ಷಾತ್ ಅನ್ವಯವಿರುವುದರಿಂದ ಈ ಲಿಂಗವು ಮೊದಲನೆಯ ಸೂತ್ರದಲ್ಲಿ ಹೇಳಿದ ಅಮೃತತ್ವಲಿಂಗದ ದೃಷ್ಟಿಯಿಂದ ಹಾಗೆಯೇ ಮುಂದಿನ ವಾಕ್ಯದಲ್ಲಿರುವ ಎರಡನೆಯ ಸೂತ್ರದಲ್ಲಿ ಹೇಳಿದ ಲಿಂಗದ ದೃಷ್ಟಿಯಿಂದ ಹಾಗೂ ಮೂರನೆಯ ಸೂತ್ರದಲ್ಲಿ ಹೇಳಿದ ಪ್ರಕರಣದ ದೃಷ್ಟಿಯಿಂದ ಯುಕ್ತ್ಯಂತರವಾಗಿರುವುದರಿಂದ ಆ ಅಭಿಪ್ರಾಯದಿಂದ ಸೂತ್ರದಲ್ಲಿ ಚಶಬ್ದಪ್ರಯೋಗವು ಯುಕ್ತವೆಂದು ಕೆಲವರು ಹೇಳುವರು.

ವಸ್ತುತಸ್ತು – ಈ ಸೂತ್ರದಲ್ಲಿ ಪ್ರಕರಣವಿಚ್ಛೇದವಾಗುವುದೆಂಬ ಶಂಕೆಯನ್ನು ಪರಿಹಾರಮಾಡಿದ್ದರೂ ಹಿಂದಿನ ಸೂತ್ರದಲ್ಲಿ ಈ ಪ್ರಕರಣವು ವೈಷ್ಣವಪ್ರಕರಣವಾಗಿದೆ ಎಂಬ ಅಧ್ಯಾಹಾರಮಾಡಿಕೊಳ್ಳಲ್ಪಡುವ ಅವಾಂತರಸಾಧ್ಯವಿರುವುದರಿಂದ ಆ ವಿಷಯದಲ್ಲಿ ಈ ಸೂತ್ರವು ಯುಕ್ತ್ಯಂತರವನ್ನು ಹೇಳುವ ಕಾರಣ ಸೂತ್ರದಲ್ಲಿ ಚಶಬ್ದವು ಯುಕ್ತವಾಗಿದೆ.

(ಭಾ.ದೀ.) 'ಅಥ ಯದು ಚೈವಾಸ್ಮಿಞ್ಛವ್ಯಂ ಕರ್ಮ ಕುರ್ವಂತಿ ಯದಿ ಚ ನಾರ್ಚಿಷಮೇವಾಭಿಸಂಭವಂತಿ । ಅರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮ್ ಆಪೂರ್ಯಮಾಣಪಕ್ಷಾದ್ ಯಾನ್ ಷಡುದಙ್ಙೇತಿ ಮಾಸಾನ್ ತಾನ್ ಮಾಸೇಭ್ಯಃ ಸಂವತ್ಸರಂ ಸಂವತ್ಸರಾದ್ ಆದಿತ್ಯಮ್ ಆದಿತ್ಯಾತ್ ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತಿ' ಇತಿ ಛಂದೋಗ-ಶ್ರುತೇರಯಮರ್ಥಃ –

'ಅಥ' ಇತ್ಯರ್ಥಾಂತರೇ । 'ಅಥ' ಅವಸಿತಕರ್ಮಣಿ, 'ಅಸ್ಮಿನ್' ಜ್ಞಾನಿವಿಷಯೇ ಪುತ್ರಾದಯೋ ಯದಿ 'ಶವ್ಯಂ' ಶವಯೋಗ್ಯಂ ದಹನಾದಿ ಕರ್ಮ ಕುರ್ವಂತಿ, ಯದಿ ಚ ನ ಯದಿ ವಾ ನ ಕುರ್ವಂತಿ ತದಾರ್ಚಿಷಮ್ - ಅರ್ಚಿರ್ನಾಮಕದೇವಲೋಕಂ ಸಂಭವಂತಿ ಪ್ರಾಪ್ನುವಂತ್ಯೇವ ಇಮೇ ಜ್ಞಾನಿನ ಇತಿ ವಿಪರಿಣಾಮೇನಾನ್ವಯಃ । ಸಂವಿಶಂತಿ ಇತ್ಯೇಕವಚನಾಂತವಿಶಿಧಾತುಪಾಠಃ 'ತೇ' ಇತಿ ಪಾಠಶ್ಚ ಪ್ರಮೇಯದೀಪ-ಛಂದೋಗಪಾಠವಿರುದ್ಧಃ । ತತೋಽಹರ್ಲೋಕಂ, ತತಃ ಆಪೂರ್ಯಮಾಣಪಕ್ಷಂ ಶುಕ್ಲಪಕ್ಷಲೋಕಂ, ತತಃ ಸೂರ್ಯೋ 'ಯಾನ್' ಷಣ್ಮಾಸಾನ್ ಉದಙ್ಙೇತಿ ತಾನ್ ಮಾಸದೇವಲೋಕಮ್ ಉತ್ತರಾಯಣಲೋಕಂ ಚ, ತತಃ ಸಂವತ್ಸರಾದಿತ್ಯಚಂದ್ರ-ವಿದ್ಯುದಭಿಮಾನಿಲೋಕಾನ್ ಕ್ರಮೇಣ ಪ್ರಾಪ್ನುವಂತಿ । ತತಃ ತಸ್ಯಾಃ - ವಿದ್ಯುನ್ನಾಮ್ನ್ಯಾ ಭಾರತ್ಯಾಃ 'ಪುರುಷಃ' ಭರ್ತಾ 'ಮಾನವಃ' ಮನುಸಂಜ್ಞಸ್ಯ ವಿಷ್ಣೋಃ ಪ್ರಿಯೋ ಮುಖ್ಯವಾಯುಃ, ತಂ ಗಚ್ಛಂತಿ । 'ಸಃ' ವಾಯುಃ 'ಏನಾನ್' ಸ್ವಮಾಪ್ತಾನ್ ಪ್ರತೀಕಾಲಂಬನಾನ್ ಚತುರ್ಮುಖಾಖ್ಯಂ ಕಾರ್ಯಂ ಬ್ರಹ್ಮಾಪ್ರತೀಕಾಲಂಬನಾಂಸ್ತು ಪರಂ ಬ್ರಹ್ಮ ಗಮಯತೀತಿ ॥

'ಅಥ ಯದು ಚೈವಾಸ್ಮಿಞ್ಛವ್ಯಂ ಕರ್ಮ ಕುರ್ವಂತಿ ಯದಿ ಚ ನಾರ್ಚಿಷಮೇವಾ-ಭಿಸಂಭವಂತಿ । ಅರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮ್ ಆಪೂರ್ಯಮಾಣ-ಪಕ್ಷಾದ್ ಯಾನ್ ಷಡುದಙ್ಜೇತಿ ಮಾಸಾನ್ ತಾನ್ ಮಾಸೇಭ್ಯಃ ಸಂವತ್ಸರಂ ಸಂವತ್ಸರಾದ್ ಆದಿತ್ಯಮ್ ಆದಿತ್ಯಾತ್ ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತಿ' ಎಂಬಶ್ರುತಿಗೆ ಅರ್ಥ ಹೀಗಿದೆ.

ಅಥ ಎಂಬ ಪದವು ಬೇರೆ ವಿಷಯದ ಆರಂಭವನ್ನು ಸೂಚಿಸುವುದು. ಅಥ - ಕರ್ಮಗಳನ್ನು ಅನುಷ್ಠಾನ ಮಾಡಿ ಮುಗಿಸಿರುವ, ಈ ಜ್ಞಾನಿಯ ವಿಷಯದಲ್ಲಿ ಪುತ್ರನೇ ಮೊದಲಾದವರು, ಯದಿ ಶವ್ಯಂ ಕರ್ಮ ಕುರ್ವಂತಿ - ಶವಕ್ಕೆ ಮಾಡಬೇಕಾದ ದಹನಾದಿ ಕರ್ಮಗಳನ್ನು ಮಾಡುವರೋ, ಯದಿ ಚ ನ - ಅಥವಾ ಮಾಡದಿರು-ವರೋ, ತದಾರ್ಚಿಷಮ್ - ಅರ್ಚಿಷಮೇವ ಅಭಿಸಂಭವಂತಿ - ಆಗ ಅರ್ಚಿಃ ಎಂಬ ಹೆಸರಿನ ದೇವಲೋಕವನ್ನು ಈ ಜ್ಞಾನಿಗಳು ಹೊಂದಿಯೇ ತೀರುವರು. ಇಲ್ಲಿ ಜ್ಞಾನಿನಃ ಎಂಬ ಪದವು ವಿಭಕ್ತಿವ್ಯತ್ಯಾಸದೊಂದಿಗೆ ಅನ್ವಯವನ್ನು ಪಡೆದಿದೆ. ಸಂವಿಶತಿ ಎಂಬುದಾಗಿ ಏಕವಚನಾಂತವಾದ ವಿಶ್‌ಧಾತುವಿನ ಪಾಠ ಹಾಗೆಯೇ ತೇ ಎಂಬ ಪಾಠವೂ ಕೂಡ ಪ್ರಮೇಯದೀಪಿಕಾದಲ್ಲಿ ಉದಾಹರಿಸಲಾದ ಛಾಂದೋಗ್ಯಪಾಠಕ್ಕೆ ವಿರುದ್ಧವಾಗಿದೆ. ತತಃ - ಅರ್ಚಿರ್ಲೋಕದಿಂದ, ಅಹಃ - ಅಹರ್ಲೋಕವನ್ನು ಅಹ್ನಃ- ಆ ಅಹರ್ಲೋಕದಿಂದ, ಆಪೂರ್ಯಮಾಣಪಕ್ಷಂ- ಶುಕ್ಲಪಕ್ಷಲೋಕವನ್ನು, ಅಲ್ಲಿಂದ ಸೂರ್ಯನು, ಯಾನ್ ಷಟ್ ಉದಙ್ಜೇತಿ- ಯಾವ ಆರು ತಿಂಗಳ ಕಾಲ ಉತ್ತರದಿಕ್ಕಿನ ಕಡೆಗೆ ಹೋಗುವನೋ ಆ ಮಾಸದೇವ ಲೋಕಗಳನ್ನು ಮತ್ತು ಉತ್ತರಾ-ಯಣ ಲೋಕವನ್ನು ಮತ್ತು ಆ ಲೋಕಗಳಿಂದ ಸಂವತ್ಸರ, ಆದಿತ್ಯ, ಚಂದ್ರ, ವಿದ್ಯುತ್ ಇವುಗಳ ಅಭಿಮಾನಿದೇವತೆಗಳ ಲೋಕಗಳನ್ನು ಕ್ರಮವಾಗಿ ಹೊಂದುವರು. ಅನಂತರ ತತ್ಪುರುಷಃ - ಆ ವಿದ್ಯುನ್ನಾಮಕಳಾದ ಭಾರತಿಯ, ಪುರುಷಃ- ಪತಿಯಾದ, ಮಾನವಃ- ಮನುನಾಮಕನಾದ ವಿಷ್ಣುವಿಗೆ ಪ್ರಿಯನಾದ ಮುಖ್ಯವಾಯುವಿರುವನೋ ಅವನನ್ನು ಹೊಂದುವರು. ಸಃ ಆ ವಾಯುವು, ಏನಾನ್ - ತನ್ನನ್ನು ಹೊಂದಿದ, ಪ್ರತೀಕಾಲಂಬನರನ್ನು ಚತುರ್ಮುಖನೆಂದು ಕರೆಯಲ್ಪಡುವ ಬ್ರಹ್ಮ ಕಾರ್ಯಬ್ರಹ್ಮ-

ನನ್ನು, ಅಪ್ರತೀಕಾಲಂಬನರನ್ನಾದರೋ, ಬ್ರಹ್ಮ - ಪರಬ್ರಹ್ಮನನ್ನು ಕುರಿತು, ಗಮಯತಿ - ಒಯ್ಯುವನು.

**ಭಾ– ನ ಹ್ಯನ್ಯವಿದ್ಯಯಾ ಅನ್ಯಗತಿರ್ಯುಕ್ತಾ ॥ ೧೬॥**

ಅನ್ಯವಿಷಯಕವಾದ ವಿದ್ಯೆಯಿಂದ ಅನ್ಯಪ್ರಾಪ್ತಿಯು ಯುಕ್ತವಲ್ಲ-ವಷ್ಟೇ !!

(ಭಾ.ದೀ.) ಅಸ್ತ್ವೇತದ್ವಿದ್ಯಾಯಾಃ ಫಲತ್ವೇನ ಬ್ರಹ್ಮಪ್ರಾಪ್ತ್ಯಭಿಧಾನಂ, ತಥಾಽಪಿ ಕುತೋ ನಾಗ್ನಿವಿಷಯತ್ವಮಸ್ಯಾಃ? ಇತ್ಯತ ಆಹ – **ನ ಹೀತಿ ॥** 'ಹಿ' ಯಸ್ಮಾದ್ ಅನ್ಯಸ್ಯಾಗ್ನೇರ್ವಿದ್ಯಯಾಽನ್ಯಗತಿಃ ಅನ್ಯಸ್ಯ ಬ್ರಹ್ಮಣಃ ಪ್ರಾಪ್ತಿರ್ನ ಯುಕ್ತಾ । ಯಸ್ಮಾಚ್ಚ ಅತ್ರ ಪರಬ್ರಹ್ಮಪ್ರಾಪ್ತಿಃ ಫಲತ್ವೇನೋಚ್ಯತ ಇತ್ಯರ್ಥಃ । 'ತಸ್ಮಾತ್ ನಾನ್ಯವಿದ್ಯೇಯಂ ಬ್ರಹ್ಮವಿದ್ಯೈವ' ಇತಿ ವಾಕ್ಯಶೇಷಃ । ಹಿಶಬ್ದೇನ ವಿಪಕ್ಷೇ – 'ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ' ಇತಿ ಸ್ಮೃತಿವಿರೋಧಂ ಸೂಚಯತಿ । 'ಅಸ್ಮದ್ವಿದ್ಯಾಽಽತ್ಮವಿದ್ಯಾ' ಇತಿ ವಚನವಿರೋಧಸ್ತು ತಯೋರಂತರ್ಯಾಮಿಸರ್ವಗತ-ರೂಪದ್ವಯವಿಷಯಕತ್ವೇನ ಪರಿಹರಣೀಯಃ । 'ಸಾವಕಾಶಶ್ರುತೇರಪಿ ನಿರವಕಾಶ-ಶ್ರುತೇಃ ಪ್ರಾಬಲ್ಯಾತ್' ಇತಿ ಭಾವಃ ।

ಈ ವಿದ್ಯೆಯ ಫಲವೆಂದು ಬ್ರಹ್ಮಪ್ರಾಪ್ತಿಯನ್ನು ಹೇಳಿರುವುದು ಇರಲಿ ಆದರೂ ಈ ವಿದ್ಯೆಯು ಅಗ್ನಿವಿಷಯಕವೇಕಾಗಬಾರದು? ಎಂಬ ಪ್ರಶ್ನೆಗೆ ಉತ್ತರವಾಗಿ ''ನ ಹಿ'' ಎಂದು ಹೇಳುತ್ತಿದ್ದಾರೆ. ಹಿ - ಯಾವ ಕಾರಣದಿಂದ, ಅನ್ಯಸ್ಯ - ಭಿನ್ನನಾದ ಅಗ್ನಿಯ ವಿದ್ಯೆಯಿಂದ, ಅನ್ಯಗತಿಃ - ಆ ಅಗ್ನಿಯಿಂದ ಭಿನ್ನನಾದ ಬ್ರಹ್ಮನ ಪ್ರಾಪ್ತಿಯು ಯುಕ್ತ-ವಲ್ಲವೋ ಮತ್ತು ಯಾವ ಕಾರಣದಿಂದಾಗಿ ಈ ಪ್ರಕರಣದಲ್ಲಿ ಪರಬ್ರಹ್ಮಪ್ರಾಪ್ತಿಯು ಫಲವೆಂದು ಹೇಳಲಾಗಿದೆಯೋ ಎಂದು ಅರ್ಥ. 'ಆದ್ದರಿಂದ ಈ ವಿದ್ಯೆಯು ಮತ್ತೊ-ಬ್ಬರ ವಿದ್ಯೆಯಲ್ಲ; ಕಿಂತು ಬ್ರಹ್ಮವಿದ್ಯೆಯೇ ಆಗಿರುವುದು' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ. ಹಿಶಬ್ದದಿಂದ ಇದನ್ನು ಒಪ್ಪದಿದ್ದಲ್ಲಿ 'ದೇವಾನ್ ದೇವಯಜೋ

ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ'- 'ದೇವತೆಗಳನ್ನು ಆರಾಧಿಸುವವರು ದೇವತೆಗಳನ್ನೂ, ನನ್ನ ಭಕ್ತರು ನನ್ನನ್ನೂ ಹೊಂದುವರು' ಎಂಬ ಸ್ಮೃತಿ ವಿರೋಧವನ್ನು ಸೂಚಿಸುತ್ತಿದ್ದಾರೆ. 'ಅಸ್ಮದ್ವಿದ್ಯಾಽಽತ್ಮವಿದ್ಯಾ' ಎಂಬ ವಾಕ್ಯವಿರೋಧವನ್ನಾದರೋ ಆ ವಿದ್ಯೆಗಳು ಕ್ರಮವಾಗಿ ಅಂತರ್ಯಾಮಿರೂಪ ಮತ್ತು ಸರ್ವಗತರೂಪ ಎಂಬ ಎರಡು ರೂಪಗಳನ್ನು ವಿಷಯವಾಗಿ ಹೊಂದಿರುವುದೆಂದು ಹೇಳಿ ಪರಿಹರಿಸಬೇಕು. ಏಕೆಂದರೆ ಸಾವಕಾಶಶ್ರುತಿಗಿಂತಲೂ ನಿರವಕಾಶಶ್ರುತಿಯು ಪ್ರಬಲವಾಗಿರುವುದು ಎಂದು ಭಾವ.

**॥ ಓಂ ಅನವಸ್ಥಿತೇರಸಂಭವಾಚ್ಚ ನೇತರಃ ಓಂ ॥ ೧೭ ॥**

ಅಗ್ನಿರೂಪಜೀವನಿಗೆ ಜೀವಾಂತರಪ್ರೇರಕತ್ವವನ್ನು ಹೇಳಿದರೆ ಅನವಸ್ಥಾ ದೋಷ ಬರುವುದರಿಂದ ಮತ್ತು ಅಗ್ನಿಯು ಜೀವನಾದ ಪ್ರಯುಕ್ತ ಅವನಿಗೆ ಪ್ರೇರಕತ್ವವು ಅಸಂಭಾವಿತವಾದದ್ದರಿಂದ ಚಕ್ಷುರಂತಃಸ್ಥನು ಅಗ್ನಿಯೆಂಬ ಜೀವನಲ್ಲ.

**ಭಾ– ಜೀವಸ್ಯ ಜೀವಾಂತರನಿಯಾಮಕತ್ವೇಽನವಸ್ಥಿತೇಃ,**
**ಸಾಮ್ಯಾದಸಂಭವಾಚ್ಚ ನ ಜೀವಃ।**

ಜೀವನಿಗೆ ಜೀವಾಂತರನಿಯಾಮಕತ್ವವನ್ನು ಹೇಳಿದ ಪಕ್ಷದಲ್ಲಿ ಅನವಸ್ಥಾ ದೋಷವಿರುವುದರಿಂದ ಮತ್ತು ಜೀವತ್ವವು ಅವನಿಗೂ ಸಮಾನವಾಗಿರುವ ಕಾರಣ ಜೀವಾಂತರಪ್ರೇರಕತ್ವವು ಸಂಭವಿಸುವುದಿಲ್ಲವಾದ್ದರಿಂದ ಚಕ್ಷುರಂತಃಸ್ಥನು ಜೀವನಲ್ಲ.

(ಭಾ.ದೀ.) ಏವಮುಪಪತ್ತ್ಯಾದಿಭಿಃ ವಿಷ್ಣೋರಕ್ಷಿಸ್ಥತ್ವಂ ಪ್ರತಿಪಾದ್ಯ ವಿಪಕ್ಷೇ ಬಾಧಕೇನಾಪಿ ತತ್ಸಮರ್ಥಯತ್ ಸೂತ್ರಂ ಪಠತಿ – **ಅನವಸ್ಥಿತೇರಿತಿ ॥** ಅತ್ರ ಅಂತರಃ ತತ್ತಜ್ಜೀವಪ್ರೇರಕತಯಾ ತತ್ತಚ್ಚಕ್ಷುಃಸ್ಥಿತಃ 'ಇತರಃ' ಪೂರ್ವಪ್ರಕೃತಾತ್ ಕಶಬ್ದೋದಿತಾದ್ ಬ್ರಹ್ಮಣೋಽನ್ಯಃ ಅಗ್ನಿಜೀವೋ ನ । ಕುತಃ? ಯತಃ ಸ ಇತರೋ ಜೀವ ಇತಿ ಹೇತುಸಾಧ್ಯಯೋಜನಾಮಭಿಪ್ರೇತ್ಯ ಅತ್ರ ವಿಪಕ್ಷೇ ಅನಿಷ್ಟಪ್ರಸಂಗಾಭಿಧಾಯಕತಯಾ

'ಅನವಸ್ಥಿತೇಃ' ಇತ್ಯಂಶಂ ಯೋಜಯತಿ – **ಜೀವಸ್ಯೇತಿ** ॥ 'ಸಾಮ್ಯಾತ್' ಇತಿ ಸೂತ್ರೇಽಧ್ಯಾಹೃತಂ ಪದಂ ತತ್ತ್ವಪ್ರದೀಪರೀತ್ಯಾ ದೇಹಲೀದೀಪನ್ಯಾಯೇನೋಭಯತ್ರ ಸಂಬಧ್ಯತೇ । 'ಜೀವಸ್ಯ ಜೀವಾಂತರನಿಯಾಮಕತ್ವೇ' ಇತ್ಯೇತದ್ ವಿಪರಿಣತಮ್ ಅಸಂಭವಾತ್ ಇತ್ಯನೇನಾಪಿ ಸಂಬಧ್ಯತೇ । ಚೋ ಹೇತುಸಮುಚ್ಚಯೇ । 'ಇತರಃ' ಇತ್ಯಸ್ಯ 'ಅಗ್ನಿಃ' ಇತ್ಯರ್ಥೇ ವಾಚ್ಯೇ ಜೀವ ಇತಿ ಸಾಮಾನ್ಯೇನೋಕ್ತಿಃ ಸಾಧ್ಯಹೇತ್ವೋ-ಸ್ತಂತ್ರೇಣಾಭಿಧಾನಾರ್ಥಮ್ । ನ ಜೀವ ಇತ್ಯಸ್ಯ ಆಂತರ ಇತ್ಯುದ್ದೇಶ್ಯಸಮರ್ಪಕಾ-ನುವೃತ್ತಪದೇನಾನ್ವಯಃ । ಅನೇನ ತತ್ತಜ್ಜೀವಪ್ರೇರಕತಯಾ ತತ್ತಚ್ಚಕ್ಷುರಂತರೋ ನೇತರಃ ನಾಗ್ನಿಃ । ಕುತಃ? ಯತಃ ಸ ಇತರೋ ಜೀವಃ, ಜೀವತ್ವಾದಿತಿ ಯಾವತ್ । ನ ಚ ವಿಪಕ್ಷೇ ಬಾಧಕಾಭಾವಃ, ಜೀವಸ್ಯ ಜೀವಾಂತರನಿಯಾಮಕತ್ವೇ ಪ್ರೇರಕತ್ವೇ ಆಂತರಜೀವಸ್ಯಾಪಿ ಜೀವತ್ವಸಾಮ್ಯಾತ್ ತಸ್ಯಾಪಿ ನಿಯಾಮಕಂ ಜೀವಾಂತರಂ ವಾಚ್ಯಮ್ ಇತ್ಯನವಸ್ಥಿತೇಃ ಅಸಿದ್ಧಪರಂಪರಾಕಲ್ಪನರೂಪಾನವಸ್ಥಾಖ್ಯಾನಿಷ್ಟಾಪತ್ತೇಃ । ಅಭ್ಯುಪಗಮ್ಯ ಚೇದಮು-ದಿತಮ್ । ವಸ್ತುತಸ್ತು– ಜೀವಸ್ಯ ಜೀವಾಂತರನಿಯಾಮಕತ್ವಾಸಂಭವಾಚ್ಚ ನೇತರೋಽ-ಗ್ನಿರಂತರಃ । ಕುತೋಽಸಂಭವಃ? ಅಗ್ನೇರ್ಜೀವಸ್ಯ ಪ್ರೇರ್ಯಜೀವಾಂತರೇಣ ಸಹ ಪರತಂತ್ರತ್ವರೂಪಜೀವತ್ವಸಾಮ್ಯಾದಿತಿ ಸೂತ್ರವೃತ್ತಿರ್ದರ್ಶಿತಾ ಭವತಿ ।

ಹೀಗೆ ಉಪಪತ್ತಿ ಮೊದಲಾದ ಆಧಾರಗಳಿಂದ ವಿಷ್ಣುವಿಗೆ ಅಕ್ಷಿಸ್ಥತ್ವವನ್ನು ಪ್ರತಿ-ಪಾದಿಸಿ ಇದನ್ನು ಒಪ್ಪದೇ ಇದ್ದ ಪಕ್ಷದಲ್ಲಿ ಬಾಧಕವಿರುವುದರಿಂದಲೂ ವಿಷ್ಣುವೇ ಅಕ್ಷಿಸ್ಥನೆಂದು ಸಮರ್ಥಿಸುವ ಸೂತ್ರವನ್ನು ಭಾಷ್ಯಕಾರರು 'ಅನವಸ್ಥಿತೇಃ' ಎಂದು ಪಠಿಸುತ್ತಿದ್ದಾರೆ. ಇಲ್ಲಿ ಆಂತರಃ- ಅಂದರೆ ಆಯಾಯಾ ಜೀವಪ್ರೇರಕನಾಗಿ ಆಯಾಯಾ ಚಕ್ಷುಸ್ಸಿನಲ್ಲಿ ಇರುವವನು, ಇತರಃ ನ - 'ಹಿಂದೆ ಪ್ರಸ್ತುತನಾದ ಕಶಬ್ದದಿಂದ ಉಕ್ತ-ನಾಗಿರುವ ಬ್ರಹ್ಮನಿಂದ ಭಿನ್ನನಾದ ಅಗ್ನಿಜೀವನಲ್ಲ. ಏಕೆಂದರೆ ಆ ಇತರನು ಜೀವನಾಗಿ-ರುವನು' ಎಂದು ಹೇತುಸಾಧ್ಯಗಳ ಯೋಜನೆ ಇರುವುದೆಂದು ಅಭಿಪ್ರಾಯಪಟ್ಟು ಇಲ್ಲಿ ಸಾಧ್ಯವನ್ನು ಒಪ್ಪದೇ ಇದ್ದ ಪಕ್ಷದಲ್ಲಿ ಅನಿಷ್ಟಾಪತ್ತಿಯನ್ನು ಹೇಳುವುದೆಂದು ಸೂತ್ರದ ಅನವಸ್ಥಿತೇಃ ಎಂಬ ಅಂಶಕ್ಕೆ ಜೀವಸ್ಯ ಎಂಬ ಪದವನ್ನು ಭಾಷ್ಯಕಾರರು ಯೋಜಿಸು-

ತ್ತಿದ್ದಾರೆ. 'ಸಾಮ್ಯಾತ್' ಎಂಬ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಲ್ಪಡುವ ಪದವು ತತ್ವಪ್ರದೀಪರೀತ್ಯಾ ದೇಹಲೀದೀಪನ್ಯಾಯೇನ ಎರಡೂ ಕಡೆ ಸಂಬಂಧವನ್ನು ಪಡೆಯುವುದು. ಜೀವಸ್ಯ ಜೀವಾಂತರನಿಯಾಮಕತ್ವೇ ಎಂಬ ಪದಗಳು ವಿಭಕ್ತಿ ವ್ಯತ್ಯಾಸವನ್ನು ಪಡೆದು ಅಸಂಭವಾತ್ ಎಂಬ ಪದದೊಂದಿಗೂ ಅನ್ವಯವನ್ನು ಹೊಂದುವುದು. ಭಾಷ್ಯದಲ್ಲಿ ಚಕಾರವು ಹೇತುಸಮುಚ್ಚಯವನ್ನು ಹೇಳುವುದು. ಇತರಃ[೧] ಎಂಬ ಸೂತ್ರದ ಪದಕ್ಕೆ ಅಗ್ನಿಃ ಎಂಬುದಾಗಿ ಅರ್ಥವನ್ನು ಹೇಳಬೇಕಾಗಿದ್ದರೂ ಸಾಧ್ಯ ಮತ್ತು ಹೇತುಗಳನ್ನು ತಂತ್ರಯುಕ್ತಿಯಿಂದ ಹೇಳುವ ಸಲುವಾಗಿ ಜೀವಃ ಎಂಬುದಾಗಿ ಸಾಮಾನ್ಯರೀತಿಯಿಂದ ಅರ್ಥವನ್ನು ಹೇಳಲಾಗಿದೆ. ಭಾಷ್ಯದಲ್ಲಿರುವ 'ನ ಜೀವಃ' ಎಂಬ ಪದಗಳಿಗೆ ಆಂತರಃ ಎಂಬ ಉದ್ದೇಶ್ಯವನ್ನು ಹೇಳುವ, ಅನುವೃತ್ತಿಯಿಂದ ಲಭ್ಯವಾದ ಪದದೊಂದಿಗೆ ಅನ್ವಯವಾಗುವುದು. ಇದರಿಂದ - ಆಯಾಯಾ ಜೀವಪ್ರೇರಕನಾಗಿ ಆಯಾಯಾ ಜೀವರ ಚಕ್ಷುರಂತಃಸ್ಥನು, ನ ಇತರಃ - ಇತರನಾದ ಅಗ್ನಿಯಲ್ಲ. ಏಕೆಂದರೆ ಯಾವ ಕಾರಣದಿಂದಾಗಿ ಆ ಇತರನಾದ ಜೀವನೂ ಜೀವನೇ ಆಗಿರುವನು ಆದ್ದರಿಂದ ಎಂದು ಅಭಿಪ್ರಾಯ. ಇಲ್ಲಿ ಆ ಚಕ್ಷುರಂತಃಸ್ಥನು ಅಗ್ನಿಯೇ ಆಗಿರುವನು ಎಂದು ಹೇಳಿದಲ್ಲಿ ಯಾವ ಬಾಧಕವೂ ಇಲ್ಲ ಎಂದು ಹೇಳಲಾಗದು. ಏಕೆಂದರೆ, ಒಬ್ಬ ಜೀವನಿಗೆ ಜೀವಾಂತರನಿಯಾಮಕತ್ವವನ್ನು ಅಂದರೆ ಜೀವಾಂತರಪ್ರೇರಕತ್ವವನ್ನು ಹೇಳಿದರೆ ಆ ಅಂತಃಸ್ಥನಾದ ಜೀವನಿಗೂ ಜೀವತ್ವವು ಸಮಾನವಾಗಿರುವುದರಿಂದ ಅವನಿಗೂ ಮತ್ತೊಬ್ಬ ಜೀವನು ನಿಯಾಮಕನೆಂದು ಹೇಳಬೇಕಾಗುವುದು. ಹೀಗೆ ಅನವಸ್ಥಿತಿಯುಂಟಾಗುವುದರಿಂದ ಪ್ರಮಾಣಸಿದ್ಧವಲ್ಲದ ಪರಂಪರಾಕಲ್ಪನೆ ಎಂಬ ಅನವಸ್ಥಾದೋಷವೆಂಬ ಅನಿಷ್ಟಾಪತ್ತಿ ಬರುವುದು. 'ಒಬ್ಬ ಜೀವನು ಜೀವಾಂತರ ನಿಯಾಮಕನಾಗಬಹುದು' ಎಂದು ಒಪ್ಪಿ ಈ ದೋಷವನ್ನು ಹೇಳಲಾಯಿತು. ವಸ್ತುತಸ್ತು – 'ಒಬ್ಬ ಜೀವನಿಗೆ ಜೀವಾಂತರನಿಯಾಮಕತ್ವವು ಇರಲು ಸಾಧ್ಯವೇ ಇಲ್ಲದಿರುವುದರಿಂದ' ನ ಇತರಃ ಅಂತರಃ - ವಿಷ್ಣುಭಿನ್ನನಾದ ಅಗ್ನಿಯು ಚಕ್ಷುರಂತಃಸ್ಥನು ಎಂದು ಹೇಳಲಾಗದು. ಒಬ್ಬ ಜೀವನಿಗೆ ಜೀವಾಂತರನಿಯಾಮಕತ್ವವಿರುವುದು ಸಾಧ್ಯವಿಲ್ಲವೇಕೆ? ಎಂಬ ಶಂಕೆಗೆ ಪ್ರೇರಕನೆಂದು ಹೇಳಲಾದ ಅಗ್ನಿ ಎಂಬ ಜೀವನಿಗೆ ಅವನಿಂದ ಪ್ರೇರಿಸಲ್ಪಡುವ ಇನ್ನೊಬ್ಬ ಜೀವನೊಂದಿಗೆ ಪರಾಧೀನತ್ವರೂಪವಾದ

ಜೀವತ್ವವು ಸಮಾನವಾಗಿರುವುದರಿಂದ, ಎಂದು ಸೂತ್ರವ್ಯಾಖ್ಯಾನವನ್ನು ತೋರಿಸಿ-ದಂತಾಗುವುದು.

(೧) ಒಮ್ಮೆ ಉಚ್ಚರಿಸಿದ ಪದವು ಅನೇಕಾರ್ಥಗಳನ್ನು ಹೇಳುವ ಮೂಲಕ ಉಪಕಾರಕವಾಗುವುದು ತಂತ್ರಯುಕ್ತಿ. 'ಇತರಃ' ಎಂಬ ಪದಕ್ಕೆ 'ಅಗ್ನಿ' ಎಂದು ಅರ್ಥವನ್ನು ಹೇಳಿದರೆ 'ಚಕ್ಷುರಂತಸ್ಥನು ಅಗ್ನಿಯಲ್ಲ' ಎಂಬ ಸಾಧ್ಯಾಂಶ ಮಾತ್ರ ಸೂಚಿತವಾಗುತ್ತಿದ್ದಿತು. 'ಜೀವನಾದ್ದರಿಂದ' ಎಂಬ ಹೇತ್ವಂಶದ ಲಾಭವಾಗು-ತ್ತಿರಲಿಲ್ಲ. ತಂತ್ರಯುಕ್ತಿಯಿಂದ 'ಇತರ'ಶಬ್ದಕ್ಕೆ 'ಜೀವ' ಎಂದು ಸಾಮಾನ್ಯಾರ್ಥ-ವನ್ನು ಹೇಳಿದ ಪಕ್ಷದಲ್ಲಿ 'ಚಕ್ಷುರಂತಸ್ಥನು ಅಗ್ನಿಜೀವನಲ್ಲ, ಅವನೂ ಜೀವ-ನಾದ್ದರಿಂದ' ಎಂದು ಸಾಧ್ಯ-ಹೇತು ಇವೆರಡೂ ಲಭಿಸುವುದೆಂದು ಭಾವ.

**ಭಾ– ನಿಯಮಪ್ರಮಾಣಾಭಾವಾತ್। ಅನೀಶ್ವರಾಪೇಕ್ಷತ್ವಾಚ್ಚ॥ ೧೭ ॥**

ಅಗ್ನಿಯು ಜೀವನಾಗಿದ್ದರೂ ಅವನಿಗೇ ಸ್ವಾತಂತ್ರ್ಯವಿರುವುದು ಹೊರತು ಇತರ ಜೀವರಿಗೆ ಸ್ವಾತಂತ್ರ್ಯವಿಲ್ಲ ಎಂಬ ನಿಯಮವನ್ನು ಒಪ್ಪಲು ಪ್ರಮಾಣವಿಲ್ಲದಿರುವುದರಿಂದ ಮತ್ತು ಪೂರ್ವಪಕ್ಷಿಯು ಈಶ್ವರನನ್ನು ಒಪ್ಪದಿರುವುದರಿಂದಲೂ ಅನವಸ್ಥಾದಿ ದೋಷಗಳಿಲ್ಲ ಎಂದು ಹೇಳಲಾಗದು.

(ಭಾ.ದೀ.) ನನು ಜೀವಪ್ರೇರಕಾಗ್ನೇಃ ಸ್ವಾತಂತ್ರ್ಯಾಭ್ಯುಪಗಮಾತ್ ನಾನವಸ್ಥಾ। ನ ಚೈವಂ ಜೀವಾಂತರಸ್ಯಾಪಿ ಸ್ವಾತಂತ್ರ್ಯಂ ಸ್ಯಾದ್ ಜೀವತ್ವಸಾಮ್ಯಾತ್ ಇತ್ಯುಕ್ತಮಿತಿ ವಾಚ್ಯಮ್ । ಜೀವತ್ವಸಾಮ್ಯೇಽಪಿ ಅಗ್ನೇರೇವ ಸ್ವಾತಂತ್ರ್ಯಂ ನಾನ್ಯೇಷಾಮಿತಿ ನಿಯಮಾಭ್ಯುಪಗಮಾದಿತ್ಯತ ಆಹ – **ನಿಯಮೇತಿ** ॥ ಜೀವತ್ವಸಾಮ್ಯೇಽಪ್ಯಗ್ನೇರೇವ ಸ್ವಾತಂತ್ರ್ಯಂ ನಾನ್ಯೇಷಾಮಿತಿ ನಿಯಮೇ ಪ್ರಮಾಣಾಭಾವಾದಿತ್ಯರ್ಥಃ। ಅತೋಽಗ್ನೇಃ ಸ್ವಾತಂತ್ರ್ಯಾಯೋಗಾತ್ ಸುಷ್ಠ್ವೇವ ಅನವಸ್ಥಿತಿರಿತಿ ಭಾವಃ।

ನನ್ವಸ್ತ್ವಗ್ನೇರಸ್ವಾತಂತ್ರ್ಯಂ, ತಥಾಽಪಿ ತತ್ಪ್ರೇರಕಸ್ಯೇಶ್ವರಸ್ಯ ಸ್ವಾತಂತ್ರ್ಯಸಂಭವಾತ್ ನಾನವಸ್ಥೇತ್ಯತ ಆಹ – **ಅನೀಶ್ವರೇತಿ** ॥ ಈಶ್ವರಂ ಜಗತ್ಪ್ರೇರಕತ್ವೇನ ಯೋಽಪೇಕ್ಷತೇಽ-

ಭ್ಯುಪೈತಿ ಸ ಈಶ್ವರಾಪೇಕ್ಷಃ, ಸ ನ ಭವತೀತ್ಯನೀಶ್ವರಾಪೇಕ್ಷಃ, ತಸ್ಯ ಭಾವಃ ತತ್ತ್ವಂ ತಸ್ಮಾತ್ ಇತ್ಯರ್ಥಃ। 'ಪೂರ್ವವಾದಿನಃ' ಇತಿ ಶೇಷಃ। ಹೇತುಸಮುಚ್ಚಯೇ ಚಶಬ್ದಃ। ಏವಂ ವಾ– ನನು ಪರತಂತ್ರತ್ವಸಾಮ್ಯೇಽಪಿ ಜೀವಾನಾಂ ಜೀವಾಂತರನಿಯಾಮಕತ್ವಾತ್ ಕಥಂ ತದಸಂಭವ ಇತ್ಯತ ಆಹ – **ಅನೀಶ್ವರೇತಿ ॥** ವ್ಯಾಖ್ಯಾನಂ ಪೂರ್ವವತ್। ತಥಾಚ– ಯಥಾಽಸ್ಮತ್ಪಕ್ಷೇ ಸತಿ ರಾಜ್ಞಿ ಮಂಡಲೇಶೇ ಪ್ರಜಾನಾಂ ರಾಜಶಕ್ತ್ಯಾ ನಿಯಮ್ಯನಿಯಾಮಕಾಭಾವವದ್ ಈಶ್ವರಶಕ್ತ್ಯಾ ಜೀವಾನಾಂ ಜೀವಾಂತರನಿಯಾಮಕತ್ವಸಂಭವಃ, ನ ತಥಾ ಪರಪಕ್ಷೇ ಸಂಭವತಿ, ಪರೇಣ ಈಶ್ವರಾನಭ್ಯುಪಗಮಾದಿತಿ ಭಾವಃ। ಇದಂ ವಾಕ್ಯದ್ವಯಸ್ಯ ಯೋಜನಾದ್ವಯಂ, ಟೀಕಾಯಾಂ ತತ್ತ್ವಪ್ರದೀಪೋಕ್ತಮೇವ ಉಕ್ತಮ್। ಉಕ್ತಂ ಹಿ **ತತ್ತ್ವಪ್ರದೀಪೇ** – ನಿಯಮಪ್ರಮಾಣಾಭಾವೋಽನೀಶ್ವರಾಪೇಕ್ಷತ್ವಂ ಚೇತ್ಯುಭೌ ಉಭಯತ್ರ ಹೇತುರಿತಿ। 'ಉಭಯತ್ರ' ಅನವಸ್ಥಿತ್ಯಸಂಭವಯೋಃ ಇತ್ಯರ್ಥಃ॥

ಜೀವಪ್ರೇರಕನಾದ ಅಗ್ನಿಯು ಸ್ವತಂತ್ರನಾಗಿರುವನು ಎಂದು ಒಪ್ಪುವುದರಿಂದ ಅನವಸ್ಥಾದೋಷವಿಲ್ಲ. ಹೀಗೆ ಹೇಳಿದಲ್ಲಿ, ಇನ್ನೊಬ್ಬ ಜೀವನಿಗೂ ಜೀವತ್ವವು ಸಮಾನವಾಗಿರುವುದರಿಂದ ಸ್ವಾತಂತ್ರ್ಯವಿರಲಿ; ಅಗ್ನಿಯೊಬ್ಬನಿಗೇ ಸ್ವಾತಂತ್ರ್ಯವಿರುವುದು ಹೇಗೆ ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಇತರ ಜೀವರಿಗೂ ಜೀವತ್ವವು ಸಮಾನವಾಗಿದ್ದರೂ ಅಗ್ನಿಗೇ ಸ್ವಾತಂತ್ರ್ಯವಿರುವುದು ಹೊರತು ಇತರರಿಗಲ್ಲ ಎಂಬ ನಿಯಮವನ್ನು ನಾವು ಅಂಗೀಕರಿಸುತ್ತೇವೆ ಎಂಬ ಶಂಕೆಗೆ ಉತ್ತರವಾಗಿ 'ನಿಯಮ' ಎಂದು ಹೇಳುತ್ತಿದ್ದಾರೆ. ಜೀವತ್ವವು ಸಮಾನವಾಗಿದ್ದರೂ ಅಗ್ನಿಗೇ ಸ್ವಾತಂತ್ರ್ಯವಿರುವುದು ಹೊರತು ಇತರ ಜೀವರಿಗಲ್ಲ ಎಂಬ ನಿಯಮದಲ್ಲಿ ಪ್ರಮಾಣವಿಲ್ಲದಿರುವುದರಿಂದ ಎಂದು ಅರ್ಥ. ಆದ್ದರಿಂದ ಅಗ್ನಿಗೆ ಸ್ವಾತಂತ್ರ್ಯವಿರಲು ಸಾಧ್ಯವಿಲ್ಲವಾದ್ದರಿಂದ ಅನವಸ್ಥಿತಿಯು ಇದ್ದೇ ಇರುವುದು ಎಂದು ಭಾವ.

ಅಗ್ನಿಗೆ ಸ್ವಾತಂತ್ರ್ಯವಿಲ್ಲದಿರಬಹುದು, ಆದರೂ ಅವನಿಗೆ ಪ್ರೇರಕನಾದ ಈಶ್ವರನಿಗೆ ಸ್ವಾತಂತ್ರ್ಯವಿರುವುದರಿಂದ ಅನವಸ್ಥಾ ದೋಷವಿಲ್ಲ ಎಂಬ ಶಂಕೆಗೆ ಉತ್ತರವಾಗಿ 'ಅನೀ-

ಶ್ವರ' ಎಂದು ಹೇಳಲಾಗಿದೆ. ಈಶ್ವರನನ್ನು ಜಗತ್ತಿನ ಪ್ರೇರಕನೆಂದು, ಯಃ ಅಪೇಕ್ಷತೇ - ಅಂದರೆ ಯಾರು ಒಪ್ಪುವನೋ ಅವನು ಈಶ್ವರಾಪೇಕ್ಷನು. ಹಾಗಲ್ಲದಿರುವವನು ಈಶ್ವರಾನಪೇಕ್ಷನು. ಅಂತಹವನ ಧರ್ಮ ಈಶ್ವರಾನಪೇಕ್ಷತ್ವ. ಅಂದರೆ ಈಶ್ವರನನ್ನು ಅಂಗೀಕರಿಸದಿರುವುದರಿಂದ ಎಂದು ಅರ್ಥ. ಪೂರ್ವವಾದಿನಃ – 'ಪೂರ್ವಪಕ್ಷಿಗಳು' ಎಂಬ ಪದವು ಇಲ್ಲಿ ಶೇಷವಾಗಿದೆ. ಚಶಬ್ದವು ಹೇತುಗಳ ಸಮುಚ್ಚಯವನ್ನು ಹೇಳು-ವುದು. ಅಥವಾ, ಹೀಗೂ ಶಂಕಿಸಬಹುದು – ಪರತಂತ್ರತ್ವವು ಸಮಾನವಾಗಿದ್ದರೂ ಅಗ್ನಿಜೀವನಿಗೆ ಜೀವಾಂತರನಿಯಾಮಕತ್ವವು ಏಕೆ ಇರಲು ಸಾಧ್ಯವಿಲ್ಲ ಎಂಬ ಶಂಕೆಗೆ ಉತ್ತರವಾಗಿ 'ಅನೀಶ್ವರ' ಎಂಬ ವಾಕ್ಯವು ಹೊರಟಿದೆ. ಈ ವಾಕ್ಯದ ವ್ಯಾಖ್ಯಾನವನ್ನು ಹಿಂದಿನಂತೆಯೇ ಮಾಡಬಹುದು. ತಥಾಚ – ಹೇಗೆ ನಮ್ಮ ಅಂದರೆ ಸಿದ್ಧಾಂತದ ಪಕ್ಷದಲ್ಲಿ ಮಂಡಲಾಧಿಪತಿಯಾಗಿ ರಾಜನಿರುವಾಗ ಪ್ರಜೆಗಳ ಮಧ್ಯೆ ರಾಜಶಕ್ತಿಯಿಂದ ನಿಯಮ್ಯನಿಯಾಮಕಭಾವವಿರುವುದೋ ಹಾಗೆ ಈಶ್ವರಸಾಮರ್ಥ್ಯದಿಂದಾಗಿ ಜೀವರಿಗೆ ಜೀವಾಂತರನಿಯಾಮಕತ್ವವು ಇರಲು ಸಾಧ್ಯವಿದೆ. ಆದರೆ ಪರಪಕ್ಷದಲ್ಲಿ ಹೀಗೆ ಇರಲು ಸಾಧ್ಯವಿಲ್ಲ. ಏಕೆಂದರೆ ಪರನು ಈಶ್ವರನನ್ನೇ ಒಪ್ಪಿಲ್ಲವಾದ್ದರಿಂದ ಎಂದು ಭಾವ. ಇದು ಭಾಷ್ಯದ ಎರಡು ವಾಕ್ಯಗಳಿಗೆ ಎರಡು ರೀತಿಯ ಯೋಜನೆಗಳಾಗಿವೆ. ತತ್ತ್ವ-ಪ್ರಕಾಶಿಕೆಯಲ್ಲಿ ತತ್ವಪ್ರದೀಪದಲ್ಲಿ ಹೇಳಿರುವುದನ್ನೇ ಹೇಳಿದೆ. ತತ್ವಪ್ರದೀಪದಲ್ಲಿ ಹೀಗೆ ಹೇಳಿದೆ – ನಿಯಮದಲ್ಲಿ ಪ್ರಮಾಣವಿಲ್ಲ. ಮತ್ತು ಈಶ್ವರನನ್ನು ಅಂಗೀಕರಿಸದಿರುವುದು ಎಂಬ ಈ ಎರಡು, ಎರಡು ವಿಷಯಗಳಲ್ಲಿ ಹೇತುಗಳಾಗಿವೆ. ಎರಡು ವಿಷಯಗಳಲ್ಲಿ ಅಂದರೆ ಅನವಸ್ಥಾ ಮತ್ತು ಅಸಂಭವಗಳ ವಿಷಯದಲ್ಲಿ ಎಂದು ಅರ್ಥ.

॥ ಇತ್ಯಂತರಾಧಿಕರಣಮ್ ॥ ೪ ॥

* * * * *

## ೫. ಅಥ ಅಂತರ್ಯಾಮ್ಯಧಿಕರಣಮ್

**ಭಾ– 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ**

ತ ಆತ್ಮಾऽಂತರ್ಯಾಮ್ಯಮೃತಃ'(ಬೃ. ೫-೭-೩) ಇತ್ಯಾದ್ಯಂತರ್ಯಾಮ್ಯುಚ್ಯತೇ।

'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾऽಂತರ್ಯಾಮ್ಯಮೃತಃ' ಇತ್ಯಾದಿ ವಾಕ್ಯಗಳಿಂದ ಅಂತರ್ಯಾಮಿಯು ಹೇಳಲ್ಪಟ್ಟಿದ್ದಾನೆ.

(ಭಾ.ದೀ.) ಅತ್ರಾಧಿಕರಣೇ ಅಂತಃಸ್ಥತ್ವರೂಪಭಾವಸಹಿತಂ ನಿಯಮನಕ್ರಿಯಾತ್ಮಕಂ ಲಿಂಗಂ ಬ್ರಹ್ಮಣಿ ಸಮನ್ವೀಯತೇ। ವಿಷಯವಾಕ್ಯೋದಾಹರಣಪೂರ್ವಕಂ ವಿಷಯಂ ದರ್ಶಯತಿ – **ಯ ಇತಿ ॥** 'ಇತ್ಯಾದಿ' ಇತಿ ಪ್ರಥಮಾ ಸಪ್ತಮ್ಯರ್ಥೇ। ತೃತೀಯಾರ್ಥೇ ವಾ। 'ಸಪ್ತಸು ಪ್ರಥಮಾ' ಇತಿ ಸೂತ್ರಾತ್। 'ಕ್ರಿಯಾವಿಶೇಷಣಂ ವಾ' ಇತಿ **ತತ್ತ್ವಪ್ರದೀಪೋಕ್ತೇಃ**। 'ಇತ್ಯಾದಿನಾ' ಇತಿ ಪಾಠಸ್ತದ್ವಿರುದ್ಧಃ। ವಾಕ್ಯೇ ವಾಕ್ಯೇನೇತಿ ವಾ ಶೇಷಃ। 'ಯೋऽಪ್ಸು ತಿಷ್ಠನ್', 'ಯೋ ಭೂತೇಷು ತಿಷ್ಠನ್' ಇತ್ಯಾದಿಕಮಾದಿಶಬ್ದೇನ ಗೃಹ್ಯತೇ। 'ಅಂತರ್ಯಾಮೀ' ಇತ್ಯನೇನ ವಿಷಯೋ ದರ್ಶಿತಃ।

ಈ ಅಧಿಕರಣದಲ್ಲಿ ಅಂತಃಸ್ಥತ್ವವೆಂಬ ಧರ್ಮದಿಂದ ಸಹಿತವಾದ ನಿಯಮನಕ್ರಿಯಾರೂಪವಾದ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯಗೊಳಿಸಲಾಗುವುದು. ಭಾಷ್ಯದಲ್ಲಿ ಯಃ ಎಂಬ ವಾಕ್ಯದಿಂದ ವಿಷಯವಾಕ್ಯವನ್ನು ಉದಾಹರಿಸಿ ಈ ಅಧಿಕರಣದ ವಿಷಯವನ್ನು ತಿಳಿಸುತ್ತಿದ್ದಾರೆ. ಇತ್ಯಾದಿ ಎಂಬಲ್ಲಿ ಪ್ರಥಮಾವಿಭಕ್ತಿಯನ್ನು - (ಸಪ್ತಸು ಪ್ರಥಮಾ) ಪ್ರಥಮಾವಿಭಕ್ತಿಯು ಏಳು ವಿಭಕ್ತಿಗಳ ಅರ್ಥವನ್ನು ಹೇಳುವುದು ಎಂಬ ಸೂತ್ರವನ್ನು ಅನುಸರಿಸಿ - ಸಪ್ತಮೀ ಅಥವಾ ತೃತೀಯಾವಿಭಕ್ತಿಗಳ ಅರ್ಥದಲ್ಲಿ ಪ್ರಯೋಗಿಸಲಾಗಿದೆ. ಅಥವಾ ಇದು ಕ್ರಿಯಾವಿಶೇಷಣವಾಗಿದೆ ಎಂದು ತತ್ತ್ವಪ್ರದೀಪದಲ್ಲಿ ಹೇಳಿರುವುದರಿಂದ ಇತ್ಯಾದಿನಾ ಎಂಬ ಪಾಠವು ಅದಕ್ಕೆ ವಿರುದ್ಧವಾಗಿದೆ. 'ವಾಕ್ಯೇ ಅಥವಾ ವಾಕ್ಯೇನ' ಎಂಬ ಪದವು ಭಾಷ್ಯಕ್ಕೆ ಶೇಷವಾಗಿ ಸೇರುವುದು. ಇತ್ಯಾದಿ ಎಂಬಲ್ಲಿರುವ ಆದಿಶಬ್ದದಿಂದ 'ಯೋऽಪ್ಸು ತಿಷ್ಠನ್', 'ಯೋ ಭೂತೇಷು ತಿಷ್ಠನ್'

ಮೊದಲಾದ ವಾಕ್ಯಗಳು ಗ್ರಹಿಸಲ್ಪಡುವವು. ಅಂತರ್ಯಾಮೀ ಎಂಬ ಪದದಿಂದ ಈ ಅಧಿಕರಣದ ವಿಷಯವು ದರ್ಶಿತವಾಗುವುದು.

(ಭಾ.ದೀ.) ಬೃಹದಾರಣ್ಯಕೇ ಉದ್ದಾಲಕಂ ಪ್ರತಿ ಯಾಜ್ಞವಲ್ಕ್ಯೇನೋಕ್ತಮ್ ಇದಂ ವಾಕ್ಯಮ್ । 'ಯಃ ಪೃಥಿವ್ಯಾಮ್' ಪೃಥುಂ ವಿಷ್ಣುಮ್ ಊಢ್ವಾ ವಾತಿ ಗಚ್ಛತೀತಿ ಪೃಥಿವೀ ಗರುಡಃ, ತಸ್ಮಿನ್ ತಿಷ್ಠನ್ 'ಪೃಥಿವ್ಯಾಃ' ತದಭಿಮಾನಿಚೇತನಾತ್ 'ಅಂತರಃ' ವಿವಿಕ್ತಃ । 'ಯಂ ಚ ಪೃಥಿವೀ' ತದಭಿಮಾನೀ ಚೇತನೋ ನ ವೇದ ಸಾಕಲ್ಯೇನ । 'ಯಸ್ಯ ಚ ಪೃಥಿವೀ' ತದ್ವಶತ್ವನಿಮಿತ್ತಾತ್ ಶರೀರಭೂತಾ । ನ ಕೇವಲಂ ತತ್ರ ಸ್ಥಿತಿಮಾತ್ರಂ, ಕಿಂತು 'ಯೋಽಂತರಃ' ಅಂತಃಸ್ಥಿತ್ವಾ ಬಾಹ್ಯವಿಷಯಾಪೇಕ್ಷಾಂ ವಿನಾ ರಮಮಾಣಃ । ಸ್ವತೋ ನಿತ್ಯತೃಪ್ತಃ –

'......... ........ ಸೋಽಂತರಃ ಸ್ವವಶತ್ವತಃ ।
ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ ॥'

ಇತಿ **ಬೃಹದ್ಭಾಷ್ಯೋಕ್ತೇಃ** । ಯದ್ವಾ – 'ಅತಿಪ್ರಿಯತ್ವಾಚ್ಚ ಹರೇರಂತರತ್ವಮುದಾಹೃತಮ್' ಇತಿ ತತ್ರೈವೋಕ್ತೇಃ । 'ಪ್ರೇಯಃ ಪುತ್ರಾತ್' ಇತಿ ಶ್ರುತ್ಯಾ ಪರಮಪ್ರೇಯೋರೂಪತ್ವಾತ್ 'ಅಂತರಃ' ಅತಿಪ್ರಿಯಃ ಸನ್ 'ಪೃಥಿವೀಂ' ಗರುಡಂ 'ಯಮಯತಿ' ನಿಯಮಯತಿ । ಏಷಃ ತೇ- ತವ, ಅಂತರ್ಯಾಮ್ಯಾತ್ಮಾ - ನಿಯಾಮಕಃ ಪುರುಷಃ ಅಮೃತಃ - ನಿತ್ಯ ಇತಿ ಶ್ರುತ್ಯರ್ಥಃ ।

ಏತೇನ 'ಅಂತರೋ ವಿವಿಕ್ತಃ' ಇತಿ ಟೀಕಾಯಾ ಬೃಹದ್ಭಾಷ್ಯವಿರೋಧೋ ನಿರಸ್ತಃ । ಬೃಹದ್ಭಾಷ್ಯಸ್ಯ 'ಯ ಆತ್ಮಾನಮ್' ಇತ್ಯತ್ರಸ್ಥಾಂತರಶಬ್ದವಿಷಯತ್ವಾತ್ । ಅತ ಏವ ನ ಶ್ರುತೌ ಪೌನರುಕ್ತ್ಯಮ್ । ದ್ವಯೋರ್ಭಿನ್ನಾರ್ಥತ್ವಾತ್ । ಪೂರ್ವಪಕ್ಷೀ ತ್ವಿದಂ ವಾಕ್ಯಮನ್ಯಪರಂ ಮನ್ಯತೇ ।

'ಯಃ ಪೃಥಿವ್ಯಾಂ' ಎಂಬ ವಾಕ್ಯವು ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯನಿಂದ ಉದ್ದಾಲಕನನ್ನು ಕುರಿತು ಉಕ್ತವಾಗಿದೆ. ಯಃ ಪೃಥಿವ್ಯಾಂ - ಯಾರು ಪೃಥಿವಿಯಲ್ಲಿ

ಅಂದರೆ ಪೃಥುವನ್ನು - ವಿಷ್ಣುವನ್ನು, ಊಢ್ವಾ- ಹೊತ್ತುಕೊಂಡು, ವಾತಿ – ಹೋಗುವನೋ ಅವನು ಅಂದರೆ ಗರುಡನು ಪೃಥಿವೀ ಎಂದೆನಿಸುವನು. ಅವನಲ್ಲಿ ತಿಷ್ಠನ್ - ಇದ್ದು, ಪೃಥಿವ್ಯಾಃ- ಪೃಥಿವಿಗೆ ಅಭಿಮಾನಿಚೇತನನಿಗಿಂತ, ಅಂತರಃ ಭಿನ್ನನಾಗಿರುವನೋ, ಯಂ ಚ ಪೃಥಿವೀ ನ ವೇದ - ಯಾರನ್ನು ಪೃಥಿವ್ಯಭಿಮಾನಿಚೇತನನು ಸಂಪೂರ್ಣವಾಗಿ ತಿಳಿದಿಲ್ಲವೋ, ಯಸ್ಯ ಚ ಪೃಥಿವೀ ಶರೀರಂ - ಯಾರಿಗೆ ಪೃಥಿವಿಯು ಅವನಿಗೆ ವಶವಾಗಿರುವ ಕಾರಣದಿಂದ ಶರೀರವೆಂದೆನಿಸುವುದೋ ಅಲ್ಲಿ ಇರುವುದು ಮಾತ್ರವಲ್ಲ, ಕಿಂತು ಯಃ ಅಂತರಃ - ಯಾರು ಪೃಥಿವಿಯೊಳಗಿದ್ದು ಬಾಹ್ಯ ವಿಷಯಗಳನ್ನು ಅಪೇಕ್ಷಿಸದೇ ರಮಿಸುವನೋ ಅಂದರೆ ಸ್ವತಃ ನಿತ್ಯತೃಪ್ತನಾಗಿರುವನೋ ಎಂದು ಅರ್ಥ.

'......... ........ ಸೋಽಂತರಃ ಸ್ವವಶತ್ವತಃ ।
ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ ॥'

ಎಂದು ಬೃಹದಾರಣ್ಯಕಭಾಷ್ಯದಲ್ಲಿ ಹೀಗೆಯೇ ವ್ಯಾಖ್ಯಾನ ಮಾಡಲಾಗಿದೆ. ಅಥವಾ 'ಅತಿಪ್ರಿಯತ್ವಾಚ್ಚ ಹರೇಃ ಅಂತರತ್ವಮುದಾಹೃತಮ್' ಎಂದು ಅದೇ ಬೃಹದ್ಭಾಷ್ಯದಲ್ಲಿ ಹೇಳಿರುವುದರಿಂದ 'ಪ್ರೇಯಃ ಪುತ್ರಾತ್' ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವಂತೆ ಪರಮಪ್ರಿಯನಾಗಿರುವ ಕಾರಣದಿಂದ, ಅಂತರಃ – ಅತಿಪ್ರಿಯನಾಗಿದ್ದು, ಪೃಥಿವೀಂ – ಅಂದರೆ ಗರುಡನನ್ನು, ಯಮಯತಿ - ನಿಯಮಿಸುವನೋ; 'ಏಷ ತೇ ಅಂತರ್ಯಾಮ್ಯಾತ್ಮಾ ಅಮೃತಃ' 'ಇವನು ನಿನಗೆ ಅಂತರ್ಯಾಮ್ಯಾತ್ಮಾ ಅಂದರೆ ಒಳಗಿದ್ದು ನಿಯಾಮಕನಾದ ಪುರುಷನು ಅಮೃತನು ಅಂದರೆ ನಿತ್ಯನು' ಎಂದು ಶ್ರುತ್ಯರ್ಥ.

ಇದರಿಂದ 'ಅಂತರೋ ವಿವಿಕ್ತಃ' ಅಂತರ ಎಂದರೆ ಭಿನ್ನನಾಗಿರುವನು ಎಂಬ ತತ್ತ್ವಪ್ರಕಾಶಿಕಾವಾಕ್ಯಕ್ಕೆ ಬೃಹದಾರಣ್ಯಕಭಾಷ್ಯದ ವಿರೋಧವು ಪರಿಹೃತವಾಗುವುದು. ಏಕೆಂದರೆ ಬಾಹ್ಯಾಪೇಕ್ಷಾ ವಿನಾಂ ಯಸ್ತು ರಮತೇ ಸೋಽಂತರಃ ಸ್ಮೃತಃ ಎಂಬ ಬೃಹದ್ಭಾಷ್ಯವಾಕ್ಯವು 'ಯ ಆತ್ಮಾನಂ ಅಂತರೋ ಯಮಯತಿ' ಎಂಬಲ್ಲಿರುವ ಅಂತರ ಶಬ್ದಕ್ಕೆ ಸಂಬಂಧಪಟ್ಟದ್ದುದಾಗಿದೆ. ಆದ್ದರಿಂದಲೇ ಶ್ರುತಿಯಲ್ಲಿ ಪುನರುಕ್ತಿದೋಷವಿಲ್ಲ. ಏಕೆಂದರೆ ಎರಡೂ ಅಂತರ ಶಬ್ದಗಳ ಅರ್ಥವು ಭಿನ್ನವೇ ಆಗಿದೆ. ಪೂರ್ವಪಕ್ಷಿಯಾದರೋ ಈ ವಾಕ್ಯವನ್ನು ವಿಷ್ಣುಭಿನ್ನಪರವೆಂದು ತಿಳಿಯುವನು.

ಭಾ– ತತ್ರ ಚ 'ಏತದಮೃತಮ್'(ಛಾಂ.೪-೧೫.೧) ಇತ್ಯುಕ್ತಮಮೃತತ್ವ-ಮುಚ್ಯತೇ। ಸ ಚ 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿನಾ ಸರ್ವಾತ್ಮಕ-ತ್ವಾತ್ ಪ್ರಕೃತಿಸ್ತತ್ತಜ್ಜೀವೋ ವಾ ಯುಕ್ತಃ।

ಆ ವಾಕ್ಯಗಳಲ್ಲಾದರೋ ಏತದಮೃತಮ್ ಇತ್ಯಾದಿ (ಛಾಂದೋಗ್ಯ) ವಾಕ್ಯದಲ್ಲಿ ಹೇಳಲಾಗಿರುವ ಅಮೃತತ್ವವನ್ನು ಹೇಳಲಾಗಿದೆ. ಆ ಅಂತರ್ಯಾಮಿಯಾದರೋ 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿ ವಾಕ್ಯಗಳಿಂದ ಸರ್ವಸ್ವರೂಪವಾದ ಕಾರಣ ಪ್ರಕೃತಿ ಅಥವಾ ಅದಕ್ಕೆ ಅಭಿಮಾನಿಯಾದ ಜೀವನೇ ಆಗಿರುವುದು ಯುಕ್ತವಾಗಿದೆ.

(ಭಾ.ದೀ.) ಪೂರ್ವಾಧಿಕರಣತದ್ವಿಷಯವಾಕ್ಯಸಂಗತಿಂ ದರ್ಶಯತಿ – **ತತ್ರೇತಿ** ॥ ಇಯಮತ್ರ ತತ್ತ್ವಪ್ರದೀಪೋಕ್ತಾ ಯೋಜನಾ – 'ಯಃ ಪೃಥಿವ್ಯಾಂ ತಿಷ್ಠನ್' ಇತ್ಯಾದಿ-ವಾಕ್ಯೇಷ್ವಂತರ್ಯಾಮ್ಯುಚ್ಯತೇ। ತತ್ರ ಚ ತದ್ವಾಕ್ಯೇಷ್ವೇವ ತಸ್ಮಿನ್ನೇವ ಅಂತರ್ಯಾಮಿಣಿ 'ಏತದಮೃತಮೇತದಭಯಮ್' ಇತಿ ಪೂರ್ವನಯೋದಾಹೃತಛಾಂದೋಗ್ಯವಾಕ್ಯೇ-ಽಕ್ಷಿಪುರುಷಸ್ಯೋಕ್ತಮಮೃತತ್ವಮ್ 'ಏಷ ತ ಆತ್ಮಾಽಂತರ್ಯಾಮ್ಯಮೃತಃ' ಇತ್ಯನೇನ ಉಚ್ಯತ ಇತಿ।

ಅನೇನ ಬೃಹದಾರಣ್ಯಕೋಕ್ತಾಂತರ್ಯಾಮಿಣಿ ವಿಷ್ಣ್ವನ್ಯತ್ವಾಕ್ಷೇಪಮುಖೇನ ತದುಕ್ತಾಮೃತತ್ವಸ್ಯಾಪಿ ಅನ್ಯನಿಷ್ಠತ್ವಂ ಸಂಪಾದ್ಯ ತಸ್ಯ ಪೂರ್ವಾಧಿಕರಣೋಕ್ತಾಕ್ಷಿಸ್ಥತ್ವಸ್ಯ ವಿಷ್ಣುತ್ವಸಾಧಕತ್ವಾಕ್ಷೇಪಾತ್ ಪೂರ್ವೇಣಾಽಕ್ಷೇಪಿಕೀ ಸಂಗತಿರುಕ್ತಾ ಭವತಿ। ತತಃ ಕಿಮಿ-ತ್ಯತಃ ಸಯುಕ್ತಿಕಂ ಪೂರ್ವಪಕ್ಷಯತಿ – **ಸ ಚೇತಿ** ॥ ಚಶಬ್ದೋ ಹೇತುಸಮುಚ್ಚಯೇ। ಆದಿಪದೇನ 'ಯಸ್ಯಾಽಪಃ ಶರೀರಮ್' ಇತ್ಯಾದೇಃ ಸಂಗ್ರಹಃ। ತಚ್ಛಬ್ದಸ್ಯ ತತ್ತ-ಜ್ಜೀವಸ್ಯೇತಿ ಚ ವಿಪರಿಣಾಮೇನ ಹೇತುವಾಕ್ಯೇನ ಸಂಬಧ್ಯತೇ। ಆತ್ಮಶಬ್ದಃ ಸ್ವರೂಪ-ಶರೀರೋಭಯಾರ್ಥಃ। ತಥಾಚ ಸೋಽಂತರ್ಯಾಮೀ ಜಡಚೇತನೋಭಯ-ರೂಪಾ ಪ್ರಕೃತಿಃ ಪೃಥಿವ್ಯಾದಿತತ್ತಜ್ಜೀವೋ ವಾ ಯುಕ್ತಃ। ಕುತಃ? ಶ್ರೌತಶರೀರಶಬ್ದಸ್ಯ

ಇದಂ ಪೂರ್ವಪಕ್ಷಶರೀರಮ್ ಇತ್ಯಾದಾವಿವ ಸ್ವರೂಪಾರ್ಥತ್ವಾತ್ । ಜಡಪ್ರಕೃತೇಶ್ಚ ಸರ್ವೋಪಾದಾನತ್ವೇನ ಸರ್ವಾತ್ಮಕತ್ವಾತ್ । ಚಿತ್ಪ್ರಕೃತೇಶ್ಚ ಸರ್ವಾಭಿಮಾನಿತ್ವೇನ ಸರ್ವಾತ್ಮಕತ್ವಾತ್ ಪೃಥಿವ್ಯಾದಿಜೀವಸ್ಯ ಪೃಥಿವ್ಯಾದಿಸರ್ವಶರೀರತ್ವಾತ್ - ಇತಿ ಯೋಜನಾ ।

ಹಿಂದಿನ ಅಧಿಕರಣದಿಂದ ಮತ್ತು ಅದರ ವಿಷಯವಾಕ್ಯದ ಸಂಗತಿಯನ್ನು 'ತತ್ರ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಇಲ್ಲಿ ತತ್ತ್ವಪ್ರದೀಪದಲ್ಲಿ ಹೇಳಿರುವ ವಾಕ್ಯ-ಯೋಜನೆಯು ಹೀಗಿದೆ – ಯಃ ಪೃಥಿವ್ಯಾಂ ತಿಷ್ಠನ್ ಮೊದಲಾದ ವಾಕ್ಯಗಳಲ್ಲಿ ಅಂತರ್ಯಾಮಿಯು ಹೇಳಲ್ಪಟ್ಟಿದ್ದಾನೆ. ತತ್ರ ಚ ಅಂದರೆ ಆ ವಾಕ್ಯಗಳಲ್ಲೇ, ಆ ಅಂತರ್ಯಾಮಿಯಲ್ಲಿಯೇ 'ಏತದಮೃತಮ್ ಏತದಭಯಮ್' ಎಂಬ ಹಿಂದಿನ ಅಧಿಕರಣದಲ್ಲಿ ಉದಾಹರಿಸಲಾದ ಛಾಂದೋಗ್ಯವಾಕ್ಯದಲ್ಲಿ ಅಕ್ಷಿಸ್ಥಪುರುಷನಿಗೆ ಉಕ್ತ-ವಾಗಿರುವ ಅಮೃತತ್ವವು 'ಏಷ ತ ಆತ್ಮಾಽಂತರ್ಯಾಮ್ಯಮೃತಃ' ಎಂಬ ವಾಕ್ಯದಿಂದ ಹೇಳಲಾಗಿದೆ - ಎಂದು.

ಇದರಿಂದ ಬೃಹದಾರಣ್ಯಕದಲ್ಲಿ ಹೇಳಲಾದ ಅಂತರ್ಯಾಮಿಯಲ್ಲಿ ವಿಷ್ಣುಭೇದವು ಇರುವುದೆಂದು ಆಕ್ಷೇಪಿಸುವ ಮೂಲಕ ಅಲ್ಲಿ ಹೇಳಿರುವ ಅಮೃತತ್ವಕ್ಕೂ ವಿಷ್ಣುಭಿನ್ನನಲ್ಲಿ ಇರುವಿಕೆಯನ್ನು ಸಂಪಾದಿಸಿ, ತನ್ಮೂಲಕ ಹಿಂದಿನ ಅಧಿಕರಣದಲ್ಲಿ ಅಮೃತತ್ವವು ಅಕ್ಷಿಸ್ಥನಿಗೆ ಹೇಳಿದುದನ್ನು ವಿಷ್ಣುತ್ವಸಾಧಕವೆಂದು ಆಕ್ಷೇಪಿಸುವುದರಿಂದ ಹಿಂದಿನ ಅಧಿ-ಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯು ಉಕ್ತವಾಗುವುದು. ಮುಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಯುಕ್ತಿಸಹಿತವಾದ ಪೂರ್ವಪಕ್ಷವನ್ನು 'ಸ ಚ' ಎಂಬ ವಾಕ್ಯದಿಂದ ಹೇಳಲಾಗಿದೆ. ಸ ಚ ಎಂಬಲ್ಲಿರುವ ಚಕಾರವು ಹೇತುವಿನ ಸಮುಚ್ಚಯ-ವನ್ನು ಹೇಳುವುದು. ಇತ್ಯಾದಿನಾ ಎಂಬಲ್ಲಿರುವ ಆದಿಪದದಿಂದ 'ಯಸ್ಯ ಆಪಃ ಶರೀರಮ್' ಇತ್ಯಾದಿ ವಾಕ್ಯಗಳ ಸಂಗ್ರಹವಾಗುವುದು. [೧]ತಚ್ಛಬ್ದವು ವಿಭಕ್ತಿಬದ-ಲಾವಣೆಯೊಂದಿಗೆ ಹೇತುವಾಕ್ಯದೊಂದಿಗೆ ಸಂಬಂಧವನ್ನು ಪಡೆಯುತ್ತದೆ. ಸರ್ವಾ-ತ್ಮಕತ್ವಾತ್ ಎಂಬಲ್ಲಿ ಆತ್ಮಶಬ್ದವು ಸ್ವರೂಪ, ಶರೀರ ಎಂಬ ಎರಡು ಅರ್ಥಗಳನ್ನು ಹೇಳುವುದು. ತಥಾಚ – ಸಃ ಅಂತರ್ಯಾಮೀ - ಆ ಅಂತರ್ಯಾಮಿಯು, ಜಡ,

ಚೇತನ ಎಂಬ ಉಭಯರೂಪವಾದ ಪ್ರಕೃತಿಯಾಗಲೀ, ಪೃಥಿವೀ ಮೊದಲಾದವುಗಳಿಗೆ ಅಭಿಮಾನಿಯಾದ ಆಯಾಯಾ ಜೀವನಾಗಲೀ ಆಗಿರುವುದು ಯುಕ್ತವಾಗಿದೆ. ಏಕೆಂದರೆ, ಶ್ರುತಿಯಲ್ಲಿರುವ ಶರೀರಶಬ್ದವು 'ಇದಂ ಪೂರ್ವಪಕ್ಷಶರೀರಮ್' ಇತ್ಯಾದಿ ವಾಕ್ಯಗಳಲ್ಲಿ ಇರುವಂತೆ ಸ್ವರೂಪ ಎಂಬ ಅರ್ಥವನ್ನು ಹೊಂದಿದೆ. ಜಡಪ್ರಕೃತಿಯಾದರೋ ಎಲ್ಲ ಜಡಪದಾರ್ಥಗಳಿಗೂ ಉಪಾದಾನಕಾರಣವಾಗಿರುವುದರಿಂದ ಸರ್ವಾತ್ಮಕವಾಗಿದೆ. ಚಿತ್‌ಪ್ರಕೃತಿಯಾದರೋ ಎಲ್ಲ ಜಡಪದಾರ್ಥಗಳಿಗೂ ಅಭಿಮಾನಿಯಾಗಿರುವುದರಿಂದ ಸರ್ವಾತ್ಮಕವೆಂದೆನಿಸುವುದು. ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವನಾದರೋ ಪೃಥಿವೀ ಮೊದಲಾದ ಎಲ್ಲ ಜಡವಸ್ತುಗಳನ್ನು ಶರೀರವಾಗಿ ಪಡೆದಿರುವನು. ಆದ್ದರಿಂದ ಅವನೇ ಅಂತರ್ಯಾಮಿಯೆಂದು ಹೇಳುವುದು ಯುಕ್ತವೆಂದು ವಾಕ್ಯಗಳ ಯೋಜನೆ.

(೧) ಭಾಷ್ಯದೀಪಿಕೆಯಲ್ಲಿ 'ತಚ್ಛಬ್ದಃ ವಿಪರಿಣಾಮೇನ ಹೇತುವಾಕ್ಯೇನ ಸಂಬಧ್ಯತೇ' ಎಂಬ ವಾಕ್ಯವಿರಬೇಕು. ಇದರ ಅಭಿಪ್ರಾಯ ಹೀಗಿದೆ – 'ಸ ಚ ಯಸ್ಯ ಪೃಥಿವೀ ಶರೀರಮ್' ಇತ್ಯಾದಿನಾ ಸರ್ವಾತ್ಮಕತ್ವಾತ್ ಪ್ರಕೃತಿಃ ತತ್ತಜ್ಜೀವೋ ವಾ ಯುಕ್ತಃ' ಎಂಬ ಭಾಷ್ಯವಾಕ್ಯದಲ್ಲಿ 'ಸಃ' ಎಂಬ ತತ್ ಶಬ್ದವು 'ತಸ್ಯ' ಎಂಬ ವಿಭಕ್ತಿವ್ಯತ್ಯಾಸದೊಂದಿಗೆ 'ಸರ್ವಾತ್ಮಕತ್ವಾತ್' ಎಂಬ ಹೇತುವಾಕ್ಯದೊಂದಿಗೆ ಸಂಬಂಧವನ್ನು ಪಡೆಯುವುದು. ತಥಾ ಚ– ತಸ್ಯ ಅಂದರೆ ಉಪನಿಷತ್ತಿನಲ್ಲಿ ಶ್ರುತನಾಗಿರುವ ಅಂತರ್ಯಾಮಿಯು 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿ ಉಪನಿಷದ್ವಾಕ್ಯಗಳು ಹೇಳುವಂತೆ ಸರ್ವಾತ್ಮಕನಾಗಿರುವುದರಿಂದ ಪ್ರಕೃತಿ ಅಥವಾ ಪೃಥಿವ್ಯಾದಿಗಳಿಗೆ ಅಭಿಮಾನಿಯಾಗಿರುವ ಆಯಾ ಜೀವನೇ ಆಗಿರುವುದು ಯುಕ್ತ ಎಂದು ಭಾಷ್ಯವಾಕ್ಯದ ಅರ್ಥವಾಗಿದೆ.

**ಭಾ– ನ ಹಿ ವಿಷ್ಣೋಃ ಪೃಥಿವ್ಯಾದಿಶರೀರತ್ವಮಂಗೀಕ್ರಿಯತ ಇತಿ।**

ವಿಷ್ಣುವಾದರೋ ಪೃಥಿವಿ ಮೊದಲಾದವುಗಳನ್ನು ಶರೀರವಾಗಿ ಪಡೆದಿರುವನು ಎಂದು ಅಂಗೀಕರಿಸುವುದಿಲ್ಲವಷ್ಟೇ! - ಎಂದು.

(ಭಾ.ದೀ.) ನನು ಯಥಾ ಪ್ರಕೃತ್ಯಾದಿಲಿಂಗೇನ ತೇಷಾಮಂತರ್ಯಾಮಿತ್ವಂ

ತಥಾSಮೃತತ್ವಲಿಂಗೇನ ವಿಷ್ಣೋಸ್ತತ್ ಕಿಂ ನ ಸ್ಯಾತ್? ಇತ್ಯತ ಆಹ – **ನ ಹೀತಿ ॥** ಪೃಥಿವ್ಯಾದಿ ಶರೀರಂ ಯಸ್ಯ ಸ ತಥೋಕ್ತಃ, ತಸ್ಯ ಭಾವಃ ತತ್ತ್ವಂ, ತ್ವಪ್ರತ್ಯಯಾಪಾಠೇ ತು ಅನ್ವಯಃ ಋಜುರಂಗೀಕ್ರಿಯತೇ। 'ಸಿದ್ಧಾಂತಿನಾ' ಇತಿ ಶೇಷಃ। ತಸ್ಯ ಪೃಥಿವ್ಯಾದಿ-ಜಡಭಿನ್ನಚಿಚ್ಛರೀರತ್ವಾದಿತಿ ಹಿಶಬ್ದಾಭಿಪ್ರಾಯಃ । ತಥಾಚ – ಸೈದ್ಧಾಂತಿಕಲಿಂಗಾ-ಪೇಕ್ಷಯಾ ಪೂರ್ವಪಕ್ಷಲಿಂಗಸ್ಯ ನಿರವಕಾಶತಯಾ ಬಲವತ್ತ್ವಾದನೇನ ತಸ್ಯ ಬಾಧಾ-ನ್ನಾಂತರ್ಯಾಮೀ ವಿಷ್ಣುರಿತಿ ಭಾವಃ।

ಹೇಗೆ ಪ್ರಕೃತಿ ಮೊದಲಾದವುಗಳ ಲಿಂಗಗಳ ಆಧಾರದಿಂದ ಅವುಗಳೇ ಅಂತ-ರ್ಯಾಮಿಯೆಂದು ಹೇಳಲಾಗುವುದೋ, ಹಾಗೆಯೇ ಅಮೃತತ್ವ ಎಂಬ ಲಿಂಗದ ಆಧಾರದಿಂದ ವಿಷ್ಣುವಿಗೇ ಅಂತರ್ಯಾಮಿತ್ವವು ಇರುವುದೆಂದು ಏಕೆ ಹೇಳಲಾಗದು ಎಂಬ ಶಂಕೆಗೆ ಉತ್ತರವಾಗಿ 'ನ ಹಿ' ಎಂಬ ಭಾಷ್ಯವಾಕ್ಯವು ಹೊರಟಿದೆ. ಪೃಥಿವ್ಯಾದಿ-ಶರೀರತ್ವಂ ಎಂಬ ಪದಕ್ಕೆ ಪೃಥಿವ್ಯಾದಿಶರೀರಂ ಯಸ್ಯ ಸಃ ಪೃಥಿವ್ಯಾದಿ ಶರೀರಃ, ತಸ್ಯ ಭಾವಃ ಪೃಥಿವ್ಯಾದಿಶರೀರತ್ವಂ ಎಂದು ವಿಗ್ರಹಃ. ಪೃಥಿವ್ಯಾದಿಗಳು ಯಾರಿಗೆ ಶರೀರ-ವಾಗಿವೆಯೋ ಅವನು ಪೃಥಿವ್ಯಾದಿಶರೀರನು. ಪೃಥಿವೀ ಮೊದಲಾದವುಗಳನ್ನು ಶರೀರವಾಗಿ ಹೊಂದಿರುವಿಕೆ ಎಂಬ ಅವನ ಧರ್ಮವೇ ಪೃಥಿವ್ಯಾದಿಶರೀರತ್ವ ಎಂದು ಅರ್ಥ. ತ್ವಪ್ರತ್ಯಯವಿಲ್ಲದ ಪಾಠದಲ್ಲಿ ಅನ್ವಯವು ನೇರವಾಗಿರುವುದೆಂದು ಅಂಗೀಕರಿ-ಸಲಾಗುವುದು. 'ಸಿದ್ಧಾಂತಿನಃ' ಎಂಬ ಪದವು ಇಲ್ಲಿ ಶೇಷವಾಗಿದೆ. ವಿಷ್ಣುವು ಪೃಥಿವ್ಯಾದಿ ಜಡವಸ್ತುಗಳಿಂದ ಭಿನ್ನವಾದ ಚೇತನಾತ್ಮಕವಾದ ಶರೀರವನ್ನು ಹೊಂದಿರುವನು ಎಂದು ಹಿಶಬ್ದದ ಅಭಿಪ್ರಾಯ. ತಥಾಚ – ಸಿದ್ಧಾಂತಿಯು ಹೇಳುವ ಲಿಂಗಕ್ಕಿಂತಲೂ ಪೂರ್ವ-ಪಕ್ಷದ ಲಿಂಗವು ನಿರವಕಾಶವಾಗಿರುವುದರಿಂದ ಪ್ರಬಲವಾಗಿದೆ. ಆದ್ದರಿಂದ ಪೂರ್ವ-ಪಕ್ಷಿಯ ಲಿಂಗದಿಂದ ಸಿದ್ಧಾಂತಿಪಕ್ಷದ ಲಿಂಗವು ಬಾಧಿಸಲ್ಪಡುವುದರಿಂದ ಅಂತ-ರ್ಯಾಮಿಯು ವಿಷ್ಣುವಲ್ಲ ಎಂದು ಭಾವ.

ಭಾ– ಅತ ಆಹ –

**॥ ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ಓಂ॥೧೮॥**

**'ಯಂ ಪೃಥಿವೀ ನ ವೇದ' 'ಯಃ ಪೃಥಿವ್ಯಾ ಅಂತರಃ' (ಬೃ.೪-೭-೩) ಇತ್ಯಾದಿನಾ ಅಧಿದೈವಾದಿಷು ತದ್ಧರ್ಮವ್ಯಪದೇಶಾತ್ ವಿಷ್ಣುರೇವ ಅಂತರ್ಯಾಮೀ।**

ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ಎಂದು ಸೂತ್ರಕಾರರು ಹೇಳುತ್ತಿದ್ದಾರೆ. 'ಯಂ ಪೃಥಿವೀ ನ ವೇದ', 'ಯಃ ಪೃಥಿವ್ಯಾ ಅಂತರಃ' ಇತ್ಯಾದಿ ವಾಕ್ಯಗಳಿಂದ ಅಧಿದೈವ ಮೊದಲಾದ ಪ್ರಕರಣಗಳಲ್ಲಿ ವಿಷ್ಣುವಿನ ಧರ್ಮಗಳನ್ನೇ ಹೇಳಿರುವುದರಿಂದ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆ.

(ಭಾ.ದೀ.) ಸಿದ್ಧಾಂತಯತ್ ಸೂತ್ರಮವತಾರ್ಯ ವ್ಯಾಚಷ್ಟೇ – **ಅತ ಇತಿ ॥** 'ಇತ್ಯಾದಿನಾ ವಾಕ್ಯೇನ' ಇತಿ ಶೇಷಃ । ತತ್ರ ಯದ್ಯಪಿ ಸೌತ್ರವ್ಯಪದೇಶಪದೇನ ಅಭಿಪ್ರೇತಂ 'ಯಂ ಪೃಥಿವೀ ನ ವೇದ ಯಃ ಪೃಥಿವೀಮಂತರೋ ಯಮಯತಿ' ಇತಿ ವಾಕ್ಯಮೇವ ಉದಾಹರ್ತವ್ಯಮ್ । ಅತ್ರೋಕ್ತಾವಾಂತರತ್ವಸ್ಯೈವ ಸೌತ್ರಧರ್ಮಶಬ್ದಾರ್ಥತ್ವಾತ್, ನ ತು 'ಪೃಥಿವ್ಯಾಮಂತರಃ' ಇತಿ ವಾಕ್ಯಮ್ । ಅತ್ರತ್ಯಾಂತರಶಬ್ದಸ್ಯ ವಿವಿಕ್ತಾರ್ಥತ್ವೇನ ತದುಕ್ತಾರ್ಥಸ್ಯಾಹೇತುತ್ವಾತ್ । ತಥಾಚ ತದುದಾಹರಣಂ ನ ಪ್ರಕೃತೋಪಯುಕ್ತಮ್ । ತಥಾಽಪಿ ತತ್ರತ್ರೀಕತ್ವೇನೋದಾಹೃತಮ್ ಇತ್ಯದೋಷಃ । 'ಆದಿ'ಶಬ್ದೇನ ಪ್ರಕರಣತ್ರಯವಾಕ್ಯಂ ಗೃಹ್ಯತೇ । ಅಧಿದೈವಾದಿಷು ಪ್ರಕರಣೇಷು ಇತಿ ಶೇಷಃ । ಪ್ರಕರಣಂ ನಾಮ ಏಕಪ್ರಮೇಯಪ್ರತಿಪಾದಕಾನೇಕವಾಕ್ಯಾನಿ । ತತ್ರ 'ಯಃ ಪೃಥಿವ್ಯಾಂ ತಿಷ್ಠನ್' ಇತ್ಯಧಿದೈವತಪ್ರಕರಣಮ್ । 'ಯಃ ಸರ್ವೇಷು ಭೂತೇಷು ತಿಷ್ಠನ್' ಇತ್ಯಧಿಭೂತಪ್ರಕರಣಮ್ । 'ಯಃ ಪ್ರಾಣೇ ತಿಷ್ಠನ್' ಇತ್ಯಧ್ಯಾತ್ಮಪ್ರಕರಣಮ್ ।

ಸೂತ್ರೇ ಭಾಷ್ಯೇ ಚ ಅಧಿದೈವೇತ್ಯುಕ್ತ್ಯಾ ಪೃಥಿವ್ಯಾದೀನಾಂ ಜಡತ್ವೇನ ತದವಿದಿತತ್ವಂ ಸರ್ವಸ್ಯಾಪಿ ಸಂಭವತೀತಿ ಶಂಕಾ ವಾರಿತಾ । ಅತ್ರೋಕ್ತಾನಾಂ ಪೃಥಿವ್ಯಾದೀನಾಮಧಿ-

ದೈವತ್ವೇನ ಚೇತನತ್ವಾತ್ ನೋಕ್ತದೋಷಃ ಇತಿ ಭಾವಃ । 'ಪ್ರಾಣೇ' ಇತಿ ಶ್ರುತೌ ಪ್ರಾಣಶಬ್ದಃ ಪ್ರಾಣವಾಯುದೇವತಾಪರಃ ಸ್ವೈವ ಪ್ರಮೇಯದೀಪರೀತ್ಯಾ ಪ್ರಾಣೇಂದ್ರಿಯದೇವತಾ । 'ಅಧಿದೈವಾದಿಷು' ಇತ್ಯನೇಕಪ್ರಕರಣಗ್ರಹೇಣ ನ ಕೇವಲಮತ್ರ ತದ್ಧರ್ಮೋಕ್ತಿಃ, ಕಿಂತು - ಬಹುಷು ಸ್ಥಲೇಷು ಇತಿ ಸೂಚಿತಮ್ । ಅನುವೃತ್ತಸ್ಯ 'ತತ್ತು' ಇತ್ಯಸ್ಯಾರ್ಥಮಾಹ– **ವಿಷ್ಣುರೇವೇತಿ** ॥ 'ತತ್' ಇತ್ಯಸ್ಯ ನಪುಂಸಕತ್ವೇಽಪಿ ಅಂತರ್ಯಾಮೀ ಇತ್ಯುದ್ದೇಶ್ಯಸಮರ್ಪಕಸೌತ್ರಪದಾನುಸಾರೇಣ 'ವಿಷ್ಣುರೇವ' ಇತಿ ವ್ಯಾಖ್ಯಾತಮ್ ।

ಅನೇನ 'ಏಷ ತ ಆತ್ಮಾ' (ಬೃ.೫-೭-೩) ಇತ್ಯುಕ್ತೋಽಂತರ್ಯಾಮೀ ಸ ವಿಷ್ಣುರೇವ । ಕುತಃ? ಅಧಿದೈವಾದಿಷು ಪ್ರಕರಣೇಷು 'ತದ್ಧರ್ಮವ್ಯಪದೇಶಾತ್' ತಸ್ಯ ವಿಷ್ಣೋಃ ಧರ್ಮಸ್ಯ ಅವಿದಿತತ್ವಾಂತರತ್ವಾದೇಃ 'ಯಂ ಪೃಥಿವೀ ನ ವೇದ' ಇತ್ಯಾದಿನಾ ಉಕ್ತತ್ವಾದಿತಿ ಸೂತ್ರಾರ್ಥ ಉಕ್ತೋ ಭವತಿ।

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅತಃ ಎಂದು ಅವತಾರಿಕೆಯನ್ನು ಕೊಟ್ಟು, ವ್ಯಾಖ್ಯಾನ ಮಾಡುತ್ತಿದ್ದಾರೆ. ಭಾಷ್ಯದಲ್ಲಿ ಇತ್ಯಾದಿನಾ ಎಂಬ ಪದದ ನಂತರ ವಾಕ್ಯೇನ ಎಂಬ ಪದವು ಶೇಷವಾಗಿದೆ. ಯದ್ಯಪಿ ಇಲ್ಲಿ ಸೂತ್ರದಲ್ಲಿರುವ ವ್ಯಪದೇಶಪದಕ್ಕೆ ಅಭಿಪ್ರೇತವಾಗಿರುವ 'ಯಂ ಪೃಥಿವೀ ನ ವೇದ ಯಃ ಪೃಥಿವೀಮಂತರೋ ಯಮಯತಿ' ಎಂಬ ವಾಕ್ಯವನ್ನೇ ಭಾಷ್ಯದಲ್ಲಿ ಉದಾಹರಿಸಬೇಕು. ಏಕೆಂದರೆ, ಈ ವಾಕ್ಯದಲ್ಲಿ ಹೇಳಿರುವ ಅಂತರತ್ವವೇ ಸೂತ್ರದಲ್ಲಿರುವ ಧರ್ಮಶಬ್ದದ ಅರ್ಥವಾಗಿದೆ. ಹೊರತು ಪೃಥಿವ್ಯಾ ಅಂತರಃ ಎಂಬ ವಾಕ್ಯವನ್ನು ಉದಾಹರಿಸತಕ್ಕದ್ದಲ್ಲ. ಏಕೆಂದರೆ, ಅಲ್ಲಿರುವ ಅಂತರಶಬ್ದವು ಭಿನ್ನ ಎಂಬ ಅರ್ಥವನ್ನು ಹೊಂದಿರುವುದರಿಂದ ಆ ಪದವು ಹೇಳುವ ಅರ್ಥವು ಪ್ರಕೃತ ಸಿದ್ಧಾಂತಸಾಧಕವಾದ ಹೇತುವಾಗಿಲ್ಲ. ತಥಾಚ – ಯಃ ಪೃಥಿವ್ಯಾ ಅಂತರಃ ಎಂಬ ವಾಕ್ಯವನ್ನು ಭಾಷ್ಯದಲ್ಲಿ ಉದಾಹರಿಸುವುದು ಪ್ರಕೃತಕ್ಕೆ ಉಪಯುಕ್ತವಲ್ಲ. ಆದರೂ ಯಃ ಪೃಥಿವೀಮಂತರೋ ಯಮಯತಿ ಎಂಬ ವಾಕ್ಯದ ಪ್ರತೀಕವಾಗಿ ಯಃ ಪೃಥಿವ್ಯಾ ಅಂತರಃ ಎಂಬ ವಾಕ್ಯವನ್ನು ಭಾಷ್ಯದಲ್ಲಿ ಉದಾ-

ಹರಿಸಲಾಗಿದೆಯಾದ್ದರಿಂದ ದೋಷವಿಲ್ಲ. ಅಧಿದೈವಾದಿಷು ಎಂಬಲ್ಲಿರುವ ಆದಿ-ಶಬ್ದದಿಂದ ಮೂರು ಪ್ರಕರಣಗಳಲ್ಲಿರುವ ವಾಕ್ಯಗಳು ಗ್ರಹಿಸಲ್ಪಡುತ್ತವೆ. ಅಧಿ-ದೈವಾದಿಷು ಎಂಬ ಪದದ ನಂತರ 'ಪ್ರಕರಣೇಷು' ಎಂಬ ಪದವು ಶೇಷವಾಗಿದೆ. ಪ್ರಕರಣವೆಂದರೆ ಒಂದು ಪ್ರಮೇಯವನ್ನು ಪ್ರತಿಪಾದಿಸುವ ಅನೇಕವಾಕ್ಯಗಳ ಸಮು-ದಾಯವಾಗಿದೆ. ಬೃಹದಾರಣ್ಯಕದಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್' ಎಂಬ ಪ್ರಕರಣವು ಅಧಿದೈವಪ್ರಕರಣವಾಗಿದೆ. 'ಯಃ ಸರ್ವೇಷು ಭೂತೇಷು ತಿಷ್ಠನ್' ಎಂಬ ವಾಕ್ಯ-ಗಳಿಂದ ಆರಂಭವಾಗುವ ಪ್ರಕರಣವು ಅಧಿಭೂತಪ್ರಕರಣವಾಗಿದೆ. 'ಯಃ ಪ್ರಾಣೇ ತಿಷ್ಠನ್' ಇತ್ಯಾದಿ ವಾಕ್ಯಗಳು ಅಧ್ಯಾತ್ಮಪ್ರಕರಣವಾಗಿದೆ.

ಸೂತ್ರದಲ್ಲಿ ಮತ್ತು ಭಾಷ್ಯದಲ್ಲಿ 'ಅಧಿದೈವ' ಎಂದು ಹೇಳಿರುವುದರಿಂದ, ಪೃಥಿವೀ ಮೊದಲಾದ ವಸ್ತುಗಳು ಜಡವಾದದ್ದರಿಂದ ಅವುಗಳಿಂದ ಅಜ್ಞೇಯತ್ವವು ಎಲ್ಲ ವಸ್ತುಗಳಿಗೂ ಇರಲು ಸಾಧ್ಯವಿದೆ ಎಂಬ ಶಂಕೆಯ ಪರಿಹಾರವಾಗುವುದು. ಇಲ್ಲಿ ಹೇಳಿ-ರುವ ಪೃಥಿವೀ ಮೊದಲಾದವುಗಳು ಅಧಿದೈವವಾದದ್ದರಿಂದ ಚೇತನಗಳಾಗಿವೆ. ಆದ್ದರಿಂದ ಉಕ್ತದೋಷವಿಲ್ಲವೆಂದು ಭಾವ. 'ಯಃ ಪ್ರಾಣೇ' ಎಂಬ ಶ್ರುತಿಯಲ್ಲಿ ಪ್ರಾಣಶಬ್ದವು ಪ್ರಾಣವಾಯುವಿಗೆ ಅಭಿಮಾನಿಯಾದ ದೇವತಾಪರವಾಗಿದೆ. ಆ ದೇವತೆಯೇ ಪ್ರಮೇಯದೀಪಿಕಾನುಸಾರವಾಗಿ ಪ್ರಾಣೇಂದ್ರಿಯದೇವತೆಯಾಗಿದೆ. 'ಅಧಿ-ದೈವಾದಿಷು' ಎಂದು ಅನೇಕಪ್ರಕರಣಗಳನ್ನು ಗ್ರಹಿಸಿರುವುದರಿಂದ ಕೇವಲ ಒಂದು ಕಡೆಯಲ್ಲಿ ವಿಷ್ಣುಧರ್ಮವನ್ನು ಹೇಳಲಾಗಿಲ್ಲ; ಕಿಂತು ಬಹುಸ್ಥಳಗಳಲ್ಲಿ ಆ ಧರ್ಮವನ್ನು ಹೇಳಲಾಗಿದೆ ಎಂದು ಸೂಚಿತವಾಗುವುದು. ತತ್ತು ಸಮನ್ವಯಾತ್ ಎಂಬ ಸೂತ್ರದಿಂದ ಅನುವೃತ್ತಿಯನ್ನು ಹೊಂದಿರುವ 'ತತ್ತು' ಎಂಬ ಪದಗಳಿಗೆ ಭಾಷ್ಯದಲ್ಲಿ ವಿಷ್ಣುರೇವ ಎಂದು ವ್ಯಾಖ್ಯಾನ ಮಾಡಲಾಗಿದೆ. ಅನುವೃತ್ತಿಯನ್ನು ಹೊಂದಿರುವ ತಚ್ಛಬ್ದವು ನಪುಂಸಕಲಿಂಗವಾಗಿದ್ದರೂ ಅಂತರ್ಯಾಮೀ ಎಂಬ ಉದ್ದೇಶ್ಯವನ್ನು ಹೇಳುವ ಸೂತ್ರ-ದಲ್ಲಿರುವ ಪದವನ್ನು ಅನುಸರಿಸಿ ವಿಷ್ಣುರೇವ ಎಂದು ಪುಲ್ಲಿಂಗಶಬ್ದದಿಂದ ವ್ಯಾಖ್ಯಾನ ಮಾಡಲಾಗಿದೆ.

ಇದರಿಂದ– ''ಏಷ ತ ಆತ್ಮಾ ಎಂಬ ಶ್ರುತಿಯಲ್ಲಿ ಹೇಳಿರುವ ಅಂತರ್ಯಾಮಿಯು ಆ ವಿಷ್ಣುವೇ ಆಗಿದ್ದಾನೆ. ಏಕೆಂದರೆ, ಅಧಿದೈವ ಮೊದಲಾದ ಪ್ರಕರಣಗಳಲ್ಲಿ

'ತದ್ಧರ್ಮವ್ಯಪದೇಶಾತ್' ತಸ್ಯ ಆ ವಿಷ್ಣುವಿನ, ಧರ್ಮಸ್ಯ - ಅವಿದಿತತ್ವ, ಅಂತರತ್ವ ಮೊದಲಾದ ಧರ್ಮಗಳನ್ನು 'ಯಂ ಪೃಥಿವೀ ನ ವೇದ' ಇತ್ಯಾದಿ ವಾಕ್ಯಗಳಿಂದ ಹೇಳಲಾಗಿರುವುದರಿಂದ'' ಎಂದು ಸೂತ್ರಾರ್ಥವು ಉಕ್ತವಾಗುವುದು.

**ಭಾ– ಸ ಹಿ, 'ನ ತೇ ವಿಷ್ಣೋ ಜಾಯಮಾನೋ ನ ಜಾತಃ'**

**(ಋ.೭-೯೯-೨)।,**

**'ಸ ಯೋಽತೋಽಶ್ರುತೋಽಗತೋಽಮತೋಽನತೋಽದೃಷ್ಟೋಽ-ವಿಜ್ಞಾತೋಽನಾದಿಷ್ಟಃ ಸರ್ವೇಷಾಂ ಭೂತಾನಾಮಂತರಪುರುಷಃ'**

**(ಐ.ಆ. ३-२-೪)**

**ಇತ್ಯಾದಿನಾಽವಿದಿತೋಽಂತರಶ್ಚ ॥೧೮॥**

ಆ ವಿಷ್ಣುವೇ 'ನ ತೇ ವಿಷ್ಣೋ ಜಾಯಮಾನೋ ನ ಜಾತಃ', 'ಸ ಯೋಽತೋಽಶ್ರುತೋಽಗತೋಽಮತೋಽನತೋಽದೃಷ್ಟೋಽ-ವಿಜ್ಞಾತೋಽನಾದಿಷ್ಟಃ ಸರ್ವೇಷಾಂ ಭೂತಾನಾಮಂತರಪುರುಷಃ' ಇತ್ಯಾದಿ ವಾಕ್ಯಗಳಿಂದ ಅವಿದಿತನೂ ಅಂತರನೂ ಆಗಿರುವನು.

**(ಭಾ.ದೀ.)** ಅವಿದಿತತ್ವಾದೇಃ ಕುತೋ ವಿಷ್ಣುಧರ್ಮತ್ವಮ್? ಇತ್ಯತ ಆಹ – **ಸ ಹೀತಿ** ॥ 'ಸಃ' ವಿಷ್ಣುಃ ಹಿ ಯಸ್ಮಾತ್ । 'ಇತ್ಯಾದಿನಾ ವಾಕ್ಯೇನ' ಇತಿ ಶೇಷಃ । 'ಆದಿ'ಪದೇನ 'ದಿವ್ಯೋ ದೇವ ಏಕೋ ನಾರಾಯಣಃ' ಇತ್ಯುಪಕ್ರಮ್ಯ 'ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರಃ ಸಂಚರನ್ ಯಂ ಪೃಥಿವೀ ನ ವೇದ ಏಷ ಸರ್ವ-ಭೂತಾಂತರಾತ್ಮಾ ಅಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ' (ಸುಬಾಲ.೭) ಇತ್ಯುಪಸಂಹೃತ್ಯಾಧೀತಂ ಶ್ರುತ್ಯಂತರಂ ಗೃಹ್ಯತೇ ।

'ಅವಿದಿತಃ' ಸಾಕಲ್ಯೇನಾಜ್ಞಾತಃ, 'ಅಂತರಃ' ಅಂತಃಸ್ಥಿತ್ವಾ ರಮಣಕೃತ್ ಪ್ರಸಿದ್ಧ ಇತಿ ಶೇಷಃ । ಚಃ ಸಮುಚ್ಚಯೇ । 'ನ ತೇ' ಇತಿ ವಾಕ್ಯಂ ಚ ತೇ ದೇವ ಮಹಿಮ್ನಃ ಪರಮಂತಂ

**ಮಹಿಮಾನಂ ಶ್ರೋತ್ರಾದಿನಾ ನಾಽಪ ಇತಿ ಪ್ರಕೃತಾನುಗುಣ್ಯೇನ ಸರ್ವತ್ರಾಧಿಕರಣೇ ವ್ಯಾಖ್ಯಾತಮ್ । 'ಸಃ' ಇತಿ ವಾಕ್ಯಮಪಿ ತತ್ರೈವ ವ್ಯಾಕೃತಮ್ ॥**

ಅವಿದಿತತ್ವ ಮೊದಲಾದವುಗಳು ವಿಷ್ಣುಧರ್ಮವೆಂದು ಹೇಳಿರುವುದು ಯಾವ ಆಧಾರದಿಂದ ಎಂಬ ಪ್ರಶ್ನೆಗೆ ಉತ್ತರವಾಗಿ 'ಸ ಹಿ' ಎಂದು ಹೇಳಲಾಗಿದೆ. ಸಃ - ಆ ವಿಷ್ಣುವು, ಹಿ – ಯಾವ ಕಾರಣದಿಂದ. 'ಇತ್ಯಾದಿನಾ' ಎಂಬ ಪದದ ನಂತರ 'ವಾಕ್ಯೇನ' ಎಂಬ ಪದವು ಶೇಷವಾಗಿದೆ. ಆದಿಪದದಿಂದ 'ದಿವ್ಯೋ ದೇವಃ ಏಕೋ ನಾರಾಯಣಃ' ಎಂದು ಆರಂಭಿಸಿ ''ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರಃ ಸಂಚರನ್ ಯಂ ಪೃಥಿವೀ ನ ವೇದ ಏಷ ಸರ್ವಭೂತಾಂತರಾತ್ಮಾ ಅಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ' ಎಂದು ಉಪಸಂಹಾರಮಾಡಿ ಪಠಿತವಾಗಿರುವ ಇನ್ನೊಂದು ಶ್ರುತಿಯು ಗ್ರಹಿಸಲ್ಪಡುವುದು.

ವಿದಿತಃ ಎಂದರೆ ಸಾಕಲ್ಯೇನ ತಿಳಿಯಲಾಗದಿದ್ದವನು. ಅಂತರಃ - ಎಂದರೆ ಒಳಗಿದ್ದು ಕ್ರೀಡಿಸುವವನು. ಭಾಷ್ಯದಲ್ಲಿ ಅಂತರಃ ಎಂಬ ಪದದ ನಂತರ ಪ್ರಸಿದ್ಧಃ ಎಂಬ ಪದವು ಶೇಷವಾಗಿದೆ. ಅಂತರಶ್ಚ ಎಂಬಲ್ಲಿ ಚಕಾರವು ಸಮುಚ್ಚಯವನ್ನು ಹೇಳುವುದು. ಭಾಷ್ಯದಲ್ಲಿ ಉದಾಹರಿಸಲ್ಪಟ್ಟಿರುವ 'ನ ತೇ' ಎಂಬ ವಾಕ್ಯವಾದರೋ - ಹೇ ದೇವ! ತೇ ಮಹಿಮ್ನಃ ಪರಮಂತಂ - 'ನಿನ್ನ ಮಹಿಮೆಯ ಕೊನೆಯನ್ನು ಶ್ರೋತ್ರಾದಿ ಇಂದ್ರಿಯಗಳಿಂದ ಯಾರೂ ತಿಳಿದಿಲ್ಲ' ಎಂಬುದಾಗಿ ಪ್ರಸ್ತುತ ವಿಷಯಕ್ಕೆ ಅನುಗುಣವಾಗಿ ಸರ್ವತ್ರಾಧಿಕರಣದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿದೆ. ಸಃ ಯಃ ಇತ್ಯಾದಿ ವಾಕ್ಯವೂ ಕೂಡ ಅಲ್ಲಿಯೇ ವ್ಯಾಖ್ಯಾತವಾಗಿದೆ.

**॥ ಓಂ ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ಓಂ ॥ ೧೯ ॥**

ಅಂತರ್ಯಾಮಿಯು ಸ್ಮೃತ್ಯುಕ್ತವಾದ ಪ್ರಕೃತಿಯಾಗಲೀ ಶಾರೀರನಾದ ಜೀವನಾಗಲೀ ಅಲ್ಲ. ಏಕೆಂದರ ಈ ಪ್ರಕರಣದಲ್ಲಿ ಪ್ರಕೃತಿಯ ಧರ್ಮಗಳನ್ನಾಗಲೀ, ಅಥವಾ ಜೀವನ ಧರ್ಮಗಳನ್ನಾಗಲೀ ಹೇಳದೇ ಇರುವುದರಿಂದ.

**ಭಾ– ತ್ರಿಗುಣತ್ವಾದಿಪ್ರಧಾನಧರ್ಮಾನುಕ್ತೇರ್ನ ಸ್ಮೃತ್ಯುಕ್ತಂ ಪ್ರಧಾನಮ್ ಅಂತರ್ಯಾಮೀ ॥ ೧೯ ॥**

ತ್ರಿಗುಣತ್ವ ಮೊದಲಾದ ಜಡಪ್ರಕೃತಿಯ ಧರ್ಮಗಳನ್ನು ಹೇಳದೇ ಇರುವುದರಿಂದ ಅಂತರ್ಯಾಮಿಯು ಸ್ಮೃತಿಪ್ರತಿಪಾದಿತವಾದ ಪ್ರಕೃತಿಯಲ್ಲ.

(ಭಾ.ದೀ.) ಏವಂ ನಿರವಕಾಶಲಿಂಗಬಲೇನ ವಿಷ್ಣೋರಂತರ್ಯಾಮಿತ್ವಂ ಸಮರ್ಥ್ಯ ಯದುಕ್ತಂ ಪೂರ್ವಪಕ್ಷಿಣಾ ಪ್ರಕೃತ್ಯಾದೇರಂತರ್ಯಾಮಿತ್ವಂ ತತ್ ಪ್ರಕೃತಿ-ಜೀವಸಾಧಾರಣಯುಕ್ತ್ಯಾ ನಿರಾಕುರ್ವತ್ ಸೂತ್ರಮುಪನ್ಯಸ್ಯತಿ – **ನ ಚೇತಿ** ॥ ಅತ್ರ 'ಅತದ್ಧರ್ಮಾಭಿಲಾಪಾತ್' ಇತ್ಯೇತತ್ 'ಅತಚ್ಛಬ್ದಾತ್' ಇತಿವದವ್ಯಯೀಭಾವ-ಸಮಾಸರೂಪಮ್ । ಅತ ಏವ 'ಅವ್ಯಯಮ್' ಇತ್ಯಾಶಯೇನಾನಿಯಮಾಭಿ-ಪ್ರಾಯೇಣಾऽದೌ ಹೇತುವಾಕ್ಯಂ ವ್ಯಾಖ್ಯಾತಿ – **ತ್ರಿಗುಣತ್ವಾದೀತಿ** ॥ ಸತ್ತ್ವಾದಿ-ರೂಪಾಸ್ತ್ರಯೋ ಗುಣಾ ಯಸ್ಯ ಕಾರ್ಯಭೂತಾಸ್ತತ್ ತ್ರಿಗುಣಂ, ತಸ್ಯ ಭಾವಃ ತ್ರಿಗುಣತ್ವಂ, ತದಾದಿರ್ಯೇಷಾಂ ತೇ ತಥೋಕ್ತಾಃ, ಪ್ರಧಾನಸ್ಯ ಪ್ರಕೃತೇರ್ಧರ್ಮಾಃ । ತ್ರಿಗುಣತ್ವಾದಯಶ್ಚ ತೇ ಪ್ರಧಾನಧರ್ಮಾಶ್ಚ ತೇ ತಥೋಕ್ತಾಃ, ತೇಷಾಮನುಕ್ತಿ-ರುಕ್ತ್ಯಭಾವಃ, ತಸ್ಯಾ ಇತ್ಯರ್ಥಃ । ಆದಿಪದೇನೋಪಾದಾನತ್ವ-ಜಡತ್ವ-ಸಂಸಾರಿತ್ವಾ-ದೀನಾಂ ಗ್ರಹಣಮ್ । ಪ್ರಧಾನಪದಂ ಜೀವಸ್ಯಾಪ್ಯುಪಲಕ್ಷಕಮ್ । ಆದಿಶಬ್ದೋ ವಾऽತ್ರ ಸಂಯೋಜ್ಯಃ । ಸಾಧ್ಯಧರ್ಮಪ್ರತಿಯೋಗಿನಿರ್ದೇಶಾಯ ಪೂರ್ವಪಕ್ಷೇ ಯುಕ್ತಿಸೂಚನಾಯ ಚ ಪ್ರಯುಕ್ತಮ್ 'ಸ್ಮಾರ್ತಮ್' ಇತ್ಯೇತದ್ ವ್ಯಾಚಷ್ಟೇ – **ಸ್ಮೃತ್ಯುಕ್ತಮಿತಿ** ॥ ಪೃಥಿವ್ಯಾದ್ಯಾತ್ಮಕತಯಾ ಕಾಪಿಲಸ್ಮೃತಿಪ್ರತಿಪಾದಿತಮ್ ಇತ್ಯರ್ಥಃ । ಸ್ಮೃತ್ಯುಕ್ತಮೇವ ಏತತ್ ನ ಶ್ರುತ್ಯುಕ್ತಮಿತಿ ಜ್ಞಾಪನಾಯೇದಮ್ । ಪರ್ಯ-ವಸಿತಾರ್ಥಮಾಹ – **ಪ್ರಧಾನಮಿತಿ** ॥ ಜೀವಸ್ಯಾಪ್ಯುಪಲಕ್ಷಕಮಿದಮ್ । 'ಶಾರೀರಶ್ಚ' ಇತಿ ವಕ್ಷ್ಯಮಾಣಸ್ಯ ಅತ್ರಾಪ್ಯನ್ವಯೋ ದರ್ಶಿತಃ । ಅಂತರ್ಯಾಮಿಣೋऽನ್ಯರೂಪತ್ವ-ನಿಷೇಧಾಯ ಪ್ರವೃತ್ತೇ ಸೂತ್ರೇऽಪೇಕ್ಷಿತಂ ಸಾಧ್ಯಧರ್ಮಿಣಂ ದರ್ಶಯತಿ – **ಅಂತ-ರ್ಯಾಮೀತಿ** ॥ 'ಅಂತರ್ಯಾಮೀ ನ ಪ್ರಧಾನಮ್' ಇತಿ ಯೋಜನಾ ।

ಹೀಗೆ ನಿರವಕಾಶವಾದ ಲಿಂಗದಿಂದ ವಿಷ್ಣುವೇ ಅಂತರ್ಯಾಮಿಯೆಂದು ಸಮರ್ಥಿಸಿ, ಪೂರ್ವಪಕ್ಷಿಯು ಪ್ರಕೃತಿ ಮೊದಲಾದವರಿಗೆ ಅಂತರ್ಯಾಮಿತ್ವವು ಇರುವುದೆಂದು ಹೇಳಿದುದನ್ನು ಪ್ರಕೃತಿ ಮತ್ತು ಜೀವ ಇಬ್ಬರಿಗೂ ಸಮಾನವಾದ ಯುಕ್ತಿಯಿಂದ ನಿರಾಕರಿಸುವ ಸೂತ್ರವನ್ನು ನ ಚ ಎಂಬುದಾಗಿ ಭಾಷ್ಯದಲ್ಲಿ ಉಲ್ಲೇಖಿಸುತ್ತಿದ್ದಾರೆ. ಇಲ್ಲಿ **ಅತದ್ಧರ್ಮಾಭಿಲಾಪಾತ್** ಎಂಬ ಪದವು ಅತಚ್ಛಬ್ದಾತ್ ಎಂಬ ಪದದಂತೆ ಅವ್ಯಯೀಭಾವಸಮಾಸರೂಪವಾಗಿದೆ. ಆದ್ದರಿಂದಲೇ ಅವ್ಯಯವೂ ಆಗಿದೆ ಎಂಬ ಆಶಯದಿಂದ ಸೂತ್ರದಲ್ಲಿರುವ ಸಾಧ್ಯವನ್ನು ತಿಳಿಸುವ ಪದವನ್ನು ಮೊದಲು ವ್ಯಾಖ್ಯಾನ ಮಾಡಬೇಕೆಂಬ ನಿಯಮವಿಲ್ಲ ಎಂಬ ಅಭಿಪ್ರಾಯದಿಂದ ಹೇತುವನ್ನು ತಿಳಿಸುವ ವಾಕ್ಯವನ್ನು ತ್ರಿಗುಣತ್ವಾದಿ ಎಂದು ಮೊದಲು ವ್ಯಾಖ್ಯಾನ ಮಾಡುತ್ತಿದ್ದಾರೆ. ಸತ್ವ ಮೊದಲಾದ ಮೂರು ಗುಣಗಳು ಯಾವುದರ ಕಾರ್ಯಗಳಾಗಿವೆಯೋ ಅದು ತ್ರಿಗುಣವೆಂದೆನಿಸುವುದು. ಅದರ ಧರ್ಮ ತ್ರಿಗುಣತ್ವವಾಗಿದೆ. ತ್ರಿಗುಣತ್ವವೇ ಆದಿಯಾಗಿ ಉಳ್ಳವು ಯಾವುವೋ ಅವುಗಳು ತ್ರಿಗುಣತ್ವಾದಿಗಳು. ಅಂತಹ ಪ್ರಧಾನಸ್ಯ ಅಂದರೆ ಪ್ರಕೃತಿಯ ಧರ್ಮಗಳು ತ್ರಿಗುಣತ್ವಾದಿಪ್ರಧಾನಧರ್ಮಗಳು. ಅಂತಹ ಧರ್ಮಗಳ ಅನುಕ್ತಿ ಅಂದರೆ ಉಕ್ತಿಯ ಅಭಾವ. ಆ ಕಾರಣದಿಂದ ಎಂದು ಅರ್ಥ. ತ್ರಿಗುಣತ್ವಾದಿ ಎಂಬಲ್ಲಿರುವ ಆದಿಪದದಿಂದ ಉಪಾದಾನತ್ವ, ಜಡತ್ವ, ಸಂಸಾರಿತ್ವ ಮೊದಲಾದ ಧರ್ಮಗಳನ್ನು ಗ್ರಹಿಸಬೇಕು. ಭಾಷ್ಯದಲ್ಲಿರುವ ಪ್ರಧಾನಪದವು ಜೀವನನ್ನೂ ಲಕ್ಷಣಾವೃತ್ತಿಯಿಂದ ತಿಳಿಸುವುದು. ಅಥವಾ ಪ್ರಧಾನಶಬ್ದದ ನಂತರ ಆದಿ ಎಂಬ ಶಬ್ದವನ್ನು ಸಂಯೋಜಿಸಬೇಕು. ಸಾಧ್ಯವಾದ ಧರ್ಮವು ನಿಷೇಧರೂಪವಾಗಿದ್ದು ಅದರ ಪ್ರತಿಯೋಗಿಯನ್ನು ನಿರ್ದೇಶಿಸಲು ಹಾಗೂ ಪೂರ್ವಪಕ್ಷದ ಯುಕ್ತಿಯನ್ನು ಸೂಚಿಸಲು ಪ್ರಯೋಗಿಸಲಾಗಿರುವ ಸೂತ್ರದಲ್ಲಿರುವ ಸ್ಮಾರ್ತಂ ಎಂಬ ಪದವನ್ನು 'ಸ್ಮೃತ್ಯುಕ್ತಂ ಎಂಬುದಾಗಿ ವ್ಯಾಖ್ಯಾನಿಸುತ್ತಿದ್ದಾರೆ. 'ಪೃಥಿವ್ಯಾದಿಸ್ವರೂಪವೆಂದು ಕಪಿಲಮಹರ್ಷಿ ಪ್ರಣೀತವಾದ ಸಾಂಖ್ಯಸ್ಮೃತಿಯಲ್ಲಿ ಪ್ರತಿಪಾದಿತವಾಗಿರುವ' ಎಂದು ಅರ್ಥ. ಇದು ಸ್ಮೃತ್ಯುಕ್ತವೇ ಹೊರತು ಶ್ರುತ್ಯುಕ್ತವಲ್ಲ ಎಂದು ಸೂಚಿಸಲು ಈ ಪದವನ್ನು ಪ್ರಯೋಗಿಸಲಾಗಿದೆ. ಅಂತಿಮವಾಗಿ ಲಭಿಸುವ ಅರ್ಥವನ್ನು ಪ್ರಧಾನಂ ಎಂಬ ಪದದಿಂದ ಹೇಳಿದೆ. ಈ ಪದವು ಜೀವನಿಗೂ ಉಪಲಕ್ಷಕವಾಗಿದೆ. ಇದರಿಂದ ಶಾರೀರಶ್ಚ ಎಂಬ

ಮುಂದಿನ ಸೂತ್ರದಲ್ಲಿ ಬರುವ ಪದಕ್ಕೆ ಇಲ್ಲೂ ಅನ್ವಯವಿರುವುದೆಂದು ಸೂಚಿತವಾಗುವುದು. ಅಂತರ್ಯಾಮಿಯು ವಿಷ್ಣುಭಿನ್ನನು ಎಂಬುದನ್ನು ನಿಷೇಧಿಸಲು ಪ್ರವೃತ್ತವಾದ ಈ ಸೂತ್ರದಲ್ಲಿ ಅಪೇಕ್ಷಿತವಾದ ಸಾಧ್ಯದ ಧರ್ಮಿಯನ್ನು ಅಂದರೆ ಪಕ್ಷವನ್ನು ಅಂತರ್ಯಾಮಿ ಎಂಬ ಪದದಿಂದ ತಿಳಿಸುತ್ತಿದ್ದಾರೆ. 'ಅಂತರ್ಯಾಮಿಯು ಪ್ರಧಾನವಲ್ಲ' ಎಂದು ಪದಗಳ ಯೋಜನೆಯಾಗಿದೆ.

(ಭಾ.ದೀ.) 'ನ ಪ್ರಧಾನಮಂತರ್ಯಾಮೀ' ಇತ್ಯನೇನ ಸೌತ್ರಚಶಬ್ದಃ ಅಂತರ್ಯಾಮೀ ವಿಷ್ಣುರೇವ ನ ತು ಪ್ರಧಾನಮಿತಿ ತುಶಬ್ದಾರ್ಥಃ । ಸ ಚ 'ನ ಶಾರೀರಃ' ಇತ್ಯಾದಾವಿವ ಪರಪಕ್ಷನಿಷೇಧಮಾತ್ರಂ ನ ಕ್ರಿಯತೇ, ಕಿಂತು, ಸ್ವಪಕ್ಷವಿಧಿರಪೀತಿ ಪರಪಕ್ಷನಿಷೇಧಸ್ಯ ಸ್ವಪಕ್ಷವಿಧಿಪೂರ್ವಕತ್ವರೂಪವಿಶೇಷಾರ್ಥ ಇತಿ ಸೂಚಿತಂ ಭವತಿ ।

ಅನೇನಾಂತರ್ಯಾಮೀ ವಿಷ್ಣುರೇವ, ನ ತು ಸ್ಮಾರ್ತಂ ಪೃಥಿವ್ಯಾದ್ಯಾತ್ಮಕತಯಾ ಸ್ಮೃತೌ ಪ್ರತಿಪಾದಿತಂ ಪ್ರಧಾನಂ, ಶಾರೀರೋ ಜೀವಶ್ಚ । ಕುತಃ? ಅತ್ರ 'ಅತದ್ಧರ್ಮಾಭಿಲಾಪಾತ್' ತ್ರಿಗುಣತ್ವ-ಸಂಸಾರಿತ್ವಾದಿರೂಪಪ್ರಧಾನಜೀವಧರ್ಮೋಕ್ತ್ಯಭಾವಾತ್ ಇತಿ ಸೂತ್ರವೃತ್ತಿರ್ದರ್ಶಿತಾ ಭವತಿ ।

ತತ್ತ್ವಪ್ರದೀಪೇ ತು – ನಞಸ್ತದ್ವಿರುದ್ಧಾರ್ಥತ್ವಮಾಶ್ರಿತ್ಯ ಆತ್ಮತ್ವಾಮೃತತ್ವಾದೃಷ್ಟತ್ವದ್ರಷ್ಟೃತ್ವಾದ್ಯತದ್ಧರ್ಮಾಭಿಲಾಪಾಚ್ಚ ಇತಿ ಹೇತುವಾಕ್ಯಸ್ಯ ವೃತ್ತ್ಯಂತರಮಪಿ ದರ್ಶಿತಮ್ ।

ನ ಪ್ರಧಾನಮ್ ಅಂತರ್ಯಾಮೀ ಎಂಬ ಭಾಷ್ಯವಾಕ್ಯದಿಂದ– ಸೂತ್ರದಲ್ಲಿರುವ ಚಶಬ್ದವು 'ಅಂತರ್ಯಾಮೀ ವಿಷ್ಣುರೇವ ನ ತು ಪ್ರಧಾನಂ' ಎಂಬುದಾಗಿ ತುಶಬ್ದದ ಅರ್ಥವನ್ನು ಹೇಳುವುದು. ಆ ತುಶಬ್ದವಾದರೋ ನ ಶಾರೀರಃ ಇತ್ಯಾದಿ ವಾಕ್ಯಗಳಿಂದ ಮಾಡುವಂತೆ ಕೇವಲ ಪರಪಕ್ಷದ ನಿರಾಕರಣೆಯನ್ನು ಮಾಡಲಾಗುವುದಿಲ್ಲ. ಕಿಂತು ಸ್ವಪಕ್ಷಸಮರ್ಥನೆಯನ್ನೂ ಮಾಡಲಾಗುವುದು ಎಂದು ಪರಪಕ್ಷನಿರಾಕರಣೆಯು ಸ್ವಪಕ್ಷಸಮರ್ಥನಪೂರ್ವಕವಾಗಿರಬೇಕು ಎಂಬ ವಿಶೇಷರೂಪವಾದ ಅರ್ಥವುಳ್ಳದ್ದು – ಎಂದು ಸೂಚಿತವಾಗುವುದು.

ಹೀಗೆ ನಿರವಕಾಶವಾದ ಲಿಂಗದಿಂದ ವಿಷ್ಣುವೇ ಅಂತರ್ಯಾಮಿಯೆಂದು ಸಮರ್ಥಿಸಿ, ಪೂರ್ವಪಕ್ಷಿಯು ಪ್ರಕೃತಿ ಮೊದಲಾದವರಿಗೆ ಅಂತರ್ಯಾಮಿತ್ವವು ಇರುವುದೆಂದು ಹೇಳಿದುದನ್ನು ಪ್ರಕೃತಿ ಮತ್ತು ಜೀವ ಇಬ್ಬರಿಗೂ ಸಮಾನವಾದ ಯುಕ್ತಿಯಿಂದ ನಿರಾಕರಿಸುವ ಸೂತ್ರವನ್ನು ನ ಚ ಎಂಬುದಾಗಿ ಭಾಷ್ಯದಲ್ಲಿ ಉಲ್ಲೇಖಿಸುತ್ತಿದ್ದಾರೆ. ಇಲ್ಲಿ **ಅತದ್ಧರ್ಮಾಭಿಲಾಪಾತ್** ಎಂಬ ಪದವು ಅತಚ್ಛಬ್ದಾತ್ ಎಂಬ ಪದದಂತೆ ಅವ್ಯಯೀಭಾವಸಮಾಸರೂಪವಾಗಿದೆ. ಆದ್ದರಿಂದಲೇ ಅವ್ಯಯವೂ ಆಗಿದೆ ಎಂಬ ಆಶಯದಿಂದ ಸೂತ್ರದಲ್ಲಿರುವ ಸಾಧ್ಯವನ್ನು ತಿಳಿಸುವ ಪದವನ್ನು ಮೊದಲು ವ್ಯಾಖ್ಯಾನ ಮಾಡಬೇಕೆಂಬ ನಿಯಮವಿಲ್ಲ ಎಂಬ ಅಭಿಪ್ರಾಯದಿಂದ ಹೇತುವನ್ನು ತಿಳಿಸುವ ವಾಕ್ಯವನ್ನು ತ್ರಿಗುಣತ್ವಾದಿ ಎಂದು ಮೊದಲು ವ್ಯಾಖ್ಯಾನ ಮಾಡುತ್ತಿದ್ದಾರೆ. ಸತ್ವ ಮೊದಲಾದ ಮೂರು ಗುಣಗಳು ಯಾವುದರ ಕಾರ್ಯಗಳಾಗಿವೆಯೋ ಅದು ತ್ರಿಗುಣವೆಂದೆನಿಸುವುದು. ಅದರ ಧರ್ಮ ತ್ರಿಗುಣತ್ವವಾಗಿದೆ. ತ್ರಿಗುಣತ್ವವೇ ಆದಿಯಾಗಿ ಉಳ್ಳವು ಯಾವುವೋ ಅವುಗಳು ತ್ರಿಗುಣತ್ವಾದಿಗಳು. ಅಂತಹ ಪ್ರಧಾನಸ್ಯ ಅಂದರೆ ಪ್ರಕೃತಿಯ ಧರ್ಮಗಳು ತ್ರಿಗುಣತ್ವಾದಿಪ್ರಧಾನಧರ್ಮಗಳು. ಅಂತಹ ಧರ್ಮಗಳ ಅನುಕ್ತಿ ಅಂದರೆ ಉಕ್ತಿಯ ಅಭಾವ. ಆ ಕಾರಣದಿಂದ ಎಂದು ಅರ್ಥ. ತ್ರಿಗುಣತ್ವಾದಿ ಎಂಬಲ್ಲಿರುವ ಆದಿಪದದಿಂದ ಉಪಾದಾನತ್ವ, ಜಡತ್ವ, ಸಂಸಾರಿತ್ವ ಮೊದಲಾದ ಧರ್ಮಗಳನ್ನು ಗ್ರಹಿಸಬೇಕು. ಭಾಷ್ಯದಲ್ಲಿರುವ ಪ್ರಧಾನಪದವು ಜೀವನನ್ನೂ ಲಕ್ಷಣಾವೃತ್ತಿಯಿಂದ ತಿಳಿಸುವುದು. ಅಥವಾ ಪ್ರಧಾನಶಬ್ದದ ನಂತರ ಆದಿ ಎಂಬ ಶಬ್ದವನ್ನು ಸಂಯೋಜಿಸಬೇಕು. ಸಾಧ್ಯವಾದ ಧರ್ಮವು ನಿಷೇಧರೂಪವಾಗಿದ್ದು ಅದರ ಪ್ರತಿಯೋಗಿಯನ್ನು ನಿರ್ದೇಶಿಸಲು ಹಾಗೂ ಪೂರ್ವಪಕ್ಷದ ಯುಕ್ತಿಯನ್ನು ಸೂಚಿಸಲು ಪ್ರಯೋಗಿಸಲಾಗಿರುವ ಸೂತ್ರದಲ್ಲಿರುವ ಸ್ಮಾರ್ತಂ ಎಂಬ ಪದವನ್ನು 'ಸ್ಮೃತ್ಯುಕ್ತಂ ಎಂಬುದಾಗಿ ವ್ಯಾಖ್ಯಾನಿಸುತ್ತಿದ್ದಾರೆ. 'ಪೃಥಿವ್ಯಾದಿಸ್ವರೂಪವೆಂದು ಕಪಿಲಮಹರ್ಷಿ ಪ್ರಣೀತವಾದ ಸಾಂಖ್ಯಸ್ಮೃತಿಯಲ್ಲಿ ಪ್ರತಿಪಾದಿತವಾಗಿರುವ' ಎಂದು ಅರ್ಥ. ಇದು ಸ್ಮೃತ್ಯುಕ್ತವೇ ಹೊರತು ಶ್ರುತ್ಯುಕ್ತವಲ್ಲ ಎಂದು ಸೂಚಿಸಲು ಈ ಪದವನ್ನು ಪ್ರಯೋಗಿಸಲಾಗಿದೆ. ಅಂತಿಮವಾಗಿ ಲಭಿಸುವ ಅರ್ಥವನ್ನು ಪ್ರಧಾನಂ ಎಂಬ ಪದದಿಂದ ಹೇಳಿದೆ. ಈ ಪದವು ಜೀವನಿಗೂ ಉಪಲಕ್ಷಕವಾಗಿದೆ. ಇದರಿಂದ ಶಾರೀರಶ್ಚ ಎಂಬ

ಮುಂದಿನ ಸೂತ್ರದಲ್ಲಿ ಬರುವ ಪದಕ್ಕೆ ಇಲ್ಲೂ ಅನ್ವಯವಿರುವುದೆಂದು ಸೂಚಿತವಾಗುವುದು. ಅಂತರ್ಯಾಮಿಯು ವಿಷ್ಣುಭಿನ್ನನು ಎಂಬುದನ್ನು ನಿಷೇಧಿಸಲು ಪ್ರವೃತ್ತವಾದ ಈ ಸೂತ್ರದಲ್ಲಿ ಅಪೇಕ್ಷಿತವಾದ ಸಾಧ್ಯದ ಧರ್ಮಿಯನ್ನು ಅಂದರೆ ಪಕ್ಷವನ್ನು ಅಂತರ್ಯಾಮಿ ಎಂಬ ಪದದಿಂದ ತಿಳಿಸುತ್ತಿದ್ದಾರೆ. 'ಅಂತರ್ಯಾಮಿಯು ಪ್ರಧಾನವಲ್ಲ' ಎಂದು ಪದಗಳ ಯೋಜನೆಯಾಗಿದೆ.

(ಭಾ.ದೀ.) 'ನ ಪ್ರಧಾನಮಂತರ್ಯಾಮೀ' ಇತ್ಯನೇನ ಸೌತ್ರಚಶಬ್ದಃ ಅಂತರ್ಯಾಮೀ ವಿಷ್ಣುರೇವ ನ ತು ಪ್ರಧಾನಮಿತಿ ತುಶಬ್ದಾರ್ಥಃ । ಸ ಚ 'ನ ಶಾರೀರಃ' ಇತ್ಯಾದಾವಿವ ಪರಪಕ್ಷನಿಷೇಧಮಾತ್ರಂ ನ ಕ್ರಿಯತೇ, ಕಿಂತು, ಸ್ವಪಕ್ಷವಿಧಿರಪೀತಿ ಪರಪಕ್ಷನಿಷೇಧಸ್ಯ ಸ್ವಪಕ್ಷವಿಧಿಪೂರ್ವಕತ್ವರೂಪವಿಶೇಷಾರ್ಥ ಇತಿ ಸೂಚಿತಂ ಭವತಿ ।

ಅನೇನಾಂತರ್ಯಾಮೀ ವಿಷ್ಣುರೇವ, ನ ತು ಸ್ಮಾರ್ತಂ ಪೃಥಿವ್ಯಾದ್ಯಾತ್ಮಕತಯಾ ಸ್ಮೃತೌ ಪ್ರತಿಪಾದಿತಂ ಪ್ರಧಾನಂ, ಶಾರೀರೋ ಜೀವಶ್ಚ । ಕುತಃ? ಅತ್ರ 'ಅತದ್ಧರ್ಮಾಭಿಲಾಪಾತ್' ತ್ರಿಗುಣತ್ವ-ಸಂಸಾರಿತ್ವಾದಿರೂಪಪ್ರಧಾನಜೀವಧರ್ಮೋಕ್ತ್ಯಭಾವಾತ್ ಇತಿ ಸೂತ್ರವೃತ್ತಿರ್ದರ್ಶಿತಾ ಭವತಿ ।

ತತ್ತ್ವಪ್ರದೀಪೇ ತು – ನಞಸ್ತದ್ವಿರುದ್ಧಾರ್ಥತ್ವಮಾಶ್ರಿತ್ಯ ಆತ್ಮತ್ವಾಮೃತತ್ವಾದೃಷ್ಟತ್ವದ್ರಷ್ಟೃತ್ವಾದ್ಯತದ್ಧರ್ಮಾಭಿಲಾಪಾಚ್ಚ ಇತಿ ಹೇತುವಾಕ್ಯಸ್ಯ ವೃತ್ತ್ಯಂತರಮಪಿ ದರ್ಶಿತಮ್ ।

ನ ಪ್ರಧಾನಮ್ ಅಂತರ್ಯಾಮೀ ಎಂಬ ಭಾಷ್ಯವಾಕ್ಯದಿಂದ– ಸೂತ್ರದಲ್ಲಿರುವ ಚಶಬ್ದವು 'ಅಂತರ್ಯಾಮೀ ವಿಷ್ಣುರೇವ ನ ತು ಪ್ರಧಾನಂ' ಎಂಬುದಾಗಿ ತುಶಬ್ದದ ಅರ್ಥವನ್ನು ಹೇಳುವುದು. ಆ ತುಶಬ್ದವಾದರೋ ನ ಶಾರೀರಃ ಇತ್ಯಾದಿ ವಾಕ್ಯಗಳಿಂದ ಮಾಡುವಂತೆ ಕೇವಲ ಪರಪಕ್ಷದ ನಿರಾಕರಣೆಯನ್ನು ಮಾಡಲಾಗುವುದಿಲ್ಲ. ಕಿಂತು ಸ್ವಪಕ್ಷಸಮರ್ಥನೆಯನ್ನೂ ಮಾಡಲಾಗುವುದು ಎಂದು ಪರಪಕ್ಷನಿರಾಕರಣೆಯು ಸ್ವಪಕ್ಷಸಮರ್ಥನಪೂರ್ವಕವಾಗಿರಬೇಕು ಎಂಬ ವಿಶೇಷರೂಪವಾದ ಅರ್ಥವುಳ್ಳದ್ದು – ಎಂದು ಸೂಚಿತವಾಗುವುದು.

ಇದರಿಂದ ಅಂತರ್ಯಾಮಿಯು ವಿಷ್ಣುವೇ ಆಗಿರುವನು ಹೊರತು ಸ್ಮಾರ್ತಂ ಅಂದರೆ ಪೃಥಿವ್ಯಾದಿಸ್ವರೂಪವಾದದ್ದು ಎಂಬುದಾಗಿ ಸ್ಮೃತಿಯಲ್ಲಿ ಪ್ರತಿಪಾದಿತವಾಗಿರುವ ಪ್ರಕೃತಿ ಅಥವಾ ಶಾರೀರ ಅಂದರೆ ಜೀವನಲ್ಲ. ಏಕೆಂದರೆ, ಈ ಪ್ರಕರಣದಲ್ಲಿ, **ಅತದ್ಧರ್ಮಾಭಿಲಾಪಾತ್** ತ್ರಿಗುಣತ್ವ, ಸಂಸಾರಿತ್ವ ಮೊದಲಾದ ಪ್ರಕೃತಿ ಹಾಗೂ ಜೀವರ ಧರ್ಮಗಳನ್ನು ಹೇಳುವ ಶಬ್ದಗಳಿಲ್ಲದಿರುವುದರಿಂದ ಎಂದು ಸೂತ್ರದ ವ್ಯಾಖ್ಯಾನವು ದರ್ಶಿತವಾಗುವುದು.

ತತ್ವಪ್ರದೀಪದಲ್ಲಾದರೋ - ಅತದ್ಧರ್ಮಾಭಿಲಾಪಾತ್ ಎಂಬಲ್ಲಿರುವ ನಞ್‌ಗೆ ತದ್ವಿರುದ್ಧ ಎಂಬ ಅರ್ಥವನ್ನು ಆಶ್ರಯಿಸಿ, 'ಪ್ರಕೃತಿ ಮತ್ತು ಜೀವರ ಧರ್ಮಗಳಿಗೆ ವಿರುದ್ಧವಾದ ಆತ್ಮತ್ವ, ಅಮೃತತ್ವ, ಅದೃಷ್ಟತ್ವ, ದ್ರಷ್ಟೃತ್ವ ಮೊದಲಾದ ಧರ್ಮಗಳನ್ನು ಹೇಳಿರುವುದರಿಂದ' ಎಂಬುದಾಗಿ ಸೂತ್ರದ ಹೇತುವಾಕ್ಯಕ್ಕೆ ಮತ್ತೊಂದು ವ್ಯಾಖ್ಯಾನ-ವನ್ನೂ ತೋರಿಸಲಾಗಿದೆ.

**ಸೂ– ॥ ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ ॥**

ಯಾವ ಕಾರಣದಿಂದಾಗಿ ಕಾಣ್ವ, ಮಾಧ್ಯಂದಿನ ಎಂಬ ಎರಡೂ ವೇದಶಾಖಿಗಳು ಜೀವನನ್ನು ಅಂತರ್ಯಾಮಿಯಿಂದ ಭಿನ್ನನಾದವ-ನೆಂದು ಅಧ್ಯಯನ ಮಾಡುವರೋ ಆದ್ದರಿಂದ ಅಂತರ್ಯಾಮಿ-ಯಾದವನು ಶಾರೀರನಲ್ಲ.

**ಭಾ– 'ಯ ಆತ್ಮನಿ ತಿಷ್ಠನ್ನಾತ್ಮನೋಽಂತರೋ ಯಮಾತ್ಮಾ ನ ವೇದ ಯಸ್ಯಾಽತ್ಮಾ ಶರೀರಂ ಯ ಆತ್ಮಾನಮಂತರೋ ಯಮಯತ್ಯೇಷ ತ ಆತ್ಮಾಽಂತರ್ಯಾಮ್ಯಮೃತಃ'** (ಬೃಹದಾರಣ್ಯಕಮಾಧ್ಯಂದಿನಪಾಠ)

**'ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ ಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಂ ಶರೀರಮ್'** (ಬೃ. ೫-೭-೨೨) **ಇತ್ಯುಭಯೇಽಪಿ ಹಿ ಶಾಖಿನೋ ಭೇದೇನೈನಂ ಜೀವಮಧೀಯತೇ।**

ಅಂತರ್ಯಾಮಿಯಾದವನು ಶಾರೀರನಲ್ಲ. ಏಕೆಂದರೆ,

'ಯ ಆತ್ಮನಿ ತಿಷ್ಠನ್ನಾತ್ಮನೋಽಂತರೋ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋ ಯಮಯತ್ಯೇಷ ತ ಆತ್ಮಾಽಂತರ್ಯಾಮ್ಯಮೃತಃ', 'ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ ಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಂ ಶರೀರಮ್' ಎಂಬುದಾಗಿ ಎರಡೂ ಶಾಖೆಯವರು ಪರಮಾತ್ಮನಿಂದ ಭಿನ್ನನೆಂದು ಈ ಜೀವನನ್ನು ಅಧ್ಯಯನ ಮಾಡುವರು.

(ಭಾ.ದೀ.) ಯತ್ 'ಜೀವೋಽಂತರ್ಯಾಮೀ' ಇತ್ಯುಕ್ತಮ್ ತತ್ಸಾಧಕಾಭಾವೇನ ನಿರಸ್ತಮಪಿ ಪುನರ್ಬಾಧಕಾಖ್ಯವಿಶೇಷಯುಕ್ತ್ಯಾ ನಿರಾಕುರ್ವತ್ ಸೂತ್ರಮುಪನ್ಯಸ್ಯ ವ್ಯಾಚಷ್ಟೇ – **ಶಾರೀರ ಇತಿ ॥** 'ಇತ್ಯಧೀಯತೇ' ಇತ್ಯನ್ವಯಃ । 'ಉಭಯೇ' ಇತ್ಯಸ್ಯ ವಿಶೇಷ್ಯಪದಂ ದರ್ಶಯತಿ – **ಶಾಖಿನ ಇತಿ ॥** 'ಕಾಣ್ವಾಃ ಮಾಧ್ಯಂದಿನಾಃ' ಇತ್ಯರ್ಥಃ । 'ಆತ್ಮನೋಽಂತರಃ' ಇತಿ ಮಾಧ್ಯಂದಿನಾಃ, 'ವಿಜ್ಞಾನಾದಂತರಃ' ಇತಿ ಕಾಣ್ವಾಃ । ಅಪಿಶಬ್ದಃ ಶಾಖಿಸಮುಚ್ಚಯೇ । 'ಅಂತರ್ಯಾಮಿಣಃ' ಇತಿ ವಿಪರಿಣತಮತ್ರ ಅನುವರ್ತತೇ । 'ಏನಮ್' ಇತ್ಯನೂದ್ಯ, 'ಜೀವಮ್' ಇತಿ ವ್ಯಾಖ್ಯಾತಮ್ । ಅತೋ ನ ಶಾರೀರಶ್ಚಾಂತರ್ಯಾಮೀತಿ ಚ ಶೇಷಃ । ತೇನ ಸೌತ್ರಚಶಬ್ದೋ ನಞಃ ಸಮಾಕರ್ಷಕಃ ನ ಕೇವಲಂ ನ ಸ್ಮಾರ್ತಂ, ಕಿಂತು ಶಾರೀರಶ್ಚೇತಿ ಸಮುಚ್ಚಯೇಽಪಿ ಇತ್ಯುಕ್ತಂ ಭವತಿ ।

**ತತ್ತ್ವಪ್ರದೀಪೇ ತು**– ಚಿತ್ರಕೃತೇರಪ್ಯತ್ರ ಪೂರ್ವಪಕ್ಷವಿಷಯತಾಮಾಶ್ರಿತ್ಯ ಶ್ರೀಭೂದುರ್ಗಾರೂಪಾಯಾಃ ತಸ್ಯಾಃ 'ಯಸ್ತೇಜಸಿ ತಿಷ್ಠನ್' (ಬೃ.೫-೭-೧೪), 'ಯಸ್ತಮಸಿ ತಿಷ್ಠನ್'(ಬೃ.೫-೭-೧೩) ಇತ್ಯಾದ್ಯಂತರ್ಯಾಮಿಣಃ ಸಕಾಶಾದ್ ಭೇದೇನಾಧ್ಯಯನಾತ್ ನ ಸಾಽಪ್ಯಂತರ್ಯಾಮೀತಿ ಸಮುಚ್ಚಯಾರ್ಥಶ್ಚಶಬ್ದಃ – ಇತ್ಯುಕ್ತಮ್ ।

ಅಂತರ್ಯಾಮಿಯು ಜೀವನೆಂದು ಮಾಡಲಾದ ಪೂರ್ವಪಕ್ಷವು ಸಾಧಕಪ್ರಮಾಣವಿಲ್ಲದ್ದರಿಂದ ನಿರಾಕೃತವಾಗಿದ್ದರೂ ಅದನ್ನು ಬಾಧಕವೆಂಬ ವಿಶೇಷಯುಕ್ತಿ-

ಯಿಂದ ಪುನಃ ನಿರಾಕರಿಸುವ ಸೂತ್ರವನ್ನು ಶಾರೀರ ಎಂಬುದಾಗಿ ಉಲ್ಲೇಖಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಭಾಷ್ಯದಲ್ಲಿ 'ಇತಿ ಅಧೀಯತೇ' ಎಂದು ಅನ್ವಯ. ಉಭಯೇ ಎಂಬ ವಿಶೇಷಣವಾಚಕಪದಕ್ಕೆ ವಿಶೇಷ್ಯವಾಚಕಪದವನ್ನು ಶಾಖಿನಃ ಎಂದು ತೋರಿಸುತ್ತಿದ್ದಾರೆ. 'ಕಾಣ್ವರು ಮತ್ತು ಮಾಧ್ಯಂದಿನರು' ಎಂದು ಅರ್ಥ. ಆತ್ಮನೋ-ಽಂತರಃ ಎಂಬುದಾಗಿ ಮಾಧ್ಯಂದಿನರು, ವಿಜ್ಞಾನಾದಂತರಃ ಎಂದು ಕಾಣ್ವರು ಹೇಳುವರು. ಅಪಿಶಬ್ದವು ಶಾಖಿಗಳ ಸಮುಚ್ಚಯವನ್ನು ಹೇಳುವುದು. ಹಿಂದೆ ಸೂತ್ರ-ದಲ್ಲಿ ಬಂದಿರುವ ಅಂತರ್ಯಾಮಿಪದವು ಅಂತರ್ಯಾಮಿಣಃ ಎಂದು ವಿಭಕ್ತಿ-ಬದಲಾವಣೆಯೊಂದಿಗೆ ಇಲ್ಲಿ ಅನುವೃತ್ತಿಯನ್ನು ಪಡೆಯುವುದು. ಸೂತ್ರದಲ್ಲಿರುವ 'ಏನಮ್' ಎಂಬ ಪದವನ್ನು ಅನುವಾದ ಮಾಡಿ ಭಾಷ್ಯದಲ್ಲಿ 'ಜೀವಮ್' ಎಂದು ವ್ಯಾಖ್ಯಾನ ಮಾಡಲಾಗಿದೆ. 'ಅತೋ ನ ಶಾರೀರಶ್ಚ ಅಂತರ್ಯಾಮೀ' ಎಂಬ ವಾಕ್ಯವು ಇಲ್ಲಿ ಶೇಷವಾಗಿದೆ. ಆದರಿಂದ ಸೂತ್ರದಲ್ಲಿರುವ ಚಶಬ್ದವು ಹಿಂದಿನ ಸೂತ್ರದಿಂದ ನಞ್ ಪದದ ಸಂಯೋಜನೆಯನ್ನು ಸೂಚಿಸುವುದು ಹಾಗೂ 'ಸ್ಮೃತ್ಯುಕ್ತವಾದ ಪ್ರಧಾನ ಮಾತ್ರವಲ್ಲ; ಕಿಂತು ಶಾರೀರನೂ' ಎಂಬುದಾಗಿ ಸಮುಚ್ಚಯವನ್ನು ಹೇಳುವುದೆಂದು ಸೂಚಿತವಾಗುವುದು.

ತತ್ವಪ್ರದೀಪದಲ್ಲಾದರೋ – ಚೇತನಪ್ರಕೃತಿಯೂ ಇಲ್ಲಿ ಪೂರ್ವಪಕ್ಷದ ವಿಷಯ-ವಾಗಿರುವುದೆಂಬುದನ್ನು ಆಶ್ರಯಿಸಿ, ಶ್ರೀಭೂದುರ್ಗಾರೂಪಿಯಾದ ಆ ಚೇತನ-ಪ್ರಕೃತಿಯನ್ನು 'ಯಸ್ತೇಜಸಿ ತಿಷ್ಠನ್' 'ಯಃ ತಮಸಿ ತಿಷ್ಠನ್' ಇತ್ಯಾದಿಯಾಗಿ ಅಂತ-ರ್ಯಾಮಿಯ ದೆಸೆಯಿಂದ ಭಿನ್ನಳೆಂದು ಹೇಳಿರುವುದರಿಂದ ಆ ಚೇತನಪ್ರಕೃತಿಯೂ ಅಂತರ್ಯಾಮಿಯಲ್ಲ ಎಂಬ ಸಮುಚ್ಚಯರೂಪವಾದ ಅರ್ಥವನ್ನು ಚಶಬ್ದವು ಹೇಳು-ವುದು ಎಂದು ಹೇಳಲಾಗಿದೆ.

(ಭಾ.ದೀ.) ಅನೇನ 'ಹಿ' ಯಸ್ಮಾತ್ 'ಉಭಯೇಽಪಿ' ಶಾಖಿನಃ 'ಏನಮ್' ಜೀವಮಂತರ್ಯಾಮಿಣಃ ಸಕಾಶಾದ್ ಭೇದೇನ 'ಅಧೀಯತೇ' ಆಮನಂತಿ ತಸ್ಮಾದ್ ಬಾಧಕಾನ್ನ ಅಂತರ್ಯಾಮೀ ಶಾರೀರಃ ಶರೀರಾಭಿಮಾನೀ ಜೀವ ಇತಿ ಸೂತ್ರಾರ್ಥ ಉಕ್ತೋ ಭವತಿ।

ಶ್ರುತೌ 'ಯಃ ಪೃಥಿವ್ಯಾಃ' ಇತಿ ವಾಕ್ಯಸ್ಯಾಽದಿತ್ವೇಽಪಿ ತದ್ ವಿಹಾಯ ಆತ್ಮ-ವಿಜ್ಞಾನವಾಕ್ಯಯೋಶ್ಚೇತನಪರತ್ವೇನೋಭಯಸಮ್ಮತತ್ವಾತ್ ಐಕಾರ್ಥ್ಯಾಚ್ಚ ತೇ ಏವಾ-ತ್ರೋಭಯಕರ್ತೃಕಭೇದಾಧ್ಯಯನತಯಾ ಉದಾಹೃತೇ । ಆತ್ಮನಃ ಜೀವಾತ್ ಅಂತರಃ ವಿವಿಕ್ತಃ । ಏವಂ ವಿಜ್ಞಾನಶಬ್ದೋಽಪಿ 'ಯ ಆತ್ಮನಿ' ಇತಿ ಶ್ರುತಿಸಮಾಖ್ಯಾನಾತ್ ಜೀವ-ಸಾಮಾನ್ಯಪರಃ ।

ಯದ್ಯಪಿ ಬೃಹದ್ಭಾಷ್ಯೇ – ಆತ್ಮಾದಿಶಬ್ದಸ್ಯ ಚತುರ್ಮುಖಾಖ್ಯಜೀವಪರತಯಾ ವ್ಯಾಖ್ಯಾತತ್ವಾತ್ ಇದಂ ಸೂತ್ರಂ ಜೀವವಿಶೇಷಸ್ಯ ಯೋಗಿನೋಽಂತರ್ಯಾಮಿತ್ವ-ನಿರಾಸಕಮಿತಿ । ಅತ ಏವ **ತತ್ತ್ವಪ್ರದೀಪೇ** 'ಯೋಗಿನೋಽಂತರ್ಯಾಮಿತ್ವಂ ನಿರಾಕರೋತಿ' ಇತ್ಯುಕ್ತಮ್ । ತಥಾಽಪಿ – ಯದಾ ಸರ್ವಜೀವಾಭಿಮಾನಿಚತು-ರ್ಮುಖಾದಪಿ ತನ್ನಿಯಾಮಕತ್ವಾದಿನಾ ಭಿನ್ನೋಽಂತರ್ಯಾಮೀ ತದಾ ಕಿಮು ತದಭಿಮನ್ಯಮಾನಸರ್ವಜೀವಾತ್ ಇತಿ ಕೈಮುತ್ಯದ್ಯೋತನಾಯ ತತ್ರ ತಥೋಕ್ತಿಃ - ಇತಿ **ಚಂದ್ರಿಕಾಯಾಮ್** ಉಕ್ತತ್ವಾತ್ ಜೀವಸಾಮಾನ್ಯಾಂತರ್ಯಾಮಿತ್ವನಿಷೇಧಪರ-ತಯಾ ಪ್ರವೃತ್ತಾಯಾ ಏತತ್ಸೂತ್ರಟೀಕಾಯಾಃ ಬೃಹದ್ಭಾಷ್ಯತತ್ತ್ವಪ್ರದೀಪವಿರೋಧಃ ।

ಇದರಿಂದ ಹಿ - ಯಾವ ಕಾರಣದಿಂದ, ಉಭಯೇಽಪಿ - ಇಬ್ಬರೂ ವೇದ-ಶಾಖಿಗಳು, ಏನಮ್ - ಈ ಜೀವನನ್ನು ಅಂತರ್ಯಾಮಿಯ ದೆಸೆಯಿಂದ, ಭೇದೇನ ಅಧೀಯತೇ - ಭಿನ್ನನೆಂದು ಅಧ್ಯಯನ ಮಾಡುವರೋ ಆ ಬಾಧಕದಿಂದಾಗಿ ಅಂತ-ರ್ಯಾಮಿಯು, ನ ಶಾರೀರಃ - ಶರೀರಾಭಿಮಾನಿಯಾದ ಜೀವನಲ್ಲ ಎಂಬುದಾಗಿ ಸೂತ್ರಾರ್ಥವು ಉಕ್ತವಾಗುವುದು.

ಶ್ರುತಿಯಲ್ಲಿ 'ಯಃ ಪೃಥಿವ್ಯಾಃ' ಎಂಬ ವಾಕ್ಯವು ಆದಿಯಲ್ಲಿದ್ದರೂ ಅದನ್ನು ಬಿಟ್ಟು, ಆತ್ಮವಿಜ್ಞಾನವಾಕ್ಯಗಳು ಚೇತನಪರವೆಂದು ಪೂರ್ವಪಕ್ಷಿ ಮತ್ತು ಸಿದ್ಧಾಂತಿ ಇಬ್ಬರಿಗೂ ಸಮ್ಮತವಾದದ್ದರಿಂದ ಮತ್ತು ಎರಡು ವಾಕ್ಯಗಳು ಸಮಾನಾರ್ಥಕವಾಗಿರುವುದರಿಂದ ಆ ಎರಡು ವಾಕ್ಯಗಳೇ ಇಬ್ಬರೂ ವೇದಶಾಖಿಗಳು ಮಾಡುವ ಭೇದಾಧ್ಯಯನವೆಂದು ಉದಾಹರಿಸಲ್ಪಟ್ಟಿವೆ. ಆತ್ಮನಃ- ಜೀವನ ದೆಸೆಯಿಂದ, ಅಂತರಃ- ಭಿನ್ನನಾಗಿದ್ದಾನೆ.

ಹೀಗೆಯೇ ವಿಜ್ಞಾನಶಬ್ದವೂ ಕೂಡ ಯ ಆತ್ಮನಿ ಎಂಬ ಶ್ರುತಿಯ ಸಮಾಖ್ಯೆ ಇರುವುದರಿಂದಾಗಿ ಜೀವಸಾಮಾನ್ಯವನ್ನು ಹೇಳುವ ಶಬ್ದವಾಗಿದೆ.

ಯದ್ಯಪಿ - ಬೃಹದಾರಣ್ಯಕಭಾಷ್ಯದಲ್ಲಿ ಆತ್ಮ ಮೊದಲಾದ ಶಬ್ದಗಳು ಚತುರ್ಮುಖನೆಂಬ ಜೀವಪರವಾಗಿರುವುದೆಂದು ವ್ಯಾಖ್ಯಾನಿಸಲ್ಪಟ್ಟಿರುವುದರಿಂದ ಜೀವವಿಶೇಷನಾದ ಯೋಗಿಗೆ ಅಂತರ್ಯಾಮಿತ್ವವನ್ನು ಈ ಸೂತ್ರವು ನಿರಾಕರಣೆ ಮಾಡುವುದೆಂದು ಹೇಳಿದೆ. ಆದ್ದರಿಂದಲೇ ತತ್ವಪ್ರದೀಪದಲ್ಲಿ ಯೋಗಿಗೆ ಅಂತರ್ಯಾಮಿತ್ವವನ್ನು ಈ ಸೂತ್ರವು ನಿರಾಕರಿಸುವುದೆಂದು ಹೇಳಿದೆ. ಆದರೂ ಯಾವಾಗ ಸರ್ವಜೀವರಿಗೆ ಅಭಿಮಾನಿಯಾದ ಚತುರ್ಮುಖನ ದೆಸೆಯಿಂದಲೂ ಅವನಿಗೆ ನಿಯಾಮಕನಾಗಿರುವುದೇ ಮೊದಲಾದ ಕಾರಣಗಳಿಂದ ಅಂತರ್ಯಾಮಿಯು ಭಿನ್ನನಾಗಿರುವನೋ ಆಗ ಆ ಚತುರ್ಮುಖನಿಂದ ಅಭಿಮನ್ಯಮಾನರಾದ ಎಲ್ಲ ಜೀವರಿಂದಲೂ ಆ ಅಂತರ್ಯಾಮಿಯು ಭಿನ್ನನೆಂದು ಹೇಳುವುದೇನು? ಎಂದು ಕೈಮುತ್ಯವನ್ನು ಸೂಚಿಸಲು ಅಲ್ಲಿ ಹಾಗೆ ಹೇಳಲಾಗಿದೆ - ಎಂದು ಚಂದ್ರಿಕೆಯಲ್ಲಿ ಹೇಳಿರುವುದರಿಂದ ಜೀವಸಾಮಾನ್ಯಕ್ಕೆ ಅಂತರ್ಯಾಮಿತ್ವವನ್ನು ನಿಷೇಧಿಸುವ ಅಭಿಪ್ರಾಯವುಳ್ಳದ್ದೆಂದು ಪ್ರವೃತ್ತವಾಗಿರುವ ಈ ಸೂತ್ರಕ್ಕೆ ಸಂಬಂಧಿಸಿದ ಟೀಕೆಗೆ ಬೃಹದಾರಣ್ಯಕಭಾಷ್ಯ-ತತ್ವಪ್ರದೀಪಗಳ ವಿರೋಧವಿಲ್ಲ.

**ಭಾ– 'ಶೀರ್ಯತೇ ನಿತ್ಯಮೇವಾಸ್ಮಾದ್ವಿಷ್ಣೋಸ್ತು ಜಗದೀದೃಶಮ್।**
**ರಮತೇ ಚ ಪರೋ ಹ್ಯಸ್ಮಿನ್ ಶರೀರಂ ತಸ್ಯ ತಜ್ಜಗತ್' ॥**
**– ಇತಿ ವಚನಾನ್ನ ಶರೀರತ್ವವಿರೋಧಃ ॥ ೨೦ ॥**

ಯಾವ ಕಾರಣದಿಂದಾಗಿ ಈಗಿರುವ ಜಗತ್ತಿಗೆ ಸದೃಶವಾದ ಜಗತ್ತು ಈ ವಿಷ್ಣುವಿನಿಂದಲೇ ಪ್ರತಿಕಲ್ಪದಲ್ಲೂ ನಿಯಮೇನ ನಾಶಹೊಂದುತ್ತದೋ ಮತ್ತು ಯಾವ ಕಾರಣದಿಂದಾಗಿ ಪರಮಾತ್ಮನು ಈ ಜಗತ್ತಿನಲ್ಲಿದ್ದು ರಮಿಸುವನೋ ಆ ಕಾರಣದಿಂದಲೇ ಆ ವಿಷ್ಣುವಿಗೆ ಈ ಜಗತ್ತು ಶರೀರವೆಂದೆನಿಸುವುದು - ಎಂಬ ವಚನದಿಂದ ಪೃಥಿವ್ಯಾದಿ-

ಗಳನ್ನು ಶರೀರವಾಗಿ ಹೊಂದಿರುವುದು ವಿಷ್ಣುವೇ ಅಂತರ್ಯಾಮಿ ಎನ್ನಲು ವಿರೋಧಿಯಾಗುವುದಿಲ್ಲ.

(ಭಾ.ದೀ.) ನನು ನ ವಿಷ್ಣೋರಂತರ್ಯಾಮಿತ್ವಂ ಯುಕ್ತಮ್ । ಪೃಥಿವ್ಯಾದಿ-ಶರೀರತ್ವಸ್ಯ ಪ್ರಧಾನಧರ್ಮಸ್ಯಾತ್ರೋಕ್ತೇಃ, ತಸ್ಯ ವಿಷ್ಣೌ ಅಸಂಭವಾತ್ ಕಥಂ ಪ್ರಧಾನ-ಧರ್ಮಾನುಕ್ತಿಃ? ಪೃಥಿವ್ಯಾದಿಶರೀರತ್ವಸ್ಯೈವ ತದ್ಧರ್ಮತ್ವಾತ್ ಇತ್ಯತ ಆಹ- **ಶೀರ್ಯತೇ ಇತಿ** ॥ 'ತು'ಶಬ್ದೋಽವಧಾರಣೇ । ತಥಾಚ ಹಿ - ಯಸ್ಮಾತ್ 'ಈದೃಶಂ' ವರ್ತ-ಮಾನಜಗತ್ಸದೃಶಂ ಕಾಲತ್ರಯಾಬಾಧ್ಯಂ ವಾ 'ಜಗತ್' ಪೃಥಿವ್ಯಾದಿ ಅಸ್ಮಾದ್ ವಿಷ್ಣೋ-ರೇವ 'ನಿತ್ಯಂ' ನಿಯತಂ ಪ್ರತಿಕಲ್ಪಂ 'ಶೀರ್ಯತೇ' ನಶ್ಯತಿ, ಆತ್ಮಾದಿಚೇತನಾನಾಮಪಿ ದೇಹದ್ವಾರಾ ಶೀರ್ಯತಾ ಅಸ್ತ್ಯೇವ, ಯಸ್ಮಾಚ್ಚ 'ಪರಃ' ಪರಮಾತ್ಮಾ 'ಅಸ್ಮಿನ್' ಜಗತಿ ಸ್ಥಿತಃ ಸನ್ ರಮತೇ 'ತತ್' ತಸ್ಮಾದೇವ 'ತಸ್ಯ' ವಿಷ್ಣೋಃ 'ಜಗತ್' ಪೃಥಿವ್ಯಾದಿಕಂ ಶರೀರಮುಚ್ಯತೇ, ನ ರೂಢ್ಯಾ ಇತ್ಯರ್ಥಃ।

**ನ ಶರೀರತ್ವವಿರೋಧ ಇತಿ** ॥ ನ ಪೃಥಿವ್ಯಾದಿಶರೀರತ್ವವಿರೋಧ ಇತ್ಯರ್ಥಃ । 'ವಿಷ್ಣ್ವಂತರ್ಯಾಮಿತಾಯಾ ಅತದ್ಧರ್ಮಾಭಿಲಾಪೋಕ್ತೇರ್ವಾ' ಇತಿ ಶೇಷಃ। ವಿಷ್ಣೋಃ ಪೃಥಿವ್ಯಾದ್ಯಾತ್ಮಕತ್ವ-ತಚ್ಛರೀರತ್ವಾಭ್ಯಾಂ ಪೃಥಿವ್ಯಾದಿಶರೀರತ್ವಾನುಪಪತ್ತಾವಪಿ ಶರೀರ-ಶಬ್ದಸ್ಯ ಪೃಥಿವ್ಯಾದಿಷು ಯೋಗವೃತ್ತಿಮಾಶ್ರಿತ್ಯ ತಸ್ಮಿನ್ ಪೃಥಿವ್ಯಾದಿಶರೀರತ್ವವ್ಯಪ-ದೇಶೋಪಪತ್ತೇಃ ಇತರತ್ರ ತದನುಪಪತ್ತೇಃ - ಇತಿ ಭಾವಃ।

ವಿಷ್ಣುವೇ ಅಂತರ್ಯಾಮಿಯೆಂದು ಶ್ರುತ್ಯುಕ್ತನೆಂದು ಹೇಳುವುದು ಯುಕ್ತವಲ್ಲ. ಏಕೆಂದರೆ ಜಡಪ್ರಕೃತಿಯ ಧರ್ಮವಾದ ಪೃಥಿವ್ಯಾದಿಶರೀರತ್ವವನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ. ಆ ಧರ್ಮವು ವಿಷ್ಣುವಿನಲ್ಲಿ ಇರಲು ಸಾಧ್ಯವಿಲ್ಲದಿರುವುದರಿಂದ ಇಲ್ಲಿ ಜಡಪ್ರಕೃತಿಯ ಧರ್ಮವನ್ನು ಹೇಳಲಾಗಿಲ್ಲ ಎನ್ನುವುದು ಹೇಗೆ? ಏಕೆಂದರೆ ಪೃಥಿವ್ಯಾದಿ-ಶರೀರತ್ವವೇ ಪ್ರಧಾನದ ಧರ್ಮವಾಗಿದೆ ಎಂಬ ಶಂಕೆಗೆ ಉತ್ತರವಾಗಿ ಶೀರ್ಯತೇ ಎಂದು ಹೇಳಲಾಗಿದೆ. ಈ ಪ್ರಮಾಣವಚನದಲ್ಲಿರುವ ತುಶಬ್ದವು ಅವಧಾರಣವನ್ನು ಹೇಳುವುದು. ತಥಾಚ - ಹಿ - ಯಾವಕಾರಣದಿಂದ, ಈದೃಶಂ - ವರ್ತಮಾನವಾದ

ಜಗತ್ತಿಗೆ ಸದೃಶವಾದ ಅಥವಾ ಕಾಲತ್ರಯದಲ್ಲೂ ಅಬಾಧ್ಯವಾದ, ಜಗತ್ - ಪೃಥಿವ್ಯಾದಿಗಳು, ಅಸ್ಮಾದ್ ವಿಷ್ಣೋಸ್ತು - ಈ ವಿಷ್ಣುವಿನಿಂದಲೇ, ನಿತ್ಯಂ - ನಿಯಮೇನ ಪ್ರತಿಕಲ್ಪದಲ್ಲೂ, ಶೀರ್ಯತೇ - ನಾಶವಾಗುತ್ತದೋ – ಚೇತನರಿಗೂ ಕೂಡ ದೇಹದ್ವಾರಾ ಶೀರ್ಯತ್ವ ಅಂದರೆ ನಾಶವು ಇದ್ದೇ ಇರುವುದು – ಮತ್ತು ಯಾವ ಕಾರಣದಿಂದಾಗಿ, ಪರಃ - ಪರಮಾತ್ಮನು, ಅಸ್ಮಿನ್ - ಈ ಜಗತ್ತಿನಲ್ಲಿ ಇದ್ದವನಾಗಿ, ರಮತೇ - ಕ್ರೀಡಿಸುವನೋ, ತತ್ - ಆ ಕಾರಣದಿಂದಲೇ, ತಸ್ಯ - ಆ ವಿಷ್ಣುವಿಗೆ, ಜಗತ್ - ಪೃಥಿವ್ಯಾದಿಗಳು, ಶರೀರಂ - ಶರೀರವೆಂದು ಹೇಳಲ್ಪಡುತ್ತವೆ ಹೊರತು ರೂಢಿಯಿಂದಲ್ಲ ಎಂದು ಅರ್ಥ.

ನ ಶರೀರತ್ವವಿರೋಧಃ - ಅಂದರೆ ಪೃಥಿವ್ಯಾದಿಗಳು ಶರೀರವಾಗಿರುವುದರ ವಿರೋಧವಿಲ್ಲ – 'ನ ಶರೀರತ್ವವಿರೋಧಃ' ಎಂಬ ವಾಕ್ಯದ ನಂತರ ವಿಷ್ಣ್ವಂತರ್ಯಾಮಿತಾಯಾಃ, ಅತದ್ಧರ್ಮಾಪಲಾಪೋಕ್ತೇರ್ವಾ- 'ವಿಷ್ಣುವಿನ ಅಂತರ್ಯಾಮಿತ್ವಕ್ಕಾಗಲೀ', 'ಪ್ರಕೃತಿ ಮತ್ತು ಜೀವಧರ್ಮಗಳನ್ನು ಇಲ್ಲಿ ಹೇಳಲಾಗಿಲ್ಲ ಎಂಬುದಕ್ಕಾಗಲೀ' ಎಂಬ ಪದಗಳು ಶೇಷವಾಗಿ ಸೇರುತ್ತವೆ.(೧) ಏಕೆಂದರೆ ವಿಷ್ಣುವಿಗೆ ಪೃಥಿವ್ಯಾದಿಸ್ವರೂಪವೇ ಆಗಿರುವುದು ಅಥವಾ ಪೃಥಿವ್ಯಾದಿಗಳು ಶರೀರವಾಗಿರುವುದು ಎಂಬ ಅರ್ಥದಲ್ಲಿ ವಿಷ್ಣುವಿಗೆ ಪೃಥಿವ್ಯಾದಿಶರೀರತ್ವವು ಅನುಪಪನ್ನವಾಗಿದ್ದರೂ ಶರೀರಶಬ್ದಕ್ಕೆ ಪೃಥಿವ್ಯಾದಿಗಳ ವಿಷಯದಲ್ಲಿ ಯೋಗವೃತ್ತಿಯನ್ನು ಆಶ್ರಯಿಸಿ ವಿಷ್ಣುವಿಗೆ ಪೃಥಿವ್ಯಾದಿಶರೀರತ್ವವನ್ನು ಹೇಳಿರುವುದು ಯುಕ್ತವೇ ಆಗಿದೆ ಹಾಗೂ ಇತರರ ವಿಷಯದಲ್ಲಿ ಅದು ಅನುಪಪನ್ನವಾಗಿದೆ ಎಂದು ಭಾವ.

(೧) ಶೇಷವಾಗಿ ಈ ಪದಗಳನ್ನು ಸೇರಿಸಿದಾಗ, ವಿಷ್ಣುವಿನ ಅಂತರ್ಯಾಮಿತ್ವಕ್ಕಾಗಲೀ, ಈ ಪ್ರಕರಣದಲ್ಲಿ ಪ್ರಕೃತಿ ಮತ್ತು ಜೀವರ ಧರ್ಮಗಳನ್ನು ಹೇಳಿಲ್ಲವೆಂದು ಸಿದ್ಧಾಂತಿಗಳು ಹೇಳಿದ್ದಕ್ಕಾಗಲೀ 'ಯಸ್ಯ ಪೃಥಿವೀ ಶರೀರಂ' ಎಂದು ಪೃಥಿವಿಯನ್ನು ಶರೀರವೆಂದು ಹೇಳಿರುವುದರ ವಿರೋಧವಿಲ್ಲವೆಂದು ಒಟ್ಟು 'ನ ಶರೀರತ್ವವಿರೋಧಃ' ಎಂಬ ಭಾಷ್ಯವಾಕ್ಯದ ಅರ್ಥ.

(ಭಾ.ದೀ.) ಯತ್ತು ಬೃಹದಾರಣ್ಯಭಾಷ್ಯೇ –

ಪೃಥಿವ್ಯಾದ್ಯಾ ದೇವತಾಸ್ತು ದೇಹವದ್ ಯದ್ವಶತ್ವತಃ ।
ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋಃ ಮಹಾತ್ಮನಃ ॥

ಇತಿ ಪ್ರಮಾಣಾನುಸಾರೇಣ ಪೃಥಿವ್ಯಾದೇರ್ಬ್ರಹ್ಮಶರೀರತ್ವಂ ಗೌಣಮಿತ್ಯುಕ್ತಂ, ತತ್ಪುರಾಣಾದಿಷು ಪ್ರಪಂಚೇ ಬ್ರಹ್ಮಕಾಯತ್ವಾದ್ಯುಕ್ತಿಸಮರ್ಥನಾಯ ಇತಿ ನ ತದ್ವಿರೋಧಃ ॥

ಬೃಹದಾರಣ್ಯಕಭಾಷ್ಯದಲ್ಲಿ 'ಪೃಥಿವ್ಯಾದ್ಯಾ ದೇವತಾಸ್ತು ದೇಹವದ್ ಯದ್ವಶತ್ವತಃ । ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋಃ ಮಹಾತ್ಮನಃ ॥ - 'ಪೃಥಿವ್ಯಾದಿ ಅಭಿಮಾನಿ ದೇವತೆಗಳು ದೇಹದಂತೆ ವಿಷ್ಣುವಿಗೆ ಅಧೀನವಾಗಿರುವುದರಿಂದ ಮಹಾತ್ಮನಾದ ವಿಷ್ಣುವಿಗೆ ಅವು ಶರೀರವೆಂದು ಹೇಳಲ್ಪಡುತ್ತವೆ' – ಎಂಬ ಪ್ರಮಾಣಾನುಸಾರವಾಗಿ ಪೃಥಿವ್ಯಾದಿಗಳಿಗೆ ಬ್ರಹ್ಮಶರೀರತ್ವವು ಗೌಣವೆಂದು ಹೇಳಲಾಗಿದೆ. ಆದರೆ, ಪುರಾಣ ಮೊದಲಾದವುಗಳಲ್ಲಿ ಪ್ರಪಂಚವು ಬ್ರಹ್ಮನ ಶರೀರವೆಂದು ಹೇಳಿರುವುದರ ಸಮರ್ಥನೆಗಾಗಿ ಹಾಗೆ ಹೇಳಿರುವುದರಿಂದ ಅದರ ವಿರೋಧವಿಲ್ಲ.

॥ ಇತ್ಯಂತರ್ಯಾಮ್ಯಧಿಕರಣಮ್ ॥ ೫ ॥

* * * * * *

## ೬. ಅಥ ಅದೃಶ್ಯತ್ವಾಧಿಕರಣಮ್

ಭಾ– ಅದೃಶ್ಯತ್ವಾದಿಗುಣಾ ವಿಷ್ಣೋರುಕ್ತಾಃ ।

ಅದೃಶ್ಯತ್ವಮೊದಲಾದ ಗುಣಗಳು ವಿಷ್ಣುವಿಗೆ ಹೇಳಲ್ಪಟ್ಟಿವೆ.

(ಭಾ.ದೀ.) ಅತ್ರ ಅಧಿಕರಣೇ ದೃಶ್ಯತ್ವಾದ್ಯಭಾವಾಖ್ಯಲಿಂಗಂ ಬ್ರಹ್ಮಣಿ ಸಮನ್ವೀಯತೇ । ಪೂರ್ವಾಧಿಕರಣತದ್ವಿಷಯಸಂಗತಿ-ವಿಷಯವಾಕ್ಯೋದಾಹರಣಪೂರ್ವಕಂ ವಿಷಯಸಂಶಯೌ ಸಯುಕ್ತಿಕಂ ಪೂರ್ವಪಕ್ಷಂ ಚ ಸೂಚಯತಿ – **ಅದೃಶ್ಯತ್ವಾದೀತಿ** ॥ 'ಗುಣಾಃ' ಶುಭಧರ್ಮಾಃ । 'ಆದಿ'ಪದೇನ ಅನಾತ್ಮ್ಯಾದಿಗ್ರಹಣಮ್ । **ಉಕ್ತಾ ಇತಿ** ॥

ಆನಂದಮಯಸ್ಯ 'ಅದೃಶ್ಯೇ' ಇತಿ ವಾಕ್ಯೇನ - ಇತಿ ಚ ಶೇಷಃ । ಉಪಲಕ್ಷಣಮೇತತ್ । ಅಂತಃಸ್ಥಸ್ಯ 'ನ ವಿಜಾನಂತಿ'(ತೈ.ಆ.೩-೧೧) ಇತ್ಯನೇನ, ಸರ್ವಗತಸ್ಯ 'ಸ ಯೋಽತೋಽಶ್ರುತಃ'(ಐ.ಆ.೩-೨-೪) ಇತ್ಯನೇನ, ಅಂತರ್ಯಾಮಿಣಃ 'ಯಂ ಪೃಥಿವೀ ನ ವೇದ' (ಬೃ.೫-೭-೩) ಇತ್ಯವ್ಯವಹಿತಪೂರ್ವಾಧಿಕರಣೋದಾಹೃತವಾಕ್ಯೇನ ಚೇತ್ಯಪಿ ದ್ರಷ್ಟವ್ಯಮ್ ।

ಈ ಅಧಿಕರಣದಲ್ಲಿ ದೃಶ್ಯತ್ವಾದ್ಯಭಾವ ಎಂಬ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುವುದು. ಹಿಂದಿನ ಅಧಿಕರಣದ ಮತ್ತು ಆದರ ವಿಷಯಗಳ ಸಂಗತಿ ಮತ್ತು ವಿಷಯವಾಕ್ಯ ಇವುಗಳನ್ನು ಉದಾಹರಿಸಿ ಈ ಅಧಿಕರಣದ ವಿಷಯ ಮತ್ತು ಸಂಶಯ-ಗಳನ್ನು, ಸಯುಕ್ತಿಕವಾದ ಪೂರ್ವಪಕ್ಷವನ್ನೂ ಅದೃಶ್ಯತ್ವಾದಿ ಎಂಬ ವಾಕ್ಯದಿಂದ ಸೂಚಿಸುತ್ತಿದ್ದಾರೆ. ಅದೃಶ್ಯತ್ವಾದಿ ಗುಣಾಃ ಎಂಬಲ್ಲಿ ಗುಣಗಳೆಂದರೆ ಶುಭಧರ್ಮ-ಗಳು. ಅದೃಶ್ಯತ್ವಾದಿ ಎಂಬಲ್ಲಿರುವ ಆದಿಪದದಿಂದ ಅನಾತ್ಮ್ಯ ಮೊದಲಾದವುಗಳನ್ನು ಗ್ರಹಿಸಬೇಕು. ಉಕ್ತಾಃ ಎಂಬ ಪದದ ನಂತರ 'ಆನಂದಮಯಸ್ಯ ಎಂಬ ಪದವು ಹಾಗೂ ಅದೃಶ್ಯೇ ಇತಿ ವಾಕ್ಯೇನ' ಎಂಬ ಪದಗಳು ಶೇಷವಾಗಿ ಸೇರುತ್ತವೆ. ಆನಂದಮಯನಿಗೆ ಎಂದು ಹೇಳಿರುವುದು ಉಪಲಕ್ಷಣ. ಅಂತಃಸ್ಥನಿಗೆ 'ನ ವಿಜಾನಂತಿ' ಎಂಬ ವಾಕ್ಯದಿಂದ, ಸರ್ವಗತನಿಗೆ 'ಸ ಯೋಽತೋಽಶ್ರುತಃ' ಎಂಬ ವಾಕ್ಯದಿಂದ ಮತ್ತು ಅಂತರ್ಯಾಮಿಗೆ 'ಯಂ ಪೃಥಿವೀ ನ ವೇದ' ಎಂದು ಈ ಅಧಿಕರಣದ ಅವ್ಯವಹಿತಪೂರ್ವದಲ್ಲಿರುವ ಅಧಿಕರಣದಲ್ಲಿ ಉದಾಹರಿಸಲಾದ ವಾಕ್ಯದಿಂದಲೂ ಅದೃಶ್ಯತ್ವಾದಿಗಳು ವಿಷ್ಣುವಿಗೆ ಇರುವವೆಂದು ತಿಳಿಯಬೇಕು.

ಭಾ– ತತ್ರ

'ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ ತದಪಾಣಿಪಾದಮ್ । ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ' (ಮುಂ.೧-೧-೬) ಇತ್ಯುಕ್ತ್ವಾ,

'ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ

ತದಪಾಣಿಪಾದಮ್ । ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದ-
ವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ' ಎಂದು ಹೇಳಿ;

(ಭಾ.ದೀ.) 'ಉಕ್ತಾಃ' ಇತ್ಯಾವರ್ತತೇ । 'ಉಕ್ತ್ವಾ' ಇತ್ಯನಂತರಮ್ 'ಆಮ್ನಾತೇ' ಇತಿ ಶೇಷಃ । ತೇನ ಕ್ತ್ವಾಪ್ರತ್ಯಯೋಪಪತ್ತಿಃ । **ಚಂದ್ರಿಕಾಯಾಂ** ತು – 'ಇತ್ಯುಕ್ತ್ವಾ ಪ್ರತೀಯತೇ' ಇತಿ ಭಾಷ್ಯೇ ಕ್ರಿಯಯೋಃ ಸಮಾನಕರ್ತೃಕತ್ವಾಭಾವೇಽಪಿ ಕ್ತ್ವಾ-ಪ್ರತ್ಯಯೋ 'ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ' ಇತಿವದ್ ದ್ರಷ್ಟವ್ಯಮ್ ಇತ್ಯುಕ್ತೇರಪ್ಯಯಮೇವಾಭಿಪ್ರಾಯಃ । ಪರ ಇತೀತ್ಯನಂತರಂ 'ವಾಕ್ಯೇ' ಇತಿ ಶೇಷಃ । 'ತಸ್ಮಾಚ್ಚ' ಇತಿ ಪದದ್ವಯಂ ಭಾಷ್ಯಕಾರೀಯಮ್ । ತಥಾ ಚೇತ್ಥಂ ಯೋಜನಾ – ಪೂರ್ವಂ ಯೇ ಅದೃಶ್ಯತ್ವಾದಿಗುಣಾ ವಿಷ್ಣೋರುಕ್ತಾಸ್ತೇ ಯತ್ರ ಕಸ್ಯಚಿ-ದಕ್ಷರಸ್ಯೋಕ್ತಾಃ ತತ್ರಾಽಥರ್ವಣೇ ಅದೃಶ್ಯತ್ವಾದಿಗುಣಕಾಕ್ಷರವಿಷಯೇ 'ಯತ್ತದ-ದ್ರೇಶ್ಯಮಗ್ರಾಹ್ಯಮ್' ಇತ್ಯಾದ್ಯುಕ್ತ್ವಾ ತಥಾ ತತ್ರೈವ 'ಯಥೋರ್ಣನಾಭಿಃ' ಇತ್ಯಾದಿ 'ವಿಶ್ವಮ್' ಇತ್ಯಂತಂ ವಾಕ್ಯಂ ಚೋಕ್ತ್ವಾ ಪಠಿತ್ವಾ ಅನಂತರಮಾಮ್ನಾತೇ –

ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।
ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ ॥

ಇತ್ಯುತ್ತರವಾಕ್ಯೇ 'ತಥಾಕ್ಷರಾತ್' ಇತಿ ಪ್ರಕೃತಾದಕ್ಷರಾದಪಿ 'ಪರಃ' ಉತ್ತಮಃ 'ಪ್ರತೀಯತೇ' ಪ್ರತಿಪಾದ್ಯತಯಾ ಜ್ಞಾಯತೇ ಇತಿ ।

ಅನೇನ ಪೂರ್ವೋಕ್ತಾದೃಶ್ಯತ್ವಸ್ಯ ವಿಷ್ಣ್ವನ್ಯನಿಷ್ಠತ್ವಾಕ್ಷೇಪಾತ್ ಪೂರ್ವೇಣಾಽ-ನಂದಮಯಾದ್ಯಧಿಕರಣೇನ ಅಸ್ಯ ಆಕ್ಷೇಪಿಕೀ ಸಂಗತಿಃ । ಅದೃಶ್ಯತ್ವಾದಿರೂಪೋ ವಿಷಯಃ । ಕಿಂ ವಿಷ್ಣೋರನ್ಯಸ್ಯ ವಾ? ಇತಿ ಸಂದೇಹಃ । ನ ವಿಷ್ಣೋರದೃಶ್ಯತ್ವಾದಿ ಇತಿ ಪೂರ್ವಃ ಪಕ್ಷಃ । ಅದೃಶ್ಯತ್ವಾದಿವಿಶಿಷ್ಟೇ 'ಅಕ್ಷರಾತ್ ಸಂಭವತಿ' ಇತ್ಯಕ್ಷರಶಬ್ದಶ್ರವಣಾತ್ ತಸ್ಯ ಚ ತತ್ಪರತ್ವೋಕ್ತ್ಯಾ ವಿಷ್ಣೋಃ ನಿರವಕಾಶತ್ವಾದಿತಿ ಪೂರ್ವಪಕ್ಷಯುಕ್ತಿಶ್ಚ ಸೂಚಿತಾ ಭವತೀತಿ ।

ಹಿಂದಿನ ಭಾಷ್ಯವಾಕ್ಯದಲ್ಲಿರುವ ಉಕ್ತ್ವಾ ಎಂಬ ಪದವು ಆವೃತ್ತಿಯನ್ನು ಪಡೆ-ಯುತ್ತದೆ. ಇತ್ಯುಕ್ತ್ವಾ ಎಂಬ ಪದಗಳ ನಂತರ 'ಆಮ್ನಾತೇ'- 'ಶ್ರುತವಾಗಿರುವ' ಎಂಬ ಪದವು ಶೇಷವಾಗಿ ಸೇರುತ್ತದೆ. ಇದರಿಂದ ಉಕ್ತ್ವಾ ಎಂಬಲ್ಲಿರುವ ಕ್ತ್ವಾಪ್ರತ್ಯಯವು ಯುಕ್ತವಾಗುವುದು. ಚಂದ್ರಿಕಾದಲ್ಲಾದರೋ – ''ಇತ್ಯುಕ್ತ್ವಾ ಪ್ರತೀಯತೇ - ಎಂದು ಭಾಷ್ಯದಲ್ಲಿ ಉಕ್ತಿ ಮತ್ತು ಪ್ರತೀತಿ ಎಂಬ ಕ್ರಿಯೆಗಳಿಗೆ ಕರ್ತೃವು ಒಬ್ಬನೇ ಇಲ್ಲದೇ ಇದ್ದರೂ 'ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ' ಎಂಬಲ್ಲಿ ಹೇಗೋ ಹಾಗೆ ಕ್ತ್ವಾಪ್ರತ್ಯಯವು ಯುಕ್ತವಾಗುವುದು''[೧] ಎಂದು ಹೇಳಿರುವುದಕ್ಕೂ ಇದೇ ಅಭಿಪ್ರಾಯವಾಗಿದೆ. ಭಾಷ್ಯದಲ್ಲಿ 'ಅಕ್ಷರಾತ್ ಪರತಃ ಪರಃ ಇತಿ' ಎಂಬ ಪದಗಳ ನಂತರ 'ವಾಕ್ಯೇ' ಎಂಬ ಪದವು ಶೇಷವಾಗಿದೆ. 'ತಸ್ಮಾತ್ ಚ' ಎಂಬ ಎರಡು ಪದಗಳು ಭಾಷ್ಯಕಾರರ ಪದಗಳಾಗಿವೆ. ತಥಾಚ ಭಾಷ್ಯವಾಕ್ಯದ ಯೋಜನೆ ಹೀಗಿದೆ – ಹಿಂದೆ ಯಾವ ಅದೃಶ್ಯತ್ವಾದಿಗುಣಗಳು ವಿಷ್ಣುವಿಗೆ ಇರುವವೆಂದು ಉಕ್ತವಾಗಿವೆಯೋ ಅವುಗಳು ಆಥರ್ವಣದಲ್ಲಿ ಒಬ್ಬ ಅಕ್ಷರನಿಗೆ ಹೇಳಲ್ಪಟ್ಟಿವೆ. ಆ ಆಥರ್ವಣವಾಕ್ಯದಲ್ಲಿ ಅದೃಶ್ಯತ್ವಾದಿಗುಣಗಳನ್ನು ಹೊಂದಿರುವ ಆ ಅಕ್ಷರನ ವಿಷಯದಲ್ಲಿ 'ಯತ್ತದ-ದ್ರೇಶ್ಯಮಗ್ರಾಹ್ಯಮ್' ಇತ್ಯಾದಿಯಾಗಿ ಹೇಳಿ ಹಾಗೆಯೇ ಅಲ್ಲೇ 'ಯಥೋ-ರ್ಣನಾಭಿಃ' ಎಂದಾರಂಭಿಸಿ 'ವಿಶ್ವಂ' ಎಂಬಲ್ಲಿಯವರೆಗೆ ವಾಕ್ಯವನ್ನು ಹೇಳಿ, ಅಂದರೆ ಪಠಿಸಿ, ಅನಂತರ ಉಕ್ತವಾಗಿರುವ –

ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।
ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ ॥

ಎಂಬ ಮುಂದಿನ ವಾಕ್ಯದಲ್ಲಿ ತಥಾಽಕ್ಷರಾತ್ ಎಂಬಲ್ಲಿ ಪ್ರಸ್ತುತವಾದ ಅಕ್ಷರ-ಕ್ಕಿಂತಲೂ ಪರಃ - ಉತ್ತಮನು, ಪ್ರತೀಯತೇ - ಪ್ರತಿಪಾದಿತನಾಗಿರುವನೆಂದು ತಿಳಿದು ಬರುತ್ತಾನೆ – ಎಂದು.

ಇದರಿಂದ ಹಿಂದೆ ಹೇಳಲಾದ ಅದೃಶ್ಯತ್ವವು ವಿಷ್ಣುಭಿನ್ನನಲ್ಲಿ ಇರುವುದೆಂದು ಆಕ್ಷೇಪಿಸುವುದರಿಂದ ಹಿಂದಿನ ಆನಂದಮಯಾದಿ ಅಧಿಕರಣಗಳಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು ಲಭಿಸುವುದು. ಅದೃಶ್ಯತ್ವಾದಿ ಧರ್ಮಗಳು ಈ ಅಧಿಕರಣದ

ವಿಷಯವಾಗಿವೆ. ಅವು ವಿಷ್ಣುವಿಗಿರುವವೋ ಅಥವಾ ಇತರರಿಗೋ ಎಂದು ಸಂದೇಹ. ಇಲ್ಲಿ ಹೇಳಿರುವ ಅದೃಶ್ಯತ್ವಾದಿಗಳು ವಿಷ್ಣುವಿನ ಧರ್ಮಗಳಲ್ಲ ಎಂದು ಪೂರ್ವಪಕ್ಷ. ಅದೃಶ್ಯತ್ವಾದಿವಿಶಿಷ್ಟನನ್ನು ಕುರಿತು 'ಅಕ್ಷರಾತ್ ಸಂಭವತಿ' ಎಂದು ಅಕ್ಷರಶಬ್ದವು ಶ್ರುತವಾಗಿರುವುದರಿಂದ ಮತ್ತು ಆ ವಿಷ್ಣುವು ಅಕ್ಷರನಿಗಿಂತ ಉತ್ತಮನೆಂದು ಹೇಳಿರುವುದರಿಂದ ವಿಷ್ಣುವಿಗೆ ಇಲ್ಲಿ ಅವಕಾಶವಿಲ್ಲ ಎಂಬ ಪೂರ್ವಪಕ್ಷಯುಕ್ತಿಯೂ ಇಲ್ಲಿ ಸೂಚಿತವಾಗುವುದು.

(೧) 'ಸಮಾನಕರ್ತೃಕಯೋಃ ಪೂರ್ವಕಾಲೇ' (ಪಾ.ಸೂ.೩-೪-೨೧) ಎಂಬ ಪಾಣಿನಿಸೂತ್ರದ ಪ್ರಕಾರ ಒಬ್ಬನೇ ಕರ್ತೃವಿರುವ ಎರಡು ಕ್ರಿಯೆಗಳನ್ನು ಹೇಳುವ ಎರಡು ಧಾತುಗಳಿರುವ ಸ್ಥಳದಲ್ಲಿ ಹಿಂದಿನ ಕಾಲದ ಕ್ರಿಯೆಯನ್ನು ಹೇಳುವ ಧಾತುವಿನ ಮುಂದೆ ಕ್ತ್ವಾಪ್ರತ್ಯಯವು ಸೇರುತ್ತದೆ. ಪ್ರಕೃತ, ಭಾಷ್ಯದಲ್ಲಿ 'ಇತ್ಯುಕ್ತ್ವಾ ... ಪರಃ ಪ್ರತೀಯತೇ' ಎಂದು ಕ್ರಿಯಾಪದಗಳ ಪ್ರಯೋಗವಿದೆ. ಇಲ್ಲಿ 'ಉಕ್ತ್ವಾ' ಎಂಬಲ್ಲಿರುವ ವಚಧಾತುವಿನ ಅರ್ಥವಾದ ಉಕ್ತಿಕ್ರಿಯೆಗೆ ಕರ್ತೃ ಶ್ರುತಿ. 'ಪ್ರತೀಯತೇ' ಎಂಬಲ್ಲಿರುವ ಧಾತುವಿನ ಅರ್ಥವಾದ ಕ್ರಿಯೆಗೆ 'ಪರಃ' ಎಂದರೆ ಉತ್ತಮನು ಕರ್ತೃ. ಹೀಗೆ ಕರ್ತೃಗಳು ಭಿನ್ನರಾಗಿರುವುದರಿಂದ 'ಉಕ್ತ್ವಾ' ಎಂಬ ಪ್ರಯೋಗ ಅಸಾಧುವೆಂದು ಶಂಕೆ. ಭಾಷ್ಯದೀಪಿಕೆಯಲ್ಲಿ ಆರಂಭದಲ್ಲೇ 'ಆಮ್ನಾತೇ' – 'ಪಠಿತವಾಗಿರುವ' ಎಂಬ ಪದವು ಇಲ್ಲಿ ಶೇಷವಾಗಿದೆ ಎಂದು ಹೇಳಿ ಈ ಶಂಕೆಗೆ ಪರಿಹಾರವನ್ನು ಹೇಳಲಾಗಿದೆ. 'ಇತ್ಯುಕ್ತ್ವಾ ಆಮ್ನಾತೇ .. ಪರಃ ಪ್ರತೀಯತೇ' ಎಂದು ಶೇಷಪೂರಣದ ನಂತರ ಸಿಗುವ ವಾಕ್ಯ. ಇಲ್ಲಿ 'ಆಮ್ನಾತೇ' 'ಪಠಿತವಾಗಿರುವ' ಎಂಬ ಪದ ತಿಳಿಸುವ ಪಠನಕ್ರಿಯೆಗೂ, ಉಕ್ತಿಕ್ರಿಯೆಗೂ ಶ್ರುತಿಯೇ ಕರ್ತೃವಾಗಿರುವುದರಿಂದ ಕ್ರಿಯೆಗಳಿಗೆ ಸಮಾನಕರ್ತೃಕತ್ವ ಲಭಿಸುವುದೆಂದೂ, ಪೂರ್ವಕಾಲಿಕ ಉಕ್ತಿಕ್ರಿಯೆಯನ್ನು ಹೇಳುವ ವಚ್ ಧಾತುವಿನ ಮುಂದೆ ಕ್ತ್ವಾಪ್ರತ್ಯಯವನ್ನು ಪ್ರಯೋಗಿಸಿರುವುದು ಸಾಧುವೆಂದು ಒಟ್ಟು ಸಾರಾಂಶ.

ಚಂದ್ರಿಕೆಯಲ್ಲಿ 'ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ' 'ಯದುವಿನ ವಂಶದ ಚರಿತೆಯನ್ನು ಕೇಳಿ ನರನು ಸರ್ವಪಾಪಗಳಿಂದ ಮುಕ್ತನಾಗುವನು' ಎಂಬ ಸ್ಥಳದಲ್ಲಿ 'ವರ್ತಮಾನಃ' ಎಂಬ ಪದವನ್ನು ಸೇರಿಸಿ ಇದೇ

ರೀತಿಯ ಶಂಕೆಯನ್ನು ಪರಿಹರಿಸಿರುವಂತೆ ಇಲ್ಲೂ 'ಆಮ್ನಾತೇ' ಎಂಬ ಪದವನ್ನು ಸೇರಿಸಿ ಉತ್ತರಿಸಬೇಕೆಂದು ಸೂಚಿಸಲಾಗಿದೆ ಎಂದೂ ಭಾಷ್ಯದೀಪಿಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ.

(ಭಾ.ದೀ.) ಶ್ರುತ್ಯರ್ಥಸ್ತು – 'ಯತ್' ಪರವಿದ್ಯಾಗಮ್ಯಮಕ್ಷರಂ 'ತದದ್ರೇಶ್ಯಂ' ದೃಶ್ಯಶಬ್ದಿತಚಕ್ಷುರಾದಿಜ್ಞೇಯಭಿನ್ನಮ್ । 'ಅಗ್ರಾಹ್ಯಂ' ಮನೋಗ್ರಾಹ್ಯಭಿನ್ನಮ್ । 'ಅಗೋತ್ರಂ' 'ನ ವಿದ್ಯತೇ ಗೋತ್ರಾದಿಕಂ ಯಸ್ಯ ತದ್ಧಿ ತಥೋಚ್ಯತೇ' ಇತಿ ಸುಧೋಕ್ತೇರ್ವಸಿಷ್ಠಾದಿಗೋತ್ರಹೀನಮ್ । 'ಅವರ್ಣಂ' ಪ್ರಾಕೃತಶುಕ್ಲಾದಿವರ್ಣಹೀನಮ್ । 'ಅದೃಶ್ಯಾದಿಶಬ್ದೈಃ ದೃಶ್ಯಾದ್ಯನ್ಯೋನ್ಯಾಭಾವೋಽಭಿಧೀಯತೇ' ಇತಿ **ಸುಧೋಕ್ತೇಃ** ಗೋತ್ರವರ್ಣಭಿನ್ನತ್ವಂ ಚಾರ್ಥಃ । ತತ್ 'ಅಚಕ್ಷುಃಶ್ರೋತ್ರಂ' ಪ್ರಾಕೃತಜ್ಞಾನೇಂದ್ರಿಯಾದಿಶೂನ್ಯಮ್ । ತತ್ 'ಅಪಾಣಿಪಾದಂ' ಪ್ರಾಕೃತಕರ್ಮೇಂದ್ರಿಯಶೂನ್ಯಂ 'ನಿತ್ಯಂ' ಸ್ವರೂಪನಾಶರಹಿತಂ 'ವಿಭುಂ' ಸಮರ್ಥಂ 'ಸರ್ವಗತಂ' ವ್ಯಾಪ್ತಂ 'ಸುಸೂಕ್ಷ್ಮಂ' ಅತ್ಯಂತಾವ್ಯಕ್ತಂ 'ಯದ್ಭೂತಯೋನಿಂ' 'ಧೀರಾಃ' ಜ್ಞಾನಿನಃ ಪರಿಪಶ್ಯಂತಿ 'ತತ್' ಅಕ್ಷರಮ್ 'ಅವ್ಯಯಂ' ದೇಹತೋ ನಾಶಶೂನ್ಯಮಿತಿ।

ಅತ್ರ ತಚ್ಛಬ್ದಸ್ಯ ಸರ್ವತ್ರಾನ್ವಯ ತ್ರಿರ್ಗ್ರಹಣಮ್ । ಭೂತಯೋನಿಪದಂ ಚ **ಸತ್ತರ್ಕದೀಪಾವಲ್ಯಾಂ** 'ಭೂತಾನಾಮ್ ಆಕಾಶಾದೀನಾಂ ಬ್ರಹ್ಮಾದಿಚೇತನಾನಾಂ ವಾ ಕೇಷಾಂಚಿತ್ ಸ್ತ್ರೀವ್ಯವಧಾನೇನ ವಿನಾ ಸ್ವದೇಹಾದೇವೋತ್ಪಾದಕಮ್ - ಇತಿ ವ್ಯಾಖ್ಯಾತಮ್ । 'ಧೀರಾಃ' ಇತ್ಯನೇನಾದೃಶ್ಯತ್ವದೃಶ್ಯತ್ವಯೋರ್ವಿರೋಧಃ ಪರಿಹೃತಃ।

ಶ್ರುತ್ಯರ್ಥವಾದರೋ – ಯತ್ - ಯಾವ ಪರವಿದ್ಯೆಯಿಂದ ಗಮ್ಯವಾದ ಅಕ್ಷರವಿರುವುದೋ, ತದ್ ಅದ್ರೇಶ್ಯಂ- ಆ ಅಕ್ಷರವು ದೃಶ್ಯಶಬ್ದವು ಹೇಳುವ, ಚಕ್ಷುರಾದಿ ಇಂದ್ರಿಯಗಳಿಂದ ಜ್ಞೇಯವಾಗುವ ವಸ್ತುಗಳಿಂದ ಭಿನ್ನವಾದದ್ದು. **ಅಗ್ರಾಹ್ಯಮ್** - ಮನಸ್ಸು ಗ್ರಹಿಸುವ ಪದಾರ್ಥಗಳಿಂದ ಭಿನ್ನವಾದದ್ದು. **ಅಗೋತ್ರಂ** - 'ನ ವಿದ್ಯತೇ ಗೋತ್ರಾದಿಕಂ ಯಸ್ಯ ತದ್ಧಿ ತಥೋಚ್ಯತೇ' - 'ಯಾವುದಕ್ಕೆ ಗೋತ್ರಾದಿಗಳು ಇರುವುದಿಲ್ಲವೋ ಅದು ಅಗೋತ್ರವೆಂದೆನಿಸುವುದು' ಎಂದು ಸುಧಾದಲ್ಲಿ ಹೇಳಿರುವು-

ದರಿಂದ ಅಗೋತ್ರನೆಂದರೆ ವಸಿಷ್ಠಾದಿಗೋತ್ರ ಇಲ್ಲದಿರುವವನು. ಅವರ್ಣಂ - ಬ್ರಾಹ್ಮಣಾದಿ ವರ್ಣಹೀನವಾದದ್ದು, ಅಥವಾ ನೀಲ, ಪೀತ ಇತ್ಯಾದಿ ಪ್ರಾಕೃತವರ್ಣ ಹೀನವಾದದ್ದು. 'ಅದೃಶ್ಯಾದಿಶಬ್ದೈಃ ದೃಶ್ಯಾದ್ಯನ್ಯೋನ್ಯಾಭಾವೋಽಭಿಧೀಯತೇ' - 'ಅದೃಶ್ಯ ಮೊದಲಾದ ಶಬ್ದಗಳಿಂದ ದೃಶ್ಯಮೊದಲಾದವುಗಳ ಭೇದವು ಹೇಳಲ್ಪಡುವುದು' ಎಂದು ಸುಧಾದಲ್ಲಿ ಹೇಳಿರುವುದರಿಂದ ಗೋತ್ರವರ್ಣಗಳ ಭೇದವೂ ಅಗೋತ್ರ ಮೊದಲಾದ ಶಬ್ದಗಳ ಅರ್ಥವಾಗಿದೆ. ತತ್ ಅಚಕ್ಷುಃ ಶ್ರೋತ್ರಂ - ಆ ಪರವಿದ್ಯಾ ಗೋಚರವಾದ ಅಕ್ಷರವು ಪ್ರಾಕೃತವಾದ ಜ್ಞಾನೇಂದ್ರಿಯ ಮೊದಲಾದವುಗಳಿಂದ ರಹಿತವಾದದ್ದು. ತತ್ ಅಪಾಣಿಪಾದಂ - ಅದು ಪ್ರಾಕೃತಕರ್ಮೇಂದ್ರಿಯರಹಿತವಾದದ್ದು. ನಿತ್ಯಂ - ಸ್ವರೂಪನಾಶವಿಲ್ಲದ್ದು. ವಿಭುಂ - ಸಮರ್ಥವಾದದ್ದು. ಸರ್ವಗತಂ - ವ್ಯಾಪ್ತವಾದದ್ದು. ಸುಸೂಕ್ಷ್ಮಂ - ಅತ್ಯಂತ ಅವ್ಯಕ್ತವಾದದ್ದು. ಯದ್ಭೂತಯೋನಿಂ - ಇಂತಹ ಯಾವ ಭೂತಗಳಿಗೆ ಕಾರಣವಾಗಿರುವುದೋ ಅದನ್ನು, ಧೀರಾಃ - ಜ್ಞಾನಿಗಳು, ಪರಿಪಶ್ಯಂತಿ - ನೋಡುವರೋ, ತತ್ ಅಕ್ಷರಂ - ಆ ಅಕ್ಷರವು, ಅವ್ಯಯಂ – ದೇಹನಾಶವಿಲ್ಲದ್ದೂ ಆಗಿದೆ.

ಇಲ್ಲಿ ಎಲ್ಲ ಕಡೆಗಳಲ್ಲೂ ಅನ್ವಯಿಸುವುದಕ್ಕಾಗಿ ತತ್‌ಶಬ್ದವನ್ನು ಮೂರು ಬಾರಿ ಗ್ರಹಿಸಲಾಗಿದೆ. ಸತ್ತರ್ಕದೀಪಾವಲಿಯಲ್ಲಿ ಭೂತಯೋನಿಪದವನ್ನು, ಭೂತಾನಾಂ ಅಂದರೆ 'ಆಕಾಶಾದಿಭೂತಗಳಿಗೆ ಅಥವಾ ಬ್ರಹ್ಮಾದಿಚೇತನರಿಗೆ ಅವರ ಮಧ್ಯೆ ಕೆಲವರಿಗೆ ಸ್ತ್ರೀವ್ಯವಧಾನವಿಲ್ಲದೇ ತನ್ನ ದೇಹದಿಂದಲೇ ಉತ್ಪಾದಕನಾಗಿರುವವನು' ಎಂದು ವ್ಯಾಖ್ಯಾನ ಮಾಡಲಾಗಿದೆ. ಧೀರರು ಅಂದರೆ ಜ್ಞಾನಿಗಳು (ಹೀಗೆ ನೋಡುವರು) ಎಂದು ಹೇಳಿದ್ದರಿಂದ ಅದೃಶ್ಯತ್ವ ಮತ್ತು ದೃಶ್ಯತ್ವಗಳಿಗೆ ವಿರೋಧಪರಿಹಾರವಾಗುವುದು.

ಭಾ– 'ಯಥೋರ್ಣನಾಭಿಸ್ಸೃಜತೇ ಗೃಹ್ಣತೇ ಚ
ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ।
ಯಥಾ ಸತಃ ಪುರುಷಾತ್ ಕೇಶಲೋಮಾನಿ
ತಥಾಽಕ್ಷರಾತ್ಸಂಭವತೀಹ ವಿಶ್ವಮ್'

ಇತ್ಯುಕ್ತ್ವಾ ತಸ್ಮಾಚ್ಚ 'ಅಕ್ಷರಾತ್ಪರತಃ ಪರ' ಇತಿ ಪರಃ ಪ್ರತೀಯತೇ।

'ಯಥೋರ್ಣನಾಭಿಸ್ಸೃಜತೇ ಗೃಹ್ಣತೇ ಚ
ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ ।
ಯಥಾ ಸತಃ ಪುರುಷಾತ್ ಕೇಶಲೋಮಾನಿ
ತಥಾಽಕ್ಷರಾತ್ಸಂಭವತೀಹ ವಿಶ್ವಮ್' ಎಂದು ಹೇಳಿ ಆ ಅಕ್ಷರಕ್ಕಿಂತಲೂ ಶ್ರೇಷ್ಠನಾದವನು ಎಂದು ಒಬ್ಬ ಪರನು ತಿಳಿದು ಬರುತ್ತಾನೆ.

(ಭಾ.ದೀ.) ಏತದೇವ ದೃಷ್ಟಾಂತೋಕ್ತ್ಯಾ ಸ್ಪಷ್ಟಯತಿ – **ಯಥೇತಿ** ॥ 'ಯಥೋರ್ಣನಾಭಿಃ' ತಂತುವಾಯಃ 'ಸೃಜತೇ' ಸ್ವೋಪಭುಕ್ತವಸ್ತೂನಿ ತಂತ್ವಾತ್ಮನಾ ಪರಿಣತಾನಿ ಸ್ವದೇಹಾತ್ ನಿಷ್ಕಾಸಯತಿ, 'ಗೃಹ್ಣತೇ' ಚಕ್ರಾದ್ಯಾಕಾರತಯಾ ಬಹಿರ್ನಿಷ್ಕಾಸಿತಂ ವಸ್ತು ಪುನರಂತಃ ಸ್ವೋದರೇ ಗೃಹ್ಣಾತಿ ತಥಾ ವಿಶ್ವಂ ಪ್ರಲಯೇ ನಿಗೀರ್ಣಂ ಸೃಷ್ಟೌ ಅಕ್ಷರಾತ್ ಬಹಿಃ ಸಂಭವತಿ । ದೃಷ್ಟಾಂತಾಂತರಮಾಹ – **ಯಥೇತಿ** ॥ 'ಓಷಧಯಃ' ಅಂಕುರಾದಯಃ । ದೃಷ್ಟಾಂತಾಂತರಮಾಹ – **ಯಥೇತಿ** ॥ 'ಸತೋ' ಜೀವತಃ ಪುರುಷಾಚ್ಛರೀರಾತ್ ಶಿರಸ್ಥಾಃ ಕೇಶಾಃ, ಅನ್ಯಾನಿ ಲೋಮಾನಿ ತಾನಿ । 'ಇಹ' ಲೋಕೇ 'ವಿಶ್ವಂ' ನಾನಾವಿಧಕಾರ್ಯಂ 'ಸಂಭವತಿ' ಜಾಯತ ಇತ್ಯರ್ಥಃ । ಅತ್ರ 'ಬ್ರಹ್ಮಣೋ ಭೂತಕಾರಣತ್ವಂ ತತ್ಕರ್ತೃತ್ವರೂಪಂ ನ ತೂಪಾದಾನತ್ವಮ್' ಇತಿ ವಕ್ತುಮಾದ್ಯೋ ದೃಷ್ಟಾಂತಃ । 'ಅಂಕುರಾದಿಜನನೇ ಪೃಥಿವೀ ಬೀಜಮಿವ ವಿಶ್ವಸೃಷ್ಟೌ ಬ್ರಹ್ಮ ತತ್ಕರ್ಮಾಪೇಕ್ಷತೇ' ಇತಿ ವಕ್ತುಂ ದ್ವಿತೀಯಃ । 'ಅನಾಯಾಸೇನ ಸೃಷ್ಟಿಃ' ಇತಿ ವಕ್ತುಂ ತೃತೀಯಃ ಇತಿ ಧ್ಯೇಯಮ್ ।

'ದಿವ್ಯ' ಇತ್ಯಾದಿವಾಕ್ಯಂ ತು 'ದಿವ್ಯಃ' ಅದ್ಭುತಃ 'ಅಮೂರ್ತೋ' ನಿಯತಪರಿಚ್ಛಿನ್ನಪರಿಮಾಣರಹಿತಃ । ಕಿಂತು ಬಾಹ್ಯ ಆಭ್ಯಂತರಶ್ಚ । 'ಅಪ್ರಾಣೋ, ಹ್ಯಮನಾ' ಇತಿ ಪದಾಭ್ಯಾಂ ಷೋಡಶಕಲಾರಾಹಿತ್ಯಮುಚ್ಯತೇ । 'ಶುಭ್ರಃ' ಶುದ್ಧಃ ಜಡಾತ್ 'ಪರತಃ ಅಕ್ಷರಾತ್' 'ಚಿತ್ಪ್ರಕೃತೇಃ ಪರಃ' ಇತಿ ಕರ್ಮನಿರ್ಣಯಟೀಕಾಯಾಂ ವ್ಯಾಖ್ಯಾತಮ್ ।

ಈ ವಿಷಯವನ್ನೇ ದೃಷ್ಟಾಂತವನ್ನು ಹೇಳುವ ಮೂಲಕ 'ಯಥಾ' ಎಂಬ ಮಂತ್ರದಿಂದ ಶ್ರುತಿಯು ಸ್ಪಷ್ಟಪಡಿಸುತ್ತಿದೆ. ಯಥಾ ಊರ್ಣನಾಭಿಃ – ಹೇಗೆ ಒಂದು

ಜೇಡರ ಹುಳವು, ಸೃಜತೇ - ತಾನು ಭಕ್ಷಿಸಿದ, ತಂತುರೂಪವಾಗಿ ಬದಲಾವಣೆಗೊಂಡ ವಸ್ತುಗಳನ್ನು ತನ್ನ ದೇಹದಿಂದ ಹೊರಗೆ ಹಾಕುತ್ತದೋ, ಗೃಹ್ಣತೇ - ಚಕ್ರ ಮೊದಲಾದ ಆಕಾರವುಳ್ಳದ್ದಾಗಿ ಹೊರಗೆ ಹಾಕಿದ ವಸ್ತುವನ್ನು ಪುನಃ ತನ್ನ ಉದರದಲ್ಲಿ ಗ್ರಹಿಸು-ವುದೋ, ಹಾಗೆಯೇ ವಿಶ್ವಂ - ಈ ಜಗತ್ತು, ಪ್ರಳಯಕಾಲದಲ್ಲಿ ನುಂಗಲ್ಪಟ್ಟದ್ದಾಗಿ ಸೃಷ್ಟಿಕಾಲದಲ್ಲಿ ಹೊರಗೆ ಅಕ್ಷರನಿಂದ, ಸಂಭವತಿ - ಸೃಷ್ಟಿಯಾಗುತ್ತದೆ.

ಇನ್ನೊಂದು ದೃಷ್ಟಾಂತವನ್ನು ಯಥಾ ಎಂದು ಶ್ರುತಿಯು ಹೇಳುತ್ತಿದೆ. ಓಷಧಯಃ - ಅಂದರೆ ಅಂಕುರ ಮೊದಲಾದವುಗಳು. ಮತ್ತೊಂದು ದೃಷ್ಟಾಂತವನ್ನು ಪುನಃ ಯಥಾ ಎಂಬುದಾಗಿ ಶ್ರುತಿಯು ಉದಾಹರಿಸುತ್ತಿದೆ. ಸತಃ - ಜೀವಂತವಾದ, ಪುರುಷಾತ್ - ಪುರುಷನ ಶರೀರದಿಂದ, ಕೇಶಲೋಮಾನಿ - ಶಿರದಲ್ಲಿರುವ ಕೇಶಗಳು ಇತರ ಲೋಮಗಳು ಎಂದು ಅರ್ಥ. ಇಹ - ಈ ಲೋಕದಲ್ಲಿ, ವಿಶ್ವಂ - ನಾನಾವಿಧವಾದ ಕಾರ್ಯಗಳು, ಸಂಭವತಿ - ಹುಟ್ಟುತ್ತವೆ ಎಂದು ಅರ್ಥ. ಇಲ್ಲಿ ಬ್ರಹ್ಮನಿಗೆ ಭೂತ-ಕಾರಣತ್ವವೆಂದರೆ ಭೂತಗಳ ಸೃಷ್ಟಿಗೆ ಕರ್ತೃವಾಗಿರುವುದು ಹೊರತು ಉಪಾದಾನ-ಕಾರಣವಾಗಿರುವುದಲ್ಲ ಎಂದು ಹೇಳಲು ಮೊದಲನೆಯ ದೃಷ್ಟಾಂತ. ಅಂಕುರಾದಿಗಳ ಉತ್ಪತ್ತಿಯಲ್ಲಿ ಪೃಥಿವಿಯು ಬೀಜವನ್ನು ಹೇಗೆ ಅಪೇಕ್ಷಿಸುವುದೋ ಹಾಗೆಯೇ ವಿಶ್ವ-ಸೃಷ್ಟಿಯಲ್ಲಿ ಬ್ರಹ್ಮನು ಆ ಜೀವರ ಕರ್ಮಗಳನ್ನು ಅಪೇಕ್ಷಿಸುವನು ಎಂದು ಹೇಳಲು ಎರಡನೆಯ ದೃಷ್ಟಾಂತ. ಅನಾಯಾಸವಾಗಿ ಸೃಷ್ಟಿಕಾರ್ಯವು ಆಗುವುದೆಂದು ಹೇಳಲು ಮೂರನೆಯ ದೃಷ್ಟಾಂತವೆಂದು ತಿಳಿಯಬೇಕು.

ದಿವ್ಯ ಇತ್ಯಾದಿ ಶ್ರುತಿವಾಕ್ಯವಾದರೋ - ದಿವ್ಯಃ - ಅದ್ಭುತನು, ಅಮೂರ್ತಃ - ನಿಯಮಿತವಾದ ಒಂದು ಮಿತಿಯನ್ನು ಹೊಂದಿರುವ ಪರಿಮಾಣದಿಂದ ರಹಿತನು. ಬಾಹ್ಯಾಭ್ಯಂತರಃ - ಆದರೆ ಹೊರಗೂ ಒಳಗೂ ವ್ಯಾಪಿಸಿರುವವನು. 'ಅಪ್ರಾಣೋ ಹ್ಯಮನಾಃ' ಎಂಬ ಎರಡು ಪದಗಳಿಂದ ಹದಿನಾರು ಕಲೆಗಳ ಅಭಾವವನ್ನು ಹೇಳ-ಲಾಗಿದೆ. ಶುಭ್ರಃ - ಅಂದರೆ ಶುದ್ಧನು. ಪರತಃ ಅಕ್ಷರಾತ್ - ಜಡಪ್ರಕೃತಿಗಿಂತಲೂ ಶ್ರೇಷ್ಠವಾದ ಚೇತನಪ್ರಕೃತಿಗಿಂತಲೂ, ಪರಃ - ಉತ್ತಮನು ಎಂದು ಕರ್ಮನಿರ್ಣಯ ಟೀಕೆಯಲ್ಲಿ ವ್ಯಾಖ್ಯಾನ ಮಾಡಲಾಗಿದೆ.

**ಭಾ– ಅತೋಽಬ್ರವೀತ್ –**

ಆದ್ದರಿಂದ ಸೂತ್ರಕಾರರು ಹೇಳಿದ್ದಾರೆ –

**॥ ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ ॥ ೨೧ ॥**

ಅದೃಶ್ಯತ್ವಾದಿ ಗುಣಗಳನ್ನು ಹೊಂದಿರುವವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ, ಆ ಬ್ರಹ್ಮನ ಧರ್ಮಗಳನ್ನು ಇಲ್ಲಿ ಹೇಳಲಾಗಿದೆ.

(ಭಾ.ದೀ.) ಸಿದ್ಧಾಂತಯತ್ಸೂತ್ರಮವತಾರಯತಿ – **ಅತ ಇತಿ** ॥ 'ಇತಿ ಸಂಗತಿಸದ್ಭಾವಾತ್ ಇತಿ ಶಂಕಾಸದ್ಭಾವಾಚ್ಚ ತದುತ್ತರರೂಪಂ ಸೂತ್ರಮಬ್ರವೀತ್ ಬಾದರಾಯಣಃ' ಇತ್ಯರ್ಥಃ। ತತ್ಸೂತ್ರಂ ಪಠತಿ – **ಅದೃಶ್ಯತ್ವಾದೀತಿ** ॥

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅತಃ ಎಂಬುದಾಗಿ ಅವತಾರಿಕೆಯನ್ನು ಕೊಡುತ್ತಿದ್ದಾರೆ. ಹೀಗೆ ಸಂಗತಿ ಇರುವುದರಿಂದ ಹಾಗೂ ಈ ರೀತಿಯ ಶಂಕೆ ಇರುವುದರಿಂದ ಅದಕ್ಕೆ ಉತ್ತರರೂಪವಾಗಿ ಸೂತ್ರವನ್ನು ಬಾದರಾಯಣರು ಹೇಳಿದರೆಂದು ಅರ್ಥ. ಆ ಸೂತ್ರವನ್ನು 'ಅದೃಶ್ಯತ್ವಾದಿ' ಎಂಬುದಾಗಿ ಭಾಷ್ಯಕಾರರು ಪಠಿಸುತ್ತಿದ್ದಾರೆ.

**ಭಾ– ಪೃಥಿವ್ಯಾದಿದೃಷ್ಟಾಂತಮುಕ್ತ್ವಾ 'ಅಕ್ಷರಾತ್ಸಂಭವತೀಹ ವಿಶ್ವಮ್'** (ಮು. ೧-೧-೭) **ಇತ್ಯತಃ ಪರಂ ತತ್ಪರತಃ ಪರಾಭಿಧಾನಾತ್, 'ಕೂಟಸ್ಥೋಽಕ್ಷರ ಉಚ್ಯತೇ'** (ಭ.ಗೀ.೧೫-೧೬) **ಇತಿ ಸ್ಮೃತೇಶ್ಚ ಪ್ರಕೃತೇಃ ಪ್ರಾಪ್ತಿಃ।**

ಪೃಥಿವೀ ಮೊದಲಾದ ದೃಷ್ಟಾಂತಗಳನ್ನು ಹೇಳಿ, 'ಅಕ್ಷರಾತ್ ಸಂಭವತೀಹ ವಿಶ್ವಮ್' ಎಂದು ಹೇಳಿದ ನಂತರ ಅಕ್ಷರಕ್ಕಿಂತಲೂ ಉತ್ತಮ -ವಾದದ್ದು ಯಾವುದೋ ಅದಕ್ಕೂ ಉತ್ತಮವಾದದ್ದನ್ನು ಹೇಳಿರುವುದರಿಂದ 'ಕೂಟಸ್ಥೋಽಕ್ಷರ ಉಚ್ಯತೇ' ಎಂಬ ಸ್ಮೃತಿಯಿಂದಲೂ ಕೂಡ ಪ್ರಕೃತಿಯೇ ಅದೃಶ್ಯತ್ವಾದಿಗುಣಗಳನ್ನು ಹೊಂದಿರುವುದೆಂದು ಪ್ರಾಪ್ತವಾಗುವುದು.

(ಭಾ.ದೀ.) ನನ್ವದೃಶ್ಯತ್ವಾದಿಕಂ ವಿಷ್ಣೋರ್ನ ಚೇತ್ – ತರ್ಹಿ ವಾಕ್ಯಸ್ಯ ನಿರ್ವಿಷಯತಯಾ ಅಪ್ರಾಮಾಣ್ಯಂ ಸ್ಯಾತ್? ಇತ್ಯತಃ ಪೂರ್ವಪಕ್ಷಂ ವಿಶದಯತಿ – **ಪೃಥಿವ್ಯಾದೀತಿ** ॥ ಶ್ರುತೌ ಊರ್ಣನಾಭಿದೃಷ್ಟಾಂತಸ್ಯ ಪ್ರಾಥಮ್ಯೇಽಪಿ ತತ್ರ ಸೃಜತ ಇತ್ಯನೇನ ಕರ್ತೃತ್ವಮಾತ್ರಪ್ರತೀತೇಃ ಪೂರ್ವಪಕ್ಷಾನುಕೂಲಸ್ಯೋಪಾದನತಯಾ ಜಗತ್ಕಾರಣತ್ವಸ್ಯಾಪ್ರತೀತೇಃ ತಂ ಪರಿತ್ಯಜ್ಯ 'ಪೃಥಿವ್ಯಾದೀ'ತ್ಯುಕ್ತಮ್ । **ಚಃ** ಸಮುಚ್ಚಯೇ । ತಥಾಚೇತ್ಥಂ ಯೋಜನಾ – ಪೃಥಿವ್ಯಾದಿದೃಷ್ಟಾಂತಮುಕ್ತ್ವಾ ಅನಂತರಮುಕ್ತಾತ್ 'ಅಕ್ಷರಾತ್ ಸಂಭವತೀಹ ವಿಶ್ವಮ್' ಇತ್ಯತೋ ವಾಕ್ಯಾತ್ 'ಪರಮ್' ಅನಂತರಮಧೀತೇನ 'ಅಕ್ಷರಾತ್ ಪರತಃ ಪರಃ' ಇತಿ ವಾಕ್ಯೇನ 'ತತ್ಪರತಃ' ತಸ್ಮಾತ್ ಕಾರಣೀಭೂತಾದಕ್ಷರಾತ್ ಪರತಃ ಪರಸ್ಯೋತ್ತಮಸ್ಯೋಕ್ತತ್ವಾತ್, ತಥಾ 'ಕೂಟಸ್ಥೋಽಕ್ಷರ ಉಚ್ಯತೇ' ಇತಿ ಸ್ಮೃತೇಶ್ಚ ಜಡಪ್ರಕೃತೇಶ್ಚಿತ್ಪ್ರಕೃತೇಶ್ಚ ಅದೃಶ್ಯತ್ವಾದಿಪ್ರಾಪ್ತಿರಿತಿ ।

ಅತ್ರಾಯಂ ವಿವೇಕಃ – ಯದಾ ಜಡಪ್ರಕೃತೇಃ ಪೂರ್ವಪಕ್ಷವಿಷಯತಾ ತದಾ ಅಕ್ಷರಶಬ್ದೋ ಹೇತುಃ । ತತ್ಪರತಃ ಪರಾಭಿಧಾನಂ ಚ ತಸ್ಯ ನಿರವಕಾಶತ್ವೇ ಹೇತುಃ । ತದಾ ಅಕ್ಷರಶಬ್ದೋ ಜಡಪರಃ । 'ಅಕ್ಷರಾತ್ ಪರತಃ' ಇತಿ ಚ ವ್ಯಧಿಕರಣೇ ಪಂಚಮ್ಯೌ । ಯದಾ ಚ ಚಿತ್ಪ್ರಕೃತೇಸ್ತದಾ ಅಕ್ಷರಶಬ್ದಸ್ತತ್ಪರೋ ಹೇತುಃ । ಸಮಾನಾಧಿಕರಣೇ ಪಂಚಮ್ಯೌ । ಸ್ಮೃತೇಶ್ಚ ಇತ್ಯಪಿ ಹೇತುರಿತಿ । ಸ್ಮೃತಿಶ್ಚಾತ್ರಾಧಿಕರಣೇ ವ್ಯಾಖ್ಯಾತಾ ।

ಅದೃಶ್ಯತ್ವ ಮೊದಲಾದ ಧರ್ಮಗಳು ವಿಷ್ಣುವಿಗೆ ಇಲ್ಲವೆಂದಾದರೆ ವಾಕ್ಯವು ಪ್ರತಿಪಾದಿಸುವ ವಿಷಯವೇ ಇಲ್ಲವಾಗುವುದರಿಂದ ವಾಕ್ಯಕ್ಕೆ ಅಪ್ರಾಮಾಣ್ಯ ಬಂದೀತು! ಎಂಬ ಶಂಕೆಯನ್ನು ಪರಿಹರಿಸಲು ಭಾಷ್ಯಕಾರರು 'ಪೃಥಿವ್ಯಾದಿ' ಎಂಬ ವಾಕ್ಯದಿಂದ ಪೂರ್ವಪಕ್ಷವನ್ನು ಸ್ಪಷ್ಟಪಡಿಸುತ್ತಿದ್ದಾರೆ. ಶ್ರುತಿಯಲ್ಲಿ ಊರ್ಣನಾಭಿಯ ದೃಷ್ಟಾಂತವನ್ನು ಮೊದಲು ಹೇಳಿದ್ದರೂ ಅಲ್ಲಿ 'ಸೃಜತೇ' ಎಂಬ ಪದದಿಂದ ಕೇವಲ ಸೃಷ್ಟಿಕರ್ತೃತ್ವವು ತಿಳಿದು ಬರುವುದರಿಂದ, ಪೂರ್ವಪಕ್ಷಕ್ಕೆ ಅನುಕೂಲವಾಗುವ ಉಪಾದಾನವಾಗುವ ಮೂಲಕ ಜಗತ್ಕಾರಣತ್ವವು ತಿಳಿದು ಬರದಿರುವುದರಿಂದ ಆ ಮೊದಲನೆಯ ದೃಷ್ಟಾಂತವನ್ನು ಬಿಟ್ಟು ಭಾಷ್ಯದಲ್ಲಿ 'ಪೃಥಿವ್ಯಾದಿ' ಎಂದು ಎರಡನೆಯ ದೃಷ್ಟಾಂತವನ್ನು

ಹೇಳಲಾಗಿದೆ. 'ಸ್ಮೃತೇಶ್ಚ' ಎಂಬಲ್ಲಿರುವ ಚಕಾರವು ಸಮುಚ್ಚಯವನ್ನು ಹೇಳುವುದು. ತಥಾಚ ಭಾಷ್ಯವಾಕ್ಯದ ಯೋಜನೆ ಹೀಗಿದೆ – ಪೃಥಿವ್ಯಾದಿದೃಷ್ಟಾಂತಗಳನ್ನು ಹೇಳಿ, ಅನಂತರ ಹೇಳಿದ **'ಅಕ್ಷರಾತ್ ಸಂಭವತೀಹ ವಿಶ್ವಮ್'** ಎಂಬ ವಾಕ್ಯದ ದೆಸೆಯಿಂದ **ಪರಮ್** - ಅನಂತರದಲ್ಲಿ, ಪಠಿತವಾಗಿರುವ **'ಅಕ್ಷರಾತ್ ಪರತಃ ಪರಃ'** ಎಂಬ ವಾಕ್ಯ-ದಿಂದ, **'ತತ್ಪರತಃ'** - ಆ ಜಗತ್ಕಾರಣವಾದ ಅಕ್ಷರಕ್ಕಿಂತಲೂ, **ಪರತಃ** - ಯಾವುದು ಉತ್ತಮವೋ ಅದಕ್ಕಿಂತಲೂ, **ಪರಾಭಿಧಾನಾತ್** - ಉತ್ತಮವಾದುದನ್ನು 'ಹೇಳಿರು-ವುದರಿಂದ ಹಾಗೆಯೇ ಕೂಟಸ್ಥೋಽಕ್ಷರ ಉಚ್ಯತೇ' ಎಂಬ ಸ್ಮೃತಿಯಿಂದಲೂ ಜಡಪ್ರಕೃತಿಗೆ ಮತ್ತು ಚೇತನಪ್ರಕೃತಿಗೆ ಅದೃಶ್ಯತ್ವಾದಿ ಗುಣಗಳು ಇರುವುದೆಂದು ಪ್ರಾಪ್ತವಾಗುವುದು - ಎಂದು.

ಇಲ್ಲಿ ವಿವೇಚಿಸಬೇಕಾದ ವಿಷಯ ಹೀಗಿದೆ – ಯಾವಾಗ ಜಡಪ್ರಕೃತಿಯು ಪೂರ್ವಪಕ್ಷವಿಷಯವಾಗಿರುವುದೋ ಆಗ ಅಕ್ಷರಶಬ್ದವು ಪೂರ್ವಪಕ್ಷ ಹೇತುವಾಗಿ-ರುವುದು. ಅದಕ್ಕಿಂತಲೂ ಉತ್ತಮವಾದ ವಸ್ತುವಿಗಿಂತಲೂ ಉತ್ತಮವಾದದ್ದು ಎಂದು ಹೇಳಿರುವುದು ಆ ಅಕ್ಷರಶಬ್ದವು ವಿಷ್ಣುವಿನ ವಿಷಯದಲ್ಲಿ ಅವಕಾಶವನ್ನು ಪಡೆದಿಲ್ಲ-ವೆಂದು ಸಮರ್ಥಿಸಲು ಹೇತುವಾಗುವುದು. ಹೀಗೆ ವ್ಯಾಖ್ಯಾನ ಮಾಡಿದಾಗ ಅಕ್ಷರಾತ್ ಪರತಃ ಎಂಬಲ್ಲಿ ಎರಡು ಪಂಚಮೀವಿಭಕ್ತಿಗಳು ಒಂದೇ ವಸ್ತುವಿಗೆ ಸಂಬಂಧಪಟ್ಟ ಅರ್ಥವನ್ನು ಹೇಳುವುದಿಲ್ಲ[೧]. ಆದರೆ ಯಾವಾಗ ಚೇತನಪ್ರಕೃತಿಯು ಇಲ್ಲಿ ಪೂರ್ವ-ಪಕ್ಷವಿಷಯವೆಂದು ಹೇಳಲಾಗುವುದೋ ಆಗ ಅಕ್ಷರಶಬ್ದವು ಚೇತನಪ್ರಕೃತಿಯನ್ನು ಅದೃಶ್ಯತ್ವಾದಿಗುಣಕವೆಂದು ಸಾಧಿಸುವ ಹೇತುವಾಗುವುದು. ಆಗ ಎರಡು ಪಂಚಮೀ ವಿಭಕ್ತಿಗಳು ಒಂದೇ ವಸ್ತುವಿಗೆ ಸಂಬಂಧಪಟ್ಟ ಅರ್ಥವನ್ನು ಹೇಳುವವು. 'ಸ್ಮೃತೇಶ್ಚ' ಎಂಬ ಪದವೂ ಪೂರ್ವಪಕ್ಷಕ್ಕೆ ಸಾಧಕವಾದ ಹೇತುವಾಗಿದೆ. ಈ ಸ್ಮೃತಿಯಾದರೋ ಈ ಅಧಿಕರಣದಲ್ಲೇ ವ್ಯಾಖ್ಯಾನ ಮಾಡಲ್ಪಟ್ಟಿದೆ.

(೧) ಜಡಪ್ರಕೃತಿಯು ಅದೃಶ್ಯತ್ವಾದಿಗುಣಕವೆಂದು ಪೂರ್ವಪಕ್ಷವಿರುವುದಾದರೆ 'ಅಕ್ಷರಾತ್ ಪರತಃ ಪರಃ' ಎಂಬ ವಾಕ್ಯಕ್ಕೆ ಅಕ್ಷರಾತ್ – ಅಕ್ಷರಶಬ್ದವಾದ ಜಡ-ಪ್ರಕೃತಿಗಿಂತಲೂ, ಪರತಃ – ಉತ್ತಮವಾದ ಚೇತನಪ್ರಕೃತಿಗಿಂತಲೂ, ಪರಃ –

ಉತ್ತಮನು ಎಂದು ಅರ್ಥ. ಚೇತನಪ್ರಕೃತಿಯು ಅದೃಶ್ಯತ್ವಾದಿಗುಣಕವೆಂದು ಪೂರ್ವಪಕ್ಷವಿದ್ದಲ್ಲಿ ಅಕ್ಷರಾತ್ ಪರತಃ – ಉತ್ತಮವಾದ ಚೇತನಪ್ರಕೃತಿಗಿಂತಲೂ, ಪರಃ – ಉತ್ತಮನು ಎಂದು ವ್ಯಾಖ್ಯಾನ ಮಾಡಬೇಕೆಂದು ಭಾವ.

**ಭಾ– ಬ್ರಹ್ಮಶಬ್ದಾತ್ ತತ್ಪರತಃ ಪರಾಭಿಧಾನಾದೇವ ಚ ಹಿರಣ್ಯಗರ್ಭಸ್ಯ ।**

ಬ್ರಹ್ಮಶಬ್ದದಿಂದ ಮತ್ತು ಹಿರಣ್ಯಗರ್ಭನೆಂಬ ಅಕ್ಷರಕ್ಕಿಂತಲೂ ಶ್ರೇಷ್ಠವಾದ ವಸ್ತುವಿಗಿಂತಲೂ ಶ್ರೇಷ್ಠವಾದುದನ್ನು ಹೇಳಿರುವ ಕಾರಣದಿಂದ ಹಿರಣ್ಯಗರ್ಭನು ಪೂರ್ವಪಕ್ಷವಿಷಯನೆಂದು ಲಭಿಸುವನು.

(ಭಾ.ದೀ.) **ಪೂರ್ವಪಕ್ಷಾಂತರಂ ವಕ್ತಿ ಬ್ರಹ್ಮಶಬ್ದಾದಿತಿ ॥** 'ಸ ಬ್ರಹ್ಮವಿದ್ಯಾಮ್' ಇತ್ಯಾದೌ ಶ್ರುತಬ್ರಹ್ಮಶಬ್ದಾತ್ ಇತ್ಯರ್ಥಃ । ಬ್ರಹ್ಮಶಬ್ದೋ ವಿಷ್ಣಾವೇವ ಮುಖ್ಯ ಇತಿ ತಸ್ಯೈವ ಸಾಧಕೋ ನೇತರಸ್ಯ ಇತ್ಯತೋ ಹೇತ್ವಂತರಮಾಹ – **ಪರತ ಇತಿ ॥** ವ್ಯಧಿಕರಣೇ ಪಂಚಮ್ಯೌ । ತಥಾ ಚ– ಹಿರಣ್ಯಗರ್ಭಾಖ್ಯಾದಕ್ಷರಾತ್ 'ಪರತಃ' ಶ್ರೀತತ್ತ್ವಾತ್ ಪರಸ್ಯ ವಿಷ್ಣೋರಭಿಧಾನಾದಿತ್ಯರ್ಥಃ । 'ಏವ'ಶಬ್ದೇನ ಹೇತೋರ್ನಿರವಕಾಶತ್ವಂ ನಾತ್ರ ಹೇತ್ವಂತರಂ ಗವೇಷಣೀಯಮಿತಿ ಚ ಸೂಚಯತಿ । 'ಹಿರಣ್ಯಗರ್ಭಸ್ಯ ಪ್ರಾಪ್ತಿಃ' ಇತ್ಯನ್ವಯಃ । ಉಪಲಕ್ಷಣಮೇತತ್ । 'ಕರ್ತಾರಮೀಶಮ್' ಇತಿ ಈಶಶಬ್ದಶ್ರವಣಾದ್ 'ರುದ್ರಸ್ಯ ವಾ ಅದೃಶ್ಯತ್ವಾದಿಪ್ರಾಪ್ತಿಃ' ಇತಿ ವಕ್ಷ್ಯಮಾಣಮ್ ಅತ್ರಾಪಿ ದ್ರಷ್ಟವ್ಯಮ್ । ಅಸ್ಮಿನ್ ಪಕ್ಷೇ ಈಶಶಬ್ದಸ್ಯ ವಿಷ್ಣೌ ಸಾವಕಾಶತ್ವಶಂಕಾಯಾಮ್ ಅನಂತರಂ ತತ್ಪರತಃ ಪರಾಭಿಧಾನಾತ್ ಇತ್ಯಪಿ ಯೋಜ್ಯಮ್ । ಅತ್ರಾಪಿ ವ್ಯಧಿಕರಣೇ ಪಂಚಮ್ಯೌ ।

ಮತ್ತೊಂದು ಪೂರ್ವಪಕ್ಷವನ್ನು ಬ್ರಹ್ಮಶಬ್ದಾತ್ ಎಂಬ ವಾಕ್ಯದಿಂದ ಭಾಷ್ಯಕಾರರು ಹೇಳುತ್ತಿದ್ದಾರೆ. 'ಸ ಬ್ರಹ್ಮವಿದ್ಯಾಮ್' ಎಂಬ ಆಥರ್ವಣಶ್ರುತಿಯಲ್ಲಿ ಶ್ರುತವಾಗಿರುವ ಬ್ರಹ್ಮಶಬ್ದದಿಂದ ಎಂದು ಅರ್ಥ. ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯವಾದುದರಿಂದ ವಿಷ್ಣುವೇ ಅದೃಶ್ಯತ್ವಾದಿಗುಣಕನೆಂದು ಸಾಧಿಸಲು ಸಾಧಕವಾಗುವುದೇ ಹೊರತು ಅವನಿಂದ ಭಿನ್ನರನ್ನು ಅದೃಶ್ಯತ್ವಾದಿಗುಣಕನೆಂದು ಸಾಧಿಸಲು ಸಹಾಯಕವಾಗಲಾರದು ಎಂಬ ಶಂಕೆ ಬಂದಾಗ ಮತ್ತೊಂದು ಹೇತುವನ್ನು 'ಪರತಃ' ಎಂಬ ವಾಕ್ಯದಿಂದ

ಹೇಳುತ್ತಿದ್ದಾರೆ. ಈಗ ಅಕ್ಷರಾತ್ ಪರತಃ ಎಂಬ ಪದಗಳಲ್ಲಿರುವ ಪಂಚಮೀವಿಭಕ್ತಿಗಳು ಭಿನ್ನವ್ಯಕ್ತಿಗಳಿಗೆ ಸಂಬಂಧಪಟ್ಟ ಅರ್ಥವನ್ನು ಹೇಳುವವು. ತಥಾಚ – ಹಿರಣ್ಯಗರ್ಭನೆಂಬ ಅಕ್ಷರನಿಗಿಂತಲೂ 'ಪರತಃ' ಶ್ರೇಷ್ಠವಾದ ಶ್ರೀತತ್ವಕ್ಕಿಂತಲೂ, ಪರಾಭಿಧಾನಾತ್ - ಶ್ರೇಷ್ಠನಾದ ವಿಷ್ಣುವನ್ನು ಹೇಳಿರುವುದರಿಂದ ಎಂದು ಅರ್ಥ. ಪರಾಭಿಧಾನಾದೇವ ಎಂಬಲ್ಲಿರುವ ಏವ ಶಬ್ದದಿಂದ ಈ ಹೇತುವು ನಿರವಕಾಶವೆಂದೂ ಈ ವಿಷಯವನ್ನು ಸಾಧಿಸಲು ಮತ್ತೊಂದು ಹೇತುವನ್ನು ಅನ್ವೇಷಿಸಬೇಕಾದುದಿಲ್ಲವೆಂದೂ ಸೂಚಿಸುತ್ತಿದ್ದಾರೆ. ಹಿರಣ್ಯಗರ್ಭಸ್ಯ ಎಂಬ ಪದಕ್ಕೆ ಪ್ರಾಪ್ತಿಃ ಎಂಬ ಪದದಿಂದ ಅನ್ವಯವಾಗುತ್ತದೆ. ಇದು ಉಪಲಕ್ಷಣವಾಗಿದ್ದು 'ಕರ್ತಾರಮೀಶಂ' ಎಂಬಲ್ಲಿ ಈಶಶಬ್ದವು ಶ್ರುತವಾಗಿರುವುದರಿಂದ ಅಥವಾ ರುದ್ರನಿಗೆ ಅದೃಶ್ಯತ್ವಾದಿಗಳು ಪ್ರಾಪ್ತವಾಗುವವು ಎಂದು ಮುಂದೆ ಹೇಳಿರುವುದನ್ನೂ ಇಲ್ಲಿ ಗಮನಿಸಬೇಕು. ಈ ಪಕ್ಷದಲ್ಲಿ ಈಶಶಬ್ದವು ವಿಷ್ಣೌ – ವಿಷ್ಣುವಿನ ವಿಷಯದಲ್ಲಿ ಸಾವಕಾಶವಾಗಿದೆ ಎಂಬ ಶಂಕೆಯನ್ನು ಪರಿಹರಿಸಲು ಅನಂತರ '**ತತ್ಪರತಃ ಪರಾಭಿಧಾನಾತ್**' ಎಂಬ ಪದಗಳನ್ನು ಇಲ್ಲಿ ಯೋಜಿಸಬೇಕು. ಈ ಪಕ್ಷದಲ್ಲೂ ಅಕ್ಷರಾತ್ ಪರತಃ ಎಂಬಲ್ಲಿರುವ ಪಂಚಮೀ ವಿಭಕ್ತಿಗಳು ವಿಭಿನ್ನವ್ಯಕ್ತಿಗಳಿಗೆ ಸಂಬಂಧಪಟ್ಟ ಅರ್ಥವನ್ನು ಹೇಳುವವು.

**ಭಾ– 'ತಮೇವಂ ವಿದ್ವಾನಮೃತ ಇಹ ಭವತಿ' (ತೈ.ಆ.೩-೧೨-೭)। 'ತತ್ಕರ್ಮ ಹರಿತೋಷಂ ಯತ್ ಸಾ ವಿದ್ಯಾ ತನ್ಮತಿರ್ಯಯಾ' 'ಅಥ ದ್ವೇ ವಾವ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ। ತತ್ರ ಯೇ ವೇದಾ ಯಾನ್ಯಂಗಾನಿ ಯಾನ್ಯುಪಾಂಗಾನಿ ಯಾನಿ ಪ್ರತ್ಯಂಗಾನಿ ಸಾಽಪರಾ। ಅಥ ಪರಾ ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರಮಾತ್ಮಾ' (ಮು.೧.೧.೫)ಇತ್ಯಾದಿನಾ ತದ್ಧರ್ಮತ್ವೇನ ಅವಗತಪರವಿದ್ಯಾವಿಷಯತ್ವೋಕ್ತೇರ್ವಿಷ್ಣುರೇವಾದೃಶ್ಯತ್ವಾದಿಗುಣಕಃ ॥೨೧**

'ತಮೇವಂ ವಿದ್ವಾನಮೃತ ಇಹ ಭವತಿ' (ತೈ.ಆ.೩-೧೨-೭)। - ಆ ಪುರುಷನನ್ನು ಹೀಗೆ ತಿಳಿದವನು ಮುಕ್ತನಾಗುವನು, 'ತತ್ಕರ್ಮ ಹರಿ-

ತೋಷಂ ಯತ್ ಸಾ ವಿದ್ಯಾ ತನ್ಮತಿರ್ಯಯಾ' - ಯಾವುದು ಹರಿಯ ಸಂತೋಷಕಾರಣವೋ ಅದೇ ಕರ್ಮವೆನಿಸುವುದು. ಆ ಹರಿಯ ತತ್ವಜ್ಞಾನವು ಯಾವುದರಿಂದ ಉಂಟಾಗುವುದೋ ಅದೇ ವಿದ್ಯೆಯೆಂದೆನಿಸುವುದು; 'ಅಥ ದ್ವೇ ವಾವ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ । ತತ್ರ ಯೇ ವೇದಾ ಯಾನ್ಯಂಗಾನಿ ಯಾನ್ಯು-ಪಾಂಗಾನಿ ಯಾನಿ ಪ್ರತ್ಯಂಗಾನಿ ಸಾಽಪರಾ । ಅಥ ಪರಾ ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರ-ಮಾತ್ಮಾ' - ತಿಳಿಯಬೇಕಾದ ವಿದ್ಯೆಗಳು ಎರಡು ಎಂದು ಪ್ರಸಿದ್ಧ-ವಾಗಿವೆ. ಆ ವಿದ್ಯೆಗಳು ಪರವಿದ್ಯೆ ಮತ್ತು ಅಪರವಿದ್ಯೆಯಾಗಿವೆ. ಅವೆರಡರಲ್ಲಿ ಯಾವ ವೇದಗಳು ಯಾವ ವೇದಾಂಗಗಳು ಉಪಾಂಗ-ಗಳು ಮತ್ತು ಪ್ರತ್ಯಂಗಗಳೂ ಇರುವವೋ ಅವುಗಳು ಅಪರವಿದ್ಯೆ-ಗಳು. ಅನಂತರ ಯಾರು ಅದೃಶ್ಯನೂ, ಶ್ರೇಷ್ಠನೂ, ಸತ್ವಾದಿಗುಣ-ತ್ರಯರಹಿತನೂ, ಪರಮಾತ್ಮನೂ ಆಗಿರುವ ಆ ಶ್ರೀಹರಿಯು ತಿಳಿದು ಬರುವನೋ ಅದು ಪರವಿದ್ಯೆಯೆಂದೆನಿಸುವುದು. – ಇತ್ಯಾದಿ ವಾಕ್ಯಗಳಿಂದ ವಿಷ್ಣುವಿನ ಧರ್ಮವೆಂದು ಪ್ರಸಿದ್ಧವಾಗಿರುವ ಪರವಿದ್ಯಾ -ವಿಷಯತ್ವವನ್ನು ಇಲ್ಲಿ ಹೇಳಿರುವುದರಿಂದ ವಿಷ್ಣುವೇ ಅದೃಶ್ಯತ್ವಾದಿ-ಗುಣವುಳ್ಳವನು.

(ಭಾ.ದೀ.) ಏವಂ ಪ್ರಾಪ್ತಂ ಪೂರ್ವಪಕ್ಷಂ ಪ್ರತಿಕ್ಷೇಪ್ತುಂ ಸೂತ್ರಂ ವ್ಯಾಚಷ್ಟೇ – **ತಮೇವಮಿತಿ॥** 'ತಮೇವಮ್' ಇತ್ಯೇಕಂ ಶ್ರುತಿವಾಕ್ಯಮ್ । 'ತತ್' ಇತ್ಯಪರಂ ಸ್ಮೃತಿ-ವಾಕ್ಯಮ್ । 'ಅಥ' ಇತ್ಯನ್ಯತ್ ಶ್ರುತಿವಾಕ್ಯಮ್ । ಆದಿಪದೇನ 'ತದೇತದ್ ಬ್ರಹ್ಮ' (ಬೃ.೪-೫-೧೯) 'ತ್ರಿಪಾದಸ್ಯಾಮೃತಮ್' (ಋ.೧೦-೯೦-೩) ಇತ್ಯಾದಿಕಂ ಗೃಹ್ಯತೇ। ತಸ್ಯ ವಿಷ್ಣೋರ್ಧರ್ಮಃ - ತದ್ಧರ್ಮಃ, ತಸ್ಯ ಭಾವಃ ತತ್ತ್ವಂ ತೇನ ಇತಿ ವಿಗ್ರಹಃ । ಪ್ರಕಾರೇ ತೃತೀಯಾ । ಅವಗತತ್ವಂ ಪ್ರಸಿದ್ಧತ್ವಂ ವಿಷಯತ್ವವಿಶೇಷಣಮ್ । ಅಮೃತ-

ತ್ವಾದೇರಪಿ ಉಪಲಕ್ಷಣಮೇತತ್ । 'ಅತ್ರ' ಇತಿ ಶೇಷಃ । ಸೂತ್ರೇಽನುವೃತ್ತಸ್ಯ 'ತತ್ತು' ಇತ್ಯಸ್ಯಾರ್ಥಃ– **ವಿಷ್ಣುರೇವೇತಿ** ॥ ಅತ್ರಾದೃಶ್ಯತ್ವಂ ದೃಶ್ಯಭಿನ್ನತ್ವಮ್ । ತಚ್ಚ ಸ್ವರೂಪಮ್, ನ ತು ಗೋತ್ರಾದ್ಯತ್ಯಂತಾಭಾವವದ್ ಬ್ರಹ್ಮಭಿನ್ನಮ್ । ತತ್ರ ತದ್ವತ್ತ್ವಂ ಬ್ರಹ್ಮ-ಸ್ವರೂಪಮ್ ಇತಿ ವಿಶೇಷಂ ವಕ್ತುಮ್ 'ಅದೃಶ್ಯತ್ವಾದಯೋ ಗುಣಾ ಯಸ್ಯ' ಇತಿ ಬಹುವ್ರೀಹಿತ್ವಂ ಚ ಸೂಚಯಿತುಂ ಶುಭಧರ್ಮಾರ್ಥಕಗುಣಶಬ್ದಪ್ರಯೋಗಃ ಕಪ್ರತ್ಯಯಶ್ಚ ।

ತಥಾಚ ಇತ್ಥಂ ಸೂತ್ರಭಾಷ್ಯಯೋಜನಾ – ಅದೃಶ್ಯತ್ವಾದಿಗುಣಕಸ್ತತ್ತು ವಿಷ್ಣುರೇವ । ಕುತಃ? ಅತ್ರ ಪ್ರಕರಣೇ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' (ಮುಂ. ೧.೧.೫) 'ತದೇತದಕ್ಷರಂ ಬ್ರಹ್ಮ' (ಮುಂ.೨.೨.೨) 'ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಮ್' (ಮುಂ.೨.೧.೧೦) ಇತಿ ವಾಕ್ಯೇಷು ತಸ್ಯ ಅದೃಶ್ಯತ್ವಾದಿ ಗುಣಕಸ್ಯ ಪರವಿದ್ಯಾವಿಷಯತ್ವರೂಪಧರ್ಮೋಕ್ತೇಃ । ನ ಚ ತಸ್ಯ ಪರವಿದ್ಯಾ-ವಿಷಯತ್ವೋಕ್ತಾವಪಿ ಕುತೋ ವಿಷ್ಣುತ್ವಮಿತಿ ವಾಚ್ಯಮ್ । ಯತಸ್ತತ್ 'ತಮೇವಮ್' ಇತ್ಯಾದಿನಾ ತದ್ಧರ್ಮತ್ವೇನಾವಗತಮ್ ಇತಿ ।

ಅತ್ರ 'ತಮೇವಮ್' ಇತಿ ಶ್ರುತೌ ಮೋಕ್ಷಸಾಧನಜ್ಞಾನವಿಷಯತ್ವೋಕ್ತ್ಯಾ ವಿಷ್ಣೋಃ ಪರವಿದ್ಯಾವಿಷಯತ್ವಮುಕ್ತಂ ಭವತಿ । ಮೋಕ್ಷಸಾಧನವಿದ್ಯಾಯಾ ಏವ ಪರವಿದ್ಯಾ-ತ್ವಾತ್ ।

'ತತ್ಕರ್ಮ' ಇತಿ ಸ್ಮೃತಾವಪಿ ಯತ್ ಹರಿತುಷ್ಟಿಕರಂ ತದೇವ ಕರ್ಮ । ಯಯಾ 'ತನ್ಮತಿಃ' ಹರೇಃ ಜ್ಞಾನಂ ಭವತಿ, ಸೈವ ವಿದ್ಯಾ ಇತ್ಯುಕ್ತತ್ವೇನ ತಸ್ಯ ಪರವಿದ್ಯಾವಿಷಯತ್ವ-ಮುಚ್ಯತೇ । 'ದ್ವೇ ವಿದ್ಯೇ ವೇದಿತವ್ಯೇ' (ಮುಂ.೧.೧.೪) ಇತ್ಯತ್ರಾಪಿ ವಿಷ್ಣೋಃ ಪರ-ವಿದ್ಯಾವಿಷಯತ್ವಮುಚ್ಯತ ಇತಿ ನ ಹೇತುವಿಶೇಷಣಾಸಿದ್ಧಿಃ ।

'ಅಥ' ಇತಿ ಪ್ರಕರಣಾರಂಭೇ । 'ವಾವ' ಇತ್ಯವಧಾರಣೇ । ಚೌ ಪರಸ್ಪರಸಮು-ಚ್ಚಯೇ । ತಥಾಚ – ಪರಾ ಚಾಪರಾ ಚ ದ್ವೇ ವಿದ್ಯೇ ಜ್ಞಾತವ್ಯೇ । 'ತತ್ರ' - ಪರಾ-

ಪರಯೋರ್ಮಧ್ಯೇ 'ಯೇ ವೇದಾಃ' ಋಗಾದ್ಯಾಃ ಯಾನಿ ಶಿಕ್ಷಾದಿಷಡಂಗಾನಿ 'ಯಾನ್ಯುಪಾಂಗಾನಿ' ಆಯುರ್ವೇದಗಾಂಧರ್ವಾದೀನಿ । 'ಯಾನಿ ಪ್ರತ್ಯಂಗಾನಿ' ಶಿಷ್ಟಾಃ ಕಲಾ ವಿದ್ಯಾಃ ಸಾಽಪರಾ । 'ಅಥ' ಇತ್ಯರ್ಥಾಂತರೇ । ಯೋಽಸೌ 'ಅದೃಶ್ಯೋ' - ದೃಶ್ಯಾದನ್ಯೋ, 'ನಿರ್ಗುಣಃ' ಸತ್ತ್ವಾದಿಹೀನಃ, 'ಪರೋ' ವಿಲಕ್ಷಣಃ, 'ಪರಮಾತ್ಮಾ' ಸರ್ವೋತ್ತಮೋ ವ್ಯಾಪ್ತಃ ಸ ಹರಿರ್ಯಯಾ ವೇದಿತವ್ಯಃ ಸಾ ಋಗಾದಿರೂಪೈವ ಪರಾ – ಇತಿ ಶ್ರುತ್ಯರ್ಥಃ । ತಥಾಚ – ಯಥಾ ಏಕಸ್ಯ ಕರ್ಮಣಃ ಸಕಾಮತ್ವನಿಷ್ಕಾಮತ್ವ-ರೂಪೋಪಾಧಿಭೇದಾತ್ ಪ್ರವೃತ್ತನಿವೃತ್ತಪದೋದಿತತ್ವಂ ತಥಾ ವಿಷ್ಣುವಿಷಯಕತ್ವ-ಕರ್ಮಾದಿವಿಷಯಕತ್ವರೂಪೋಪಾಧಿಭೇದಾದ್ ಋಗಾದೀನಾಮ್ ಏವ ಪರಾಪರ-ವಿದ್ಯಾತ್ವೋಪಪತ್ತಿಃ - ಇತಿ ಭಾವಃ ।

ನ ಚಾನುವ್ಯಾಖ್ಯಾನೇ ಬ್ರಹ್ಮಸೂತ್ರಸ್ಯ ಪರವಿದ್ಯಾತ್ವೋಕ್ತಿವಿರೋಧಃ । ಅನು-ಗ್ರಾಹ್ಯತಯಾ ಋಗಾದೀನಾಮನುಗ್ರಾಹಕತಯಾ ಬ್ರಹ್ಮಸೂತ್ರಸ್ಯ ಚ ಪರವಿದ್ಯಾತ್ವೋ-ಪಪತ್ತೇಃ ॥

ಹೀಗೆ ಬಂದ ಪೂರ್ವಪಕ್ಷವನ್ನು ನಿರಾಕರಿಸಲು 'ತಮೇವಂ' ಎಂಬ ವಾಕ್ಯದಿಂದ ಭಾಷ್ಯಕಾರರು ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ತಮೇವಂ' ಎಂಬ ವಾಕ್ಯವು ಒಂದು ಶ್ರುತಿವಾಕ್ಯ. 'ತತ್' ಎನ್ನುವುದು ಅದಕ್ಕಿಂತ ಭಿನ್ನವಾದ ಸ್ಮೃತಿವಾಕ್ಯವಾಗಿದೆ. ಅಥ ಎಂಬ ವಾಕ್ಯವು ಮತ್ತೊಂದು ಶ್ರುತಿವಾಕ್ಯವಾಗಿವೆ. ಇತ್ಯಾದಿನಾ ಎಂಬಲ್ಲಿರುವ ಆದಿಪದದಿಂದ 'ತದೇತದ್ ಬ್ರಹ್ಮ' 'ತ್ರಿಪಾದಸ್ಯಾಮೃತಮ್' ಇತ್ಯಾದಿ ವಾಕ್ಯಗಳು ಗ್ರಹಿಸಲ್ಪಡುತ್ತವೆ. 'ತದ್ಧರ್ಮತ್ವೇನ' ಎಂಬ ಪದಕ್ಕೆ ತಸ್ಯ ಧರ್ಮಃ - ತದ್ಧರ್ಮಃ; ತಸ್ಯ ಭಾವಃ - ತತ್ತ್ವಂ - ತೇನ ಎಂದು ವಿಗ್ರಹ. ಆ ವಿಷ್ಣುವಿನ ಧರ್ಮವು ತದ್ಧರ್ಮ. ಅದರ ಧರ್ಮ ತದ್ಧರ್ಮತ್ವ ಅದರಿಂದ ಎಂದು ಅರ್ಥ. ತದ್ಧರ್ಮತ್ವೇನ ಎಂಬಲ್ಲಿರುವ ತೃತೀಯಾ ವಿಭಕ್ತಿಯು 'ಪ್ರಕಾರ' ಎಂಬ ಅರ್ಥವನ್ನು ಹೇಳುವುದು. ಅವಗತತ್ವವೆಂದರೆ ಪ್ರಸಿದ್ಧತ್ವ. ಇದು ಪರವಿದ್ಯಾವಿಷಯತ್ವಕ್ಕೆ ವಿಶೇಷಣವಾಗಿದೆ. ಪರವಿದ್ಯಾವಿಷಯತ್ವ ಎಂಬ ಪದವು ಅಮೃತತ್ವ ಮೊದಲಾದ ಇತರ ಧರ್ಮಗಳನ್ನು ಲಕ್ಷಣಾವೃತ್ತಿಯಿಂದ

ಹೇಳುವುದು. ಅತ್ರ ಎಂಬ ಪದವು ಇಲ್ಲಿ ಶೇಷವಾಗಿದೆ. ಭಾಷ್ಯದಲ್ಲಿ 'ವಿಷ್ಣುರೇವ' - ಎನ್ನುವುದು ಈ ಸೂತ್ರದಲ್ಲಿ 'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ ಅನುವೃತ್ತಿ-ಯನ್ನು ಹೊಂದಿರುವ 'ತತ್ ತು' ಎಂಬ ಪದಗಳ ಅರ್ಥವಾಗಿದೆ. ಇಲ್ಲಿ ಅದೃಶ್ಯತ್ವ-ವೆಂದರೆ ದೃಶ್ಯದಿಂದ ಭೇದ ಎಂದು ಅರ್ಥ. ಈ ಭೇದವು ಬ್ರಹ್ಮನ ಸ್ವರೂಪವೇ ಆಗಿದೆ ಹೊರತು ಗೋತ್ರಾದಿಗಳ ಅತ್ಯಂತಾಭಾವದಂತೆ ಬ್ರಹ್ಮನಿಂದ ಭಿನ್ನವಲ್ಲ. 'ಗೋತ್ರಾದಿಗಳ ಅತ್ಯಂತಾಭಾವವನ್ನು ಹೊಂದಿರುವಿಕೆ'ಯು ಬ್ರಹ್ಮಸ್ವರೂಪವಾಗಿದೆ ಎಂಬ ವಿಶೇಷವನ್ನು ತಿಳಿಸಲು ಹಾಗೆಯೇ ಅದೃಶ್ಯತ್ವಾದಿಗುಣಕಃ ಎಂಬ ಪದವು ಅದೃಶ್ಯತ್ವಾದಯಃ ಗುಣಾಃ ಯಸ್ಯ ಎಂಬ ವಿಗ್ರಹಾನುಸಾರವಾಗಿ ಬಹುವ್ರೀಹಿಸಮಾಸವಾಗಿದೆ ಎಂಬುದನ್ನೂ ಸೂಚಿಸಲು ಮಂಗಳಕರವಾದ ಧರ್ಮ ಎಂಬ ಅರ್ಥದ ಗುಣಶಬ್ದವನ್ನು ಹಾಗೂ ಕಪ್ರತ್ಯಯವನ್ನು ಸೂತ್ರದಲ್ಲಿ ಪ್ರಯೋಗಿಸಲಾಗಿದೆ.

ತಥಾಚ ಇಲ್ಲಿ ಸೂತ್ರಭಾಷ್ಯಗಳಯೋಜನೆ ಹೀಗಿದೆ – ಅದೃಶ್ಯತ್ವಾದಿಗುಣಕಃ ತತ್ತು - ಅದೃಶ್ಯತ್ವ ಮೊದಲಾದ ಶುಭಧರ್ಮಗಳನ್ನು ಹೊಂದಿರುವವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಈ ಪ್ರಕರಣದಲ್ಲಿ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' 'ತದೇತದಕ್ಷರಂ ಬ್ರಹ್ಮ' 'ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಮ್' ಎಂಬ ವಾಕ್ಯಗಳಲ್ಲಿ ತಸ್ಯ – ಆ ಅದೃಶ್ಯತ್ವಾದಿಗುಣಗಳನ್ನು ಹೊಂದಿ-ರುವವನಿಗೆ ಪರವಿದ್ಯಾವಿಷಯತ್ವವೆಂಬ ಧರ್ಮವನ್ನು ಹೇಳಲಾಗಿದೆ. ಅವನಿಗೆ ಪರ-ವಿದ್ಯಾವಿಷಯತ್ವವನ್ನು ಹೇಳಿದ್ದರೂ ಅವನು ವಿಷ್ಣುವೇ ಏಕಾಗಬೇಕು? ಎಂದು ಶಂಕಿಸ-ತಕ್ಕದ್ದಲ್ಲ. ಏಕೆಂದರೆ ಆ ಪರವಿದ್ಯಾವಿಷಯತ್ವವು 'ತಮೇವಮ್' ಇತ್ಯಾದಿ ವಾಕ್ಯಗ-ಳಿಂದ ವಿಷ್ಣುವಿನ ಧರ್ಮವೆಂದೇ ಪ್ರಸಿದ್ಧವಾಗಿದೆ - ಎಂದು.

ಇಲ್ಲಿ 'ತಮೇವಮ್' ಎಂಬ ಶ್ರುತಿಯಲ್ಲಿ ವಿಷ್ಣುವಿಷಯಕವಾದ ಜ್ಞಾನವು ಮೋಕ್ಷ-ಸಾಧನವೆಂದು ಹೇಳಿರುವುರಿಂದ ವಿಷ್ಣುವಿಗೆ ಪರವಿದ್ಯಾವಿಷಯತ್ವವನ್ನು ಹೇಳಿದಂತಾ-ಗುವುದು. ಏಕೆಂದರೆ ಮೋಕ್ಷಸಾಧನವಿದ್ಯೆಯೇ ಪರವಿದ್ಯೆಯಾಗಿದೆ.

'ತತ್ಕರ್ಮ' ಎಂಬ ಸ್ಮೃತಿಯಲ್ಲೂ – ಯಾವುದು ಹರಿಗೆ ಸಂತೋಷಕರವೋ ಅದೇ ಕರ್ಮ. ಯಾವುದರಿಂದ 'ತನ್ಮತಿಃ' - ಅಂದರೆ ಶ್ರೀಹರಿಯ ಜ್ಞಾನವು ಉಂಟಾ-

ಗುವುದೋ ಅದೇ ವಿದ್ಯೆ ಎಂದು ಹೇಳಿರುವುದರಿಂದ ವಿಷ್ಣುವಿಗೆ ಪರವಿದ್ಯಾ-ವಿಷಯತ್ವವು ಹೇಳಲ್ಪಟ್ಟಿದೆ. 'ದ್ವೇ ವಿದ್ಯೇ ವೇದಿತವ್ಯೇ' ಎಂಬಲ್ಲೂ ವಿಷ್ಣುವಿಗೆ ಪರವಿದ್ಯಾವಿಷಯತ್ವವು ಹೇಳಿದೆಯಾದ್ದರಿಂದ ಈ ಹೇತುವಿಗೆ ಅಸಿದ್ಧಿದೋಷವಿಲ್ಲ.

ಅಥ ದ್ವೇ ವಾವ ಎಂಬ ಶ್ರುತ್ಯರ್ಥ ಹೀಗಿದೆ – ಅಥ ಎಂಬ ಶಬ್ದವು ಪ್ರಕರಣದ ಆರಂಭವನ್ನು ಸೂಚಿಸುವುದು. ವಾವ - ಎಂಬ ಶಬ್ದವು ಅವಧಾರಣವನ್ನು ಹೇಳು-ವುದು. ಎರಡು ಚಶಬ್ದಗಳು ಪರಸ್ಪರ ಸಮುಚ್ಚಯವನ್ನು ಹೇಳುವುದು. ತಥಾಚ - ಪರಾ ಅಪರಾ ಎಂಬ ಎರಡು ವಿದ್ಯೆಗಳು ತಿಳಿಯಬೇಕಾದ ವಿದ್ಯೆಗಳು. ತತ್ರ - ಆ ಪರಾ-ಪರವಿದ್ಯೆಗಳ ಮಧ್ಯದಲ್ಲಿ, 'ಯೇ ವೇದಾಃ' - ಯಾವ ಋಗಾದಿವೇದಗಳೋ, ಯಾನ್ಯಂಗಾನಿ - ಯಾವ ಶಿಕ್ಷಾ ಮೊದಲಾದ ಆರು ಅಂಗಗಳಿವೆಯೋ, ಯಾನಿ ಉಪಾಂಗಾನಿ - ಆಯುರ್ವೇದ ಗಾಂಧರ್ವ ಮೊದಲಾದ ಯಾವ ಉಪಾಂಗಗ-ಳಿವೆಯೋ, ಯಾನಿ ಪ್ರತ್ಯಂಗಾನಿ- ಉಳಿದ ಕಲೆಗಳು ಇವೆಯೋ, ಆ ವಿದ್ಯೆಗಳು ಅಪರವಿದ್ಯೆಗಳು. ಅಥ - ಎಂಬ ಪದವು ಇನ್ನೊಂದು ವಿಷಯವನ್ನು ಹೇಳುವ ಅರ್ಥ-ವುಳ್ಳದ್ದು. ಯೋಽಸೌ ಅದೃಶ್ಯಃ - ಯಾವ ದೃಶ್ಯಕ್ಕಿಂತಲೂ ಭಿನ್ನನಾದ, ನಿರ್ಗುಣಃ - ಸತ್ವ ಮೊದಲಾದ ಗುಣರಹಿತನಾದ, ಪರಃ - ವಿಲಕ್ಷಣನಾದ, ಪರಮಾತ್ಮಾ - ಸರ್ವೋತ್ತಮನೂ ವ್ಯಾಪ್ತನೂ ಆದವನೋ ಆ ಹರಿಯು, ಯಯಾ ವೇದಿತವ್ಯಃ - ಯಾವುದರಿಂದ ತಿಳಿಯಲ್ಪಡುವನೋ ಆ ಋಗಾದಿರೂಪವಾದ ವಿದ್ಯೆಯೇ ಪರವಿದ್ಯೆ ಎಂದು ಶ್ರುತಿಯ ಅರ್ಥ.

ತಥಾಚ - ಹೇಗೆ ಒಂದೇ ಕರ್ಮವು ಸಕಾಮತ್ವ ನಿಷ್ಕಾಮತ್ವ ಎಂಬ ನಿಮಿತ್ತ-ಭೇದದಿಂದ ಕ್ರಮವಾಗಿ ಪ್ರವೃತ್ತಕರ್ಮ ಮತ್ತು ನಿವೃತ್ತಕರ್ಮಗಳೆಂದು ಪದಗಳಿಂದ ಹೇಳಲ್ಪಡುವುದೋ ಹಾಗೆಯೇ ವಿಷ್ಣುವಿಷಯಕತ್ವ, ಕರ್ಮಾದಿವಿಷಯಕತ್ವ ಎಂಬ ಉಪಾಧಿಭೇದದಿಂದ ಋಗಾದಿಗಳೇ ಪರವಿದ್ಯೆ ಮತ್ತು ಅಪರವಿದ್ಯೆ ಎನ್ನುವುದು ಯುಕ್ತ-ವಾಗಿದೆ ಎಂದು ಭಾವ.

ಹೀಗೆ ಹೇಳಿದರೆ ಅನುವ್ಯಾಖ್ಯಾನದಲ್ಲಿ ಬ್ರಹ್ಮಸೂತ್ರಗಳನ್ನು ಪರವಿದ್ಯೆಯೆಂದು ಹೇಳಿರುವುದರ ವಿರೋಧ ಬರುವುದು ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಬ್ರಹ್ಮ-

ಸೂತ್ರಗಳಿಂದ ಅನುಗ್ರಾಹ್ಯವಾದ ಋಗಾದಿಗಳು ಪರವಿದ್ಯೆಯೆಂದೂ, ಅನುಗ್ರಾಹಕವಾದುದರಿಂದ ಬ್ರಹ್ಮಸೂತ್ರಗಳು ಪರವಿದ್ಯೆಯೆಂದು ಹೇಳುವುದು ಯುಕ್ತವಾಗಿರುವುದು.

**ಸೂ– ॥ ಓಂ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ಓಂ ॥ ೨೨ ॥**

ಸರ್ವಜ್ಞತ್ವವಿಶೇಷಣವನ್ನು ಹೇಳಿರುವುದರಿಂದ ಮತ್ತು ವಿರಿಂಚ-ರುದ್ರರನ್ನು ಅದೃಶ್ಯತ್ವಾದಿಗುಣಕನಾದ ಅಕ್ಷರನಿಂದ ಭಿನ್ನನೆಂದು ಹೇಳಿ-ರುವುದರಿಂದ ಪ್ರಕೃತಿ-ವಿರಿಂಚ-ರುದ್ರರು ಅದೃಶ್ಯತ್ವಾದಿಗುಣಕರಲ್ಲ.

**ಭಾ– 'ಯಃ ಸರ್ವಜ್ಞಃ ಸರ್ವವಿದ್ ಯಸ್ಯ ಜ್ಞಾನಮಯಂ ತಪಃ' ಇತಿ ವಿಶೇಷಣಾನ್ನ ಪ್ರಕೃತಿಃ। 'ತಸ್ಮಾದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ' ಇತಿ ಭೇದವ್ಯಪದೇಶಾನ್ನ ವಿರಿಂಚಃ।**

'ಯಃ ಸರ್ವಜ್ಞಃ ಸರ್ವವಿದ್ ಯಸ್ಯ ಜ್ಞಾನಮಯಂ ತಪಃ' ಎಂಬು-ದಾಗಿ ಸಾರ್ವಜ್ಞ್ಯಾದಿ ವಿಶೇಷಣವನ್ನು ಹೇಳಿರುವುದರಿಂದ ಪ್ರಕೃತಿಯು ಅದೃಶ್ಯತ್ವಾದಿಗುಣಕವಲ್ಲ. 'ತಸ್ಮಾದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ' ಎಂದು ವಿರಿಂಚನಿಗೆ ಭೇದವನ್ನು ಹೇಳಿರುವುದರಿಂದ ವಿರಿಂಚನೂ ಅದೃಶ್ಯತ್ವಾದಿಗುಣಕನಲ್ಲ.

(ಭಾ.ದೀ.) ಯದುಕ್ತಂ 'ಪ್ರಕೃತಿವಿರಿಂಚಯೋರದೃಶ್ಯತ್ವಾದಿಗುಣಕತ್ವಮ್' ಇತಿ ತತ್ಸಿದ್ಧಾಂತಹೇತೋಃ ಪರಪಕ್ಷನಿರಾಸೇಽಪಿ ವ್ಯಾಪಾರಾತ್ 'ತದ್ಧರ್ಮೋಕ್ತೇಃ' ಇತ್ಯನೇನೋಕ್ತಸ್ಯ ಪರವಿದ್ಯಾವಿಷಯತ್ವಸ್ಯ ವಿಷ್ಣೋರನ್ಯತ್ರ ನಿರವಕಾಶತ್ವಾನ್ಯಥಾನುಪಪತ್ತ್ಯಾ ನಿರಾಕೃತಮಪಿ ವಿಶೇಷಯುಕ್ತ್ಯಾ ನಿರಾಕುರ್ವತ್ ಸೂತ್ರಂ ಪಠಿತ್ವಾ ವ್ಯಾಚಷ್ಟೇ – **ವಿಶೇಷಣೇತಿ** ॥ 'ವ್ಯಪದೇಶಶಬ್ದಃ ಉಭಯಾನ್ವಯೀ' ಇತ್ಯಾಶಯೇನ ಉಭಯಶ್ರುತಿಮಾಹ – **ಯ ಇತಿ** ॥ ಭೇದಃ - ಅನ್ಯತ್ವಮ್ । ಚಶಬ್ದಸ್ಯ ನ ಕೇವಲಂ ಧರ್ಮೋಕ್ತೇಃ, ಕಿಂತು ವಿಶೇಷಣಭೇದವ್ಯಪದೇಶಾಭ್ಯಾಮ್ ಇತಿ ಸಮುಚ್ಚಯಾರ್ಥತ್ವಸ್ಯ ಸ್ಪಷ್ಟತ್ವಾನ್ನ ತಸ್ಯಾರ್ಥ ಉಕ್ತಃ । 'ಪ್ರಕೃತಿಃ ವಿರಿಂಚಃ' ಇತ್ಯನೇನ 'ಇತರಾ ಇತರಶ್ಚ' ಇತಿ ವಿಗ್ರಹಾ-

ಶ್ರಯೇಣ 'ಇತರ'ಶಬ್ದಾರ್ಥೋಽಭಿಹಿತಃ । ಉಭಯತ್ರ 'ಅದೃಶ್ಯತ್ವಾದಿಗುಣಕಃ' ಇತ್ಯನುಷಜ್ಯತೇ । ಪ್ರಕೃತಿಪಕ್ಷೇ ಲಿಂಗವಿಪರಿಣಾಮಃ । ತಥಾಚ – 'ಯಃ ಸರ್ವಜ್ಞಃ' ಇತಿ ವಾಕ್ಯೇ ತಸ್ಯಾದೃಶ್ಯತ್ವಾದಿಗುಣಕಸ್ಯ 'ವಿಶೇಷಣಾತ್' ಸಾರ್ವಜ್ಞ್ಯಾದಿವಿಶೇಷಣೋಕ್ತೇರ್ನ ಅದೃಶ್ಯತ್ವಾದಿಗುಣಾ ಜಡಪ್ರಕೃತಿಃ । ಏವಂ 'ತಸ್ಮಾತ್' ಇತಿ ವಾಕ್ಯೇ ವಿರಿಂಚಸ್ಯ ತಸ್ಮಾದ-ಕ್ಷರಾಜ್ಜನ್ಯತ್ವರೂಪಭೇದಕಧರ್ಮೋಕ್ತ್ಯಾ ಭೇದವ್ಯಪದೇಶಾತ್ ನಾದೃಶ್ಯತ್ವಾದಿಗುಣೋ ವಿರಿಂಚಃ – ಇತಿ ಯೋಜನಾ ।

ಹಿಂದಿನ ಸೂತ್ರದಲ್ಲಿ ಪ್ರಕೃತಿ ಮತ್ತು ವಿರಿಂಚರಿಗೆ ಅದೃಶ್ಯತ್ವಾದಿಗುಣಕತ್ವ-ವಿಲ್ಲವೆಂದು ಏನು ಹೇಳಲಾಯಿತೋ ಆ ಸಿದ್ಧಾಂತವನ್ನು ಸಮರ್ಥಿಸುವ ಹೇತುವು ಪರಪಕ್ಷನಿರಾಕರಣೆಯನ್ನೂ ಮಾಡುವುದರಿಂದ 'ತದ್ಧರ್ಮೋಕ್ತೇಃ' ಎಂಬ ಪದದಿಂದ ಹೇಳಲಾದ ಪರವಿದ್ಯಾವಿಷಯತ್ವವು ವಿಷ್ಣುವನ್ನು ಬಿಟ್ಟು ಇತರರಲ್ಲಿ ಅವಕಾಶವನ್ನು ಹೊಂದದಿರುವುದರಿಂದಲೇ ನಿರಾಕರಿಸಲ್ಪಟ್ಟ ಪರಪಕ್ಷವನ್ನು ವಿಶೇಷಯುಕ್ತಿಯಿಂದ ನಿರಾಕರಿಸುವ ಸೂತ್ರವನ್ನು ಭಾಷ್ಯಕಾರರು 'ವಿಶೇಷಣ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ವ್ಯಪದೇಶ'ಶಬ್ದವು ವಿಶೇಷಣ ಮತ್ತು ಭೇದ ಎರಡರ ಅನ್ವಯವನ್ನೂ ಪಡೆದಿರುವುದು ಎಂಬ ಅಭಿಪ್ರಾಯದಿಂದ ಅವೆರಡನ್ನೂ ಹೇಳುವ ಶ್ರುತಿಯನ್ನು 'ಯಃ' ಎಂಬುದಾಗಿ ಉದಾಹರಿಸುತ್ತಿದ್ದಾರೆ. ಸೂತ್ರದಲ್ಲಿ ಭೇದಶಬ್ದಕ್ಕೆ ಅನ್ಯತ್ವ ಎಂದರ್ಥ. ಚಶಬ್ದಕ್ಕೆ 'ಧರ್ಮವನ್ನು ಹೇಳಿರುವುದರಿಂದ ಮಾತ್ರವಲ್ಲ ಕಿಂತು, ವಿಶೇಷಣ ಮತ್ತು ಭೇದಗಳನ್ನು ಹೇಳಿರುವುದರಿಂದಲೂ' ಎಂದು ಸಮುಚ್ಚಯರೂಪ-ವಾದ ಅರ್ಥವು ಸ್ಪಷ್ಟವಾಗಿರುವುದರಿಂದ ಅದರ ಅರ್ಥವನ್ನು ಭಾಷ್ಯದಲ್ಲಿ ಹೇಳಿಲ್ಲ. ಭಾಷ್ಯದಲ್ಲಿರುವ 'ಪ್ರಕೃತಿಃ ವಿರಿಂಚಃ' ಎಂಬ ಪದಗಳಿಂದ ಸೂತ್ರದ ಇತರಶಬ್ದಕ್ಕೆ 'ಇತರಾ ಇತರಶ್ಚ' ಎಂದು ವಿಗ್ರಹವನ್ನು ಆಶ್ರಯಿಸಿ ಆ ಶಬ್ದದ ಅರ್ಥವನ್ನು ಹೇಳ-ಲಾಗಿದೆ. 'ನ ಪ್ರಕೃತಿಃ, ನ ವಿರಿಂಚಃ' ಎಂಬ ಎರಡು ಕಡೆಗಳಲ್ಲೂ ಅದೃಶ್ಯತ್ವಾದಿಗುಣಕಃ ಎಂಬ ಶಬ್ದವು ಅನುವೃತ್ತಿಯನ್ನು ಹೊಂದುವುದು. ಪ್ರಕೃತಿಪಕ್ಷದಲ್ಲಿ ಅದೃಶ್ಯತ್ವಾದಿಗುಣಕಾ ಎಂದು ಸ್ತ್ರೀಲಿಂಗರೂಪವಾಗಿ ಅದೃಶ್ಯತ್ವಾದಿಗುಣಕಃ ಎಂಬ ಪದವು ಬದಲಾವಣೆಯನ್ನು ಹೊಂದುವುದು. ತಥಾಚ – 'ಯಃ ಸರ್ವಜ್ಞಃ' ಎಂಬ ವಾಕ್ಯದಲ್ಲಿ ಆ ಅದೃಶ್ಯತ್ವಾದಿ-

ಗುಣಕನಿಗೆ '**ವಿಶೇಷಣಾತ್**' - ಸರ್ವಜ್ಞತ್ವ ಮೊದಲಾದ ವಿಶೇಷಣಗಳನ್ನು ಹೇಳಿರುವುದರಿಂದ ಅದೃಶ್ಯತ್ವಾದಿ ಗುಣವುಳ್ಳದ್ದು ಜಡಪ್ರಕೃತಿಯಲ್ಲ. ಹಾಗೆಯೇ '**ತಸ್ಮಾತ್**' ಎಂಬ ವಾಕ್ಯದಲ್ಲಿ ವಿರಿಂಚನಿಗೆ ತಸ್ಮಾತ್ ಅಂದರೆ ಅಕ್ಷರನಿಂದ ಜನ್ಯತ್ವವೆಂಬ ಭೇದಸಾಧಕವಾದ ಧರ್ಮವನ್ನು ಹೇಳುವ ಮೂಲಕ ಭೇದವನ್ನು ಹೇಳಿರುವುದರಿಂದ ಅದೃಶ್ಯತ್ವಾದಿಗುಣಕನು ವಿರಿಂಚನಲ್ಲ ಎಂದು ಭಾಷ್ಯವಾಕ್ಯಗಳ ಯೋಜನೆ.

(ಭಾ.ದೀ.) ಆಥರ್ವಣೇ 'ಯಃ ಸರ್ವಜ್ಞಃ ಸರ್ವವಿತ್' ಇತ್ಯತಃ ಪೂರ್ವವಾಕ್ಯೇ 'ತಪಸಾ ಚೀಯತೇ ಬ್ರಹ್ಮ' (ಮುಂ.೧.೧.೮) ಇತ್ಯತ್ರ 'ಪರಬ್ರಹ್ಮ ತಪಸಾ ಸಂಬಧ್ಯತೇ' ಇತ್ಯುಕ್ತಮ್ । ತತ್ರ ತಪಃಶಬ್ದಸ್ಯ ಆಲೋಚನಾರ್ಥತಯಾ ಅಜ್ಞಾನಪ್ರತೀತೌ ತನ್ನಿರಾಸಾಯ 'ಯಸ್ಯ ಜ್ಞಾನಮಯಂ ತಪಃ' ಇತಿ ವಾಕ್ಯಾಂತರಂ ಪ್ರವೃತ್ತಮ್ । ತಸ್ಯ ಯಸ್ಯ ತಪಃ ಆಲೋಚನಕ್ರಿಯಾ ಜ್ಞಾನಮಯಂ ತದಾತ್ಮಕಮೇವ ನ ಸಂಶಯಾದ್ಯಾತ್ಮಕಮ್ ಇತ್ಯರ್ಥಃ । ಕುತಸ್ತಪಸಃ ಸಂತಾಪಾನ್ಯಪೂರ್ಣಯಥಾರ್ಥಜ್ಞಾನಾತ್ಮಕತ್ವಮ್ ಇತ್ಯಾಕಾಂಕ್ಷಾಯಾಂ ತಸ್ಯ ಸರ್ವಜ್ಞತ್ವಾತ್ ಆಪ್ತಕಾಮತ್ವಾತ್ ಇತಿ ಹೇತುಪ್ರದರ್ಶನಾಯ 'ಯಃ ಸರ್ವಜ್ಞಃ' ಇತಿ ಪೂರ್ವವಾಕ್ಯೋಪನ್ಯಾಸಃ।

ತದರ್ಥಸ್ತು – 'ಯಃ ಸರ್ವಜ್ಞಃ' ಸರ್ವವಿಷಯಕಸಾಮಾನ್ಯಜ್ಞಾನವಾನ್ 'ಸರ್ವವಿತ್' ಸರ್ವವಿಷಯಕವಿಶೇಷಜ್ಞಾನವಾಂಶ್ಚ। ಸರ್ವಸ್ಯ ಲಬ್ಧಾ ಸರ್ವಕಾಮಃ ಸರ್ವೋತ್ಪಾದಕೋ ವಾ ಇತಿ । **ತತ್ತ್ವಪ್ರದೀಪೇ ತು** – 'ವಿದ ಸತ್ತಾಯಾಮ್' ಇತಿ ಧಾತುವ್ಯಾಖ್ಯಾನಾತ್ 'ಸರ್ವತ್ರ ವಿದ್ಯತೇ ಇತಿ ಸರ್ವವಿತ್' ಇತ್ಯುಕ್ತಮ್ ।

'ಯಸ್ಯ ಸಃ' ಇತಿ ಯಚ್ಛಬ್ದದ್ವಯಸ್ಯ 'ತಸ್ಮಾತ್' ಅಕ್ಷರಾತ್ 'ಏತದ್ ಬ್ರಹ್ಮ' ಚತುರ್ಮುಖಾಖ್ಯಂ 'ನಾಮ ರೂಪಮನ್ನಂ' ತದಭಿಮಾನಿದೈವತಂ ಚೋತ್ಪದ್ಯತ ಇತ್ಯುತ್ತರವಾಕ್ಯಗತತಚ್ಛಬ್ದೇನಾನ್ವಯಃ।

ಆಥರ್ವಣದಲ್ಲಿ 'ಯಃ ಸರ್ವಜ್ಞಃ ಸರ್ವವಿತ್' ಎಂಬ ವಾಕ್ಯಕ್ಕಿಂತ ಹಿಂದಿನ 'ತಪಸಾ ಚೀಯತೇ ಬ್ರಹ್ಮ' ಎಂಬ ವಾಕ್ಯದಲ್ಲಿ ಪರಬ್ರಹ್ಮನು ತಪಸ್ಸಿನಿಂದ ಸಂಬಂಧವನ್ನು

ಹೊಂದುವನು ಎಂದು ಹೇಳಲಾಗಿದೆ. ಅಲ್ಲಿ ತಪಸ್ ಶಬ್ದವು ಆಲೋಚನಾರ್ಥಕವಾದುದರಿಂದ ಪರಬ್ರಹ್ಮನಿಗೆ ಅಜ್ಞಾನವಿರುವುದೆಂದು ತೋರಿದಾಗ, ಅದನ್ನು ನಿರಾಕರಿಸಲು 'ಯಸ್ಯ ಜ್ಞಾನಮಯಂ ತಪಃ' ಎಂಬ ಇನ್ನೊಂದು ವಾಕ್ಯವು ಹೊರಟಿದೆ. ಆ ವಾಕ್ಯಕ್ಕೆ – ಯಸ್ಯ ತಪಃ - ಯಾರ ಆಲೋಚನಕ್ರಿಯೆಯು, ಜ್ಞಾನಮಯಂ - ಜ್ಞಾನಾತ್ಮಕವಾದದ್ದೇ ಹೊರತು ಸಂಶಯಾದಿಸ್ವರೂಪವಾದದ್ದಲ್ಲ ಎಂದು ಅರ್ಥ. ಅವನ ತಪಸ್ಸು ಸಂತಾಪಭಿನ್ನವಾದ ಪೂರ್ಣಯಥಾರ್ಥಜ್ಞಾನಾತ್ಮಕವಾಗಿರುವುದು ಹೇಗೆ? ಎಂಬ ಜಿಜ್ಞಾಸೆಗೆ ಉತ್ತರವಾಗಿ ಅವನು ಸರ್ವಜ್ಞನಾದದ್ದರಿಂದ ಮತ್ತು ಆಪ್ತಕಾಮನಾದುದರಿಂದ ಎಂಬುದಾಗಿ ಹೇತುಗಳನ್ನು ಪ್ರದರ್ಶಿಸಲು 'ಯಃ ಸರ್ವಜ್ಞಃ' ಎಂಬ ಹಿಂದಿನ ವಾಕ್ಯವನ್ನು ಹೇಳಲಾಗಿದೆ.

ಅದರ ಅರ್ಥವಾದರೋ – ಯಃ ಸರ್ವಜ್ಞಃ -ಯಾರು ಸರ್ವವಿಷಯಕವಾದ ಸಾಮಾನ್ಯಜ್ಞಾನವುಳ್ಳವನೋ, ಸರ್ವವಿತ್ - ಸರ್ವವಿಷಯಕವಾದ ವಿಶೇಷಜ್ಞಾನವುಳ್ಳವನೂ ಆಗಿರುವನೋ; ಸರ್ವಕಾಮನೆಂದರೆ ಸರ್ವವನ್ನೂ ಹೊಂದಿದವನು ಅಥವಾ ಸರ್ವೋತ್ಪಾದಕನೆಂದು ಅರ್ಥ. ತತ್ವಪ್ರದೀಪದಲ್ಲಾದರೋ ''ವಿದ ಸತ್ತಾಯಾಂ ಎಂಬುದಾಗಿ ಧಾತುವಿನ ವ್ಯಾಖ್ಯಾನವಿರುವುದರಿಂದ 'ಸರ್ವತ್ರ ವಿದ್ಯತೇ ಇತಿ ಸರ್ವವಿತ್' ಎಲ್ಲೆಡೆಯಲ್ಲಿ ಇರುವುದರಿಂದ ಸರ್ವವಿತ್ ಎನಿಸುವನು'' ಎಂದು ಹೇಳಲಾಗಿದೆ.

ಯಃ ಸರ್ವಜ್ಞಃ ಎಂಬ ಶ್ರುತಿಯಲ್ಲಿ ಇರುವ 'ಯಸ್ಯ ಯಃ' ಎಂಬ ಎರಡು ಯಚ್ಛಬ್ದಗಳಿಗೆ ತಸ್ಮಾತ್ - ಆ ಅಕ್ಷರನಿಂದ, ಏತದ್ ಬ್ರಹ್ಮ - ಚತುರ್ಮುಖನೆಂಬ ಬ್ರಹ್ಮನು, ನಾಮ ರೂಪಮನ್ನಂ- ನಾಮ, ರೂಪ, ಅನ್ನ ಮತ್ತು ಅಭಿಮಾನಿದೇವತೆಗಳು ಜಾಯತೇ ಹುಟ್ಟುವವು ಎಂಬ ವಾಕ್ಯದಲ್ಲಿರುವ ತಚ್ಛಬ್ದದೊಂದಿಗೆ ಅನ್ವಯವಾಗುವುದು.

ಭಾ– 'ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ ।
ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾ ಚೇತನಾ ವಿಷ್ಣುಸಂಶ್ರಯಾ ॥

ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಮ್।
ಹರಿಮೇವಾಖಿಲಗುಣಮಕ್ಷರತ್ರಯಮೀರಿತಮ್' ॥

ಇತಿ ಸ್ಕಾಂದೇ ತ್ರ್ಯಕ್ಷರಾಭಿಧಾನಾತ್'ಅಕ್ಷರಾತ್ಪರತಃ ಪರಃ' ಇತ್ಯಪಿ ವಿಶೇಷಣಮೇವ।

'ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ । ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾ ಚೇತನಾ ವಿಷ್ಣುಸಂಶ್ರಯಾ ॥ ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಮ್ । ಹರಿಮೇವಾಖಿಲಗುಣಮಕ್ಷರ-ತ್ರಯಮೀರಿತಮ್' ಎಂಬುದಾಗಿ ಸ್ಕಾಂದದಲ್ಲಿ ಮೂರು ಅಕ್ಷರಗಳನ್ನು ಹೇಳಿರುವುದರಿಂದ ಅಕ್ಷರಾತ್ ಪರತಃ ಪರತ್ವವೆಂಬುದು ವಿಶೇಷಣ-ವೇ ಆಗಿದೆ.

(ಭಾ.ದೀ.) ನನು ನ ವಿಷ್ಣೋರದೃಶ್ಯತ್ವಾದಿಗುಣಕತ್ವಂ, ಪರತಃ ಪರಾಭಿಧಾನೇನ ಅಕ್ಷರಶ್ರುತೇಸ್ತತ್ರ ನಿರವಕಾಶತ್ವಾತ್ ಇತ್ಯತೋ ವಿಶೇಷಣಭೇದವ್ಯಪದೇಶಾತ್ ಇತಿ ಸೂತ್ರಖಂಡಸ್ಯಾರ್ಥಾಂತರಮಾಹ – **ಅಪರಮಿತಿ** ॥ **ತುಶಬ್ದೋ**ವಧಾರಣೇ । 'ಅಕ್ಷರತ್ರಯಮ್' ಅಕ್ಷರಸ್ಯ ತ್ರಯಮ್ 'ಈರಿತಮ್' 'ಅಕ್ಷರಂ ತ್ರಿವಿಧಂ ಪ್ರೋಕ್ತಮ್' ಇತಿ ಯಾವತ್ । ತಿಸ್ರೋ ವಿಧಾಃ ವ್ಯಕ್ತಿನಿರ್ದೇಶಪೂರ್ವಕಂ ದರ್ಶಯತಿ – **ಅಪರ-ಮಿತಿ** ॥ ಯಾ ಯದಪರಮಕ್ಷರಂ ಸಾ ಜಡರೂಪಿಕಾ ಪ್ರಕೃತಿರೇವ । ಯಾ ಯತ್ಪರ-ಮಕ್ಷರಂ 'ಪ್ರೋಕ್ತಾ' ಪ್ರೋಕ್ತಂ ವೃದ್ಧೈಸ್ತಾಂ ತದ್ ಯಾ ವಿಷ್ಣುಸಂಶ್ರಯಾ ಪರಾ ಉತ್ತಮಾ ಚೇತನಾ ಪ್ರಕೃತಿಃ ಶ್ರೀಃ ಲಕ್ಷ್ಮೀಃ ತಾಂ ಪ್ರಾಹುಃ । ಯತ್ಪರತಃ ಪರಮಕ್ಷರಮ್ ಈರಿತಂ ತಜ್ಜಡಪ್ರಕೃತೇಃ ಪರಾತ್ ಶ್ರೀತತ್ತ್ವಾದಖಿಲಗುಣಂ ಹರಿಮೇವ ಪ್ರಾಹುಃ ಇತಿ ಸ್ಮೃತ್ಯರ್ಥಃ । 'ಇತಿ ಸ್ಕಾಂದೇ' ಇತ್ಯಸ್ಯ 'ತ್ರ್ಯಕ್ಷರಾಭಿಧಾನಾತ್' ಅಕ್ಷರತ್ರೈವಿಧ್ಯಸ್ಯೋಕ್ತ-ತ್ವಾತ್ ಇತ್ಯನೇನಾನ್ವಯಃ।

'ಅಕ್ಷರಾತ್ ಪರತಃ ಪರ ಇತ್ಯಪೀತಿ' । ಇತಿ ವಾಕ್ಯೋಕ್ತಮಕ್ಷರಾತ್ ಪರತಃ ಪರತ್ವಮಪೀತ್ಯರ್ಥಃ । ಅಪಿಃ ಸಮುಚ್ಚಯೇ । 'ತಸ್ಯ' ಇತಿ ಶೇಷಃ । ತೇನ ಏವಕಾರಸ್ಯ

ಅನ್ವಯಃ । ತಥಾಚ – ನ ಕೇವಲಂ ಸಾರ್ವಜ್ಞಂ ವಿಶೇಷಣಮ್, ಕಿಂತು ಅಕ್ಷರಾತ್ ಪರತಃ ಪರತ್ವಮಪಿ ತಸ್ಯ ವಿಷ್ಣ್ವಾಖ್ಯಪ್ರಕೃತಾಕ್ಷರಸ್ಯೈವ ವಿಶೇಷಣಮ್, ನ ತು ಪ್ರಕೃತಾಕ್ಷರಮವಧೀಕೃತ್ಯ ಅನ್ಯಸ್ಯ ಕಸ್ಯಚಿದ್ ವಿಶೇಷಣಮ್ । ಯೇನ ಅಕ್ಷರಶ್ರುತೇಃ ವಿಷ್ಣೌ ಅವಕಾಶಾಭಾವಃ।

ನ ಚಾಕ್ಷರಸ್ಯಾಕ್ಷರಾತ್ ಪರತಃ ಪರತ್ವಂ ವಿರುದ್ಧಮಿತಿ ವಾಚ್ಯಮ್ । 'ಅಪರಮ್' ಇತಿ ಸ್ಕಾಂದೇ ತ್ರ್ಯಕ್ಷರಾಭಿಧಾನಾತ್ ಅಕ್ಷರಾಂತರಾತ್ ಪರಾದಸ್ಯಾಕ್ಷರಸ್ಯ ಪರತ್ವೋಪಪತ್ತೇರಿತಿ ಯೋಜನಾ । ಅಕ್ಷರತ್ರಯಾಭಿಧಾನೇನ ಅಕ್ಷರಾತ್ ಪರತಃ ಪರ ಇತ್ಯತ್ರ ಸಾಮಾನಾಧಿಕರಣ್ಯೇನ ವೈಯಧಿಕರಣ್ಯೇನ ವಾऽನ್ವಯೋ ದರ್ಶಿತಃ।

ವಿಷ್ಣುವಿಗೆ ಅದೃಶ್ಯತ್ವಾದಿ ಗುಣವತ್ತ್ವವಿಲ್ಲ. ಏಕೆಂದರೆ, ಅಕ್ಷರಾತ್ ಪರತಃ ಪರಂ ಎಂಬುದಾಗಿ ವಿಷ್ಣುವನ್ನು ಅಕ್ಷರಕ್ಕಿಂತ ಶ್ರೇಷ್ಠವಾಗಿರುವುದಕ್ಕಿಂತಲೂ ಶ್ರೇಷ್ಠನಾಗಿರುವವನು ಎಂದು ಹೇಳಿರುವುದರಿಂದ ಅಕ್ಷರಶಬ್ದಕ್ಕೆ ವಿಷ್ಣುವಿನಲ್ಲಿ ಅವಕಾಶವಿಲ್ಲ ಎಂಬ ಶಂಕೆಗೆ ಉತ್ತರವಾಗಿ 'ವಿಶೇಷಣಭೇದವ್ಯಪದೇಶಾತ್' ಎಂಬ ಸೂತ್ರಖಂಡಕ್ಕೆ ಮತ್ತೊಂದು ಅರ್ಥವನ್ನು ಅಪರಂ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಅಪರಂ ತು ಎಂಬಲ್ಲಿರುವ ತುಶಬ್ದವು ಅವಧಾರಣವನ್ನು ಹೇಳುವುದು. ಅಕ್ಷರತ್ರಯಂ ಅಂದರೆ ಅಕ್ಷರಸ್ಯ ತ್ರಯಮ್ - ಅಕ್ಷರವು ಮೂರು ವಿಧವಾದದ್ದು ಎಂಬುದಾಗಿ, ಈರಿತಂ - ಹೇಳಲ್ಪಟ್ಟಿದೆ ಎಂದು ಭಾವ. ಆ ಮೂರು ವಿಧಗಳನ್ನು ವ್ಯಕ್ತಿಗಳನ್ನು ನಿರ್ದೇಶಿಸುವ ಮೂಲಕ 'ಅಪರಮ್' ಎಂಬ ವಾಕ್ಯವು ತೋರಿಸುತ್ತಿದೆ. ಯಾ- ಯಾವ, ಅಪರಂ ಅಕ್ಷರಂ - ಅಪರವಾದ ಅಕ್ಷರವಿರುವುದೋ ಅದು, ಜಡರೂಪಿಕಾ ಪ್ರಕೃತಿರೇವ - ಜಡರೂಪವಾದ ಪ್ರಕೃತಿಯೇ ಆಗಿದೆ. ಯಾ - ಯಾವ, ಪರಂ ಅಕ್ಷರಮ್ - ಯಾವುದು ಉತ್ತಮವಾದ ಅಕ್ಷರವೆಂದು, ಪ್ರೋಕ್ತಾ - ವೃದ್ಧರಿಂದ ಹೇಳಲ್ಪಟ್ಟಿದೆಯೋ, ತಾಂ - ಆ ಅಕ್ಷರವನ್ನು, ಯಾ ವಿಷ್ಣುಸಂಶ್ರಯಾ ಪರಾ ಚೇತನಾ - ಯಾವುದು ವಿಷ್ಣುವನ್ನು ಆಶ್ರಯಿಸಿರುವ ಉತ್ತಮಳಾದ ಶ್ರೀಃ, ಲಕ್ಷ್ಮೀ ಎಂದೆನಿಸುವ ಚೇತನರೂಪಳಾದ ಪ್ರಕೃತಿ ಇರುವಳೋ ಅವಳೆಂದು ಹೇಳುವರು. ಯತ್ಪರತಃ ಪರಮ್ ಅಕ್ಷರಮ್ ಈರಿತಮ್ - ಯಾವುದು ಜಡಪ್ರಕೃತಿಗಿಂತಲೂ ಪರ ಅಂದರೆ ಉತ್ತಮ-

ವಾದ ಶ್ರೀತತ್ವವಿರುವುದೋ ಅದಕ್ಕಿಂತಲೂ ಪರಂ ಉತ್ತಮವಾದ ಅಕ್ಷರವಿರುವುದೋ ಅದನ್ನು, **ಅಖಿಲಗುಣಂ ಹರಿಮೇವ ಪ್ರಾಹುಃ**- ಸಮಸ್ತಗುಣಪೂರ್ಣನಾದ ಹರಿಯೆಂದೇ ಹೇಳುವರು – ಎಂದು ಸ್ಮೃತಿಯ ಅರ್ಥ. **'ಇತಿ ಸ್ಕಾಂದೇ'** ಎಂಬ ಪದಗಳಿಗೆ **'ತ್ರ್ಯಕ್ಷರಾಭಿಧಾನಾತ್'**– 'ಅಕ್ಷರತ್ರೈವಿಧ್ಯವನ್ನು ಹೇಳಿರುವುದರಿಂದ' ಎಂಬ ಪದದೊಂದಿಗೆ ಅನ್ವಯವಾಗುವುದು.

**'ಅಕ್ಷರಾತ್ ಪರತಃ ಪರ ಇತ್ಯಪಿ'** ಅಂದರೆ 'ಈ ವಾಕ್ಯದಿಂದ ಉಕ್ತವಾದ ಅಕ್ಷರಾತ್ ಪರತಃ ಪರತ್ವವು ಕೂಡ' ಎಂದರ್ಥ. ಅಪಿಶಬ್ದವು ಸಮುಚ್ಚಯಾರ್ಥಕವಾದದ್ದು. ತಸ್ಯ ಎಂಬ ಪದವು ಇಲ್ಲಿ ಶೇಷವಾಗಿದೆ. ಈ ಪದದೊಂದಿಗೆ ವಿಶೇಷಣಮೇವ ಎಂಬಲ್ಲಿರುವ ಏವಕಾರಕ್ಕೆ ಅನ್ವಯವಾಗುವುದು. ತಥಾಚ– ಸರ್ವಜ್ಞತ್ವಮಾತ್ರವೇ ವಿಶೇಷಣವಲ್ಲ. ಕಿಂತು 'ಅಕ್ಷರಾತ್ ಪರತಃ ಪರತ್ವ'ವೂ ಕೂಡ ತಸ್ಯ - ಅಂದರೆ ವಿಷ್ಣ್ವಾಖ್ಯಪ್ರಕೃತ ಅಕ್ಷರನಿಗೇ ವಿಶೇಷಣವಾಗಿದೆ ಹೊರತು, ಪ್ರಕೃತ ಅಕ್ಷರನನ್ನು ಅವಧಿಯನ್ನಾಗಿ ಮಾಡಿಕೊಂಡು ಮತ್ತೊಬ್ಬನಿಗೆ ವಿಶೇಷಣವಲ್ಲ. ಹಾಗಿದ್ದ ಪಕ್ಷದಲ್ಲಿ ಅಕ್ಷರಶಬ್ದಕ್ಕೆ ವಿಷ್ಣುವಿನಲ್ಲಿ ಅವಕಾಶವಿರುತ್ತಿರಲಿಲ್ಲ - ಎಂದು ಅರ್ಥ.

ಅಕ್ಷರನಿಗೆ ಅಕ್ಷರಾತ್ ಪರತಃ ಪರತ್ವವು ವಿರುದ್ಧವಾಗಿದೆ ಎಂದು ಹೇಳಿದರೆ ಅದು ಸರಿಯಲ್ಲ. **ಅಪರಮ್** ಎಂಬ ಸ್ಕಾಂದವಾಕ್ಯದಲ್ಲಿ ಮೂರುವಿಧವಾದ ಅಕ್ಷರಗಳನ್ನು ಹೇಳಿರುವುದರಿಂದ ಪರವೆಂದೆನಿಸಿದ ಮತ್ತೊಂದು ಅಕ್ಷರದಿಂದ ಈ ಅಕ್ಷರನಿಗೆ ಪರತ್ವವು ಉಪಪನ್ನವಾಗಿರುವುದು ಎಂದು ಯೋಜನೆ. ಅಕ್ಷರತ್ರಯವನ್ನು ಹೇಳಿರುವುದರಿಂದ ಪರವಾದ ಅಂದರೆ ಉತ್ತಮವಾದ ಅಕ್ಷರದಿಂದ ಪರನು ಉತ್ತಮನು ಎಂಬುದಾಗಿ ಅಕ್ಷರಾತ್ ಪರತಃ ಎಂಬಲ್ಲಿರುವ ಪಂಚಮೀವಿಭಕ್ತಿಗಳು ಒಂದೇ ವ್ಯಕ್ತಿಯನ್ನು ಕುರಿತು ತಮ್ಮ ಅರ್ಥವನ್ನು ಹೇಳುವವು ಎಂಬುದಾಗಿ ಸಾಮಾನಾಧಿಕರಣ್ಯೇನ ಅಥವಾ ಅಪರವಾದ ಅಕ್ಷರಕ್ಕಿಂತ ಉತ್ತಮವಾದ ಶ್ರೀತತ್ವವೆಂಬ ಅಕ್ಷರಕ್ಕಿಂತ ಪರಃ ಉತ್ತಮನು ಎಂಬುದಾಗಿ ಆ ಪಂಚಮೀವಿಭಕ್ತಿಗಳು ಭಿನ್ನವ್ಯಕ್ತಿಗಳನ್ನು ಕುರಿತು ತಮ್ಮ ಅರ್ಥವನ್ನು ಹೇಳುವವು ಎಂಬುದಾಗಿ ವೈಯಧಿಕರಣ್ಯೇನ ಅನ್ವಯವು ದರ್ಶಿತವಾಗಿದೆ.

**(ಭಾ.ದೀ.) ಪ್ರಮೇಯದೀಪೇ ತು – ಅಕ್ಷರಾತ್ ಶ್ರೀತತ್ವಾತ್ ಪರತಃ ಪರೋಽ-**

ತ್ಯುತ್ತಮ ಇತಿ ತದ್ಭಾಷ್ಯದಿಶಾ ಶ್ರುತ್ಯರ್ಥ ಉಕ್ತಃ । ಅನೇನ 'ಅಕ್ಷರಾತ್ ಪರತಃ ಪರಃ' ಇತ್ಯಪಿ ತಸ್ಯೈವ ವಿಶೇಷಣಂ, ನ ತ್ವನ್ಯಸ್ಯ । ನ ಚಾಕ್ಷರಾತ್ ಪರತಃ ಪರತ್ವಂ ವಿರುದ್ಧಮಿತಿ ವಾಚ್ಯಮ್ । ಭೇದವ್ಯಪದೇಶಾತ್ । 'ಅಕ್ಷರತ್ರಯಮೀರಿತಮ್' ಇತ್ಯಕ್ಷರಾಣಾಮ-ವಾಂತರಭೇದೋಕ್ತೇಃ ಪಾಂಡವಸ್ಯಾರ್ಜುನಸ್ಯ ಸ್ವಾಧಮಕಾರ್ತವೀರ್ಯಾರ್ಜುನಾದಿವ ಅಕ್ಷರಾತ್ ಪರಾದಕ್ಷರಾಂತರಾದಸ್ಯ ಅಕ್ಷರಸ್ಯ ಪರತ್ವೋಪಪತ್ತಿರಿತಿ ಸೂತ್ರಖಂಡಸ್ಯಾ-ರ್ಥಾಂತರಮುಕ್ತಂ ಭವತಿ ।

ಪ್ರಮೇಯದೀಪದಲ್ಲಾದರೋ, ಅಕ್ಷರಾತ್- ಶ್ರೀತತ್ವಕ್ಕಿಂತ, ಪರತಃ ಪರಃ- ಅತ್ಯುತ್ತಮನಾದವನು ಎಂಬುದಾಗಿ ಆ ಭಾಷ್ಯದಲ್ಲಿ[೧] ತೋರಿಸುವ ರೀತಿಯಿಂದ ಶ್ರುತ್ಯರ್ಥವು ಹೇಳಲ್ಪಟ್ಟಿದೆ. ಇದರಿಂದ ಅಕ್ಷರಾತ್ ಪರತಃ ಪರಃ ಎಂಬುದು ಕೂಡ ಆ ವಿಷ್ಣುವಿಗೇ ವಿಶೇಷಣವಾಗಿದೆ ಹೊರತು ಮತ್ತೊಬ್ಬರಿಗಲ್ಲ. ಅಕ್ಷರನಿಗೆ ಅಕ್ಷರಾತ್ ಪರತಃ ಪರತ್ವವು ವಿರುದ್ಧವೆಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಭೇದವ್ಯಪದೇಶಾತ್ ಅಕ್ಷರತ್ರಯಮೀರಿತಮ್ ಎಂಬುದಾಗಿ ಅಕ್ಷರಗಳ ಮಧ್ಯೆ ಅವಾಂತರಭೇದವನ್ನು ಹೇಳಿರುವುದರಿಂದ, ಪಾಂಡವನಾದ ಅರ್ಜುನನಿಗೆ ತನಗಿಂತಲೂ ಅಧಮನಾದ ಕಾರ್ತ-ವೀರ್ಯಾರ್ಜುನನಿಂದ ಹೇಗೋ ಹಾಗೆ ಅಕ್ಷರಾತ್ ಪರಾತ್ ಇನ್ನೊಂದು ಅಕ್ಷರದಿಂದ ಈ ಅಕ್ಷರನಿಗೆ ಪರತ್ವವು ಅಂದರೆ ಉತ್ತಮತ್ವವು ಉಪಪನ್ನವಾಗಿದೆ ಎಂಬುದಾಗಿ ಸೂತ್ರಖಂಡಕ್ಕೆ ಇನ್ನೊಂದು ಅರ್ಥವನ್ನು ಹೇಳಿದಂತಾಗುವುದು.

(೧) ಪ್ರಮೇಯದೀಪಕ್ಕೆ ಮೂಲವಾದ ಗೀತಾಭಾಷ್ಯದಲ್ಲಿ.

**ಭಾ– 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ' (ಮುಂ.૩.೧.೨) ಇತಿ ಭೇದವ್ಯಪದೇಶಾದೀಶಪದ-ಪ್ರಾಪ್ತೋಽಪಿ ನ ರುದ್ರಃ ॥ ೨೨ ॥**

'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತ-ಶೋಕಃ' ಎಂಬುದಾಗಿ ಭೇದವನ್ನು ಹೇಳಿರುವುದರಿಂದ ಈಶಪದ-ದಿಂದ ತೋರುವ ರುದ್ರನೂ ಅದೃಶ್ಯತ್ವಾದಿಗುಣಕನಲ್ಲ.

(ಭಾ.ದೀ.) ನನು ಈಶಮ್ ಇತಿ ಶಬ್ದಶ್ರವಣಾದ್ ಅದೃಶ್ಯತ್ವಾದಿಗುಣಕೋ ರುದ್ರಃ ಕಿಂ ನ ಸ್ಯಾತ್? ಇತಿ ಶಂಕೋತ್ತರತಯಾಽಪಿ ಭೇದವ್ಯಪದೇಶಾತ್ ನ ಇತರ ಇತಿ ಸೂತ್ರಾಂಶಂ ವ್ಯಾಚಷ್ಟೇ – **ಜುಷ್ಟಮಿತಿ** ॥ 'ಯದ್ಯಪಿ, ತಥಾಽಪಿ' ಇತ್ಯರ್ಥೇಽಪಿಶಬ್ದಃ। ರುದ್ರೋಽಪೀತಿ ಸಮುಚ್ಚಯೇ ವಾ । ನ ಕೇವಲಂ ಪೂರ್ವಹೇತೋಃ, ಕಿಂತು ಭೇದ-ವ್ಯಪದೇಶಾತ್ ಅಪೀತಿ ಸಮುಚ್ಚಯೇ ವಾ । 'ರುದ್ರಃ' ಇತೀತರಶಬ್ದಸ್ಯ ಅರ್ಥಾಂತ-ರೋಕ್ತಿಃ । ನ ಚೇತರಶಬ್ದಸ್ಯ ಜಡಪ್ರಕೃತಿವಿರಿಂಚರುದ್ರಪರತ್ವೇ ದ್ವಿವಚನಾನುಪಪತ್ತಿರಿತಿ ವಾಚ್ಯಮ್ । ವಿರಿಂಚಿರುದ್ರಯೋಶ್ಚೇತನತ್ವೇನೈಕೀಕೃತತ್ವಾತ್ । ತಥಾಚ– ಯದ್ಯಪಿ ಈಶಶಬ್ದಾದ್ ರುದ್ರೋಽಪಿ ಅದೃಶ್ಯತ್ವಾದಿಗುಣಕತ್ವೇನ 'ಪ್ರಾಪ್ತಃ' ಪ್ರತೀತಃ, ತಥಾಽಪಿ 'ಜುಷ್ಟಮ್' ಇತಿ ವಾಕ್ಯೇ ಪ್ರಕೃತವಿಷ್ಣ್ವಾಖ್ಯಾಕ್ಷರಸ್ಯ ಈಶಶಬ್ದಿತರುದ್ರಾದನ್ಯತ್ವವ್ಯಪ-ದೇಶಾದಪಿ ನಾದೃಶ್ಯತ್ವಾದಿಗುಣಕೋ ರುದ್ರಃ – ಇತಿ ಯೋಜನಾ । ಶ್ರುತಿಸ್ತು ಆನಂದ-ಮಯಾಧಿಕರಣೇ ವ್ಯಾಖ್ಯಾತಾ ।

**ಈಶಮ್** ಎಂಬುದಾಗಿ ಪದವು ಶ್ರುತವಾಗಿರುವುದರಿಂದ ಅದೃಶ್ಯತ್ವಾದಿಗುಣಕನು ರುದ್ರನೇಕಾಗಬಾರದು? ಎಂಬ ಶಂಕೆಗೆ ಉತ್ತರರೂಪವಾಗಿಯೂ ಕೂಡ 'ಭೇದ-ವ್ಯಪದೇಶಾತ್ ನೇತರಃ' ಎಂಬ ಸೂತ್ರಾಂಶವನ್ನು 'ಜುಷ್ಟಮ್' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಭಾಷ್ಯದಲ್ಲಿರುವ ಅಪಿಶಬ್ದವು ಯದ್ಯಪಿ, ತಥಾಪಿ ಎಂಬ ಅರ್ಥವನ್ನು ಹೇಳುವುದು. ಅಥವಾ ರುದ್ರನೂ ಕೂಡ ಎಂಬುದಾಗಿ ಸಮುಚ್ಚಯವನ್ನು ಹೇಳುವುದು. ಅಥವಾ ಹಿಂದೆ ಹೇಳಿದ ಹೇತುವಿನಿಂದ ಮಾತ್ರವಲ್ಲ; ಕಿಂತು ಭೇದವ್ಯಪ-ದೇಶದಿಂದಲೂ ಎಂಬುದಾಗಿ ಸಮುಚ್ಚಯವನ್ನು ಹೇಳುವುದು. ಭಾಷ್ಯದಲ್ಲಿ ರುದ್ರಃ ಎಂಬ ಪದವು ಸೂತ್ರದ ಇತರಶಬ್ದದ ಮತ್ತೊಂದು ಅರ್ಥವಾಗಿದೆ. ಹೀಗೆ ಇತರ-ಶಬ್ದವು ಜಡಪ್ರಕೃತಿ ವಿರಿಂಚ ಮತ್ತು ರುದ್ರ ಇವರನ್ನು ಹೇಳುವ ಅಭಿಪ್ರಾಯವುಳ್ಳ-ದ್ದಾದರೆ ಇತರೌ ಎಂಬುದಾಗಿ ದ್ವಿವಚನವು ಅನುಪಪನ್ನವಾಗುವುದು ಎಂದು ಹೇಳತಕ್ಕ-ದ್ದಲ್ಲ. ಏಕೆಂದರೆ ವಿರಿಂಚಿ ಮತ್ತು ರುದ್ರರನ್ನು ಚೇತನರಾಗಿರುವ ಕಾರಣ ಏಕೀಕರಿಸಿ ಇತರೌ ಎಂದು ಹೇಳಲಾಗಿದೆ. ತಥಾಚ – ಯದ್ಯಪಿ ಶ್ರುತಿಯಲ್ಲಿರುವ ಈಶಶಬ್ದದಿಂದ ರುದ್ರನೂ ಅದೃಶ್ಯತ್ವಾದಿಗುಣಕನೆಂದು, ಪ್ರಾಪ್ತಃ - ಅಂದರೆ ತೋರುವನು, ತಥಾಪಿ

'ಜುಷ್ಟಂ' ಎಂಬ ವಾಕ್ಯದಲ್ಲಿ ಪ್ರಕೃತ ವಿಷ್ಣ್ವಾಖ್ಯ ಅಕ್ಷರನಿಗೆ ಈಶಶಬ್ದದಿಂದ ಉಕ್ತನಾದ ರುದ್ರನಿಂದ ಭೇದವನ್ನು ಹೇಳಿರುವುದರಿಂದಲೂ ಅದೃಶ್ಯತ್ವಾದಿಗುಣಕನು ರುದ್ರನಲ್ಲ ಎಂದು ಯೋಜನೆ. 'ಜುಷ್ಟಂ' ಎಂಬ ಶ್ರುತಿಯಾದರೋ ಆನಂದಮಯಾಧಿಕರಣದಲ್ಲಿ ವ್ಯಾಖ್ಯಾತವಾಗಿದೆ.

ಸೂ– ॥ ಓಂ ರೂಪೋಪನ್ಯಾಸಾಚ್ಚ ಓಂ ॥ ೨೩ ॥

ಭಾ– 'ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್' (ಮುಂ.೩-೧-೩)ಇತಿ ।

'ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್'ಎಂಬ ಶ್ರುತಿಯಲ್ಲಿ ಅದೃಶ್ಯತ್ವಾದಿಗುಣಕನಿಗೆ ಶುದ್ಧ ಭಂಗಾರದ ವರ್ಣವನ್ನು ಹೇಳಿರುವುದರಿಂದಲೂ ಅದೃಶ್ಯತ್ವಾದಿ ಗುಣಕನು ವಿಷ್ಣುವೇ ಆಗಿರುವನು.

(ಭಾ.ದೀ.) ಯುಕ್ತ್ಯಂತರೇಣ ವಿಷ್ಣೋರೇವಾದೃಶ್ಯತ್ವಾದಿಗುಣಕತ್ವಂ ಸಾಧಯತ್ ಸೂತ್ರಂ ಪಠಿತ್ವಾ ತದುಪಾತ್ತಶ್ರುತಿಮೇವೋದಾಹರತಿ – **ರೂಪೋಪನ್ಯಾಸೇತಿ** ॥ 'ಇತಿ ರೂಪೋಪನ್ಯಾಸಾತ್' ಇತ್ಯನ್ವಯಃ । ಸೂತ್ರೇ ಚಶಬ್ದೋ ಯುಕ್ತಿಸಮುಚ್ಚಯೇ । ತಥಾ ಚ – ನ ಕೇವಲಂ ಧರ್ಮೋಕ್ತೇಃ, ಕಿಂತು ಅದೃಶ್ಯತ್ವಾದಿಗುಣಕಸ್ಯ 'ಯದಾ' ಇತಿ ಶ್ರುತೌ ಶುದ್ಧರುಕ್ಮರೂಪೋಕ್ತೇಶ್ಚ ಅದೃಶ್ಯತ್ವಾದಿಗುಣಕೋ ವಿಷ್ಣುರೇವ - ಇತಿ ಯೋಜನಾ ।

ಅತ್ರ 'ಯದಾ' ಇತಿ ವಾಕ್ಯಸ್ಯ 'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ' (ಮುಂ.೩.೧.೩) ಇತಿ ವಾಕ್ಯಶೇಷೇಣಾನ್ವಯಃ । 'ಪಶ್ಯತಿ' ಇತಿ ಪಶ್ಯೋ ದ್ರಷ್ಟಾ ಜೀವಃ । ಯದಾ 'ರುಕ್ಮವರ್ಣಂ' ಶುದ್ಧಹೇಮವರ್ಣಂ 'ಬ್ರಹ್ಮಯೋನಿಮ್' ಹಿರಣ್ಯಗರ್ಭಕಾರಣಮ್ ಅತ ಏವ ಜಗತಃ ಕರ್ತಾರಂ, 'ಪುರುಷಂ' ಪೂರ್ಣಷಡ್ಗುಣಂ 'ಸ್ವಸ್ಯೇಶಂ' ವಿಷ್ಣುಂ 'ಪಶ್ಯತೇ' ಪಶ್ಯತಿ ತದಾಽಸೌ 'ವಿದ್ವಾನ್' ಜೀವನ್ಮುಕ್ತಃ, 'ಪುಣ್ಯಪಾಪೇ' ಅಪ್ರಾರಬ್ಧೇ ಅನಿಷ್ಟಪುಣ್ಯಂ ಪಾಪಂ ಚ

ವಿಧೂಯ, 'ನಿರಂಜನಃ' ಜ್ಞಾನೋತ್ತರವಿಕರ್ಮಕೃತಾಶುಚಿತ್ವಾದಿದೋಷರಹಿತಃ ಅಂಜನಾಖ್ಯಾವಿದ್ಯಾರಹಿತ ಇತಿ **ಸುಧೋಕ್ತೇ**ರಜ್ಞಾನರಹಿತೋ ವಾ 'ಪರಮಂ ಸಾಮ್ಯಂ' ಪೂರ್ಣಾನಂದತ್ವಾದಿಸಾಮ್ಯಂ ನಿರ್ದುಃಖತ್ವಾದಿಸಾಮ್ಯಂ ವಾ 'ಉಪೈತಿ' ಪ್ರಾಪ್ನೋತಿ- ಇತಿ ಶ್ರುತ್ಯರ್ಥಃ । ತತ್ತ್ವೋದ್ಯೋತಟೀಕಾಯಾಂ ತು ಇಯಂ ಶ್ರುತಿಃ ಮುಕ್ತಪರತಯಾ ವ್ಯಾಖ್ಯಾತಾ । 'ಪರಮಮ್' ಇತ್ಯೇತದ್ ಅಭಿವ್ಯಕ್ತಮಿತಿ ಚ ವ್ಯಾಖ್ಯಾತಮ್ ।

ಮತ್ತೊಂದು ಯುಕ್ತಿಯಿಂದ ವಿಷ್ಣುವಿಗೇ ಅದೃಶ್ಯತ್ವಾದಿಗುಣಕತ್ವವು ಇರುವು-ದೆಂದು ಸಾಧಿಸುವ ಸೂತ್ರವನ್ನು ಪಠಿಸಿ ಆ ಸೂತ್ರವು ಗ್ರಹಿಸಿರುವ ಶ್ರುತಿಯನ್ನೇ ಭಾಷ್ಯ-ಕಾರರು ಉದಾಹರಿಸುತ್ತಿದ್ದಾರೆ. ಭಾಷ್ಯದ ಇತಿ ಎಂಬ ಪದವು 'ರೂಪೋಪನ್ಯಾಸಾತ್' ಎಂಬ ಸೂತ್ರದೊಂದಿಗೆ ಅನ್ವಯವನ್ನು ಹೊಂದುವುದು. ಸೂತ್ರದಲ್ಲಿ ಚಶಬ್ದವು ಯುಕ್ತಿಸಮುಚ್ಚಯವನ್ನು ಹೇಳುವುದು. ತಥಾಚ - ಧರ್ಮಗಳನ್ನು ಹೇಳಿರುವುದರಿಂದ ಮಾತ್ರವಲ್ಲ ಕಿಂತು ಅದೃಶ್ಯತ್ವಾದಿಗುಣಕನಿಗೆ ಯದಾ ಎಂಬ ಶ್ರುತಿಯಲ್ಲಿ ಶುದ್ಧ ಭಂಗಾರದ ರೂಪವನ್ನು ಹೇಳಿರುವುದರಿಂದಲೂ ಅದೃಶ್ಯತ್ವಾದಿಗುಣಕನು ವಿಷ್ಣುವೇ ಆಗಿರುವನು ಎಂದು ಸೂತ್ರಭಾಷ್ಯಗಳ ಪದಗಳ ಯೋಜನೆಯಾಗಿದೆ.

ಇಲ್ಲಿ 'ಯದಾ' ಎಂಬ ಶ್ರುತಿವಾಕ್ಯಕ್ಕೆ 'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ' ಎಂಬ ವಾಕ್ಯಶೇಷದೊಂದಿಗೆ ಅನ್ವಯ. 'ಪಶ್ಯತೀತಿ ಪಶ್ಯಃ' ಎಂಬ ವ್ಯುತ್ಪತ್ತಿಗನುಗುಣವಾಗಿ ಪಶ್ಯ ಎಂದರೆ 'ಪರ-ಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡ ಜೀವನು'. ಅವನು ಯದಾ - ಯಾವಾಗ, ರುಕ್ಮ-ವರ್ಣಂ - ಶುದ್ಧ ಭಂಗಾರದ ವರ್ಣವನ್ನು ಹೊಂದಿರುವ, ಬ್ರಹ್ಮಯೋನಿಂ - ಹಿರಣ್ಯಗರ್ಭನಿಗೆ ಕಾರಣನಾದ, ಆದ್ದರಿಂದಲೇ ಕರ್ತಾರಂ - ಜಗತ್ತಿನ ಸೃಷ್ಟಿಕರ್ತನಾದ, ಪುರುಷಂ - ಪೂರ್ಣಷಡ್ಗುಣಸಂಪನ್ನನಾದ, ಈಶಂ - ತನಗೆ ಸ್ವಾಮಿಯಾದ ವಿಷ್ಣು-ವನ್ನು, ಪಶ್ಯತೇ - ನೋಡುವನೋ, ತದಾ - ಆಗ, ಈ ವಿದ್ವಾನ್ - ಜೀವನ್ಮುಕ್ತ-ನಾದ ಜ್ಞಾನಿಯು, ಪುಣ್ಯಪಾಪೇ - ಅಪ್ರಾರಬ್ಧವಾದ ಅನಿಷ್ಟಪುಣ್ಯವನ್ನೂ ಮತ್ತು ಪಾಪವನ್ನೂ, ವಿಧೂಯ - ದೂರಮಾಡಿ, ನಿರಂಜನಃ - ಜ್ಞಾನೋತ್ತರಕಾಲದಲ್ಲಿ

ಮಾಡಿದ ದುಷ್ಕರ್ಮಗಳಿಂದ ಉಂಟಾಗುವ ಅಶುಚಿತ್ವಮೊದಲಾದ ದೋಷಗಳಿಂದ ರಹಿತನಾಗಿ, ಅಥವಾ - ಅಂಜನಾಖ್ಯಾವಿದ್ಯಾರಹಿತಃ ಎಂದು ಸುಧಾದಲ್ಲಿ ಹೇಳಿರುವುದಕ್ಕೆ ಅನುಸಾರವಾಗಿ ಅಂಜನ ಎಂದು ಕರೆಯಲಾಗುವ ಅಜ್ಞಾನದಿಂದ ರಹಿತನಾಗಿ, ಪರಮಂ ಸಾಮ್ಯಂ- ಪರಮಾತ್ಮನೊಂದಿಗೆ ಪೂರ್ಣಾನಂದತ್ವಾದಿಸಾಮ್ಯವನ್ನು, ಅಥವಾ ನಿರ್ದುಃಖತ್ವಾದಿಸಾಮ್ಯವನ್ನು, ಉಪೈತಿ - ಹೊಂದುವವನು ಎಂದು ಶ್ರುತಿಯ ಅರ್ಥ. ತತ್ತ್ವೋದ್ಯೋತಟೀಕಾದಲ್ಲಾದರೋ ಈ ಶ್ರುತಿಯು ಮುಕ್ತನ ಪರವಾಗಿ ವ್ಯಾಖ್ಯಾನಿಸಲ್ಪಟ್ಟಿದೆ. ಪರಮಮ್ ಎಂಬ ಪದಕ್ಕೆ ಅಭಿವ್ಯಕ್ತಂ - ಎಂದು ವ್ಯಾಖ್ಯಾನ ಮಾಡಲಾಗಿದೆ.

**ಭಾ– ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ । ಸ ಮುನಿರ್ಭೂತ್ವಾ ಸಮಚಿಂತಯತ್ । ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭೋಽಗ್ನಿರ್ಯಮೋ ವರುಣರುದ್ರೇಂದ್ರಾ ಇತಿ । ತಸ್ಯ ಹ್ಯೇತಸ್ಯ ಪರಮಸ್ಯ ನಾರಾಯಣಸ್ಯ ಚತ್ವಾರಿ ರೂಪಾಣಿ ಶುಕ್ಲಂ ರಕ್ತಂ ರೌಕ್ಮಂ ಕೃಷ್ಣಮಿತಿ । ಸ ಏತಾನ್ಯೇತೇಭ್ಯೋಽಭ್ಯಚೀಕ್ಲೃಪತ್ । ವಿಮಿಶ್ರಾಣಿ ವ್ಯಮಿಶ್ರಯತ್ ।**

(ಭಾ.ದೀ.) ನನು ಬ್ರಹ್ಮಾದೀನಾಮಪಿ ರೂಪಸದ್ಭಾವಾತ್ ಕುತೋ ರೂಪೋಪನ್ಯಾಸೇನ ಅಸ್ಯ ವಿಷ್ಣುತ್ವನಿಶ್ಚಯಃ? ಇತ್ಯತ ಆಹ – **ಏಕ ಇತಿ ।।** 'ಇದಮಗ್ರೇ' ಇತ್ಯುಪಸ್ಕ್ರಿಯತೇ । ಅತ ಏವ ನ್ಯಾಯದೀಪಿಕಾಯಾಂ 'ಜಗದಾದೌ' ಇತ್ಯುಕ್ತಮ್ । ಹೇತ್ವಾಸ್ವಾದನೇ । 'ಏತೇಭ್ಯಃ' ಇತಿ ತಾದರ್ಥ್ಯೇ ಚತುರ್ಥೀ । ತಥಾಚ – ಇದಮಸ್ಯ ಜಗತೋಽಗ್ರೇ ಪ್ರಲಯೇ ನಾರಾಯಣಃ 'ಏಕಃ' ಸ್ವತಂತ್ರ ಆಸೀತ್ । ನ ತದಾ ಚತುರ್ಮುಖಶಂಕರೌ, ನ ಸ್ವಸ್ವವ್ಯಾಪಾರೌ ಆಸ್ತಾಮ್ । 'ಸಃ' ವಿಷ್ಣುಸ್ತದಾ 'ಮುನಿಃ' ಮನನಶೀಲೋ ಮೌನೀ ವಾ ಭೂತ್ವಾ 'ಸಮಚಿಂತಯತ್' ಏತೇ ಜಾಯಂತಾಮ್ ಇತಿ ಧ್ಯಾನರೂಪಾಂ ಚಿಂತಾಮಕರೋತ್ । ತತಃ ತಸ್ಯ ಚಿಂತನಾದ್ ಏತೇ ವ್ಯಜಾಯಂತ । ಕೇ ತೇ? ಯೋ 'ವಿಶ್ವೋ' ವಾಯುಃ, ಯಶ್ಚ ಹಿರಣ್ಯಗರ್ಭಃ, ಯೇಽಗ್ನ್ಯಾದಯ ಏತ ಇತ್ಯರ್ಥಃ । ತತಃ ಕಿಮ್? ಇತ್ಯತ ಆಹ – 'ತಸ್ಯ' ಶ್ರುತ್ಯಾದಿಪ್ರಸಿದ್ಧಸ್ಯ 'ಏತಸ್ಯ'

ಸರ್ವಜೀವಶರೀರಗಸ್ಯ 'ಪರಮಸ್ಯ' ಸರ್ವೋತ್ತಮಸ್ಯ ನಾರಾಯಣಸ್ಯ 'ರೂಪಾಣಿ' ವರ್ಣಾಶ್ಚತ್ವಾರಿ ಭವಂತಿ । ಕಾನಿ ತಾನಿ? ಶುಕ್ಲಾದೀನಿ । ಕಿಂಚಾತಃ? 'ಸಃ' ನಾರಾಯಣಃ ಪೂರ್ವಮೇವ 'ವಿಮಿಶ್ರಾಣಿ' ಸ್ವೇನ ಮಿಶ್ರೀಕೃತಾನಿ ರೂಪಾಣಿ 'ಏತೇಭ್ಯೋ' ವಾಯು-ಪ್ರಭೃತ್ಯುಕ್ತದೇವಾನಾಮರ್ಥೇ 'ಅಭ್ಯಚೀಕ್ಲೃಪತ್' ಕ್ಲೃಪ್ತಾನ್ಯಕರೋತ್ । ತಾನಿ ವಿಮಿಶ್ರಾಣಿ ಪುನರಪಿ 'ವ್ಯಮಿಶ್ರಯತ್' ಮಾನುಷಾದೌ ವಿಶೇಷೇಣ ಮಿಶ್ರೀಚಕಾರ । ಯದ್ವಾ - ಸ ಏತಾನಿ ರೂಪಾಣಿ ವ್ಯಮಿಶ್ರಯತ್, ವಿಮಿಶ್ರಾಣಿ ಚೈತೇಭ್ಯೋಽಭ್ಯ-ಚೀಕ್ಲೃಪದಿತ್ಯರ್ಥಃ। ಶುದ್ಧಾನಿ ರೂಪಾಣಿ ತು ಸ್ವಸ್ಯೈವಾಕರೋದಿತಿ ಭಾವಃ।

ಅತ್ರಾಽದ್ಯಯೋಜನಾ **ತತ್ತ್ವಪ್ರದೀಪಟೀಕಯೋರುಕ್ತಾ। ದ್ವಿತೀಯಾ ತು ಟೀಕಾ-ಯಾಮಿತಿ ಧ್ಯೇಯಮ್ ।**

ಚತುರ್ಮುಖಬ್ರಹ್ಮ ಮೊದಲಾದವರಿಗೂ ರೂಪವಿರುವುದರಿಂದ ರೂಪವನ್ನು ಹೇಳಿರುವ ಮಾತ್ರದಿಂದ ಅದೃಶ್ಯತ್ವಾದಿಗುಣಕನು ವಿಷ್ಣುವೆಂದು ನಿಶ್ಚಯಿಸುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ 'ಏಕ' ಎಂದು ಹೇಳಲಾಗಿದೆ. ಇದಮಗ್ರೇ ಎಂಬ ಪದವು ಇಲ್ಲಿ ಯೋಜಿಸಲ್ಪಡುವುದು. ಆದ್ದರಿಂದಲೇ ನ್ಯಾಯದೀಪಿಕಾದಲ್ಲಿ (ಈ ಶ್ರುತಿಯ ವ್ಯಾಖ್ಯಾನಸಂದರ್ಭದಲ್ಲಿ) 'ಜಗದಾದೌ' - ಎಂದು ಹೇಳಲಾಗಿದೆ. 'ತಸ್ಯ ಹೈತಸ್ಯ' ಎಂಬಲ್ಲಿರುವ 'ಹ' ಎಂಬ ಪದವು ಈ ವಿಷಯದ ಆಸ್ವಾದನೆಯನ್ನು ಸೂಚಿ-ಸುವುದು. 'ಸ ಏತಾನ್ ಏತೇಭ್ಯಃ' ಎಂಬಲ್ಲಿರುವ 'ಏತೇಭ್ಯಃ' ಎಂಬ ಪದದಲ್ಲಿರುವ ಚತುರ್ಥೀವಿಭಕ್ತಿಯು ತಾದರ್ಥ್ಯವೆಂಬ ಅರ್ಥವನ್ನು ಹೇಳುವುದು. ತಥಾಚ – ಇದಮಗ್ರೇ - ಈ ಜಗತ್ತಿನ ಸೃಷ್ಟಿಯ ಮುಂಚೆ, ಅಂದರೆ ಪ್ರಳಯಕಾಲದಲ್ಲಿ, ನಾರಾಯಣಃ ಏಕಃ ಆಸೀತ್ - ನಾರಾಯಣನು ಸ್ವತಂತ್ರನಾಗಿ ಒಬ್ಬನೇ ಇದ್ದನು. ಆಗ ಚತುರ್ಮುಖ ಮತ್ತು ಶಂಕರರು ತಮ್ಮ ತಮ್ಮ ಕ್ರಿಯೆಗಳನ್ನು ಮಾಡುತ್ತಿರಲಿಲ್ಲ. ಸಃ - ಆ ವಿಷ್ಣುವು ಆಗ, ಮುನಿಃ ಭೂತ್ವಾ - ಮನನಶೀಲನಾಗಿ ಅಥವಾ ಮೌನಿಯಾಗಿದ್ದು, ಸಮಚಿಂತಯತ್ - ಅವರು ಜನಿಸಲಿ ಎಂಬುದಾಗಿ ಧ್ಯಾನರೂಪವಾದ ಚಿಂತೆಯನ್ನು ಮಾಡಿದನು. ತತಃ - ಆಗ ಅವನ ಈ ಚಿಂತನದಿಂದ, ಏತೇ ವ್ಯಜಾಯಂತ - ಇವರು

ಜನಿಸಿದರು. ಅವರು ಯಾರು? ಯೋ ವಿಶ್ವಃ - ಯಾರು ವಾಯುವೋ, ಯಶ್ಚ ಹಿರಣ್ಯಗರ್ಭಃ - ಯಾರು ಚತುರ್ಮುಖನೋ, ಯೇ ಚ - ಮತ್ತು ಯಾರು ಅಗ್ನಿ ಮೊದಲಾದವರೋ ಅವರು ಜನಿಸಿದರು ಎಂದು ಅರ್ಥ. ಅನಂತರವೇನಾಯಿತು? ಎಂಬ ಪ್ರಶ್ನೆಗೆ ಉತ್ತರವಾಗಿ - ತಸ್ಯ ಎಂಬ ವಾಕ್ಯ ಹೊರಟಿದೆ. ತಸ್ಯ ಅಂದರೆ ಶ್ರುತ್ಯಾದಿ ಪ್ರಸಿದ್ಧನಾದ, ಏತಸ್ಯ - ಈ ಸರ್ವಜೀವರ ಶರೀರದಲ್ಲಿರುವ, ಪರಮಸ್ಯ - ಸರ್ವೋತ್ತಮನಾದ ನಾರಾಯಣನಿಗೆ, ರೂಪಾಣಿ - ನಾಲ್ಕುವರ್ಣಗಳು ಉಂಟಾಗುತ್ತವೆ. ಅವುಗಳು ಯಾವುವು? ಶುಕ್ಲಾದೀನಿ- ಶುಕ್ಲವರ್ಣವೇ ಮೊದಲಾದ ರೂಪಗಳು. ಅದರಿಂದ ಆದದ್ದೇನು? ಸಃ - ಆ ನಾರಾಯಣನು ಮೊದಲೇ ವಿಮಿಶ್ರಾಣಿ - ತನ್ನಿಂದ ಮಿಶ್ರಣಗೊಂಡ ರೂಪಗಳನ್ನು, ಏತೇಭ್ಯಃ - ವಾಯು ಮೊದಲಾದ ದೇವತೆಗಳಿಗಾಗಿ, ಅಭ್ಯಚೀಕ್ಲೃಪತ್ - ಮೀಸಲಾಗಿಟ್ಟನು. ತಾನಿ - ಮಿಶ್ರಣಗೊಂಡ ಆ ರೂಪಗಳನ್ನು ಮತ್ತೊಮ್ಮೆ, ವ್ಯಮಿಶ್ರಯತ್- ಮನುಷ್ಯರೇ ಮೊದಲಾದವರಲ್ಲಿ ವಿಶೇಷರೀತಿಯಿಂದ ಮಿಶ್ರಣಗೊಳಿಸಿದನು. ಮಿಶ್ರಿತವಾದ ಆ ರೂಪಗಳನ್ನು ವ್ಯಮಿಶ್ರಯತ್- ಮಿಶ್ರಣಗೊಳಿಸಿದನು. ಮತ್ತು ಹಾಗೆ ಮಿಶ್ರಿತವಾದ ರೂಪಗಳನ್ನು, ಏತೇಭ್ಯಃ ಅಭ್ಯಚೀಕ್ಲೃಪತ್- ಇವರಿಗಾಗಿ ಕ್ಲೃಪ್ತಪಡಿಸಿದನು ಎಂದು ಅರ್ಥ. ಶುದ್ಧವಾದ ರೂಪಗಳನ್ನಾದರೋ ತನಗೇ ಮಾಡಿಕೊಂಡನು ಎಂದು ಭಾವ.

ಈ ಮೇಲಿನ ವ್ಯಾಖ್ಯಾನಗಳಲ್ಲಿ ಮೊದಲನೆಯ ಯೋಜನೆಯನ್ನು ತತ್ವಪ್ರದೀಪ ಮತ್ತು ಟೀಕಾಗ್ರಂಥಗಳಲ್ಲಿ ಹೇಳಲಾಗಿದೆ. ಎರಡನೆಯದಾದರೋ ತತ್ವಪ್ರಕಾಶಿಕೆಯಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

ಭಾ– ಅತ ಏತಾದೃಗೇತದ್ರೂಪಮಿತಿ ತಸ್ಯೈವ ಹಿ ರೂಪಾಣ್ಯಭಿಧೀಯಂತೇ ॥೨೩

ಈ ಮಿಶ್ರೀಕರಣದಿಂದ ಆ ವಿಷ್ಣುವಿನ ರೂಪವು ಹೀಗೆಯೇ ಅಂದರೆ ಶುದ್ಧವಾಗಿಯೇ ಶುದ್ಧಶುಕ್ಲವರ್ಣವುಳ್ಳ ಸ್ವರೂಪವೇ ಆಗಿರುವುದು ಎಂಬುದಾಗಿ ಆ ವಿಷ್ಣುವಿನ ರೂಪಗಳೇ ಇಲ್ಲಿ ಹೇಳಲ್ಪಟ್ಟಿವೆ.

(ಭಾ.ದೀ.) ತತಃ ಕಿಮ್? ಇತ್ಯತ ಆಹ – **ಅತ ಇತಿ** ॥ ಅತೋ ಮಿಶ್ರೀಕರಣಾತ್ ತದ್ರೂಪಂ ತಸ್ಯ ವಿಷ್ಣೋ ರೂಪಮ್ 'ಏತಾದೃಗೇವ' ಶುದ್ಧಂ ಶುಕ್ಲಾದಿಸ್ವರೂಪಮೇವ। ನ ತು ವಾಯ್ವಾದಿರೂಪಮಿವ ಮಿಶ್ರಮ್ ಇತ್ಯರ್ಥಃ । ಯದ್ಯಪಿ ಅತ್ರ 'ತಸ್ಯ ಹೈತಸ್ಯ' ಇತ್ಯಾದಿಕಮೇವೋದಾಹರಣೀಯಮ್, ಪ್ರಕೃತೋಪಯುಕ್ತತ್ವಾತ್, ನ ತು 'ಏಕೋ ನಾರಾಯಣಃ' ಇತ್ಯಾದಿಕಮ್ । ತಥಾಪಿ 'ಏತೇಭ್ಯಃ' ಇತ್ಯಸ್ಯಾರ್ಥಸ್ಯ ಪ್ರತ್ಯಯಾರ್ಥಂ ತದಂಶೋದಾಹರಣಂ ಕೃತಮ್ । **ಇತೀತಿ** ॥ 'ಹಿ' ಯಸ್ಮಾದ್ ಇತಿ ಉದಾಹೃತ-ವಾಕ್ಯೇನ 'ರೂಪಾಣಿ' ಶುದ್ಧರೌಕ್ಮಾದಿರೂಪಾಣಿ ತಸ್ಯ ವಿಷ್ಣೋರಭಿಧೀಯಂತೇ, ನ ಇತರೇಷಾಂ, ತಸ್ಮಾತ್ ನ ಅಪ್ರಯೋಜಕತಾ ಶಂಕ್ಯಾ ಇತ್ಯರ್ಥಃ । ಅನೇನ ಸೂತ್ರೇ ಸಾಮಾನ್ಯೇನೋಕ್ತತ್ವೇಽಪಿ ರೂಪಶಬ್ದಃ ಶುದ್ಧರೂಪಪರಃ । ತಚ್ಚ ಅನ್ಯತ್ರ ನಾಸ್ತಿ । 'ಧ್ಯೇಯಃ ಸದಾ ಇತಿ ಸೂರ್ಯೇ ಪ್ರತೀತಮಪಿ ಮಿಶ್ರಮೇವ' ಇತಿ ಲಿಂಗಸ್ಯ ಅನ್ಯತ್ರ ನಿರವಕಾಶತ್ವಮುಕ್ತಂ ಭವತಿ ॥

ಮುಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಅತ ಎಂಬ ಭಾಷ್ಯವಾಕ್ಯವು ಹೊರ-ಟಿದೆ. ಅತಃ ಎಂದರೆ ಮಿಶ್ರೀಕರಣದಿಂದ, ತದ್ರೂಪಂ- ಆ ವಿಷ್ಣುವಿನ ರೂಪವು, ಏತಾದೃಗೇವ - ಹೀಗೆಯೇ ಅಂದರೆ ಶುದ್ಧವಾದ ಶುಕ್ಲಾದಿ ಸ್ವರೂಪವುಳ್ಳದ್ದೇ ಆಗಿದ್ದಿತು ಹೊರತು ವಾಯು ಮೊದಲಾದವರ ರೂಪದಂತೆ ಮಿಶ್ರಣವಾಗಿರಲಿಲ್ಲ ಎಂದು ಅರ್ಥ. ಯದ್ಯಪಿ ಇಲ್ಲಿ 'ತಸ್ಯ ಹೈತಸ್ಯ' ಎಂಬ ಶ್ರುತಿಯನ್ನೇ ಪ್ರಕೃತಕ್ಕೆ ಉಪಯುಕ್ತವಾದ ಕಾರಣ ಉದಾಹರಿಸಬೇಕಾಗಿದ್ದಿತು ಹೊರತು 'ಏಕೋ ನಾರಾಯಣಃ ಆಸೀತ್' ಇತ್ಯಾದಿ ವಾಕ್ಯಗಳನ್ನಲ್ಲ. ತಥಾಽಪಿ - ಏತೇಭ್ಯಃ - ಎಂಬ ಶ್ರುತ್ಯರ್ಥದ ಜ್ಞಾನಕ್ಕೋಸ್ಕರವಾಗಿ ಆ ಶ್ರುತಿಯ ಮತ್ತೊಂದು ಅಂಶವನ್ನು ಉದಾಹರಿಸಲಾಗಿದೆ. 'ಇತಿ ತಸ್ಯೈವ ಹಿ' ಎಂಬ ಭಾಷ್ಯದಲ್ಲಿ ಹಿ - ಯಾವ ಕಾರಣದಿಂದಾಗಿ, ಇತಿ - ಉದಾಹರಿಸಲ್ಪಟ್ಟ ವಾಕ್ಯದಿಂದ, ರೂಪಾಣಿ - ಶುದ್ಧ ಭಂಗಾರದ ರೂಪ ಮೊದಲಾದ ರೂಪಗಳು, ತಸ್ಯೈವ - ಆ ವಿಷ್ಣುವಿಗೇ ಹೇಳಲ್ಪಡುತ್ತವೆ, ಹೊರತು ಇತರರಿಗಲ್ಲ. ಆದ್ದರಿಂದ ಅಪ್ರಯೋಜಕತಾ-ಶಂಕೆಯನ್ನು ಮಾಡತಕ್ಕದ್ದಲ್ಲ ಎಂದು ಅರ್ಥ. ಇದರಿಂದ - ಸೂತ್ರದಲ್ಲಿ ಸಾಮಾನ್ಯ-ರೀತಿಯಿಂದ ಹೇಳಲ್ಪಟ್ಟಿದ್ದರೂ ಇಲ್ಲಿ ರೂಪಶಬ್ದವು ಶುದ್ಧರೂಪದ ಅಭಿಪ್ರಾಯ-

ವುಳ್ಳದ್ದು. ಆ ರೂಪವಾದರೋ ಮತ್ತೊಂದೆಡೆಯಲ್ಲಿ ಇಲ್ಲ. 'ಧ್ಯೇಯಃ ಸದಾ' ಎಂಬ ಶ್ಲೋಕದಲ್ಲಿ ಸೂರ್ಯನಲ್ಲಿ ಇರುವುದೆಂದು ತಿಳಿದುಬಂದರೂ ಅದು ಮಿಶ್ರವೇ ಆಗಿರುವುದು ಆದ್ದರಿಂದ ಈ ಲಿಂಗಕ್ಕೆ ವಿಷ್ಣುವನ್ನು ಬಿಟ್ಟು ಉಳಿದ ಕಡೆಗಳಲ್ಲಿ ಅವಕಾಶವಿಲ್ಲ ಎಂದು ಹೇಳಿದಂತಾಗುವುದು.

॥ ಇತಿ ಅದೃಶ್ಯತ್ವಾಧಿಕರಣಮ್ ॥ ೬ ॥

*****

## ೭. ಅಥ ವೈಶ್ವಾನರಾಧಿಕರಣಮ್

**ಭಾ– ಅದೃಶ್ಯತ್ವಾದಿಗುಣೇಷು ಸರ್ವಗತತ್ವಂ 'ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ' (ಛಾಂ. ೫.೧೮.೧) ಇತಿ ವೈಶ್ವಾನರಸ್ಯೋಕ್ತಮಿತಿ ।**

> ಅದೃಶ್ಯತ್ವಾದಿಗುಣಗಳ ಮಧ್ಯೆ ಸರ್ವಗತತ್ವವು 'ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ' ಎಂಬುದಾಗಿ ವೈಶ್ವಾನರಾಗ್ನಿಗೆ ಹೇಳಲಾಗಿದೆ.

(ಭಾ.ದೀ.) ಅತ್ರಾಧಿಕರಣೇ ಪಾಚಕತ್ವಾದ್ಯನೇಕಲಿಂಗಸಮನ್ವಯಸಿದ್ಧ್ಯರ್ಥಂ ಬ್ರಹ್ಮಣಿ ವೈಶ್ವಾನರನಾಮಸಮನ್ವಯಃ ಕ್ರಿಯತೇ । ಪೂರ್ವಾಧಿಕರಣಸಂಗತಿಂ ವಿಷಯವಾಕ್ಯೋದಾಹರಣಪೂರ್ವಕಂ ವಿಷಯಾದಿಕಂ ಸೂಚಯತಿ – **ಅದೃಶ್ಯತ್ವಾದೀತಿ** ॥ 'ಉಕ್ತಮ್' ಇತ್ಯಸ್ಯಾऽವೃತ್ತಿಃ । 'ಶ್ರುತೌ' ಇತಿ ಶೇಷಃ । ತಥಾಚ – ಗತಾಧಿಕರಣೋದಾಹೃತಮುಂಡಕಶ್ರುತ್ಯುಕ್ತಾದೃಶ್ಯತ್ವಾದಿಗುಣೇಷು ಮಧ್ಯೇ 'ನಿತ್ಯಂ ವಿಭುಂ ಸರ್ವಗತಮ್' (ಮುಂ. ೧.೧.೬) ಇತ್ಯನೇನ ಯತ್ ಸರ್ವಗತತ್ವಮುಕ್ತಂ ತತ್ ಛಂದೋಗಶ್ರುತೌ 'ಯಸ್ತ್ವೇತಮ್' ಇತ್ಯನೇನ ವೈಶ್ವಾನರಸ್ಯ ಉಕ್ತಮ್ – ಇತಿ ಯೋಜನಾ ।

ಅನೇನ ಛಂದೋಗಶ್ರುತಿಸ್ಥವೈಶ್ವಾನರಶಬ್ದಸ್ಯ ಅನ್ಯನಿಷ್ಠತ್ವಾಕ್ಷೇಪಮುಖೇನ ಪೂರ್ವೋಕ್ತಸರ್ವಗತತ್ವಾದೇರನ್ಯನಿಷ್ಠತ್ವಾಕ್ಷೇಪಾತ್ ಪೂರ್ವೇಣ ಅಸ್ಯಾऽಕ್ಷೇಪಿಕೀ

ಸಂಗತಿರುಕ್ತಾ ಭವತಿ । ವೈಶ್ವಾನರೋ ವಿಷಯಃ, ವಿಷ್ಣುರನ್ಯೋ ವಾ ಇತಿ ಸಂದೇಹಶ್ಚ ಸೂಚಿತಃ।

ಈ ಅಧಿಕರಣದಲ್ಲಿ ವಾಚಕತ್ವ ಮೊದಲಾದ ಅನೇಕಲಿಂಗಗಳಿಗೆ ಸಮನ್ವಯದ ಸಿದ್ಧಿಗಾಗಿ ಬ್ರಹ್ಮನಲ್ಲಿ ವೈಶ್ವಾನರ ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡ-ಲಾಗುವುದು. ಹಿಂದಿನ ಅಧಿಕರಣದ ಸಂಗತಿಯನ್ನು ಹಾಗೂ ವಿಷಯವಾಕ್ಯವನ್ನು ಉದಾಹರಿಸುವ ಮೂಲಕ ವಿಷಯ ಮೊದಲಾದವುಗಳನ್ನು 'ಅದೃಶ್ಯತ್ವಾದಿ' ಎಂಬ ವಾಕ್ಯದಿಂದ ಭಾಷ್ಯಕಾರರು ಸೂಚಿಸುತ್ತಿದ್ದಾರೆ. ಭಾಷ್ಯದಲ್ಲಿ ವೈಶ್ವಾನರಸ್ಯೋಕ್ತಂ ಎಂಬಲ್ಲಿರುವ ಉಕ್ತಮ್ ಎಂಬ ಪದವು ಆವೃತ್ತಿಯನ್ನು ಹೊಂದುವುದು. 'ಶ್ರುತೌ' ಎಂಬ ಪದವು ಇಲ್ಲಿ ಶೇಷವಾಗಿದೆ. ತಥಾಚ – ಹಿಂದಿನ ಅಧಿಕರಣದಲ್ಲಿ ಉದಾ-ಹರಿಸಲ್ಪಟ್ಟಿರುವ ಮುಂಡಕಶ್ರುತಿಯಲ್ಲಿ ಹೇಳಲಾದ ಅದೃಶ್ಯತ್ವಾದಿಗುಣಗಳ ಮಧ್ಯದಲ್ಲಿ 'ನಿತ್ಯಂ ವಿಭುಂ ಸರ್ವಗತಮ್' ಎಂಬ ವಾಕ್ಯದಲ್ಲಿ ಯಾವ ಸರ್ವಗತತ್ವವು ಉಕ್ತ-ವಾಗಿದೆಯೋ ಅದು ಛಂದೋಗಶ್ರುತಿಯಲ್ಲಿ 'ಯಸ್ತ್ವೇತಮ್' ಎಂಬ ವಾಕ್ಯದಿಂದ ವೈಶ್ವಾನರನಿಗೆ ಹೇಳಲ್ಪಟ್ಟಿದೆ ಎಂದು ಯೋಜನೆ.

ಇದರಿಂದ ಛಂದೋಗಶ್ರುತಿಯಲ್ಲಿರುವ ವೈಶ್ವಾನರಶಬ್ದವು ವಿಷ್ಣುಭಿನ್ನನನ್ನು ಹೇಳು-ವುದೆಂದು ಆಕ್ಷೇಪಿಸುವ ಮೂಲಕ ಹಿಂದಿನ ಅಧಿಕರಣದ ವಿಷಯವಾಕ್ಯದಲ್ಲಿ ಹೇಳಲಾದ ಸರ್ವಗತತ್ವವು ವಿಷ್ಣುಭಿನ್ನನಲ್ಲೇ ಇರುವುದೆಂದು ಆಕ್ಷೇಪಿಸುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿಯು ಉಕ್ತವಾಗುವುದು. ಹಾಗೆಯೇ ಈ ಅಧಿಕರಣಕ್ಕೆ ವೈಶ್ವಾನರನು ವಿಷಯನು. ಅವನು ವಿಷ್ಣುವೋ ಅಥವಾ ಅನ್ಯನೋ ಎಂಬುದಾಗಿ ಸಂಶಯವೂ ಸೂಚಿತವಾಗುವುದು.

(ಭಾ.ದೀ.) ಶ್ರುತ್ಯರ್ಥಸ್ತು – 'ಯಸ್ತು' ಅಧಿಕಾರೀ 'ಪ್ರಾದೇಶಮಾತ್ರಂ' ದೇಹ-ಹೃದಯೇ ತಾವತ್ ಪರಿಮಾಣಕಮ್, ತತ್ತ್ವಪ್ರದೀಪರೀತ್ಯಾಽಧಿಕಾರ್ಯಪೇಕ್ಷಯಾ ಪ್ರಾದೇಶಮಾತ್ರಮಿತಿ ವಾ, 'ಅಭಿವಿಮಾನಮ್' ಅಭಿತೋ ವಿಗತಂ ಮಾನಂ ಮರ್ಯಾದಾ ಯಸ್ಯ ತಮ್, ಸರ್ವಗತಮ್ ಇತಿ ಯಾವತ್, 'ಆತ್ಮಾನಮ್'

ಆತತಗುಣಮ್ 'ಏತಂ' ಶರೀರಸ್ಥಂ, 'ವೈಶ್ವಾನರಂ' ತದಾಖ್ಯವಿಷ್ಣುಮ್, 'ಏವಂ' ವಕ್ಷ್ಯಮಾಣರೀತ್ಯಾ ಉಪಾಸ್ತೇ 'ಸೋಽನ್ನಮತ್ತಿ' (ಛಾಂ.೫.೧೮.೧) ಸ್ವಯೋಗ್ಯ-ಭೋಗ್ಯಮ್ ಅನುಭವತಿ - ಇತಿ।

ಶ್ರುತಿಯ ಅರ್ಥವಾದರೋ – ಯಸ್ತು - ಯಾವ ಅಧಿಕಾರಿಯು, ಪ್ರಾದೇಶ-ಮಾತ್ರಂ - ತನ್ನ ದೇಹದ ಹೃದಯದಲ್ಲಿ ಹೃದಯದಷ್ಟೇ ಪರಿಮಾಣವುಳ್ಳ ಅಥವಾ ತತ್ವಪ್ರದೀಪರೀತ್ಯಾ ಅಧಿಕಾರಿಯ ದೃಷ್ಟಿಯಿಂದ ಪ್ರಾದೇಶಮಾತ್ರ ಪರಿಮಾಣವುಳ್ಳ, ಅಭಿವಿಮಾನಂ - ಅಭಿತಃ - ಸುತ್ತಲೂ, ವಿಗತಂ ಮಾನಂ ಯಸ್ಯ ಅಂದರೆ, ಮಿತಿ ಇಲ್ಲದಿರುವ ಪರಿಮಾಣದ, ಸರ್ವಗತನಾದ ಎಂದು ಭಾವ. ಆತ್ಮಾನಂ - ವ್ಯಾಪ್ತವಾದ ಗುಣವುಳ್ಳ, ಏತಮ್ - ಈ ಶರೀರಸ್ಥನಾದ, ವೈಶ್ವಾನರಂ - ವೈಶ್ವಾನರನೆಂಬ ಹೆಸರಿನ ವಿಷ್ಣುವನ್ನು, ಏವಮ್ - ಮುಂದೆ ಹೇಳಿದ ರೀತಿಯಲ್ಲಿ, ಉಪಾಸ್ತೇ - ಉಪಾಸನೆ ಮಾಡುವನೋ, ಸಃ - ಅವನು, ಅನ್ನಮತ್ತಿ - ತನಗೆ ಯೋಗ್ಯವಾದ ಭೋಗವನ್ನು ಅನುಭವಿಸುವನು - ಎಂದು.

ಭಾ– ಅತ ಆಹ –

ಸೂ – ॥ ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ ॥ ೨೪ ॥

ಅಗ್ನಾವಿಷ್ಣ್ವೋಃ ಸಾಧಾರಣಸ್ಯ ವೈಶ್ವಾನರಶಬ್ದಸ್ಯ ವಿಷ್ಣಾವೇವ ಪ್ರಸಿದ್ಧಾತ್ಮಶಬ್ದೇನ ವಿಶೇಷಣಾದ್ ವೈಶ್ವಾನರೋ ವಿಷ್ಣುರೇವ ॥ ೨೪ ॥

ಈ ಆಕ್ಷೇಪಪರಿಹಾರಕ್ಕಾಗಿ ಸೂತ್ರಕಾರರು 'ಓಂ ವೈಶ್ವಾನರಃ ಸಾಧಾ-ರಣಶಬ್ದವಿಶೇಷಾತ್ ಓಂ' ಎಂದು ಹೇಳಿದ್ದಾರೆ.

ಅಗ್ನಿ ಮತ್ತು ವಿಷ್ಣು ಇವರಿಬ್ಬರಲ್ಲಿ ಸಮಾನವಾಗಿರುವ ವೈಶ್ವಾನರಶಬ್ದಕ್ಕೆ ವಿಷ್ಣುವಿನಲ್ಲೇ ಪ್ರಸಿದ್ಧವಾಗಿರುವ ಆತ್ಮ ಶಬ್ದವೆಂಬ ವಿಶೇಷಣದಿಂದಾಗಿ ವೈಶ್ವಾನರನು ವಿಷ್ಣುವೇ ಆಗಿರುವನು.

(ಭಾ.ದೀ.) ಸಿದ್ಧಾಂತಯತ್ಸೂತ್ರಮವತಾರಯತಿ – **ಅತ ಇತಿ** ॥ 'ಸಾಧಾರಣಸ್ಯ' ಇತ್ಯನಂತರಮ್ 'ಅಪಿ' ಇತಿ ಶೇಷಃ । ಸಾಧಾರಣ್ಯಂ - ಸಾಮ್ಯಮ್ । ತತ್ರ ಶ್ರುತೇರ್ನೋರ್ಭಯತ್ರಪ್ರಸಿದ್ಧತ್ವರೂಪಂ, ವೈಶ್ವಾನರಶಬ್ದಸ್ಯ ಅನ್ಯತ್ರೈವ ಪ್ರಸಿದ್ಧತ್ವಾತ್। ಕಿಂತು ಶ್ರುತೇಃ ಪ್ರಸಿದ್ಧತೋ ಲಿಂಗೇನ ಸಾಮ್ಯರೂಪಂ, ತದಪಿ ನಿರವಕಾಶತ್ವೇನ ಪ್ರಕಾರೇಣ, ವೈಶ್ವಾನರಶ್ರುತೇಃ ವಿಷ್ಣೌ ಪ್ರಸಿದ್ಧ್ಯಭಾವೇನ ತತ್ರ ನಿರವಕಾಶತ್ವಾತ್ ಪೂರ್ವೋಕ್ತ-ಸರ್ವಗತತ್ವಸ್ಯಾಪಿ ವಿಷ್ಣೋರನ್ಯತ್ರ ನಿರವಕಾಶತ್ವಮ್ । ತಥಾಚ – ಯದ್ಯಪಿ ಅಗ್ನಾ-ವಿಷ್ಣ್ವೋಃ ಪ್ರತಿಜ್ಞಾವಿಷಯಯೋಃ ಸತೋಃ ಪೂರ್ವಪಕ್ಷಸಾಧಕವೈಶ್ವಾನರಶಬ್ದೋ ನಿರವಕಾಶತ್ವೇನ ಪ್ರಕಾರೇಣ ಉತ್ತರಪಕ್ಷಸಾಧಕಲಿಂಗಸಾಧಾರಣಃ । ಶ್ರುತಿಲಿಂಗಯೋರ್ನಿರವಕಾಶತ್ವೇನ ಸಾಮ್ಯೇಽಪಿ ಲಿಂಗಾತ್ ಶ್ರುತಿಃ ಪ್ರಬಲಾ । ತಸ್ಮಾತ್ ಅಗ್ನಿರೇವ ಇತಿ ಪ್ರಾಪ್ತಮ್ । ತಥಾಪಿ ಸಾಧಾರಣಸ್ಯಾಪಿ ವೈಶ್ವಾನರಶಬ್ದಸ್ಯ ವಿಷ್ಣ್ವೇಕನಿಷ್ಠತಯಾ ಶ್ರುತ್ಯಾದಿಸಿದ್ಧೇನ 'ಆತ್ಮಾನಂ ವೈಶ್ವಾನರಮ್' ಇತ್ಯಾತ್ಮಶಬ್ದೇನ 'ವಿಶೇಷಣಾತ್' ವಿಶೇಷಿತತ್ವಾದ್ ವಿಷ್ಣುಪರತ್ವಸಂಭವಾತ್ । ಪ್ರಸಿದ್ಧ್ಯಾದೇರನ್ಯಥೋಪಪನ್ನತ್ವೇನ ನಿರ್ಣಯಕಾರಣಾಭಾವಾತ್ ಶಬ್ದವಿಶೇಷಾದ್ ಆತ್ಮಶಬ್ದಾದ್ ವೈಶ್ವಾನರೋ ವಿಷ್ಣುರೇವ, 'ನ ದೇವತಾ ಭೂತಂ ಚ' ಇತ್ಯಾವೃತ್ತ್ಯಾ ಸೂತ್ರಭಾಷ್ಯಯೋರ್ಯೋಜನಾ ।

ಅನೇನ ನಿರ್ಣಯೇನೈವ ಪೂರ್ವಪಕ್ಷಃ ಸೂಚಿತಃ । ಅತ್ರ ಪಕ್ಷೇ ಲಿಂಗಪ್ರಾಬಲ್ಯ-ನಿರಾಸಾಯ ಸಾಧಾರಣ್ಯೋಕ್ತಿಃ । ಸಿದ್ಧಾಂತಶ್ರುತೇಃ ಸಾವಕಾಶತ್ವಜ್ಞಾಪನಾಯ ಸಾಧಾ-ರಣ್ಯೋಕ್ತಿರಿತಿ ಕೇಚಿತ್ ।

ಯದ್ವಾ – ಭಾಷ್ಯಟೀಕಾಸ್ವಾರಸ್ಯಾದ್ ಅನಿರ್ಣಯೇನೈವ ಪೂರ್ವಪಕ್ಷಃ । ಅತ್ರ ಪಕ್ಷೇ ಸಾಧಾರಣ್ಯಂ ಪ್ರತಿ ಧರ್ಮಿತ್ವಂ ಶಬ್ದಸ್ಯೈವ, ನ ಲಿಂಗಸ್ಯಾಪಿ । 'ಅಗ್ನಾವಿಷ್ಣ್ವೋಃ' ಇತಿ ವಿಷಯಸಪ್ತಮೀ । ತಥಾಚ – ಯತೋಽಗ್ನಾವಿಷ್ಣ್ವೋಃ ಯದ್ಯಪಿ ವೈಶ್ವಾನರ-ಶಬ್ದಃ ಸಾಧಾರಣಃ ಸಂಭವದ್‌ವೃತ್ತಿಕಃ । ತಥಾಽಪಿ ಪ್ರಸಿದ್ಧಮುಖೇನ ನಿರವಕಾಶತ್ವೇನ ಲಿಂಗಸ್ಯ ಸಾಧಾರಣಶ್ಚ । ತತಃ ಪೂರ್ವೋತ್ತರಪಕ್ಷಸಾಧಕಯೋಃ ಸಮಬಲತ್ವಾತ್

ಅನಿರ್ಣಯಃ । ತಥಾऽಪಿ ಉಭಯತ್ರ ಸಾಧಾರಣಸ್ಯಾಪಿ ವೈಶ್ವಾನರಶಬ್ದಸ್ಯ – ಇತ್ಯಾದಿಕಾ ಯೋಜನಾ ದ್ರಷ್ಟವ್ಯಾ ।

ಸಿದ್ಧಾಂತವನ್ನು ಹೇಳುವ ಸೂತ್ರಕ್ಕೆ ಅತಃ ಎಂದು ಅವತಾರಿಕೆಯನ್ನು ನೀಡುತ್ತಿದ್ದಾರೆ. ಭಾಷ್ಯದಲ್ಲಿ 'ಸಾಧಾರಣಸ್ಯ' ಎಂಬ ಪದದ ನಂತರ 'ಅಪಿ' ಎಂಬ ಪದವು ಶೇಷವಾಗಿದೆ. ಸಾಧಾರಣ್ಯ ಎಂದರೆ ಸಾಮ್ಯ . ಇಲ್ಲಿ ವೈಶ್ವಾನರಶ್ರುತಿಗೆ ಉಭಯತ್ರಪ್ರಸಿದ್ಧತ್ವವಿಲ್ಲ. ಏಕೆಂದರೆ ವೈಶ್ವಾನರಶಬ್ದವು ಅನ್ಯತ್ರೈವಪ್ರಸಿದ್ಧವಾದ ಶಬ್ದವಾಗಿದೆ. ಆದರೆ ಶ್ರುತಿಗೆ ಲಿಂಗದಿಂದ ಸಾಮ್ಯವಿದೆ. ಸಾಮ್ಯವೂ ಕೂಡ ನಿರವಕಾಶತ್ವವೆಂಬ ಪ್ರಕಾರದಿಂದ. ವೈಶ್ವಾನರಶಬ್ದಕ್ಕೆ ವಿಷ್ಣುವಿನಲ್ಲಿ ಲೋಕಪ್ರಸಿದ್ಧಿ ಇಲ್ಲದಿರುವುದರಿಂದ ಅದು ವಿಷ್ಣುವಿನಲ್ಲಿ ಅವಕಾಶರಹಿತವಾಗಿದೆ. ಹಿಂದಿನ ಅಧಿಕರಣದಲ್ಲಿ ಹೇಳಿದ ಸರ್ವಗತತ್ವವೂ ಕೂಡ ವಿಷ್ಣುವನ್ನು ಬಿಟ್ಟು ಉಳಿದ ಕಡೆಗಳಲ್ಲಿ ಅವಕಾಶರಹಿತವಾಗಿದೆ. ತಥಾಚ – ಈ ಅಧಿಕರಣದ ಪ್ರತಿಜ್ಞೆಗೆ ವಿಷಯಗಳಾದ ಅಗ್ನಿ ಮತ್ತು ವಿಷ್ಣುಗಳಿಗೆ ಪೂರ್ವಪಕ್ಷದ ಹೇತುವಾಗಿರುವ ವೈಶ್ವಾನರಶಬ್ದವು ಸಿದ್ಧಾಂತಸಾಧಕವಾದ ಲಿಂಗಗಳಂತೆ ನಿರವಕಾಶತ್ವವನ್ನು ಹೊಂದಿರುವುದರ ಕಾರಣ ಸಮಪ್ರಾಬಲ್ಯವನ್ನು ಪಡೆದಿದೆ. ಹೀಗೆ ಶ್ರುತಿಲಿಂಗಗಳು ನಿರವಕಾಶವಾಗಿದ್ದು ಸಾಮ್ಯವನ್ನು ಪಡೆದಿದ್ದರೂ ಲಿಂಗಕ್ಕಿಂತಲೂ ಶ್ರುತಿಯು ಪ್ರಬಲವಾದದ್ದು. ಆದ್ದರಿಂದ ವೈಶ್ವಾನರಶ್ರುತಿ ಎಂಬ ಪ್ರಮಾಣದಿಂದ 'ಯಸ್ತ್ವೇತಮೇವಂ' ಎಂಬ ಶ್ರುತಿಯಲ್ಲಿ ಉಕ್ತನಾಗಿರುವ ಸರ್ವಗತನು ಅಗ್ನಿಯೇ ಆಗಿರುವನು ಎಂದು ಪೂರ್ವಪಕ್ಷವು ಪ್ರಾಪ್ತವಾಗುವುದು. ಆದರೂ ಅಗ್ನಿ ಮತ್ತು ವಿಷ್ಣುಗಳಲ್ಲಿ ಸಾಧಾರಣವಾದ ವೈಶ್ವಾನರಶಬ್ದಕ್ಕೆ ವಿಷ್ಣುವನ್ನು ಮಾತ್ರ ಹೇಳುವುದೆಂದು ಶ್ರುತ್ಯಾದಿಪ್ರಮಾಣಗಳಿಂದ ಪ್ರಸಿದ್ಧವಾಗಿರುವ 'ಆತ್ಮಾನಂ ವೈಶ್ವಾನರಮ್' ಎಂಬಲ್ಲಿರುವ ಆತ್ಮಶಬ್ದದಿಂದ 'ವಿಶೇಷಣಾತ್' ವಿಶೇಷಣವನ್ನು ಕೊಟ್ಟಿರುವುದರಿಂದ ವೈಶ್ವಾನರಶಬ್ದವು ವಿಷ್ಣುಪರವೇ ಆಗುವುದು. ಲೋಕಪ್ರಸಿದ್ಧಿ ಮೊದಲಾದವುಗಳನ್ನು ಪ್ರಕಾರಾಂತರದಿಂದ ಕೂಡಿಸುವುದು ಸಾಧ್ಯವಿರುವುದರಿಂದ ಅಗ್ನಿಯನ್ನೇ ಈ ವೈಶ್ವಾನರಶಬ್ದವು ಹೇಳುವುದೆಂದು ನಿರ್ಣಯಿಸಲು ಕಾರಣವಿಲ್ಲದಿರುವುದರಿಂದ 'ಶಬ್ದವಿಶೇಷಾತ್' ಅಂದರೆ ಆತ್ಮಶಬ್ದದಿಂದಾಗಿ ವೈಶ್ವಾನರನು ವಿಷ್ಣುವೇ ಹೊರತು 'ನ ದೇವತಾ ಭೂತಂ ಚ' – ಅಗ್ನಿದೇವತೆಯಾಗಲೀ

ಪಂಚಭೂತಗಳಲ್ಲಿ ಒಂದಾದ ಅಗ್ನಿಯಾಗಲೀ ಅಲ್ಲ ಎಂದು ಸೂತ್ರ ಮತ್ತು ಭಾಷ್ಯಗಳ ಯೋಜನೆಯಾಗಿದೆ. ಇಲ್ಲಿ 'ನ ದೇವತಾ ಭೂತಂ ಚ' ಎಂಬ ಸೂತ್ರವನ್ನು ಆವೃತ್ತಿ-ಮಾಡಿಕೊಂಡು ಆ ಪದಗಳನ್ನು ಯೋಜಿಸಬೇಕು.

ಇದರಿಂದ ಈ ಅಧಿಕರಣದ ಪೂರ್ವಪಕ್ಷವು ನಿರ್ಣಯರೂಪವಾಗಿರುವುದೆಂದು ಸೂಚಿತವಾಗುವುದು. ಈ ಪಕ್ಷದಲ್ಲಿ ಲಿಂಗಗಳ ಪ್ರಾಬಲ್ಯವನ್ನು ನಿರಾಕರಿಸಲು ಆ ಲಿಂಗಗಳ ಸಾಮ್ಯವನ್ನು ಹೇಳಲಾಗಿದೆ. ಕೆಲವರು ಸಿದ್ಧಾಂತಪಕ್ಷದಲ್ಲಿ ಶ್ರುತಿಯು ಸಾವಕಾಶವಾಗಿರುವುದೆಂದು ತಿಳಿಸಲು ಸಾಮ್ಯವನ್ನು ಹೇಳಲಾಗಿದೆ ಎಂದು ಹೇಳುವರು.

ಅಥವಾ ಭಾಷ್ಯ ಮತ್ತು ಟೀಕಾವಾಕ್ಯಗಳ ಸ್ವಾರಸ್ಯದ ದೃಷ್ಟಿಯಿಂದ ಇಲ್ಲಿ ಪೂರ್ವ-ಪಕ್ಷವು ನಿರ್ಣಯರೂಪವಾಗಿರುವುದಿಲ್ಲ. ಈ ಪಕ್ಷದಲ್ಲಿ ಸೂತ್ರಭಾಷ್ಯಗಳಲ್ಲಿ ಹೇಳಿರುವ ಸಾಧಾರಣ್ಯವೆಂಬ ಧರ್ಮಕ್ಕೆ ಧರ್ಮಿಯಾಗಿರುವುದು ಶಬ್ದವೇ ಹೊರತು ಲಿಂಗವಲ್ಲ. **ಅಗ್ನಾವಿಷ್ಣ್ವೋಃ** ಎಂಬಲ್ಲಿರುವ ಸಪ್ತಮೀವಿಭಕ್ತಿಯು ವಿಷಯ ಎಂಬ ಅರ್ಥವನ್ನು ಹೇಳುವುದು. ತಥಾಚ ಯಾವ ಕಾರಣದಿಂದಾಗಿ ಅಗ್ನಿ ಮತ್ತು ವಿಷ್ಣುಗಳ ವಿಷಯದಲ್ಲಿ ವೈಶ್ವಾನರಶಬ್ದವು ಯದ್ಯಪಿ ಸಾಧಾರಣಃ ಅಂದರೆ ಇಬ್ಬರನ್ನೂ ಹೇಳುವ ಶಕ್ತಿಯು-ಳ್ಳದ್ದು. ತಥಾಪಿ ಪ್ರಸಿದ್ಧಿಯ ಮೂಲಕವಾಗಿ ನಿರವಕಾಶವಾಗಿರುವುದರಿಂದ ಲಿಂಗಕ್ಕೆ ಸಮಾನವೂ ಆಗಿದೆ. ಆದ್ದರಿಂದ ಪೂರ್ವಪಕ್ಷ ಮತ್ತು ಸಿದ್ಧಾಂತಗಳಿಗೆ ಸಾಧಕಗಳಾದ ಪ್ರಮಾಣಗಳು ಸಮಬಲವಾಗಿರುವುದರಿಂದ ವೈಶ್ವಾನರನು ವಿಷ್ಣುವೋ ಅಗ್ನಿಯೋ ಎಂಬ ನಿರ್ಣಯವಿಲ್ಲ. ತಥಾಪಿ ಹೀಗೆ ಉಭಯತ್ರ ಸಮಾನವಾಗಿದ್ದರೂ ವೈಶ್ವಾನರ-ಶಬ್ದಕ್ಕೆ – ಇತ್ಯಾದಿಯಾಗಿ ಸೂತ್ರಭಾಷ್ಯಗಳ ಯೋಜನೆಯನ್ನು ತಿಳಿಯಬೇಕು.

**ಸೂ– ॥ ಓಂ ಸ್ಮರ್ಯಮಾಣಮನುಮಾನಂ ಸ್ಯಾದಿತಿ ಓಂ ॥ ೨೫ ॥**

ಭಗವದ್‌ಗೀತೆಯಲ್ಲಿ ಸ್ಮರಿಸಲ್ಪಡುವ ವಿಷ್ಣುವಿನ ವೈಶ್ವಾನರತ್ವವು ವೈಶ್ವಾನರವಿದ್ಯೆಯಲ್ಲೂ ವಿಷ್ಣುವೇ ವೈಶ್ವಾನರನೆಂದು ಅನುಮಾನ ಪ್ರಮಾಣದಿಂದ ಸಾಧಿಸಲು ಹೇತುವಾಗಿದೆ.

**ಭಾ– 'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ'** (ಭ.ಗೀ.

೧೫-೧೪) ಇತಿ ಸ್ಮರ್ಯಮಾಣಮತ್ರಾಪಿ ಸ ಏವೋಚ್ಯತ ಇತ್ಯಸ್ಯಾನು-ಮಾಪಕಮ್। ಸಮಾಖ್ಯಾನಾತ್। ಇತಿಶಬ್ದಃ ಸಮಾಖ್ಯಾಪ್ರದರ್ಶಕಃ ॥೨೫

'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ' ಎಂದು ಭಗವದ್ಗೀತಾರೂಪವಾದ ಸ್ಮೃತಿಯಲ್ಲಿ ಸ್ಮರಿಸಲ್ಪಟ್ಟಿರುವ ವಿಷ್ಣುವಿನ ವೈಶ್ವಾನರತ್ವವು 'ಈ ವೈಶ್ವಾನರವಿದ್ಯೆಯಲ್ಲೂ ಆ ಗೀತೆಯಲ್ಲಿ ಉಕ್ತ-ನಾಗಿರುವ ವಿಷ್ಣುವೇ ವೈಶ್ವಾನರಪದವಾಚ್ಯನಾಗಿದ್ದಾನೆ' ಎಂಬ ವಿಷಯ -ದಲ್ಲಿ ಸಾಧಕವಾದ ಹೇತುವಾಗಿದೆ. ಏಕೆಂದರೆ ಗೀತಾವಾಕ್ಯವು ವೈಶ್ವಾನರವಿದ್ಯೆಯ ಸಮಾನೋಕ್ತಿಯಾಗಿದೆ. ಸೂತ್ರದಲ್ಲಿರುವ ಇತಿ ಶಬ್ದವು ಸಮಾಖ್ಯೆಯನ್ನು ಸೂಚಿಸುವುದು.

(ಭಾ.) ನನು ಆತ್ಮಶಬ್ದಸ್ಯ ಅಗ್ನ್ಯಾದಿಷು ಅಮುಖ್ಯತ್ವಾಭ್ಯುಪಗಮೇನ ಸಾಮಾನಾ-ಧಿಕರಣ್ಯಾವಿರೋಧಾತ್ ತೇಷಾಮೇವ ವೈಶ್ವಾನರತ್ವಂ ಕಿಂ ನ ಸ್ಯಾತ್? ಇತ್ಯಾದಿಶಂಕಾಂ ಪರಿಹರ್ತುಂ ಸಮಾಖ್ಯಾರೂಪಹೇತ್ವಂತರೇಣ ವೈಶ್ವಾನರಸ್ಯ ವಿಷ್ಣುತ್ವಂ ನಿಶ್ಚಾಯಯತ್ ಸೂತ್ರಂ ಪಠಿತ್ವಾ ವ್ಯಾಚಷ್ಟೇ – **ಸ್ಮರ್ಯಮಾಣಮಿತಿ** ॥ ಸೂತ್ರಭಾಷ್ಯಯೋಃ 'ಸ್ಮರ್ಯಮಾಣಮ್' 'ಅಹಂ ವೈಶ್ವಾನರೋ ಭೂತ್ವಾ' ಇತಿ ಗೀತಾಸ್ಮೃತ್ಯುಕ್ತಂ ವಿಷ್ಣೋಃ ವೈಶ್ವಾನರತ್ವಮ್ 'ಅತ್ರ' ವೈಶ್ವಾನರವಿದ್ಯಾಯಾಮಪಿ 'ಸಃ' ಗೀತೋಕ್ತೋ ಭಗವಾನೇವ ವೈಶ್ವಾನರಪದೇನೋಚ್ಯತೇ 'ಇತ್ಯಸ್ಯ' ಏವಂರೂಪಸ್ಯಾರ್ಥಸ್ಯ 'ಅನುಮಾನಮ್' ಅನುಮಾಪಕಂ 'ಸ್ಯಾತ್' ಭವೇದಿತಿ ಯೋಜನಾ।

ನನ್ವಹಮಿತಿ ವಿಷ್ಣುನಾ ಕೃಷ್ಣೇನೋಕ್ತೇಃ ಸ್ಮೃತ್ಯುಕ್ತವೈಶ್ವಾನರಸ್ಯ ವಿಷ್ಣುತ್ವೇಽಪಿ ಅತ್ರೋಕ್ತವೈಶ್ವಾನರಸ್ಯ ಕುತೋ ವಿಷ್ಣುತ್ವಮ್? ಇತ್ಯತ ಆಹ – **ಸಮಾಖ್ಯಾನಾದಿತಿ** ॥ 'ಅಸ್ಯಾಃ ಸ್ಮೃತೇಃ' ಇತಿ ಶೇಷಃ । ತಥಾಚ – ಗೀತಾಸ್ಮೃತೇಃ ವೈಶ್ವಾನರವಿದ್ಯಾ-ಸಮಾನೋಕ್ತಿರೂಪತ್ವಾತ್ ಅಸ್ಯಾಃ ತತ್ಸಮಾಖ್ಯಾನಿಶ್ಚಯೋ ಭವತೀತ್ಯರ್ಥಃ।

ಸಮಾಖ್ಯಾಯುಕ್ತಿರ್ನ ಸೂತ್ರೋಕ್ತೇತ್ಯತ ಆಹ – **ಇತಿಶಬ್ದ ಇತಿ** ॥ 'ಪ್ರದರ್ಶಕಃ'

**ಸೂಚಕಃ । ತಥಾಚ – 'ಇತಿ ಸ್ಮರ್ಯಮಾಣಮ್' ಇತ್ಯಸ್ಯ 'ಇತಿ ಸಮಾಖ್ಯಾಯ-ಮಾನಮ್' ಇತ್ಯರ್ಥಾಭ್ಯುಪಗಮಾತ್ ಇತಿಶಬ್ದಃ ಸಮಾನೋಕ್ತಿರೂಪಸಮಾಖ್ಯಾ-ಲಿಂಗಜ್ಞಾಪಕ ಇತಿ ಭಾವಃ । ಅತ್ರ ಸೂತ್ರೇ ಸಮಾಖ್ಯಾರೂಪಹೇತ್ವಂತರೋಕ್ತಾವಪಿ ತಸ್ಯ ಆತ್ಮಶಬ್ದಾಖ್ಯಪೂರ್ವಹೇತೋರನಿಶ್ಚಾಯಕತ್ವಶಂಕಾಮುಖೇನ ತನ್ನಿರಾಸಾಯ ಪ್ರವೃತ್ತ-ತ್ವಾಚ್ಚಶಬ್ದಾಭಾವಃ।**

'ಆತ್ಮಾನಂ ವೈಶ್ವಾನರಂ' ಎಂಬಲ್ಲಿರುವ ಆತ್ಮಶಬ್ದಕ್ಕೆ ಅಗ್ನ್ಯಾದಿಗಳ ವಿಷಯದಲ್ಲಿ ಅಮುಖ್ಯವೃತ್ತಿಯನ್ನು ಅಂಗೀಕರಿಸುವುದರಿಂದ ಆತ್ಮಾನಂ ವೈಶ್ವಾನರಂ ಎಂಬುದಾಗಿ ಸಮಾನವಿಭಕ್ತಿಯಿಂದ ಶಬ್ದಗಳನ್ನು ಪ್ರಯೋಗಿಸಿದಲ್ಲಿ ಯಾವುದೇ ವಿರೋಧವಿಲ್ಲ-ದಿರುವುದರಿಂದ ಅಗ್ನ್ಯಾದಿಗಳೇ ವೈಶ್ವಾನರನೆಂದು ಹೇಳಬಾರದೇಕೆ? ಎಂಬ ಆಶಂಕೆ-ಯನ್ನು ಪರಿಹರಿಸಲು ಸಮಾಖ್ಯೆಯೆಂಬ ಇನ್ನೊಂದು ಹೇತುವಿನಿಂದ ವೈಶ್ವಾನರನಿಗೆ ವಿಷ್ಣುತ್ವವನ್ನು ನಿರ್ಣಯಿಸುವ ಸೂತ್ರವನ್ನು ಭಾಷ್ಯಕಾರರು 'ಸ್ಮರ್ಯಮಾಣಂ' ಎಂದು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. ಸೂತ್ರ ಮತ್ತು ಭಾಷ್ಯಗಳಲ್ಲಿ ಸ್ಮರ್ಯಮಾಣಂ ಎಂದರೆ ''ಅಹಂ ವೈಶ್ವಾನರೋ ಭೂತ್ವಾ ಎಂದು ಗೀತಾಸ್ಮೃತಿಯಲ್ಲಿ ಹೇಳಿರುವ ವಿಷ್ಣುವಿನ ವೈಶ್ವಾನರತ್ವವು, ಅತ್ರಾಪಿ- ವೈಶ್ವಾನರವಿದ್ಯೆಯಲ್ಲೂ ಕೂಡ, 'ಸ ಏವ' ಆ ಗೀತೆ-ಯಲ್ಲಿ ಉಕ್ತನಾದ ಭಗವಂತನೇ ವೈಶ್ವಾನರಪದದಿಂದ ಹೇಳಲ್ಪಡುವನು. 'ಇತ್ಯಸ್ಯ' ಎಂಬ ವಿಷಯಕ್ಕೆ 'ಅನುಮಾನಮ್'- ಅನುಮಾಪಕವು, ಸ್ಯಾತ್- ಆಗುವುದು'' ಎಂದು ಸೂತ್ರ ಮತ್ತು ಭಾಷ್ಯಗಳ ಯೋಜನೆಯಾಗಿದೆ.

ಗೀತೆಯಲ್ಲಿ ವಿಷ್ಣುವೇ ಆಗಿರುವ ಶ್ರೀಕೃಷ್ಣನು 'ಅಹಂ ವೈಶ್ವಾನರಃ' ಎಂದು ಹೇಳಿರುವುದರಿಂದ ಅಲ್ಲಿ ಉಕ್ತನಾದ ವೈಶ್ವಾನರನು ವಿಷ್ಣುವಾಗಿದ್ದರೂ, ಈ ವೈಶ್ವಾನರ ವಿದ್ಯೆಯಲ್ಲಿ ಹೇಳಿರುವ ವೈಶ್ವಾನರನು ವಿಷ್ಣುವೆಂದು ನಿಶ್ಚಯಿಸುವುದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ 'ಸಮಾಖ್ಯಾನಾತ್' ಎಂದು ಹೇಳಿದೆ. 'ಅಸ್ಯಾಃ ಸ್ಮೃತೇಃ' ಎಂಬ ಪದಗಳು ಇಲ್ಲಿ ಶೇಷವಾಗಿವೆ. ತಥಾಚ ಗೀತಾಸ್ಮೃತಿಯು ವೈಶ್ವಾನರವಿದ್ಯೆಯ ಸಮಾ-ನೋಕ್ತಿರೂಪವಾಗಿರುವುದರಿಂದ ಈ ವೈಶ್ವಾನರವಿದ್ಯೆಗೆ ಗೀತಾಸ್ಮೃತಿಯ ಸಮಾಖ್ಯೆ ಇರುವುದೆಂದು ನಿಶ್ಚಯವಾಗುವುದು ಎಂದು ಅರ್ಥ.

ಸಮಾಖ್ಯಾಯುಕ್ತಿಯನ್ನು ಸೂತ್ರದಲ್ಲಿ ಹೇಳಿಲ್ಲ ಎಂಬ ಶಂಕೆಗೆ ಉತ್ತರವಾಗಿ ಭಾಷ್ಯದಲ್ಲಿ 'ಇತಿಶಬ್ದಃ' ಎಂದು ಹೇಳಲಾಗಿದೆ. ಸಮಾಖ್ಯಾಪ್ರದರ್ಶಕಃ ಎಂಬಲ್ಲಿ ಪ್ರದರ್ಶಕಃ ಎಂದರೆ ಸೂಚಕ ಎಂದರ್ಥ. ತಥಾಚ – 'ಇತಿ ಸ್ಮರ್ಯಮಾಣಮ್' ಎಂಬ ಸೂತ್ರದ ಪದಗಳಿಗೆ – ''ಹೀಗೆ ಗೀತಾಸ್ಮೃತಿಯ ಸಮಾಖ್ಯೆಯನ್ನು ಹೊಂದಿರುವುದು ಎಂಬ ಅರ್ಥವನ್ನು ಅಂಗೀಕರಿಸುವುದರಿಂದ ಎಂಬುದಾಗಿ ಇತಿಶಬ್ದವು ಸಮಾನೋಕ್ತಿರೂಪವಾದ ಸಮಾಖ್ಯಾ ಎಂಬ ಲಿಂಗವನ್ನು ಸೂಚಿಸುವುದು'' ಎಂದು ಭಾವ. ಈ ಸೂತ್ರದಲ್ಲಿ ವಿಷ್ಣುವೇ ವೈಶ್ವಾನರನೆಂದು ಸಾಧಿಸಲು ಸಮಾಖ್ಯೆಯೆಂಬ ಮತ್ತೊಂದು ಹೇತುವನ್ನು ಹೇಳಿದ್ದರೂ ಆ ಹೇತುವು ಹಿಂದಿನ ಸೂತ್ರದಲ್ಲಿ ಹೇಳಿದ ಆತ್ಮಶಬ್ದವು ವಿಷ್ಣುವೇ ವೈಶ್ವಾನರನೆಂದು ನಿಶ್ಚಯಿಸಲು ಸಾಧಕವಾಗುವುದಿಲ್ಲ ಎಂಬ ಶಂಕೆಯು ಉದ್ಭವಿಸಿದಾಗ ಆ ಶಂಕೆಯನ್ನು ನಿರಾಸ ಮಾಡಲು ಪ್ರವೃತ್ತವಾಗಿರುವುದರಿಂದ ಸೂತ್ರದಲ್ಲಿ ಚಶಬ್ದವಿಲ್ಲ.

**ಸೂ– ॥ ಓಂ ಶಬ್ದಾದಿಭ್ಯೋಽನ್ತಃಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ ಪುರುಷವಿಧಮಪಿ ಚೈನಮಧೀಯತೇ ಓಂ ॥೨೬॥**

ಶ್ರುತಿ ಮೊದಲಾದ ಪ್ರಮಾಣಗಳಿಂದ ಮತ್ತು ಉದರದಲ್ಲಿದ್ದು ಮಾಡುವ ಪಚನಕ್ರಿಯೆ ಮೊದಲಾದವುಗಳಿಂದ ವೈಶ್ವಾನರನು ವಿಷ್ಣುವಲ್ಲ ಎಂದರೆ ಅದು ಸರಿಯಲ್ಲ. ಏಕೆಂದರೆ ಅಗ್ನಿ ಮೊದಲಾದ ನಾಮ, ಲಿಂಗ ಮತ್ತು ಕ್ರಿಯೆಗಳನ್ನು ಹೊಂದಿರುವಂತೆ ಉಪಾಸನೆಯನ್ನು ಉಪದೇಶಿಸಿರುವುದರಿಂದ ಮತ್ತು ಈ ವಿದ್ಯೆಯ ಉಪಕ್ರಮದಲ್ಲಿ ಹೇಳಿರುವ ಆತ್ಮತ್ವ ಮೊದಲಾದ ಧರ್ಮಗಳು ಅಗ್ನ್ಯಾದಿಗಳಲ್ಲಿ ಇಲ್ಲವಾದ ಕಾರಣ ಈ ಪ್ರಕರಣವು ಬ್ರಹ್ಮಪ್ರಕರಣವೇ ಆಗಿರುವುದರಿಂದ ಅಷ್ಟೇ ಅಲ್ಲದೆ ಈ ವೈಶ್ವಾನರನನ್ನು ಪುರುಷನು ಹೇಗೆ ಇರುವನೆಂದು ಶ್ರುತಿಯು ವರ್ಣಿಸುವುದೋ ಅದೇ ರೀತಿಯಿಂದ ಛಂದೋಗರು ಅಧ್ಯಯನ ಮಾಡುವ ಕಾರಣದಿಂದಲೂ ವೈಶ್ವಾನರನು ವಿಷ್ಣುವೇ ಆಗಿರುವನು.

ಭಾ– 'ಅಯಮಗ್ನಿರ್ವೈಶ್ವಾನರಃ'(ಬೃ. ೭.೯.೧) 'ವೈಶ್ವಾನರಮೃತ ಆಜಾತ-ಮಗ್ನಿಮ್'(ಋ.೬-೭-೧) ಇತ್ಯಾದಿಶಬ್ದಃ, 'ವೈಶ್ವಾನರೇ ತದುದ್ಧಂ ಭವತಿ' (ಛಾಂ.೫-೨೪-೪); 'ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯ-ಪಚನ ಆಸ್ಯಮಾಹವನೀಯಃ' (ಛಾಂ.೫-೧೮-೨) ಇತ್ಯಾದ್ಯಗ್ನಿಲಿಂಗಮಾದಿ-ಶಬ್ದೋಕ್ತಂ, 'ಯೇನೇದಮನ್ನಂ ಪಚ್ಯತೇ'(ಬೃ.೭.೯.೧) 'ತದ್ಯದ್ ಭಕ್ತಂ ಪ್ರಥಮಮಾಗಚ್ಛೇತ್ ತದ್ಧೋಮೀಯಮ್' (ಛಾಂ.೫.೧೯.೧) ಇತ್ಯಾದಿನಾ ಪಾಚಕತ್ವೇನಾಂತಃಪ್ರತಿಷ್ಠಾನಂ ಚ ಪ್ರತೀಯತೇ । ತಸ್ಮಾನ್ನ ವಿಷ್ಣುರಿತಿ ಚೇತ್,

'ಅಯಮಗ್ನಿರ್ವೈಶ್ವಾನರಃ', 'ವೈಶ್ವಾನರಮೃತ ಆಜಾತಮಗ್ನಿಮ್' ಮೊದಲಾದ ವಾಕ್ಯಗಳಲ್ಲಿರುವ ಅಗ್ನಿಶಬ್ದ, 'ವೈಶ್ವಾನರೇ ತದುದ್ಧಂ ಭವತಿ' 'ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನಃ ಆಸ್ಯಮ್ ಆಹವನೀಯಃ' ಎಂಬ ವಾಕ್ಯಗಳಲ್ಲಿ ಹೇಳಿರುವ, ಸೂತ್ರ-ದಲ್ಲಿ ಆದಿಶಬ್ದದಿಂದ ಉಕ್ತವಾಗಿರುವ ಅಗ್ನಿಲಿಂಗಗಳು ಮತ್ತು 'ಯೇನೇದಮನ್ನಂ ಪಚ್ಯತೇ' , 'ತದ್ಯದ್‌ಭಕ್ತಂ ಪ್ರಥಮಮಾಗಚ್ಛೇತ್ ತದ್ಧೋಮೀಯಮ್' ಇತ್ಯಾದಿ ವಾಕ್ಯಗಳಿಂದ ಭುಂಜಿಸುವ ಆಹಾರದ ಪಾಚಕನಾಗಿ ಶರೀರದ ಒಳಗೆ ಇರುವಿಕೆ ಇಲ್ಲಿ ತಿಳಿದು ಬರುತ್ತಿದೆ. ಆದ್ದರಿಂದ ಈ ವೈಶ್ವಾನರನು ವಿಷ್ಣುವಲ್ಲ. ಎಂದರೆ –

(ಭಾ.ದೀ.) ವೈಶ್ವಾನರಸ್ಯ ವಿಷ್ಣುತ್ವಮಾಕ್ಷಿಪ್ಯ ಸಮಾದಧತ್ ಸೂತ್ರಮುಪನ್ಯಸ್ಯ ಆಕ್ಷೇಪಾಂಶಂ ತಾವದ್ ವ್ಯಾಚಷ್ಟೇ – **ಶಬ್ದಾದಿಭ್ಯ ಇತಿ** ॥ 'ಅಯಮಗ್ನಿರ್ವೈಶ್ವಾನರೋ ಯೋಽಯಮಂತಃಪುರುಷೇ' (ಬೃ.೭.೯.೧) ಇತಿ ಬೃಹದಾರಣ್ಯವಾಕ್ಯಮ್ ।

'ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾಂ ವೈಶ್ವಾನರಮೃತ ಆಜಾತಮಗ್ನಿಮ್ ।
ಕವಿಂ ಸಂರಾಜಮತಿಥಿಂ ಜನಾನಾಮಾಸನ್ನಾ ಪಾತ್ರಂ ಜನಯಂತ ದೇವಾಃ ॥
– (ಋ. ೬.೭.೧)

ಇತಿ ಋಗ್ವೇದವಾಕ್ಯಮ್ । 'ಇತ್ಯಾದಿ' ಇತಿ ಕರ್ಮಧಾರಯಃ । ತಥಾಚ – ಇತ್ಯಾದಿರೂಪಃ ಶಬ್ದಃ ಸೌತ್ರಶಬ್ದಪದೇನೋಕ್ತ ಇತ್ಯರ್ಥಃ । ಯದ್ವಾ – ಇತ್ಯಾದಿ ಏವಮಾದಿವಾಕ್ಯಜಾತಂ 'ಶಬ್ದಃ' ಸೌತ್ರಶಬ್ದಪದೇನ ಗೃಹೀತ ಇತ್ಯರ್ಥಃ । ಆದಿಶಬ್ದೇನ ಏತಜ್ಜಾತೀಯಕಂ ಶ್ರುತ್ಯಂತರವಾಕ್ಯಂ ಗೃಹ್ಯತೇ । 'ವೈಶ್ವಾನರೇ' ಇತಿ ಶ್ರುತ್ಯಂತರ-ವಾಕ್ಯಮ್ । 'ಹೃದಯಮ್' ಇತ್ಯಾದಿ ಛಂದೋಗಶ್ರುತಿಃ ।

**ಇತ್ಯಾದ್ಯಗ್ನಿಲಿಂಗಮಿತಿ ॥** ಏವಮಾದಿಶಬ್ದೋಕ್ತಾಗ್ನಿಲಿಂಗಮಿತ್ಯರ್ಥಃ । ಆದಿಶಬ್ದೇನ 'ನಾಭಿಂ ಯಜ್ಞಾನಾಂ ಸದನಂ ರಯೀಣಾಮ್' (ಋ.೬.೭.೨) ಇತ್ಯಾದಿವಾಕ್ಯೋ-ಕ್ತಾನಿ ಗೃಹ್ಯಂತೇ । 'ಆದಿಶಬ್ದೋಕ್ತಮ್' ಸೌತ್ರಾದಿಶಬ್ದೋಕ್ತಮ್ ಇತ್ಯರ್ಥಃ ।

ವೈಶ್ವಾನರನು ವಿಷ್ಣುವಲ್ಲ ಎಂದು ಆಕ್ಷೇಪಿಸಿ ಸಮಾಧಾನವನ್ನು ಹೇಳುವ ಸೂತ್ರ-ವನ್ನು ಉಪನ್ಯಾಸ ಮಾಡಿ ಭಾಷ್ಯಕಾರರು ಆ ಸೂತ್ರದಲ್ಲಿರುವ ಆಕ್ಷೇಪಾಂಶವನ್ನು ಮೊದಲು ವ್ಯಾಖ್ಯಾನ ಮಾಡುತ್ತಿದ್ದಾರೆ.

ಭಾಷ್ಯದಲ್ಲಿ ಉದಾಹರಿಸಿರುವ 'ಅಯಮಗ್ನಿರ್ವೈಶ್ವಾನರಃ ಯೋಽಯಮ್ ಅಂತಃಪುರುಷೇ' ಎಂಬ ವಾಕ್ಯವು ಬೃಹದಾರಣ್ಯಕವಾಕ್ಯವಾಗಿದೆ. 'ವೈಶ್ವಾನರಮೃತ' ಎಂಬ ವಾಕ್ಯವು

'ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾಂ ವೈಶ್ವಾನರಮೃತ ಆಜಾತಮಗ್ನಿಮ್ ।
ಕವಿಂ ಸಂರಾಜಮತಿಥಿಂ ಜನಾನಾಮಾಸನ್ನಾ ಪಾತ್ರಂ ಜನಯಂತ ದೇವಾಃ ॥

ಎಂಬ ಋಗ್ವೇದವಾಕ್ಯವಾಗಿದೆ. ಭಾಷ್ಯದಲ್ಲಿ ಇತ್ಯಾದಿಶಬ್ದಃ ಎಂಬ ಪದವು ಕರ್ಮಧಾರಯಸಮಾಸಪದವಾಗಿದೆ. ತಥಾಚ – ಇತ್ಯಾದಿಶಬ್ದಃ ಎಂದರೆ ಇತ್ಯಾದಿ ರೂಪವಾದ ಶ್ರುತಿಯು ಸೂತ್ರದಲ್ಲಿರುವ ಶಬ್ದಪದದಿಂದ ಉಕ್ತವಾಗಿದೆ ಎಂದು ಅರ್ಥ. ಅಥವಾ, ಇತ್ಯಾದಿ ಅಂದರೆ ಇವೇ ಮೊದಲಾದ ವಾಕ್ಯಸಮೂಹವು, ಶಬ್ದಃ ಸೂತ್ರದ ಶಬ್ದಪದದಿಂದ ಗ್ರಹಿಸಲ್ಪಟ್ಟಿದೆ ಎಂದು ಅರ್ಥ. ಇಲ್ಲಿರುವ 'ಆದಿ'ಶಬ್ದದಿಂದ ಇದೇ ರೀತಿಯ ಬೇರೆ ಶ್ರುತಿಯಲ್ಲಿರುವ ವಾಕ್ಯವು ಗ್ರಹಿಸಲ್ಪಡುವುದು. 'ವೈಶ್ವಾನರೇ ತದುದ್ಧೃತಂ ಭವತಿ' ಎನ್ನುವುದು ಮತ್ತೊಂದು ಶ್ರುತಿವಾಕ್ಯವಾಗಿದೆ. 'ಹೃದಯಂ ಗಾರ್ಹಪತ್ಯಃ'

ಇತ್ಯಾದಿ ವಾಕ್ಯಗಳು ಛಾಂದೋಗ್ಯಶ್ರುತಿಯಾಗಿದೆ. 'ಇತ್ಯಾದ್ಯಗ್ನಿಲಿಂಗಮ್' ಅಂದರೆ 'ಇವೇ ಮೊದಲಾದ ವಾಕ್ಯಗಳಲ್ಲಿ ಹೇಳಲಾದ ಅಗ್ನಿಲಿಂಗಗಳು' ಎಂದು ಅರ್ಥ. ಇಲ್ಲಿರುವ ಆದಿಶಬ್ದದಿಂದ 'ನಾಭಿಂ ಯಜ್ಞಾನಾಂ ಸದನಂ ರಯೀಣಾಮ್' ಇತ್ಯಾದಿ ವಾಕ್ಯದಲ್ಲಿ ಹೇಳಿರುವ ಲಿಂಗಗಳು ಗ್ರಹಿಸಲ್ಪಡುತ್ತವೆ. ಭಾಷ್ಯದಲ್ಲಿ 'ಆದಿಶಬ್ದೋಕ್ತಮ್' ಅಂದರೆ ಸೂತ್ರದಲ್ಲಿರುವ ಆದಿಶಬ್ದದಿಂದ ಉಕ್ತವಾಗಿದೆ ಎಂದು ಅರ್ಥ.

(ಭಾ.ದೀ.) 'ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ' ಇತ್ಯೇತದಪಿ 'ಅಯ-ಮಗ್ನಿರ್ವೈಶ್ವಾನರೋ ಯೋಽಯಮಂತಃಪುರುಷೇ' (ಬೃ.೭.೯.೧) ಇತ್ಯತಃ ಪರಂ ಬೃಹದಾರಣ್ಯಕಶ್ರುತಮ್ । 'ತದ್ಯದ್ ಭಕ್ತಮ್' ಇತಿ ಛಾಂದೋಗ್ಯವಾಕ್ಯಮ್ । **ಇತ್ಯಾದಿನೇತಿ ॥** 'ವಾಕ್ಯೇನ' ಇತಿ ಶೇಷಃ । ಕುರುಪಾಂಡವನ್ಯಾಯೇನ 'ಸರ್ವಕರ್ಮಾ ಸರ್ವಲಿಂಗಃ' ಇತಿ ಶ್ರುತ್ಯನುಸಾರಾದಾದಿಪದೋಕ್ತಲಿಂಗಾತ್ ಪಾರ್ಥಕ್ಯೇನ ಕರ್ಮ-ಬೋಧಯಿತುಂ ಸೂತ್ರೇ 'ಅಂತಃ ಪ್ರತಿಷ್ಠಾನಾತ್' ಇತ್ಯುಕ್ತಮ್ ।

ಯದ್ವಾ – 'ಪಾಚಕತ್ವೇನಾಂತಃಪ್ರತಿಷ್ಠಾನಂ ಪ್ರಧಾನಲಿಂಗತ್ವೇನಾಭಿಮತತ್ವಾತ್ ಪೃಥಗುಕ್ತಮ್' ಇತಿ **ತತ್ತ್ವಪ್ರದೀಪೋಕ್ತೇಃ** ಪ್ರಧಾನಲಿಂಗತ್ವಾದಿದಂ ಪೃಥಗುಕ್ತಮ್ ಇತ್ಯಭಿಪ್ರೇತ್ಯ ತಲ್ಲಿಂಗಂ ತತ್ಕರ್ಮೋಕ್ತ್ಯಾ ದರ್ಶಯತಿ – **ಪಾಚಕತ್ವೇನೇತಿ ॥** ಇತ್ಥಂ-ಭೂತಲಕ್ಷಣೇ ತೃತೀಯಾ । ಅನೇನ ಸೂತ್ರೇ ಅಂತಃಪ್ರತಿಷ್ಠಾನಪದೇನ ನ ಕೇವಲಂ ತತ್ತದ್ ಹೃದಯಾಂತರಾವಸ್ಥಾನಮಾತ್ರಂ ವಿವಕ್ಷಿತಂ, ಕಿಂತು ಸವ್ಯಾಪಾರಮಿತ್ಯುಕ್ತಂ ಭವತಿ । ಅತ ಏವ 'ಯೇನೇದಮನ್ನಂ ಪಚ್ಯತೇ' 'ತದ್ ಯದ್ಭಕ್ತಮ್' ಇತ್ಯುಭಯ-ಬೋಧಕಶ್ರುತ್ಯುದಾಹರಣಮ್ । ಚಃ ಸಮುಚ್ಚಯೇ ।

'ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ' ಎಂಬ ವಾಕ್ಯವು 'ಅಯ-ಮಗ್ನಿರ್ವೈಶ್ವಾನರೋ ಯೋಽಯಮಂತಃಪುರುಷೇ' ಎಂಬ ವಾಕ್ಯದ ನಂತರ ಬೃಹ-ದಾರಣ್ಯಕೋಪನಿಷತ್ತಿನಲ್ಲಿ ಶ್ರುತವಾಗಿದೆ. 'ತದ್ಯದ್ಭಕ್ತಮ್' ಎಂಬ ವಾಕ್ಯವು ಛಾಂದೋಗ್ಯದ ವಾಕ್ಯವಾಗಿದೆ. ಭಾಷ್ಯದಲ್ಲಿ 'ಇತ್ಯಾದಿನಾ' ಎಂಬ ಪದದ ನಂತರ 'ವಾಕ್ಯೇನ' ಎಂಬ ಪದವು ಶೇಷವಾಗಿ ಸೇರುವುದು. 'ಸರ್ವಕರ್ಮಾ ಸರ್ವಲಿಂಗಃ'

ಎಂಬ ಶ್ರುತಿಯಲ್ಲಿ ಲಿಂಗಗಳಿಗಿಂತ ಪೃಥಕ್ಕಾಗಿ ಕ್ರಿಯೆಗಳನ್ನು ಹೇಳಿರುವುದನ್ನು ಅನುಸರಿಸಿ ಕುರುಪಾಂಡವನ್ಯಾಯದಿಂದ 'ಶಬ್ದಾದಿಭ್ಯಃ' ಎಂಬ ಸೂತ್ರದ ಆದಿಪದವು ಹೇಳುವ ಲಿಂಗಕ್ಕಿಂತ ಪ್ರತ್ಯೇಕವಾಗಿ ಕ್ರಿಯೆಯನ್ನು ತಿಳಿಸಲು ಸೂತ್ರದಲ್ಲಿ 'ಅಂತಃ ಪ್ರತಿಷ್ಠಾನಾತ್' ಎಂದು ಹೇಳಿದೆ.

ಅಥವಾ ''ಪಾಚಕತ್ವೇನಾಂತಃಪ್ರತಿಷ್ಠಾನಂ ಪ್ರಧಾನಲಿಂಗತ್ವೇನಾಭಿಮತತ್ವಾತ್ ಪೃಥಗುಕ್ತಮ್ – ಪಾಚಕನಾಗಿ ಶರೀರದ ಒಳಗೆ ಇರುವಿಕೆ ಎಂಬ ಲಿಂಗವು ಪ್ರಧಾನವಾದ ಲಿಂಗವೆಂದು ಅಭಿಮತವಾಗಿರುವುದರಿಂದ ಸೂತ್ರದಲ್ಲಿ ಅದನ್ನು ಪ್ರತ್ಯೇಕವಾಗಿ ಹೇಳಲಾಗಿದೆ'' ಎಂದು ತತ್ತ್ವಪ್ರದೀಪದಲ್ಲಿ ಹೇಳಿರುವುದರಿಂದ, ಈ ಲಿಂಗವು ಪ್ರಧಾನಲಿಂಗವಾದದ್ದರಿಂದ ಪ್ರತ್ಯೇಕವಾಗಿ ಹೇಳಲ್ಪಟ್ಟಿದೆ ಎಂಬ ಅಭಿಪ್ರಾಯದಿಂದ ಆ ಲಿಂಗವನ್ನು ಆ ಕ್ರಿಯೆಯನ್ನು ಹೇಳುವ ಮೂಲಕ 'ಪಾಚಕತ್ವೇನ' ಎಂಬುದಾಗಿ ಭಾಷ್ಯಕಾರರು ತೋರಿಸುತ್ತಿದ್ದಾರೆ. ಪಾಚಕತ್ವೇನ ಎಂಬಲ್ಲಿನ ತೃತೀಯಾವಿಭಕ್ತಿಯು ಇತ್ಥಂಭೂತಲಕ್ಷಣ ಎಂಬ ಅರ್ಥವನ್ನು ಹೇಳುವುದು. ಇದರಿಂದ ಸೂತ್ರದಲ್ಲಿ ಅಂತಃಪ್ರತಿಷ್ಠಾನ ಎಂಬ ಪದದಿಂದ ಕೇವಲ ಆಯಾಯಾ ಜೀವಶರೀರದ ಹೃದಯದ ಒಳಗೆ ಇರುವಿಕೆ ಮಾತ್ರ ವಿವಕ್ಷಿತವಾಗಿಲ್ಲ ಕಿಂತು ಕರ್ಮಸಹಿತವಾಗಿ ಇರುವಿಕೆಯು ವಿವಕ್ಷಿತವಾಗಿದೆ ಎಂದು ಹೇಳಿದಂತಾಗುವುದು. ಆದ್ದರಿಂದಲೇ 'ಯೇನೇದಮನ್ನಂ ಪಚ್ಯತೇ' 'ತದ್ಯದ್ ಭಕ್ತಮ್' ಎಂಬುದಾಗಿ ಹೃದಯದ ಒಳಗೆ ಇರುವಿಕೆ ಮತ್ತು ಅಲ್ಲಿ ಮಾಡುವ ಪಾಚನಕ್ರಿಯೆ ಇವೆರಡನ್ನೂ ಬೋಧಿಸುವ ಶ್ರುತಿಗಳನ್ನು ಉದಾಹರಿಸಲಾಗಿದೆ. ಭಾಷ್ಯದಲ್ಲಿ ಅಂತಃ-ಪ್ರತಿಷ್ಠಾನಂ ಚ ಎಂಬಲ್ಲಿರುವ 'ಚ'ಶಬ್ದವು ಸಮುಚ್ಚಯವನ್ನು ಹೇಳುವುದು.

(ಭಾ.ದೀ.) ತತಃ ಕಿಮ್? ಇತ್ಯತ ಆಹ – **ತಸ್ಮಾದಿತಿ** ॥ ಯಸ್ಮಾದೇವಮ್ ಅಗ್ನಿಪಕ್ಷೇಽಪಿ ಶ್ರುತಿಲಿಂಗಾದ್ಯಸ್ತಿ, ವಿಷ್ಣುಪಕ್ಷೇ ತು ತ್ವಯ್ಯೈವಾಽತ್ಮಶಬ್ದಃ ಸಮಾಖ್ಯಾನಂ ಚೋಕ್ತಮ್, ತಸ್ಮಾದುಭಯತ್ರ ಶ್ರುತ್ಯಾದಿಸಾಮ್ಯಾದ್ ವೈಶ್ವಾನರೋ ವಿಷ್ಣುರೇವ ಇತಿ ನಿಶ್ಚಯೋ ನ ಯುಜ್ಯತ ಇತ್ಯರ್ಥಃ।

ನನು 'ಯಸ್ತ್ವೇತಮ್' ಇತಿ ವಿಚಾರ್ಯವಾಕ್ಯೇ ವೈಶ್ವಾನರಶಬ್ದಸಮಾನಾಧಿಕೃತಾಗ್ನಿಶಬ್ದಾಭಾವಾತ್ ವಾಕ್ಯಾಂತರಗತಾಗ್ನಿಶಬ್ದಸ್ಯ ಕಥಂ ಶಂಕಾಹೇತುತ್ವಮ್? ಇತಿ ಚೇತ್

- ನ, ಅತ್ರ ಸರ್ವವೈಶ್ವಾನರವಿದ್ಯಾನಾಂ ವಿಚಾರ್ಯತ್ವಾತ್, ಅತ ಏವಾನೇಕವಾಕ್ಯೋದ್ಧಾರಃ । ಯದ್ವಾ ಪೂರ್ವಪಕ್ಷೇಽಪಿ ಸಿದ್ಧಾಂತ ಇವ ಸಮಾಖ್ಯಾಂ ಪ್ರದರ್ಶಯಿತುಂ ಸಮಾಖ್ಯಾರೂಪೇಣ ತತ್ತದ್ವಾಕ್ಯೋದ್ಧಾರೋ ಯುಕ್ತಃ । 'ಅಯಮ್' ಇತಿ ವಾಕ್ಯೇ 'ಅಯಮಿತ್ಯುಕ್ತಃ ಕಃ?' ಇತ್ಯತ ಆಹ – **ಯೋಽಯಮಿತಿ** ॥ ತಥಾಚ – 'ಯೋಽಯಮಂತಃ ಪುರುಷೇ' ಪುರುಷಸ್ಯ ಅಂತಃಸ್ಥಿತೋ ಭಗವಾನ್ 'ಅಯಮಗ್ನಿಃ' ಅಂಗಶಬ್ದಿತಶರೀರನೇತೃತ್ವಾತ್ ತಚ್ಛಬ್ದವಾಚ್ಯಃ । 'ವಿಶ್ವಗುಣಸಂಬಂಧೀ ನ ರೀಯತೇ ಚ' ಇತಿ ವೈಶ್ವಾನರಶ್ಚ ಇತಿ ಯೋಜನಾ । ತದ್ವ್ಯಾಪಾರಮಾಹ – **ಯೇನೇತಿ** ॥ ಇದಂ ಕಿಮ್? ಇತ್ಯತ ಆಹ – **ಯದಿದಮಿತಿ** ॥ ಅದ್ಯತೇ ಭಕ್ಷ್ಯತೇ ಪ್ರಾಣಿಭಿಃ ।

'ಮೂರ್ಧಾನಮ್' ಇತಿ ಮಂತ್ರೇ ಷಷ್ಠ್ಯರ್ಥಃ ಕಾರ್ಯಕಾರಣಭಾವಸಂಬಂಧಃ । 'ಮೂರ್ಧತ್ವಂ ವಿಷ್ಣೋರಂಗಾಂಗ್ಯಭೇದಾತ್' ಇತಿ **ತತ್ತ್ವಪ್ರದೀಪೋಕ್ತೇಃ** ಮೂರ್ಧಾನಮ್ ಅರತಿಮ್ ಇತ್ಯಭೇದೋಕ್ತಿಃ ।

'ಋತಾಯ' ಇತಿ ವೇದಾಂತರೇ ಪಾಠಾದ್ ಋಚಿ ಋತೇ ಇತಿ ಸಪ್ತಮೀ ತಾದರ್ಥ್ಯೇ । ತಥಾಚ – ದಿವಃ ಕಾರಣಭೂತಮೂರ್ಧಾನಂ ಲೋಕೇ ಗಮನೇನ ಅರತಿದರ್ಶನಾತ್ ರತಿವಿರುದ್ಧಗತಿಸಾಧನತ್ವಾದ್ ಗೌಣ್ಯಾ ವೃತ್ತ್ಯಾ 'ಅರಮ್ ಅಲಮ್ ಅತತಿ ಗಚ್ಛತಿ ಯೇನ ಪುರುಷಃ ಸೋಽರತಿಃ ಪಾದಃ' ಇತಿ **ತತ್ತ್ವಪ್ರದೀಪೋಕ್ತೇಃ** ಮುಖ್ಯಯಾ ವೃತ್ತ್ಯಾ ಅರತಿಃ - ಪಾದಃ । 'ಋ ಗತೌ' ಇತ್ಯಸ್ಮಾತ್ ಕರಣೇ ಡತಿಪ್ರತ್ಯಯೇ ನಿಷ್ಪನ್ನೋಽರತಿಶಬ್ದಃ ಪಾದೇ ಮುಖ್ಯ ಏವ ಇತ್ಯಪಿ ಕೇಚಿತ್ । ತತ್ತು ತತ್ತ್ವಪ್ರದೀಪಚಂದ್ರಿಕಾನುಕ್ತಮ್ । **ತತ್ತ್ವಪ್ರದೀಪೇ** ಅರಶಬ್ದೋಪಪದಾತ್ ಅತತೇಃ, **ಚಂದ್ರಿಕಾಯಾಂ** ನಞುಪಪದಾತ್ ರಮೇರಸ್ಯ ನಿಷ್ಪತ್ತೇರುಕ್ತತ್ವಾತ್ । ತಥಾಚ – ಪೃಥಿವ್ಯಾಃ ಅರತಿಂ ಕಾರಣೀಭೂತಪಾದಂ ಜನಾನಾಮ್ ಆ ಋತೇ ಸಮ್ಯಗ್ ಜ್ಞಾನಾಯ 'ಜಾತಮ್' ಅಭಿವ್ಯಕ್ತಂ 'ಕವಿಂ' ಸರ್ವಜ್ಞಂ 'ಸಮ್ರಾಜಮ್' ಅಖಂಡೇಶಮ್ 'ಅನ್ನಂ ಥಮ್' ಇತಿ ಶ್ರುತೇಃ 'ಥ'ಶಬ್ದೋಽನ್ನವಾಚೀ । ತೃತೀಯೋಽತಿಶಯೇ । ತಥಾಚ

'ಅತಿಥಿಮ್' ಅತ್ಯನ್ನಮ್ । 'ಪಾತ್ರಮ್' ಇತ್ಯನೇನಾಪಿ 'ಜನಾನಾಮ್' ಇತ್ಯೇತತ್ ಸಂಬಧ್ಯತೇ । ತಥಾ ಚ ಜನಾನಾಂ 'ಪಾತಾರಂ' ರಕ್ಷಕಂ 'ವೈಶ್ವಾನರಂ' ವಿಶ್ವಜೀವಾಂತ-ರತ್ವಯೋಗೇನ ತಚ್ಛಬ್ದವಾಚ್ಯಮ್ 'ಅಗ್ನಿಮ್' ಅಂಗನೇತಾರಂ ವಿಷ್ಣುಂ ಪ್ರಸಿದ್ಧಂ ಚ ದೇವಾ ಆಸನ್ । ಅವಿಭಕ್ತಿಕೋऽಯಂ ನಿರ್ದೇಶಃ । ಆಸ್ಯಶಬ್ದಸ್ಯಾಸನ್ನಾದೇಶಃ । ತಥಾಚ – ಆಸನ್ ಸ್ವಾಸ್ಯತಯಾ ಆಜನಯಂತ । ಅಡಭಾವಶ್ಛಾಂದಸಃ । ಆಸಮಂತಾತ್ ಸರ್ವಕರ್ಮ ಸ್ವಕುರ್ವನ್ – ಇತಿ ಸಿದ್ಧಾಂತರೀತ್ಯಾ ಶ್ರುತ್ಯರ್ಥಃ ।

**ತತ್ತ್ವಪ್ರದೀಪೇ** ತು – ವಿಶ್ವನರಸ್ಥಮ್ ಋತೇ ವೇದೇ 'ಆ ಸಮಂತಾಜ್ಜಾತಂ' ವ್ಯಕ್ತಮ್ 'ಅಗ್ನಿಮ್' ಅಂಗನೇತಾರಂ 'ಸಮ್ರಾಜಂ' ಸಮ್ಯಗ್ ರಾಜಂತಮ್ 'ಅತಿಥಿಂ' ಸರ್ವಾನ್ ಅತಿಶಯ್ಯ ಸ್ಥಿತಂ ಪಾತಾರಮ್ ಅಗ್ನಿಂ ಜನಾನಾಮ್ 'ಆಸನ್' ಆಶ್ರಯಮ್ ಆ ಜನಯಂತ ಆ ಸಮಂತಾತ್ ಜನಯಾಂಚಕ್ರುಃ । ಅಗ್ನ್ಯಾದಿದೇವಾಃ - ಇತಿ ವಿಶೇಷಾರ್ಥ ಉಕ್ತಃ ।

ಕೇಚಿತ್ತು – ಜನಿಬಾಧಕಾಜ್‌ಯೋಗಾದಜನಯಂತ ಅಕುರ್ವನ್ನಿತ್ಯುಕ್ತಮ್ ಇತ್ಯಾಹುಃ । ತತ್ತು ಉದಾಹೃತತತ್ತ್ವಪ್ರದೀಪವಿರುದ್ಧಮ್ । ಅತೋऽನೇಕಾರ್ಥತ್ವಾದ್ ಧಾತೂನಾಂ ವಿಷ್ಣುಜನ್ಯೇऽಗ್ನೌ ದೇವಜನ್ಯತ್ವಾಯೋಗಾತ್ ಜನೇರುತ್ಪತ್ತ್ಯರ್ಥಾ-ಯೋಗಾಚ್ಚ ಅಕುರ್ವನ್ ಇತ್ಯುಕ್ತಮಿತಿ ಆಜ್ ವಿಶ್ಲೇಷೇಣೈವ ಟೀಕಾ ವ್ಯಾಖ್ಯೇಯಾ । ಪೂರ್ವಪಕ್ಷೀ ತು ಶ್ರುತಿಗತಾಗ್ನ್ಯಾದಿಶಬ್ದಾನ್ ಪ್ರಸಿದ್ಧಾಗ್ನಿಪರಾನೈವ ಮನ್ಯತೇ ।

ಮುಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ತಸ್ಮಾತ್' ಎಂದು ಹೇಳಲಾಗಿದೆ. ಯಾವ ಕಾರಣದಿಂದಾಗಿ ಈಗ ಹೇಳಿದಂತೆ ವೈಶ್ವಾನರನು ಅಗ್ನಿಯೇ ಎಂಬ ಪಕ್ಷದಲ್ಲೂ ಶ್ರುತಿಲಿಂಗಾದಿಗಳು ಇವೆಯೋ ವಿಷ್ಣುಪಕ್ಷದಲ್ಲಾದರೋ ನಿಮ್ಮಿಂದಲೇ (ಸಿದ್ಧಾಂತಿ-ಗಳಿಂದಲೇ) ವೈಶ್ವಾನರನು ವಿಷ್ಣುವೆನ್ನಲು ಆತ್ಮಶಬ್ದ ಮತ್ತು ಸಮಾಖ್ಯೆ ಎಂಬ ಪ್ರಮಾಣ-ಗಳು ಹೇಳಲ್ಪಟ್ಟಿವೆಯೋ ಆದ್ದರಿಂದ, ಎರಡೂ ಪಕ್ಷಗಳಲ್ಲೂ ಶ್ರುತಿ ಮೊದಲಾದ ಪ್ರಮಾಣಗಳು ಸಮಾನವಾಗಿರುವುದರಿಂದ ವೈಶ್ವಾನರನು ವಿಷ್ಣುವೇ ಎಂಬ ನಿಶ್ಚಯವು ಯುಕ್ತವಲ್ಲ ಎಂದು ಅರ್ಥ.

**ಶಂಕೆ** – **'ಯಸ್ತ್ವೇತಮ್'** ಎಂಬ, ಈ ಅಧಿಕರಣದಲ್ಲಿ ವಿಚಾರಮಾಡುವ ವಾಕ್ಯದಲ್ಲಿ ವೈಶ್ವಾನರಶಬ್ದದ ಜೊತೆಗೆ ಅಗ್ನಿಶಬ್ದವಿಲ್ಲದಿರುವುದರಿಂದ ವಾಕ್ಯಾಂತರದಲ್ಲಿರುವ ಅಗ್ನಿಶಬ್ದವು ಪೂರ್ವಪಕ್ಷಿ ಮಾಡುವ ಶಂಕೆಗೆ ಕಾರಣವಾಗುವುದು ಹೇಗೆ?

**ಸಮಾಧಾನ** – ಈ ಶಂಕೆಯು ಸರಿಯಲ್ಲ. ಏಕೆಂದರೆ ಈ ಅಧಿಕರಣದಲ್ಲಿ ಎಲ್ಲ ವೈಶ್ವಾನರವಿದ್ಯೆಗಳು ವಿಚಾರಣೀಯವಾಗಿವೆ. ಆದ್ದರಿಂದಲೇ ಭಾಷ್ಯದಲ್ಲಿ ಅನೇಕ ವಾಕ್ಯಗಳನ್ನು ಉದಾಹರಿಸಿದ್ದಾರೆ. ಅಥವಾ ಸಿದ್ಧಾಂತದಲ್ಲಿ ಇರುವಂತೆ ಪೂರ್ವಪಕ್ಷದಲ್ಲೂ ಸಮಾಖ್ಯಾವಾಕ್ಯಗಳಿವೆ ಎಂದು ತೋರಿಸಲು ಸಮಾಖ್ಯಾರೂಪವಾಗಿ ಆಯಾಯಾ ವಾಕ್ಯಗಳನ್ನು ಉದಾಹರಿಸಿರುವುದು ಯುಕ್ತವಾಗಿದೆ.

**'ಅಯಮಗ್ನಿಃ'** ಎಂಬ ವಾಕ್ಯದಲ್ಲಿ **ಅಯಮ್** ಇವನು ಎಂದು ಯಾರನ್ನು ಕುರಿತು ಹೇಳಲಾಗಿದೆ? ಎಂಬ ಪ್ರಶ್ನೆಗೆ ಉತ್ತರವಾಗಿ **'ಯೋಽಯಂ'** ಎಂದು ಶ್ರುತಿಯಲ್ಲಿ ಹೇಳಲಾಗಿದೆ. ತಥಾಚ **'ಯೋಽಯಮಂತಃಪುರುಷೇ'** ಪುರುಷನ ಒಳಗೆ ಯಾವ ಭಗವಂತನು ಇರುವನೋ, **'ಅಯಮಗ್ನಿಃ'** – ಆ ಭಗವಂತನೇ ಅಂಗಶಬ್ದದ ಅರ್ಥವಾದ ಶರೀರದ ನೇತಾರನಾಗಿರುವುದರಿಂದ ಅಗ್ನಿಶಬ್ದವಾಚ್ಯನಾಗಿದ್ದಾನೆ. ಅವನು ವೈಶ್ವಾನರನು ಎಂದರೆ ವಿಶ್ವ(ಸಮಸ್ತ)ಗುಣಗಳ ಸಂಬಂಧವುಳ್ಳವನು, ನ ರೀಯತೇ ಅಂದರೆ ನಾಶವಿಲ್ಲದವನು ಆದ ಕಾರಣ ವೈಶ್ವಾನರನೂ ಆಗಿದ್ದಾನೆ ಎಂದು ಯೋಜನೆ. ಅವನ ವ್ಯಾಪಾರವನ್ನು **'ಯೇನೇದಮ್ ಅನ್ನಂ ಪಚ್ಯತೇ'** ಎಂದು ಹೇಳಲಾಗಿದೆ. ಆ ವ್ಯಾಪಾರವೇನು? **ಯೇನೇದಂ** ಎಂಬಲ್ಲಿ ಇದಂ ಎಂದರೆ ಏನು? ಎಂಬ ಪ್ರಶ್ನೆಗೆ ಉತ್ತರವಾಗಿ **'ಯದಿದಮ್ ಅದ್ಯತೇ'** ಎಂದು ಹೇಳಿದೆ. **ಅದ್ಯತೇ** - ಅಂದರೆ ಪ್ರಾಣಗಳಿಂದ ಭಕ್ಷಿಸಲ್ಪಡುವುದು ಎಂದು ಅರ್ಥ.

**'ಮೂರ್ಧಾನಮ್'** ಎಂಬ ಮಂತ್ರದಲ್ಲಿ 'ದಿವಃ' ಎಂಬಲ್ಲಿರುವ ಷಷ್ಠೀವಿಭಕ್ತಿಗೆ ಕಾರ್ಯಕಾರಣಭಾವಸಂಬಂಧವು ಅರ್ಥವಾಗಿದೆ. **'ಮೂರ್ಧತ್ವಂ ವಿಷ್ಣೋಃ ಅಂಗಾಂಗ್ಯಭೇದಾತ್'** 'ವೈಶ್ವಾನರನಾಮಕನಾದ ವಿಷ್ಣುವನ್ನೇ ಮೂರ್ಧಾ ಎಂದು ಹೇಳಿರುವುದು ವಿಷ್ಣುವಿನ ಅಂಗಗಳಿಗೂ ಅವನಿಗೂ ಅಭೇದವಿದ್ದುದರಿಂದ' ಎಂದು ತತ್ವಪ್ರದೀಪದಲ್ಲಿ ಹೇಳಿರುವುದರಿಂದ **ಮೂರ್ಧಾನಮ್ ಅರತಿ** ಎಂಬುದಾಗಿ

ವಿಷ್ಣುವಿಗೂ ಅವನ ಶಿರಸ್ಸು ಮೊದಲಾದ ಅಂಗಗಳಿಗೂ ಅಭೇದವನ್ನು ಶ್ರುತಿಯಲ್ಲಿ ಹೇಳಿದೆ.

ಬೇರೆ ವೇದಶಾಖೆಗೆ ಸಂಬಂಧಪಟ್ಟ ಋಕ್ಕಲ್ಲಿ ಋತಾಯ ಎಂಬ ಪದಪಾಠ-ವಿರುವುದರಿಂದ **ಮೂರ್ಧಾನಂ** ಎಂಬ ಋಕ್ಕಲ್ಲಿ ಋತೇ ಎಂಬಲ್ಲಿರುವ ಸಪ್ತಮೀ ವಿಭಕ್ತಿಯು ಚತುರ್ಥೀವಿಭಕ್ತಿಯ ಅರ್ಥವಾದ ತಾದರ್ಥ್ಯವನ್ನು ಹೇಳುವುದು. ತಥಾಚ – **ದಿವಃ ಮೂರ್ಧಾನಮ್** - ಅಂದರೆ ದ್ಯುಲೋಕಕ್ಕೆ ಕಾರಣವಾದ ಶಿರಸ್ಸಾಗಿರುವ ಎಂದು ಅರ್ಥ. ಲೋಕದಲ್ಲಿ ಗಮನಕ್ರಿಯೆಯಿಂದ ಅರತಿ ಅಂದರೆ ದುಃಖವು ಕಂಡಿರುವುದರಿಂದ ರತಿ ಅಂದರೆ ಸುಖಕ್ಕೆ ವಿರುದ್ಧವಾದ ಗಮನಕ್ರಿಯೆಗೆ ಸಾಧನವಾದ ಕಾರಣ ಗೌಣೀವೃತ್ತಿಯಿಂದ, ಅಥವಾ 'ಅರಮ್ ಅಲಮ್ ಅತತಿ ಗಚ್ಛತಿ ಯೇನ ಪುರುಷಃ ಸಃ ಅರತಿಃ ಪಾದಃ'– ಅರಮ್ ಅಂದರೆ ಚೆನ್ನಾಗಿ ಅತತಿ ಅಂದರೆ ಯಾವುದ-ರಿಂದ ಪುರುಷನು ನಡೆಯುವನೋ ಆ ಪಾದವು ಅರತಿ ಎಂದೆನಿಸುವುದು - ಎಂದು ತತ್ತ್ವಪ್ರದೀಪದಲ್ಲಿ ಹೇಳಿರುವುದರಿಂದ ಮುಖ್ಯವೃತ್ತಿಯಿಂದಲೇ ಅರತಿಶಬ್ದವು ಪಾದ-ವನ್ನು ಹೇಳುವುದು.

ಕೆಲವರು 'ಋ ಗತೌ' ಎಂಬ ಧಾತುವಿನ ಮುಂದೆ ಕರಣ ಎಂಬ ಅರ್ಥದಲ್ಲಿ ಡತಿ-ಪ್ರತ್ಯಯವನ್ನು ಸೇರಿಸಿದಾಗ ಉಂಟಾಗುವ ಅರತಿಶಬ್ದಕ್ಕೆ ಪಾದವು ಮುಖ್ಯಾರ್ಥವೇ ಆಗಿದೆ ಎಂದು ಹೇಳುವರು. ಆದರೆ ಅದನ್ನು ತತ್ತ್ವಪ್ರದೀಪದಲ್ಲಾಗಲೀ ಚಂದ್ರಿಕಾದಲ್ಲಾ-ಗಲೀ ಹೇಳಿಲ್ಲ. ಏಕೆಂದರೆ ತತ್ತ್ವಪ್ರದೀಪದಲ್ಲಿ ಅರ ಎಂಬ ಶಬ್ದವು ಉಪಪದವಾಗಿರುವ ಅತಿ ಧಾತುವಿನಿಂದ, ಚಂದ್ರಿಕೆಯಲ್ಲಿ ನಞ್ ಉಪಪದವಾಗಿರುವ ರಮ್ ಧಾತುವಿನಿಂದ ಈ ಅರತಿಶಬ್ದದ ನಿಷ್ಪತ್ತಿಯನ್ನು ಹೇಳಲಾಗಿದೆ. ತಥಾಚ – **ಪೃಥಿವ್ಯಾಃ ಅರತಿಮ್** - ಪೃಥಿವಿಗೆ ಕಾರಣವಾದ ಪಾದವಾಗಿರುವ, **'ಋತೇ ಜನಾನಾಮ್ ಆ ಜಾತಮ್'** ಜನಾನಾಂ- ಜನಗಳಿಗೆ ಆ - ಸಮೀಚೀನವಾದ, ಋತೇ - ಜ್ಞಾನಕ್ಕೋಸ್ಕರವಾಗಿ ಜಾತಮ್- ಅಭಿವ್ಯಕ್ತನಾಗುವ, **ಕವಿಮ್**- ಸರ್ವಜ್ಞನಾದ, **ಸಮ್ರಾಜಂ**- ಅಖಂಡೇ-ಶ್ವರನಾದ, **ಅತಿಥಿಮ್** - 'ಅನ್ನಂ ಥಮ್' ಎಂದು ಶ್ರುತಿ ಇರುವುದರಿಂದ ಥಶಬ್ದವು ಅನ್ನವಾಚಕವಾಗಿದೆ. 'ತೃತೀಯಃ ಅತಿಶಯೇ' 'ಮೂರನೆಯ ವರ್ಣವು ಅತಿಶಯವನ್ನು

ಹೇಳುವುದು'ಎಂಬ ವಚನದ ಪ್ರಕಾರ ಥಿ ಎಂಬಲ್ಲಿರುವ ಇಕಾರವು ವರ್ಣಮಾಲೆಯಲ್ಲಿ ಮೂರನೆಯ ಅಕ್ಷರವಾಗಿದ್ದು ಅತಿಶಯರೂಪವಾದ ಅರ್ಥವನ್ನು ಸೂಚಿಸುವುದು. ತಥಾಚ – **ಅತಿಥಿಮ್** ಎಂದರೆ ಅತ್ಯನ್ನ ಸ್ವರೂಪನಾದ ಎಂದು ಅರ್ಥ. **ಜನಾನಾಮ್** ಎಂಬ ಪದವು ಪಾತ್ರಮ್ ಎಂಬ ಪದದೊಂದಿಗೂ ಸಂಬಂಧವನ್ನು ಹೊಂದುವುದು. ತಥಾಚ – ಜನಾನಾಂ - ಜನಗಳ, ಪಾತ್ರ ಎಂದರೆ ಪಾತಾರ - ರಕ್ಷಕನಾಗಿರುವ, **ವೈಶ್ವಾನರಂ** - ವಿಶ್ವ ಅಂದರೆ ಸಮಸ್ತ, ನರರ - ಜೀವರ ಅಂತಃಸ್ಥನಾಗಿರುವುದರಿಂದ ವೈಶ್ವಾನರಶಬ್ದವಾಚ್ಯನಾದ, **ಅಗ್ನಿಮ್** - ಅಂಗ ಅಂದರೆ ಎಲ್ಲ ಶರೀರಗಳ ನೇತಾರನಾದ ವಿಷ್ಣುವನ್ನು ಮತ್ತು ಪ್ರಸಿದ್ಧನಾದ ಅಗ್ನಿಯನ್ನು, **ದೇವಾಃ ಆಸನ್** - 'ಆಸನ್' ಎಂಬ ಪದವು ವಿಭಕ್ತಿರಹಿತವಾಗಿ ನಿರ್ದೇಶಿಸಲಾದ ಪದವಾಗಿದೆ. ಇಲ್ಲಿ ಆಸ್ಯಶಬ್ದಕ್ಕೆ ಆಸನ್ ಎಂಬ ಶಬ್ದವು ಆದೇಶವಾಗಿ ಬಂದಿದೆ. ತಥಾಚ– ಸ್ವಾಸ್ಯತಯಾ **ಆಸನ್ ಆ ಜನ-ಯಂತ**. ಇಲ್ಲಿ ಕ್ರಿಯಾಪದದ ಆದಿಯಲ್ಲಿ ಅಡಾಗಮವಿಲ್ಲದಿರುವುದು ಛಾಂದಸ-ಪ್ರಯೋಗವಾಗಿದೆ. ಒಟ್ಟಿನಲ್ಲಿ, ಆ ವಿಷ್ಣುವನ್ನು ಮತ್ತು ಪ್ರಸಿದ್ಧನಾದ ಅಗ್ನಿಯನ್ನು ದೇವತೆಗಳು ತಮ್ಮ ಎಲ್ಲಾ ಕರ್ಮಗಳಲ್ಲೂ ಆಸ್ಯ ಅಂದರೆ ತಮ್ಮ ಮುಖವನ್ನಾಗಿ ಚೆನ್ನಾಗಿ ಮಾಡಿಕೊಂಡರು ಎಂದು ಸಿದ್ಧಾಂತರೀತ್ಯಾ ಶ್ರುತಿಯ ಅರ್ಥವಾಗಿದೆ.

ತತ್ತ್ವಪ್ರದೀಪದಲ್ಲಾದರೋ **ವೈಶ್ವಾನರಮ್** ಅಂದರೆ ಸಮಸ್ತ ಜೀವರಲ್ಲಿರುವ, **ಋತೇ**- ವೇದದಲ್ಲಿ, **ಆ ಜಾತಮ್** - ಚೆನ್ನಾಗಿ ವ್ಯಕ್ತನಾಗಿರುವ, **ಅಗ್ನಿಮ್** - ಶರೀರ -ಗಳ ನೇತಾರನಾದ, **ಸಮ್ರಾಜಮ್** - ಚೆನ್ನಾಗಿ ಪ್ರಕಾಶಿಸುವ, **ಅತಿಥಿಂ** - ಎಲ್ಲರನ್ನೂ ಮೀರಿ ಇರುವ, **ಪಾತ್ರಂ** - ಪಾತಾರಂ- ರಕ್ಷಕನಾದ, **ಜನಾನಾಮ್ ಆಸನ್** - ಜನಗಳಿಗೆ ಆಶ್ರಯನಾದ ಭಗವಂತನನ್ನು, **ಆ ಜನಯಂತ** - ಅಗ್ನ್ಯಾದಿದೇವತೆಗಳು ಚೆನ್ನಾಗಿ ಅಭಿವ್ಯಕ್ತಿಗೊಳಿಸಿದರು ಎಂಬ ವಿಶೇಷಾರ್ಥವನ್ನು ಹೇಳಲಾಗಿದೆ.

ಕೆಲವರಾದರೋ ಉತ್ಪತ್ತಿಗೆ ಬಾಧಕವಾಗುವ ಅರ್ಥವನ್ನು ಹೇಳುವ ಆಙ್ ಉಪ-ಸರ್ಗದ ಸಂಬಂಧವಿರುವುದರಿಂದ ಆಜನಯಂತ ಅಂದರೆ ಅಕುರ್ವನ್ - ಮಾಡಿದರು ಎಂದು ಅರ್ಥವನ್ನು ಹೇಳುವರು. ಆದರೆ ಈ ವ್ಯಾಖ್ಯಾನವು ಉದಾಹರಿಸಲಾದ ತತ್ತ್ವ-ಪ್ರದೀಪಕ್ಕೆ ವಿರುದ್ಧವಾಗಿದೆ. ಆದ್ದರಿಂದ ಧಾತುಗಳು ಅನೇಕಾರ್ಥಗಳನ್ನು ಹೊಂದಿರು-

ವುದರಿಂದ ವಿಷ್ಣುವಿನಿಂದ ಜನ್ಯವಾದ ಅಗ್ನಿಯು ದೇವತೆಗಳಿಂದ ಜನ್ಯನೆಂದು ಹೇಳಲು ಸಾಧ್ಯವಿಲ್ಲದಿರುವುದರಿಂದ ಇಲ್ಲಿರುವ ಜನಿಧಾತುವಿಗೆ ಉತ್ಪತ್ತಿ ಎಂಬ ಅರ್ಥವನ್ನು ಹೇಳಲು ಸಾಧ್ಯವಿಲ್ಲದ ಕಾರಣ ಅಕುರ್ವನ್ - ಎಂಬ ಅರ್ಥವನ್ನು ಹೇಳಲಾಗಿದೆ ಎಂದು ಭಾವಿಸಿ, ಆಙ್ ಉಪಸರ್ಗವನ್ನು ಕ್ರಿಯಾಪದದಿಂದ ಪ್ರತ್ಯೇಕಗೊಳಿಸಿ, ಟೀಕೆಯ ವ್ಯಾಖ್ಯಾನವನ್ನು ಮಾಡತಕ್ಕದ್ದು. ಪೂರ್ವಪಕ್ಷಿಯಾದರೋ ಶ್ರುತಿಯಲ್ಲಿರುವ ಅಗ್ನಿ ಮೊದಲಾದ ಶಬ್ದಗಳನ್ನು ಪ್ರಸಿದ್ಧಅಗ್ನಿಪರಗಳೆಂದೇ ತಿಳಿಯುತ್ತಾನೆ.

(ಭಾ.ದೀ.) 'ವೈಶ್ವಾನರೇ ಯದ್ಧುತಮ್' ಇತಿ ವಾಕ್ಯಾರ್ಥಸ್ತು 'ತಸ್ಮಾದು ಹೈವಂವಿದ್ಯದ್ಯಪಿ ಚಂಡಾಲಾಯೋಚ್ಛಿಷ್ಟಂ ಪ್ರಯಚ್ಛೇದಾತ್ಮನಿ ಹೈವಾಸ್ಯ ವೈಶ್ವಾನರೇ ಹುತಂ ಸ್ಯಾತ್'(ಛಾಂ.೫-೨೪-೪) ಇತಿ ಛಂದೋಗಸಮಾಖ್ಯಾವಾಕ್ಯಾದವ-ಗಂತವ್ಯಃ । ತದರ್ಥಸ್ತು – ಯದಿ 'ಏವಂವಿತ್' ಉಕ್ತರೀತ್ಯಾ ವೈಶ್ವಾನರಜ್ಞಾನೀ ಉಚ್ಛಿಷ್ಟಾದ್ಯನರ್ಹಾಯಾಪಿ ಚಂಡಾಲಾಯೋಚ್ಛಿಷ್ಟಂ 'ಪ್ರಯಚ್ಛೇತ್' ದದ್ಯಾತ್ । ತದಾ ತದ್ದತ್ತಮುಚ್ಛಿಷ್ಟಂ ಚಂಡಾಲಾಂತರ್ಯಾಮಿಣಿ ವೈಶ್ವಾನರೇ ಹುತಂ ಸ್ಯಾನ್ನ ಪಾಪಕರಂ ಭವತಿ। ಪ್ರತ್ಯುತ ಮಹಾಫಲಮೇವೇತಿ। ಅನೇನ ಆಹುತಿಸ್ಥಾನತ್ವಲಿಂಗಮುಚ್ಯತೇ।

'ಹೃದಯಂ' ಹೃದಯಸ್ಥೋ ವಿಷ್ಣುರ್ಗಾರ್ಹಪತ್ಯಪದವಾಚ್ಯ ಇತ್ಯರ್ಥಃ । ಏವಮುತ್ತರತ್ರಾಪಿ। 'ಅನ್ವಾಹಾರ್ಯಪಚನಃ' ದಕ್ಷಿಣಾಗ್ನಿರನ್ವಾಹಾರ್ಯ ಓದನೋಽತ್ರ ಪಚ್ಯತ ಇತಿ ವ್ಯುತ್ಪತ್ತಿಸಂಭವಾತ್ । ಪೂರ್ವಪಕ್ಷೇ ತು ಗಾರ್ಹಪತ್ಯಂ ವೈಶ್ವಾನರಸ್ಯ ಪ್ರಸಿದ್ಧಾಗ್ನೇರ್ಹೃದಯಸ್ಥಾನೀಯಮಿತ್ಯಾದಿರರ್ಥಃ।

'ತದ್ ಯದ್ಭಕ್ತಮ್' ಇತಿ ವಾಕ್ಯಾರ್ಥಸ್ತು– 'ತತ್' ತದಾ ಭೋಜನವೇಲಾಯಾಂ 'ಯದ್ಯದ್ಭಕ್ತಮ್' ಅನ್ನಂ 'ಪ್ರಥಮಮಾಗಚ್ಛೇತ್' ಆಸ್ಯಂ ಪ್ರತಿ ಪ್ರಾಣಾಹುತಿರೂಪೇಣ 'ತದ್ಧೋಮೀಯಂ' ಪಾಚಕತ್ವೇನಾಂತಃಸ್ಥಿತಸ್ಯ ಅಗ್ನೇಃ ಹೋಮದ್ರವ್ಯಮಿತಿ । ಅನೇನಾ-ಗ್ನೌ ಹೂಯಮಾನದ್ರವ್ಯಸ್ಯಾಗ್ನಿಃ ಪಾಚಕ ಇತಿ ಸಿದ್ಧಮಿತಿ ಪಾಚಕತ್ವಾಖ್ಯಲಿಂಗಮುಕ್ತಂ ಭವತಿ।

**ಯದ್ಯಪಿ 'ಯೇನೇದಮ್' ಇತಿ ಪೂರ್ವವಾಕ್ಯೇ 'ಅಯಮಗ್ನಿಃ' ಇತಿ ತತ್ಪೂರ್ವ-ವಾಕ್ಯಸಾಹಿತ್ಯಾತ್ ಪಾಚಕತ್ವೇನ ಅಂತಃಪ್ರತಿಷ್ಠಾನೋಕ್ತಾವಪಿ ನ 'ತದ್ಯದ್ಭಕ್ತಮ್' ಇತಿ ವಾಕ್ಯೇ ತತ್ಪ್ರತೀಯತೇ । ತಥಾಽಪಿ 'ತದ್ಹೋಮೀಯಮ್' ಇತ್ಯನೇನ ಅಂತಃಸ್ಥಿತಸ್ಯ ಹೋಮ್ಯಮಿತ್ಯುಕ್ತತ್ವಾತ್ ತತ್ಪ್ರತ್ಯಾಯಕತ್ವೋಪಪತ್ತಿಃ।**

ವೈಶ್ವಾನರೇ ತದ್ಧುತಮ್ ಎಂಬ ವಾಕ್ಯದ ಅರ್ಥವಾದರೋ 'ತಸ್ಮಾದು ಹೈವಂವಿದ್ಯದ್ಯಪಿ ಚಂಡಾಲಾಯೋಚ್ಛಿಷ್ಟಂ ಪ್ರಯಚ್ಛೇದಾತ್ಮನಿ ಹೈವಾಸ್ಯ ವೈಶ್ವಾನರೇ ಹುತಂ ಸ್ಯಾತ್' ಎಂಬ ಛಾಂದೋಗ್ಯದ ಸಮಾನಾರ್ಥಕವಾದ ವಾಕ್ಯದಿಂದ ತಿಳಿಯಬೇಕು. ಆ ವಾಕ್ಯದ ಅರ್ಥವಾದರೋ ಹೀಗಿದೆ – ಯದಿ - ಒಂದು ಪಕ್ಷದಲ್ಲಿ ಏವಂವಿತ್ - ಉಪನಿಷತ್ತಿನಲ್ಲಿ ಹಿಂದೆ ಹೇಳಿರುವಂತೆ ವೈಶ್ವಾನರನನ್ನು ತಿಳಿದವನು ಉಚ್ಛಿಷ್ಟ ಮೊದಲಾದವುಗಳಿಗೆ ಅನರ್ಹನಾಗಿದ್ದರೂ ಚಂಡಾಲನಿಗೆ ಉಚ್ಛಿಷ್ಟವನ್ನು, ಪ್ರಯಚ್ಛೇತ್ - ಕೊಟ್ಟಿದ್ದೇ ಆದರೆ, ಆಗ ಹಾಗೆ ಕೊಡಲ್ಪಟ್ಟ ಉಚ್ಛಿಷ್ಟವು, ಆತ್ಮನಿ - ಚಂಡಾಲನ ಅಂತರ್ಯಾಮಿಯಾದ ವೈಶ್ವಾನರನಲ್ಲಿ, ಹುತಂ ಸ್ಯಾತ್- ಹುತವಾಗುವುದು ಹೊರತು ಪಾಪಕಾರಣವಾಗುವುದಿಲ್ಲ. ಅದರ ಬದಲು ಮಹಾಫಲವನ್ನು ಕೊಡ-ತಕ್ಕದ್ದೇ ಆಗುವುದು– ಎಂದು. ಈ ವಾಕ್ಯದಿಂದ ಆಹುತಿಸ್ಥಾನತ್ವವೆಂಬ ಲಿಂಗವು ಉಕ್ತವಾಗುವುದು.

ಹೃದಯಂ ಗಾರ್ಹಪತ್ಯಃ ಎಂಬ ಶ್ರುತಿಯಲ್ಲಿ ಹೃದಯಂ ಎಂದರೆ ಹೃದಯಸ್ಥನಾದ ವಿಷ್ಣುವು, ಗಾರ್ಹಪತ್ಯಃ - ಗಾರ್ಹಪತ್ಯಪದವಾಚ್ಯನಾಗಿದ್ದಾನೆ ಎಂದು ಅರ್ಥ. ಮನಃ ಅನ್ವಾಹಾರ್ಯಪಚನಃ ಎಂಬ ಮುಂದಿನ ವಾಕ್ಯಗಳನ್ನೂ ಹೀಗೆಯೇ ವ್ಯಾಖ್ಯಾನ ಮಾಡಬೇಕು. 'ಅನ್ವಾಹಾರ್ಯಪಚನಃ' ಅಂದರೆ ದಕ್ಷಿಣಾಗ್ನಿ. 'ಅನ್ವಾಹಾರ್ಯಃ ಓದನಃ ಅತ್ರ ಪಚ್ಯತೇ' 'ಅನ್ವಾಹಾರ್ಯವೆಂದರೆ ಓದನವು. ದಕ್ಷಿಣಾಗ್ನಿಯಲ್ಲಿ ಆಹುತಿಯನ್ನಾಗಿ ನೀಡಲು ಸಿದ್ಧಪಡಿಸಿದ ಅನ್ನರೂಪ ಹವಿಸ್ಸು. ಅದು ಇಲ್ಲಿ ಪಕ್ವವಾಗುವುದು' ಎಂಬ ವ್ಯುತ್ಪತ್ತಿಯನ್ನು ಅನುಸರಿಸಿ ಅನ್ವಾಹಾರ್ಯಪಚನವೆಂದರೆ ದಕ್ಷಿಣಾಗ್ನಿ. ಪೂರ್ವಪಕ್ಷದಲ್ಲಾದರೋ 'ಹೃದಯಂ ಗಾರ್ಹಪತ್ಯಃ' ಎಂದರೆ ಗಾರ್ಹಪತ್ಯಾಗ್ನಿಯು ವೈಶ್ವಾನರನ ಅಂದರೆ ಪ್ರಸಿದ್ಧನಾದ ಅಗ್ನಿಯ ಹೃದಯಸ್ಥಾನದಲ್ಲಿರುವುದು ಎಂದರ್ಥ.

'ತದ್ ಯದ್ಭಕ್ತಮ್' ಎಂಬ ವಾಕ್ಯದ ಅರ್ಥವಾದರೋ – ತತ್ - ಅಂದರೆ ಭೋಜನ ಸಮಯದಲ್ಲಿ, ಯದ್ಯದ್ ಭಕ್ತಮ್ ಅನ್ನಮ್ - ಭುಜಿಸಿದ ಯಾವ ಯಾವ ಅನ್ನವು, ಪ್ರಥಮಂ ಆಗಚ್ಛೇತ್- ಪ್ರಾಣಾಹುತಿರೂಪದಿಂದ ಮುಖವನ್ನು ಕುರಿತು ಮೊದಲು ಯಾವುದು ಬರುವುದೋ, ತತ್- ಅದು, ಹೋಮೀಯಂ - ಪಾಚಕನಾಗಿ ಒಳಗಿರುವ ಅಗ್ನಿಗೆ ಹೋಮದ್ರವ್ಯವಾಗಿರುವುದು – ಎಂದು. ಇದರಿಂದ ಅಗ್ನಿಯಲ್ಲಿ ಹೋಮ ಮಾಡಿದ ದ್ರವ್ಯಕ್ಕೆ ಅಗ್ನಿಯು ಪಾಚಕನೆಂದು ಸಿದ್ಧನಾಗುವ ಕಾರಣ ಪಾಚಕತ್ವವೆಂಬ ಅಗ್ನಿಯ ಲಿಂಗವು ಇಲ್ಲಿ ಉಕ್ತವಾಗಿದೆ.

ಯದ್ಯಪಿ 'ಯೇನೇದಮ್ ಅನ್ನಂ ಪಚ್ಯತೇ' ಎಂಬ ಇದಕ್ಕೂ ಹಿಂದಿನ ವಾಕ್ಯ-ದಲ್ಲಿ ಅದಕ್ಕೂ ಪೂರ್ವದಲ್ಲಿರುವ 'ಅಯಮಗ್ನಿಃ' ಎಂಬ ವಾಕ್ಯವನ್ನು ಜೋಡಿಸಿದಾಗ ಪಾಚಕತ್ವೇನ ಅಗ್ನಿಯು ಶರೀರಾಂತಃಸ್ಥಿತನಾಗಿರುವನು ಎಂಬ ವಿಷಯವನ್ನು ಹೇಳಿದ್ದರೂ ತದ್ಯದ್ಭಕ್ತಮ್ ಎಂಬ ವಾಕ್ಯದಲ್ಲಿ ಆ ಲಿಂಗವು ತಿಳಿದು ಬರುವುದಿಲ್ಲ. ಆದರೂ ತದ್ಧೋಮೀಯಮ್ ಎಂಬ ಪದದಿಂದ ಶರೀರಾಂತಃಸ್ಥಿತನಾದ ಅಗ್ನಿಗೆ ಆ ದ್ರವ್ಯವು ಹೋಮ್ಯವಾಗಿರುವುದು ಎಂದು ಹೇಳಿರುವುದರಿಂದ ಪಾಚಕತ್ವೇನ ಅಂತಃಸ್ಥಿತಿಯೆಂಬ ಲಿಂಗವು ಈ ವಾಕ್ಯದಿಂದಲೂ ತಿಳಿದು ಬರುವುದೆಂದು ಹೇಳಿರುವುದು ಯುಕ್ತವಾಗಿದೆ.

**ಭಾ– ನ । 'ಅಥ ಹೇಮಮಾತ್ಮಾನಮಣೋರಣೀಯಾಂಸಂ ಪರತಃ ಪರಂ ವಿಶ್ವಂ ಹರಿಮುಪಾಸೀತೇತಿ । ಸರ್ವನಾಮಾ ಸರ್ವಕರ್ಮಾ ಸರ್ವಲಿಂಗಃ ಸರ್ವಗುಣಃ ಸರ್ವಕಾಮಃ ಸರ್ವಧರ್ಮಃ ಸರ್ವರೂಪ ಇತಿ'।**

**'ಸ ಯ ಏತಮೇವಮಾತ್ಮಾನಂ ವಿಶ್ವಂ ಹರಿಮಾರಾದರಮುಪಾಸ್ತೇ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷು ದೇವೇಷು ಸರ್ವೇಷು ವೇದೇಷು ಕಾಮಚಾರೋ ಭವತಿ' ಇತಿ ತತ್ತನ್ನಾಮಲಿಂಗಾದಿನಾ ತಸ್ಯೈವ ದೃಷ್ಟ್ಯುಪದೇಶಾನ್ಮಹೋಪನಿಷದಿ ॥**

ಪೂರ್ವಪಕ್ಷಿಯ ಈ ಆಶಂಕೆಯು ಸರಿಯಲ್ಲ. ಏಕೆಂದರೆ 'ಅಥ ಹೇಮಮಾತ್ಮಾನಮಣೋರಣೀಯಾಂಸಂ ಪರತಃ ಪರಂ ವಿಶ್ವಂ

ಹರಿಮುಪಾಸೀತೇತಿ । ಸರ್ವನಾಮಾ ಸರ್ವಕರ್ಮಾ ಸರ್ವಲಿಂಗಃ ಸರ್ವಗುಣಃ ಸರ್ವಕಾಮಃ ಸರ್ವಧರ್ಮಃ ಸರ್ವರೂಪಃ ಇತಿ'।

'ಸ ಯ ಏತಮೇವಮಾತ್ಮಾನಂ ವಿಶ್ವಂ ಹರಿಮಾರಾದರಮುಪಾಸ್ತೇ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷು ದೇವೇಷು ಸರ್ವೇಷು ವೇದೇಷು ಕಾಮಚಾರೋ ಭವತಿ' ಎಂದು ಅಗ್ನ್ಯಾದಿಗಳ ಆಯಾಯಾ ನಾಮ, ಲಿಂಗ ಮೊದಲಾದವುಗಳನ್ನು ಪಡೆದಿರುವಂತೆ ಆ ವಿಷ್ಣುವಿನ ಉಪಾಸನೆಯನ್ನೇ ಮಹೋಪನಿಷತ್ತಿನಲ್ಲಿ ಉಪದೇಶಿಸಲಾಗಿದೆ.

(ಭಾ.ದೀ.) ಪರಿಹಾರಸೂತ್ರಾಂಶಂ ವ್ಯಾಚಷ್ಟೇ – **ನೇತಿ** ।। 'ತಸ್ಮಾನ್ನ ವಿಷ್ಣುಃ' ಇತಿ ಪೂರ್ವವಾಕ್ಯೇನಾಸ್ಯ ನಞರ್ಥಸ್ಯಾನ್ವಯಃ । ಕುತೋ ನ? ಇತ್ಯತಃ, ತತ್ರ ಭಾಷ್ಯೇ 'ತಸ್ಮಾದಿತ್ಯುಕ್ತಮ್' ಇತ್ಯಾವೃತ್ತ್ಯಾ ಹೇತುತ್ವೇನ ಸಂಯೋಜ್ಯಮ್ । ಸೂತ್ರೇ ತು 'ಅತಃ' ಇತ್ಯಾಕರ್ಷಣೀಯಮ್ । ಆತ್ಮಶಬ್ದಾದಿಪೂರ್ವಹೇತೋರೇವ ಇತಿ ತದರ್ಥಃ । ನ ಚೇತರತ್ರಾಪ್ಯಸ್ತಿ ಶ್ರುತ್ಯಾದಿಕಮ್ ಇತ್ಯನಿರ್ಣಯಃ । ತೇಷಾಮನ್ಯತ್ರ ಮುಖ್ಯತೋಽಯೋಗೇನ ವಿಷ್ಣಾವೇವ ಸಾವಕಾಶತ್ವೋಪಪತ್ತೇಃ ಇತ್ಯಧ್ಯಾಹಾರಃ।

ಕುತೋಽಗ್ನ್ಯಾದಿನಾಮಕರ್ಮಣಾಂ ವಿಷ್ಣಾವೇವ ಸಾವಕಾಶತ್ವಂ ಜ್ಞಾಯತೇ? ಇತ್ಯತಃ, ತತ್ರ ಹೇತುಸಮರ್ಪಕಂ 'ತಥಾ ದೃಷ್ಟ್ಯುಪದೇಶಾತ್' ಇತ್ಯಂಶಮ್ ಉಪದೇಶಪದೋಕ್ತಶ್ರುತ್ಯುದಾಹರಣಪೂರ್ವಕಂ ವ್ಯಾಚಷ್ಟೇ – **ಅಥೇತಿ** ।। ಪ್ರಕರಣಾಂತರಾರಂಭಾರ್ಥಃ ಅಯಮಥಶಬ್ದಃ । ಪ್ರಥಮೇತಿಶಬ್ದೋ ವಿಧಿಸಮಾಪ್ತೌ । ದ್ವಿತೀಯಸ್ಯ 'ಇತ್ಯುಪಾಸೀತ' ಇತ್ಯನ್ವಯಃ । ತಥಾಚ 'ಏತಮಾತ್ಮಾನಮ್' ಆದಾನಾದಿಕರ್ತಾರಮ್ 'ಅಣೋರಣೀಯಾಂಸಂ' ಸೂಕ್ಷ್ಮಾ- ದಪಿ ಸೂಕ್ಷ್ಮಂ 'ಪರತೋ' ಮಹತಃ ಪರಂ 'ವಿಶ್ವಂ' ಪೂರ್ಣಂ ಹರಿಮುಪಾಸೀತ ಇತ್ಯರ್ಥಃ।

ಪೂರ್ವಪಕ್ಷಿಯ ಆಕ್ಷೇಪಕ್ಕೆ ಪರಿಹಾರವನ್ನು ಹೇಳುವ ಸೂತ್ರದ ಅಂಶವನ್ನು ಭಾಷ್ಯಕಾರರು 'ನ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಇಲ್ಲಿರುವ

ನಞ್‌ಪದದ ಅರ್ಥಕ್ಕೆ 'ತಸ್ಮಾನ್ನ ವಿಷ್ಣುಃ' ಎಂಬ ಹಿಂದಿನ ವಾಕ್ಯದ ಅರ್ಥದೊಂದಿಗೆ ಅನ್ವಯವಾಗುವುದು. ಏಕಲ್ಲ? ಎಂಬ ಪ್ರಶ್ನೆಗೆ ಉತ್ತರವಾಗಿ ಭಾಷ್ಯದಲ್ಲಿರುವ 'ತಸ್ಮಾತ್' ಎಂಬ ಪದವನ್ನು ಆವೃತ್ತಿ ಮಾಡಿಕೊಂಡು ಹೇತುವಾಗಿ ಯೋಜಿಸಬೇಕು. ಸೂತ್ರದಲ್ಲಾದರೋ ಮುಂದೆ ಬರುವ 'ಅತ ಏವ ನ ದೇವತಾ ಭೂತಂ ಚ' ಎಂಬ ಸೂತ್ರದಿಂದ 'ಅತಃ' ಎಂಬ ಪದವನ್ನು ಈ ಹಿಂದಿನ ಸೂತ್ರಕ್ಕೆ ಸೇರಿಸಬೇಕು. 'ಆತ್ಮಶಬ್ದ ಮೊದಲಾದ ಹಿಂದೆ ಹೇಳಲಾದ ಹೇತುಗಳಿಂದಲೇ' ಎಂದು ಅದರ ಅರ್ಥ. ನ ಚೇ-ತರತ್ರಾಪ್ಯಸ್ತಿ ಶ್ರುತ್ಯಾದಿಕಮ್ ಇತ್ಯನಿರ್ಣಯಃ 'ವಿಷ್ಣುವಿನ ವಿಷಯದಲ್ಲಿ ಹೇಗೆ ಶ್ರುತಿಮೊದಲಾದ ಪ್ರಮಾಣಗಳಿರುವವೋ ಹಾಗೆಯೇ ಅಗ್ನಿಯ ವಿಷಯದಲ್ಲೂ ಶ್ರುತ್ಯಾದಿಪ್ರಮಾಣಗಳಿರುವುದರಿಂದ ವೈಶ್ವಾನರನು ವಿಷ್ಣುವೇ ಎಂದು ನಿರ್ಣಯ-ಮಾಡಲಾಗದು' ಎಂದರೆ ಅದು ಸರಿಯಲ್ಲ. 'ತೇಷಾಮನ್ಯತ್ರ ಮುಖ್ಯತೋಽ-ಯೋಗೇನ ವಿಷ್ಣಾವೇವ ಸಾವಕಾಶತ್ವೋಪಪತ್ತೇಃ' – ಆ ಶ್ರುತ್ಯಾದಿಪ್ರಮಾಣಗಳು ವಿಷ್ಣುಭಿನ್ನನಲ್ಲಿ ಮುಖ್ಯವಾಗಿರಲು ಸಾಧ್ಯವಿಲ್ಲವಾದ್ದರಿಂದ ಅವುಗಳು ವಿಷ್ಣುವಿನ ವಿಷಯದಲ್ಲಿ ಸಾವಕಾಶವಾಗಿರುವುದು ಯುಕ್ತವಾಗಿದೆ - ಎಂಬ ವಾಕ್ಯಗಳನ್ನು ಇಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು.

ಅಗ್ನಿ ಮೊದಲಾದ ದೇವತೆಗಳ ಶಬ್ದಗಳಿಗೆ ಹಾಗೂ ಅವರ ಕ್ರಿಯೆಗಳಿಗೆ ವಿಷ್ಣು-ವಿನಲ್ಲಿ ಅವಕಾಶವಿರುವುದೆಂದು ಹೇಗೆ ತಿಳಿಯುವುದು ಎಂಬ ಶಂಕೆಗೆ ಉತ್ತರವಾಗಿ ಆ ವಿಷಯದಲ್ಲಿ ಹೇತುವನ್ನು ಹೇಳುವ ಸೂತ್ರದ 'ತಥಾ ದೃಷ್ಟ್ಯುಪದೇಶಾತ್' ಎಂಬ ಅಂಶವನ್ನು ಉಪದೇಶಪದವು ಹೇಳುವ ಶ್ರುತಿಯನ್ನು ಉದಾಹರಿಸುವ ಮೂಲಕ 'ಅಥ' ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅಥ ಹೇಮಂ' ಎಂಬಲ್ಲಿ ಅಥಶಬ್ದವು ಮತ್ತೊಂದು ಪ್ರಕರಣದ ಆರಂಭವೆಂಬ ಅರ್ಥವನ್ನು ಹೇಳುವುದು. ಉಪಾಸೀತೇತಿ ಎಂಬಲ್ಲಿರುವ ಇರುವ ಮೊದಲನೆಯ ಇತಿಶಬ್ದವು ಉಪಾಸನಾವಿಧಿಯ ಸಮಾಪ್ತಿಯನ್ನು ಹೇಳುವುದು. ಎರಡನೆಯ ಇತಿಶಬ್ದವು ಇತ್ಯುಪಾಸೀತ ಎಂಬುದಾಗಿ ಉಪಾಸೀತ ಎಂಬ ಪದದೊಂದಿಗೆ ಅನ್ವಯವನ್ನು ಹೊಂದುವುದು. ತಥಾಚ – 'ಇಮಮ್ ಆತ್ಮಾನಮ್' ಈ ಆದಾನಾದಿಕಾರಣನಾದ, ಅಣೋರಣೀಯಾಂಸಂ- ಸೂಕ್ಷ್ಮಕ್ಕಿಂತಲೂ ಸೂಕ್ಷ್ಮ-

ನಾದ, ಪರತಃ ಪರಂ - ಮಹತ್ತಿಗಿಂತಲೂ ಮಹತ್ತಾದ, ವಿಶ್ವಮ್ - ಪೂರ್ಣನಾದ ಹರಿಯನ್ನು ಉಪಾಸೀತ ಉಪಾಸನೆ ಮಾಡತಕ್ಕದ್ದು.

(ಭಾ.ದೀ.) ಕಿಮಿತ್ಯತಃ ಉಪಾಸನಾಪ್ರಕಾರಮಾಹ – **ಸರ್ವೇತಿ ॥** ಇತಿಶಬ್ದಃ ಪ್ರತ್ಯೇಕಂ ಸಂಬಧ್ಯತೇ । ತಥಾಚ ಮುಖ್ಯತಃ ಇಂದ್ರಾದಿಸರ್ವನಾಮವಾನ್ ಇತ್ಯುಪಾ-ಸೀತ । 'ಸರ್ವಕರ್ಮಾ' 'ನರ್ತೇ ತ್ವತ್ಕ್ರಿಯತೇ' ಇತ್ಯಾದೇಃ ಸ್ವಾತಂತ್ರ್ಯೇಣ ಸರ್ವ-ಕ್ರಿಯಾಕರ್ತಾ ಇತ್ಯುಪಾಸೀತ । ಲಿಂಗಂ ಲಕ್ಷಣಂ, ವಜ್ರಧರತ್ವಾದಿಸರ್ವಲಿಂಗ ಇತ್ಯು-ಪಾಸೀತ । ಜ್ಞಾನಾನಂದಾದಿಸರ್ವಗುಣಪೂರ್ಣ ಇತ್ಯುಪಾಸೀತ । ಏತದಿಚ್ಛಯೈವ ಸರ್ವಂ ಭವತೀತಿ ಸರ್ವಕಾಮಃ ಪೂರ್ಣಕಾಮ ಇತ್ಯುಪಾಸೀತ । ಭೇದಸಂಯೋಗ-ವಿಭಾಗಾದಿಸರ್ವಧರ್ಮಾಸ್ತದಧೀನಾ ಇತಿ ವಾ, ಸರ್ವಜ್ಞತ್ವಾದಿ ಸರ್ವಧರ್ಮ-ವತ್ತ್ವಾದ್ವಾ ಸರ್ವಧರ್ಮ ಇತ್ಯುಪಾಸೀತ । ಸರ್ವತ್ರ ರೂಪಮಸ್ಯ ಇತಿ ವಾ 'ಸರ್ವ ಜಗತ್ ಅಸ್ಯ ರೂಪಂ ಪ್ರತಿಮಾ' ಇತಿ ವಾ, ಸರ್ವರೂಪ ಇತ್ಯುಪಾಸೀತ ।

ಏನೆಂದು ಉಪಾಸನೆ ಮಾಡಬೇಕು? ಎಂಬ ಪ್ರಶ್ನೆಗೆ ಉತ್ತರವಾಗಿ 'ಸರ್ವನಾಮಾ' ಇತ್ಯಾದಿ ವಾಕ್ಯದಿಂದ ಉಪಾಸನೆಯ ಪ್ರಕಾರವನ್ನು ಶ್ರುತಿಯು ಹೇಳುತ್ತಿದೆ. 'ಸರ್ವರೂಪ ಇತಿ' ಎಂಬಲ್ಲಿರುವ ಇತಿಶಬ್ದವು ಒಂದೊಂದು ಪದದೊಂದಿಗೂ ಪ್ರತ್ಯೇಕವಾಗಿ ಸಂಬಂಧವನ್ನು ಪಡೆಯುವುದು. ತಥಾಚ - ಸರ್ವನಾಮಾ ಇತಿ ಉಪಾಸೀತ ಅಂದರೆ ಪರಮಾತ್ಮನು ಮುಖ್ಯತಃ ಇಂದ್ರಾದಿ ಸರ್ವನಾಮಗಳನ್ನು ಹೊಂದಿರುವವನು ಎಂದು ಉಪಾಸನೆ ಮಾಡಬೇಕು. 'ಸರ್ವಕರ್ಮಾ ಇತ್ಯುಪಾಸೀತ' - ಅಂದರೆ 'ನರ್ತೇ ತ್ವತ್ ಕ್ರಿಯತೇ' ಇತ್ಯಾದಿ ಶ್ರುತಿಗಳು ಹೇಳುವಂತೆ ಸ್ವಾತಂತ್ರ್ಯೇಣ ಸಮಸ್ತಕ್ರಿಯೆಗಳ ಕರ್ತೃವು ಶ್ರೀಹರಿಯೇ ಆಗಿರುವನೆಂದು ಉಪಾಸನೆ ಮಾಡಬೇಕು. ಸರ್ವಲಿಂಗಃ ಎಂಬಲ್ಲಿ ಲಿಂಗ ಎಂದರೆ ಲಕ್ಷಣ. ವಜ್ರಧರತ್ವ ಮೊದಲಾದ ಎಲ್ಲ ಲಕ್ಷಣಗಳನ್ನೂ ಹೊಂದಿರುವವನು ಎಂದು ಉಪಾಸನೆ ಮಾಡತಕ್ಕದ್ದು. ಸರ್ವಗುಣಃ ಅಂದರೆ ಜ್ಞಾನಾನಂದಾದಿ ಸಮಸ್ತಗುಣಗಳಿಂದ ಪೂರ್ಣನಾಗಿರುವವನು ಎಂದು ಉಪಾಸನೆ ಮಾಡಬೇಕು. ಭಗವಂತನ ಇಚ್ಛೆಯಿಂದಲೇ ಎಲ್ಲವೂ ಆಗುವ ಕಾರಣ ಅವನು ಸರ್ವಕಾಮ ಎಂದರೆ ಪೂರ್ಣಕಾಮನೆಂದು ಉಪಾಸನೆ ಮಾಡಬೇಕು. ಸರ್ವಧರ್ಮ ಇತ್ಯುಪಾಸೀತ

ಎಂದರೆ ಭೇದ, ಸಂಯೋಗ, ವಿಭಾಗ ಮೊದಲಾದ ಎಲ್ಲ ಧರ್ಮಗಳೂ ಅವನಿಗೆ ಅಧೀನವಾಗಿವೆ ಎಂದು, ಅಥವಾ ಸರ್ವಜ್ಞತ್ವ ಮೊದಲಾದ ಸರ್ವಧರ್ಮಗಳನ್ನು ಹೊಂದಿರುವುದರಿಂದ ಅವನನ್ನು ಸರ್ವಧರ್ಮ ಎಂದು ಉಪಾಸನೆ ಮಾಡಬೇಕು ಎಂದು ಅರ್ಥ. ಸರ್ವರೂಪ ಎಂದರೆ ಸರ್ವತ್ರ ರೂಪಂ ಅಸ್ಯ - 'ಈ ಭಗವಂತನ ಸ್ವರೂಪವು ಎಲ್ಲೆಡೆ ಇರುವುದು' ಎಂದು ಅಥವಾ 'ಸರ್ವಂ ಜಗತ್ ಅಸ್ಯ ರೂಪಂ ಪ್ರತಿಮಾ' - ಎಲ್ಲ ಜಗತ್ತು ಈ ಭಗವಂತನ ರೂಪ ಎಂದರೆ ಪ್ರತಿಮೆಯಾಗಿದೆ. ಆದ್ದರಿಂದ ಅವನನ್ನು ಸರ್ವರೂಪ ಎಂದು ಉಪಾಸನೆ ಮಾಡಬೇಕು ಎಂದು ಅರ್ಥ.

(ಭಾ.ದೀ.) ಏವಮುಪಾಸಕಸ್ಯ ಫಲಮಾಹ – **ಸ ಇತಿ** ॥ ಸಃ - ಪ್ರಸಿದ್ಧಃ ಯೋಽಧಿಕಾರೀ ಏತಮಾತ್ಮಾನಮ್ ಅಣೋರಣೀಯಾಂಸಂ ಪರತಃ ಪರಮೇವ ವಿಶ್ವಂ - ಹರಿಮೇವ, ನಾನ್ಯಮ್, 'ಆರಾತ್' ಸಮೀಪೇ ಸ್ವಹೃದಯೇ 'ಅರಮ್' ಅಲಮ್ ಸಮ್ಯಗುಪಾಸ್ತೇ ತಸ್ಯೈವಮವ್ಯಾಪ್ತೇ ವ್ಯಾಪ್ತರೂಪೋಪಾಸಕಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು - ಪ್ರಾಣಿಷು, ಸರ್ವೇಷು ಲೋಕೇಷು ಸ್ಥಿತೇಷು ಭೂತೇಷ್ವಿತಿ ವಾ । ವೇದೇಷು ಸರ್ವೇಷು, ವೇದೇಷು ಯಥೇಷ್ಟಸಂಚಾರಃ ಕಾಮಸಂಚರಣಸರ್ವ-ಪೂಜ್ಯತ್ವಸರ್ವಜ್ಞತ್ವಾದಿ ಸ್ಯಾದ್- ಇತ್ಯರ್ಥಃ ತತ್ತ್ವಪ್ರದೀಪೇಽಭಿಹಿತಃ । 'ಇತಿ ಮಹೋಪನಿಷದಿ' ಇತ್ಯನ್ವಯಃ।

ಸೌತ್ರತಥಾಶಬ್ದಾರ್ಥಮಾಹ – **ತತ್ತದಿತಿ** ॥ ಅಗ್ನ್ಯಾದಿನಾಮಲಿಂಗಾದಿಮತ್ತ್ವೇನ ಇತ್ಯರ್ಥಃ । ಆದಿಪದೇನ ತತ್ತತ್ಕರ್ಮಾದೇರ್ಗ್ರಹಣಮ್ । ಪ್ರಧಾನಸೂತ್ರೇಽಭಿಹಿತಂ ತತ್ತು ಇತ್ಯೇತದತ್ರಾಪಿ ವಿಪರಿಣಾಮೇನ ಸಂಯೋಜ್ಯಮ್ ಇತ್ಯಾಶಯೇನ ಆಹ – **ತಸ್ಯೈವೇತಿ** ॥ 'ವಿಷ್ಣೋರೇವ' ಇತ್ಯರ್ಥಃ । ನ ತ್ವಗ್ನ್ಯಾದೇರಿತ್ಯೇವಾರ್ಥಃ । 'ದೃಷ್ಟ್ಯು-ಪದೇಶಾತ್' - ಉಪಾಸನೋಪದೇಶಾತ್ । ಶ್ರುತೌ ಹರಿಮೇವ ಉಪಾಸ್ತ ಇತ್ಯವ-ಧಾರಣೇನ ಅನ್ಯವ್ಯಾವೃತ್ತ್ಯವಗಮಾದಿತಿ ಭಾವಃ।

ಹೀಗೆ ಉಪಾಸನೆ ಮಾಡತಕ್ಕವನಿಗೆ ಫಲವನ್ನು 'ಸಃ' ಎಂಬ ಶ್ರುತಿಯು ಹೇಳುತ್ತಿದೆ. 'ಸಃ ಯಃ' ಪ್ರಸಿದ್ಧನಾದ ಯಾವ ಅಧಿಕಾರಿಯು ಏತಮಾತ್ಮಾನಮ್ –

ಅಣೋರಣೀಯನಾದ ಪರತಃ ಪರನಾದ ವಿಶ್ವ ಎಂದರೆ ಪೂರ್ಣನಾದ ಹರಿಯನ್ನೇ ಹೊರತು, ಮತ್ತೊಬ್ಬರನ್ನಲ್ಲ, ಆರಾತ್ - ಸಮೀಪದಲ್ಲಿ ಅಂದರೆ ತನ್ನ ಹೃದಯದಲ್ಲಿ 'ಅರಮ್' ಅಂದರೆ ಚೆನ್ನಾಗಿ, ಉಪಾಸ್ತೇ - ಉಪಾಸನೆ ಮಾಡುವನೋ, ತಸ್ಯ - ಅವನಿಗೆ ಅಂದರೆ ಹೀಗೆ ಅವ್ಯಾಪ್ತದಲ್ಲಿ ವ್ಯಾಪ್ತರೂಪವನ್ನು ಉಪಾಸನೆ ಮಾಡುವವನಿಗೆ, ಸರ್ವೇಷು ಲೋಕೇಷು - ಎಲ್ಲ ಲೋಕಗಳಲ್ಲಿ ಸರ್ವೇಷು ಭೂತೇಷು ಎಲ್ಲ ಪ್ರಾಣಿಗಳಲ್ಲಿ ಅಥವಾ ಎಲ್ಲ ಲೋಕಗಳಲ್ಲಿರುವ ಪ್ರಾಣಿಗಳಲ್ಲಿ, ಸರ್ವೇಷು ದೇವೇಷು, ಸರ್ವೇಷು ವೇದೇಷು - ಎಲ್ಲ ದೇವತೆಗಳಲ್ಲಿ ಎಲ್ಲ ವೇದಗಳಲ್ಲಿ, ಕಾಮಚಾರಃ - ತನ್ನ ಇಚ್ಛೆಯಂತೆಯೇ ಸಂಚಾರ, ಸರ್ವಪೂಜ್ಯತ್ವ, ಸರ್ವಜ್ಞತ್ವ ಮೊದಲಾದವುಗಳು ಉಂಟಾಗುವವು ಎಂಬ ಅರ್ಥವು ತತ್ತ್ವಪ್ರದೀಪದಲ್ಲಿ ಹೇಳಿದೆ. ಭಾಷ್ಯದಲ್ಲಿ ಕೊನೆಯ ಇತಿಶಬ್ದಕ್ಕೆ 'ಇತಿ ಮಹೋಪನಿಷದಿ' ಎಂದು ಅನ್ವಯ.

ಸೂತ್ರದಲ್ಲಿರುವ ತಥಾ ಶಬ್ದದ ಅರ್ಥವನ್ನು ಭಾಷ್ಯಕಾರರು 'ತತ್ತತ್' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಅಗ್ನಿ ಮೊದಲಾದವರನ್ನು ಹೇಳುವ ಶಬ್ದ ಲಿಂಗ ಮೊದಲಾದವುಗಳನ್ನು ಹೊಂದಿರುವವನೆಂದು ಎಂದು ಅರ್ಥ. ಲಿಂಗಾದಿನಾ ಎಂಬಲ್ಲಿರುವ ಆದಿಪದದಿಂದ ಅವರ ಕರ್ಮಾದಿಗಳನ್ನು ಗ್ರಹಿಸಬೇಕು. ಪ್ರಧಾನಸೂತ್ರದಲ್ಲಿ ಇರುವ 'ತತ್ ತು' ಎಂಬ ಪದಗಳನ್ನು ವಿಭಕ್ತಿ ಬದಲಾವಣೆಯೊಂದಿಗೆ ಇಲ್ಲಿ ಯೋಜಿಸಬೇಕು ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ 'ತಸ್ಯೈವ' ಎಂದು ಹೇಳಿದೆ. 'ವಿಷ್ಣುವಿಗೇ ಎಂದು ಅರ್ಥ, ಹೊರತು ಅಗ್ನ್ಯಾದಿಗಳಿಗಲ್ಲ' ಎಂದು ಏವಶಬ್ದದ ಅರ್ಥ. 'ದೃಷ್ಟ್ಯುಪದೇಶಾತ್' ಎಂದರೆ ಉಪಾಸನೆಯನ್ನು ಉಪದೇಶಿಸಿರುವುದರಿಂದ ಎಂದು ಅರ್ಥ. ಶ್ರುತಿಯಲ್ಲಿ 'ಹರಿಮೇವ ಉಪಾಸ್ತೇ' ಎಂದು ಅವಧಾರಣವಿರುವುದರಿಂದ ಇತರ ದೇವತೆಗಳನ್ನು ಉಪಾಸನೆ ಮಾಡುವುದನ್ನು ವ್ಯಾವೃತ್ತಿಗೊಳಿಸಿರುವುದು ತಿಳಿಯುವುದು ಎಂದು ಭಾವ.

ಭಾ– ಅನಾತ್ತತ್ವಾದನಾತ್ಮಾನ ಊನತ್ವಾದ್ ಗುಣರಾಶಿತಃ।
ಅಬ್ರಹ್ಮಾಣಃ ಪರೇ ಸರ್ವೇ ಬ್ರಹ್ಮಾತ್ಮಾ ವಿಷ್ಣುರೇವ ಹಿ' ॥

**ಇತ್ಯಾದಿನಾ 'ಕೋ ನ ಆತ್ಮಾ ಕಿಂ ಬ್ರಹ್ಮ'(ಛಾಂ. ೫.೧೧.೧) ಇತ್ಯಾರಂಭಾಚ್ಚ ಅನ್ಯೇಷಾಮಸಂಭವಾದ್ ವಿಷ್ಣುರೇವ ವೈಶ್ವಾನರಃ।**

'ಅನಾತ್ಮತ್ವಾದನಾತ್ಮಾನ ಊನತ್ವಾದ್ ಗುಣರಾಶಿತಃ । ಅಬ್ರಹ್ಮಾಣಃ ಪರೇ ಸರ್ವೇ ಬ್ರಹ್ಮಾತ್ಮಾ ವಿಷ್ಣುರೇವ ಹಿ' ಇತ್ಯಾದಿ ಪ್ರಮಾಣದಿಂದ, 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂಬುದಾಗಿ ಉಪಕ್ರಮವಿರುವುದರಿಂದಲೂ ವಿಷ್ಣುಭಿನ್ನರಿಗೆ ಆತ್ಮತ್ವ ಬ್ರಹ್ಮತ್ವ ಮೊದಲಾದವುಗಳು ಇರುವುದು ಸಾಧ್ಯವಿಲ್ಲವಾದ್ದರಿಂದ ವೈಶ್ವಾನರನು ವಿಷ್ಣುವೇ ಆಗಿರುವನು.

(ಭಾ.ದೀ.) ಏವಮನ್ಯಶ್ರುತಿಲಿಂಗಾದೀನಾಂ ವಿಷ್ಣೌ ಸಾವಕಾಶತ್ವೋಪಪಾದಕತಯಾ 'ತಥಾ' ಇತ್ಯಂಶಂ ವ್ಯಾಖ್ಯಾಯ, ಆತ್ಮಶಬ್ದಾದೇರನ್ಯತ್ರ ನಿರವಕಾಶತ್ವೋಕ್ತಿಪರತಯಾ ಅಸಂಭವಾತ್ ಇತ್ಯಂಶಂ ಪ್ರಮಾಣೋದಾಹರಣಪೂರ್ವಕಂ ವ್ಯಾಖ್ಯಾತಿ – **ಅನಾತ್ಮತ್ವಾದಿತಿ** ॥ ಯೋಜನಾ ತು – ಇತ್ಯಾದಿನಾ ಪ್ರಮಾಣೇನ ವಿಷ್ಣೋರನ್ಯೇಷಾಮ್ ಆತ್ಮತ್ವಬ್ರಹ್ಮತ್ವಾಸಂಭವೋಕ್ತೇಃ, ಅತ ಏವ ಆತ್ಮಶಬ್ದಾದೇರನ್ಯತ್ರ ಅಸಂಭವಾದಿತಿ।

ಯದ್ವಾ – ನ ಕೇವಲಮಾತ್ಮಶಬ್ದಶ್ರುತಿಸಮಾಖ್ಯಾಭ್ಯಾಂ, ಕಿಂತು ಪ್ರಕರಣಬಲಾಚ್ಚ ವೈಶ್ವಾನರಸ್ಯ ವಿಷ್ಣುತ್ವನಿಶ್ಚಯೋ ಭವತೀತ್ಯಾಹ – **ಅನಾತ್ಮತ್ವಾದಿತಿ** ॥ ಆದಿಶಬ್ದೇನ 'ಬ್ರಹ್ಮಶಬ್ದಃ ಪರೇ ವಿಷ್ಣೌ' ಇತ್ಯಾದಿಕಂ ಗೃಹ್ಯತೇ। ತಥಾ ಚೇತ್ಥಂ ಯೋಜನಾ – 'ಕೋ ನ ಆತ್ಮಾ ಕಿಂ ಬ್ರಹ್ಮ' 'ಇತ್ಯಾರಂಭಾಚ್ಚ' ಇತ್ಯಾರಭ್ಯಾಧೀತಾತ್ ಪ್ರಕರಣಾಚ್ಚ ವಿಷ್ಣುರೇವ ವೈಶ್ವಾನರಃ । ಬ್ರಹ್ಮಾತ್ಮಶಬ್ದಯೋರೇತದುಪಕ್ರಮೇ ಶ್ರವಣೇಽಪಿ ಕುತೋಽಸ್ಯಾಃ ವೈಶ್ವಾನರವಿದ್ಯಾಯಾಃ ವಿಷ್ಣುಪ್ರಕರಣತ್ವಮ್? 'ಅನಾತ್ಮತ್ವಾತ್' ಇತ್ಯಾದಿನಾ ಪ್ರಮಾಣೇನ ವಿಷ್ಣೋರನ್ಯೇಷಾಮ್ ಆತ್ಮಶಬ್ದಾರ್ಥವ್ಯಾಪ್ತತ್ವಗುಣಪೂರ್ಣತ್ವಯೋಃ ಅಸಂಭಾವವಗಮಾತ್ ಇತಿ।

ಅನೇನ ಸೂತ್ರೇ 'ಅಸಂಭವಾತ್' ಇತಿ ಪದಮಧ್ಯಾಹೃತ್ಯ ತೇನ ಅಪಿಶಬ್ದಃ ಸಂಯೋಜ್ಯಃ । ಅಸಂಭವಾತ್ ಇತಿ ಹೇತುಸ್ತು ಆತ್ಮಶಬ್ದಾದೇರನ್ಯತ್ರ ಅನವಕಾಶತ್ವ-

ಸಾಧಕತಯಾ ಉಭಯತ್ರ ಸಂಯೋಜ್ಯ ಇತ್ಯುಕ್ತಂ ಭವತಿ । ಅತ ಏವ ಭಾಷ್ಯೇ ಅಗ್ನಿಶ್ರುತ್ಯಾದೀನಾಂ ವಿಷ್ಣೌ ಸಾವಕಾಶತ್ವಸಾಧಕತಯಾ ಇತ್ಯಾದಿವ್ಯಾಖ್ಯಾನಾಂತರಂ ವಿಷ್ಣುಪಕ್ಷಸಾಧಕಾತ್ಮಶಬ್ದಾದೇಃ ಅನ್ಯತ್ರಾನವಕಾಶತ್ವಸಾಧಕಸಂಭವಾತ್ ಇತಿ ಹೇತೌ ವ್ಯಾಖ್ಯಾತವ್ಯೇಽಪಿ ತದ್ ವಿಹಾಯ 'ಆರಂಭಾತ್' ಇತ್ಯಧ್ಯಾಹೃತಹೇತೂಪನ್ಯಾಸಾನಂತರಮ್ ಅಸಂಭವಾತ್ ಇತ್ಯುಪನ್ಯಸ್ತಮ್ ।

**ಟೀಕಾಯಾಮಪಿ** – ನ ಚ ಆತ್ಮಶಬ್ದಾದೇಃ ಅನ್ಯತ್ರಾಸ್ತ್ಯವಕಾಶಃ ಇತಿ ಪ್ರತಿಜ್ಞಾಯ ಪ್ರಕರಣಬಲಾಚ್ಚ ಇತ್ಯಧ್ಯಾಹಾರ್ಯ ಹೇತುಂ ಚ ಪ್ರದರ್ಶ್ಯ, ಅನಂತರಮಾತ್ಮಶಬ್ದಪ್ರಕರಣಯೋರ್ನಿರವಕಾಶತ್ವಸಾಧಕಾಸಂಭವಾತ್ ಇತ್ಯಂಶೋ ವ್ಯಾಖ್ಯಾತಃ । ತಥಾ ದೃಷ್ಟ್ಯುಪದೇಶಾತ್ ಅಸಂಭವಾತ್ ಇತಿವತ್ ನಾಧ್ಯಾಹೃತಹೇತೋರವಾಂತರಸಾಧ್ಯೇನಾನ್ವಯಃ, ಕಿಂತು ಪ್ರಧಾನೇನೈವೇತಿ ಜ್ಞಾಪನಾಯ ವಿಷ್ಣುರೇವ ವೈಶ್ವಾನರ ಇತಿ ಪುನರುಕ್ತಿಃ। ಉದ್ದೇಶ್ಯವಿಧೇಯನಿರ್ದೇಶಸ್ಯೈಚ್ಛಿಕತ್ವಾದ್ ವ್ಯತ್ಯಾಸಃ।

'ಹಿ' ಯಸ್ಮಾತ್ ವಿಷ್ಣೋಃ 'ಪರೇ' ಅನ್ಯೇ ಗುಣೈಃ 'ಅನಾತ್ತತ್ವಾತ್' ಅವ್ಯಾಪ್ತತ್ವಾತ್ ಸರ್ವೋತ್ಕೃಷ್ಟತ್ವೇನ ವೈದಿಕೈರಸ್ವೀಕೃತತ್ವಾದ್ ವಾ 'ಅನಾತ್ಮಾನಃ' ಅನಾತ್ಮಶಬ್ದಮುಖ್ಯಾರ್ಥಾಃ, ಯಸ್ಮಾಚ್ಚ ಗುಣರಾಶಿತ ಊನತ್ವಾದಬ್ರಹ್ಮಾಣಶ್ಚ ತಸ್ಮಾತ್ 'ಬ್ರಹ್ಮಾತ್ಮಾ' ತಚ್ಛಬ್ದಮುಖ್ಯವಾಚ್ಯೋ ವಿಷ್ಣುರೇವ ಸಿದ್ಧ ಇತ್ಯರ್ಥಃ।

ಛಾಂದೋಗ್ಯೇ ಹಿ 'ಕೋ ನ ಆತ್ಮಾ ಕಿಂ ಬ್ರಹ್ಮ' ಇತಿ ಮಿಲಿತ್ವಾ ಮೀಮಾಂಸಮಾನೈಃ ಪ್ರತ್ಯಬ್ದಯಜ್ಞಕೃತ್ತ್ವನಿಮಿತ್ತಾತ್ ಮಹಾಶಾಲಸಂಜ್ಞೈಃ ಪಂಚಭಿರ್ಮಹಾಮುನಿಭಿಃ ಉದ್ದಾಲಕೋದ್ದಿಷ್ಟೈಸ್ತದ್ಯುಕ್ತೈಃ ಪರಿಪೃಷ್ಟೋ ರಾಜಾಽಶ್ವಪತಿರ್ವೈಶ್ವಾನರಮುಪದಿದೇಶ। 'ನಃ' ಅಸ್ಮಾಕಮ್ ಉಪಾಸ್ಯ ಆತ್ಮಾ 'ಕಃ' ಕಿಂ ಲಕ್ಷಣಃ? ಬ್ರಹ್ಮ ಚ 'ಕಿಂ' ಕಿಂಲಕ್ಷಣಮ್? ಇತ್ಯರ್ಥಃ।

ಹೀಗೆ ಇತರರಿಗೆ ಸಂಬಂಧಿಸಿದ ಶ್ರುತಿಲಿಂಗ ಮೊದಲಾದವುಗಳಿಗೆ ವಿಷ್ಣುವಿನಲ್ಲಿ ಅವಕಾಶವಿರುವುದೆನ್ನುವುದನ್ನು ಉಪಪಾದಿಸುವಂತೆ 'ತಥಾ' ಎಂಬ ಸೂತ್ರಾಂಶವನ್ನು

ವ್ಯಾಖ್ಯಾನ ಮಾಡಿ, ಸೂತ್ರದಲ್ಲಿರುವ ಅಸಂಭವಾತ್ ಎಂಬ ಅಂಶವನ್ನು ಆತ್ಮಶಬ್ದ ಮೊದಲಾದವುಗಳಿಗೆ ಅನ್ಯತ್ರ ಅವಕಾಶವಿಲ್ಲದಿರುವುದನ್ನು ಹೇಳುವಂತೆ ಪ್ರಮಾಣೋದಾಹರಣಪುರಃಸರವಾಗಿ 'ಅನಾತ್ತತ್ವಾತ್' ಇತ್ಯಾದಿ ವಾಕ್ಯದಿಂದ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ. ಈ ವಾಕ್ಯದ ಯೋಜನೆಯಾದರೋ ಹೀಗಿದೆ– 'ಅನಾತ್ತತ್ವಾತ್ ಇತ್ಯಾದಿ ಪ್ರಮಾಣದಿಂದ ವಿಷ್ಣುಭಿನ್ನರಿಗೆ ಆತ್ಮತ್ವ, ಬ್ರಹ್ಮತ್ವಗಳು ಇರಲು ಸಾಧ್ಯವಿಲ್ಲವೆಂದು ಹೇಳಿರುವುದರಿಂದ ಆ ಕಾರಣದಿಂದಲೇ ಆತ್ಮಶಬ್ದ ಮೊದಲಾದವುಗಳಿಗೆ ವಿಷ್ಣುಭಿನ್ನರಲ್ಲಿ ಅವಕಾಶವಿಲ್ಲದಿರುವುದರಿಂದ' - ಎಂದು.

ಅಥವಾ ಆತ್ಮಶಬ್ದಶ್ರುತಿ, ಸಮಾಖ್ಯಾ ಇವುಗಳಿಂದ ಮಾತ್ರವಲ್ಲದೇ ಪ್ರಕರಣಬಲದಿಂದಲೂ ವೈಶ್ವಾನರನು ವಿಷ್ಣುವೆಂದು ನಿಶ್ಚಯವಾಗುವುದು ಎಂದು ಅನಾತ್ತತ್ವಾತ್ ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಇತ್ಯಾದಿನಾ' ಎಂಬಲ್ಲಿರುವ ಆದಿಶಬ್ದದಿಂದ 'ಬ್ರಹ್ಮಶಬ್ದಃ ಪರೇ ವಿಷ್ಣೌ' ಇತ್ಯಾದಿ ವಾಕ್ಯಗಳು ಗ್ರಹಿಸಲ್ಪಡುತ್ತವೆ. ತಥಾಚ ಭಾಷ್ಯವಾಕ್ಯದ ಯೋಜನೆಯು ಹೀಗಿದೆ – 'ಕೋ ನ ಆತ್ಮಾ ಕಿಂ ಬ್ರಹ್ಮ ಇತ್ಯಾರಂಭಾಚ್ಚ ಅಂದರೆ ಕೋ ನ ಆತ್ಮಾ ಎಂದಾರಂಭಿಸಿ ಅಧ್ಯಯನ ಮಾಡಲ್ಪಡುವ ಪ್ರಕರಣದಿಂದಲೂ ವೈಶ್ವಾನರನು ವಿಷ್ಣುವೇ ಆಗಿರುವನು. ಬ್ರಹ್ಮ, ಆತ್ಮಾ ಎಂಬ ಶಬ್ದಗಳು ಈ ವಾಕ್ಯದ ಆರಂಭದಲ್ಲಿ ಶ್ರುತವಾಗಿದ್ದರೂ ಈ ವೈಶ್ವಾನರವಿದ್ಯೆಯು ವಿಷ್ಣುಪ್ರಕರಣವಾಗಿದೆ ಎನ್ನುವುದು ಹೇಗೆ? ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಅನಾತ್ತತ್ವಾತ್ ಇತ್ಯಾದಿ ಪ್ರಮಾಣದಿಂದ ವಿಷ್ಣುಭಿನ್ನರಿಗೆ ಆತ್ಮ-ಬ್ರಹ್ಮಶಬ್ದಾರ್ಥವಾದ ವ್ಯಾಪ್ತತ್ವ ಮತ್ತು ಗುಣಪೂರ್ಣತ್ವಗಳು ಅಸಂಭಾವಿತವೆಂದು ತಿಳಿಯುವುದರಿಂದ - ಎಂದು.

ಇದರಿಂದ, ಪ್ರಕೃತಸೂತ್ರದಲ್ಲಿ ಆರಂಭಾತ್ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಆ ಪದದೊಂದಿಗೆ 'ಅಪಿ'ಶಬ್ದವನ್ನು ಸೇರಿಸಬೇಕು. 'ಅಸಂಭವಾತ್' ಎಂಬ ಹೇತುವನ್ನಾದರೋ ಆತ್ಮಶಬ್ದ ಮೊದಲಾದವುಗಳಿಗೆ ಅನ್ಯತ್ರ ಅವಕಾಶವಿಲ್ಲದಿರುವುದನ್ನು ಸಾಧಿಸುವಂತೆ [೧]ಎರಡೂ ಕಡೆಯಲ್ಲಿ ಯೋಜಿಸಬೇಕು ಎಂದು ಹೇಳಿದಂತಾಗುವುದು. ಆದ್ದರಿಂದಲೇ ಭಾಷ್ಯದಲ್ಲಿ ಅಗ್ನಿಶ್ರುತಿ ಮೊದಲಾದವುಗಳಿಗೆ ವಿಷ್ಣುವಿನಲ್ಲಿ ಸಾವಕಾಶತ್ವವನ್ನು ಸಮರ್ಥಿಸುವಂತೆ ವ್ಯಾಖ್ಯಾನಮಾಡಿದ ನಂತರ ವಿಷ್ಣುಪಕ್ಷ-

ಸಾಧಕವಾದ ಆತ್ಮಶಬ್ದ ಮೊದಲಾದವುಗಳಿಗೆ ಅನ್ಯತ್ರ ಅವಕಾಶವಿಲ್ಲವೆಂಬುದನ್ನು ಸಾಧಿಸುವ 'ಅಸಂಭವಾತ್' ಎಂಬ ಹೇತುವನ್ನು ವ್ಯಾಖ್ಯಾನ ಮಾಡಬೇಕಾಗಿದ್ದರೂ ಹಾಗೆ ಮಾಡದೇ 'ಆರಂಭಾತ್' ಎಂಬ ಅಧ್ಯಾಹಾರಮಾಡಿಕೊಂಡ ಹೇತುವನ್ನು ಹೇಳಿದ ನಂತರ 'ಅಸಂಭವಾತ್' ಎಂಬ ಹೇತುವನ್ನು ಹೇಳಲಾಗಿದೆ.

ತತ್ತ್ವಪ್ರಕಾಶಿಕೆಯಲ್ಲೂ ಕೂಡ – ಆತ್ಮಶಬ್ದ ಮೊದಲಾದವುಗಳಿಗೆ ಅನ್ಯತ್ರ ಅವಕಾಶವಿಲ್ಲ ಎಂದು ಪ್ರತಿಜ್ಞೆ ಮಾಡಿ 'ಪ್ರಕರಣಬಲಾಚ್ಚ' ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಂಡು ಹೇತುವನ್ನೂ ಪ್ರದರ್ಶಿಸಿ, ಅನಂತರ ಆತ್ಮಶಬ್ದ ಮತ್ತು ಪ್ರಕರಣಗಳಿಗೆ ಅನ್ಯತ್ರ ಅವಕಾಶವಿಲ್ಲವೆನ್ನುವುದನ್ನು ಸಮರ್ಥಿಸುವ 'ಅಸಂಭವಾತ್' ಎಂಬ ಸೂತ್ರಾಂಶವನ್ನು ವ್ಯಾಖ್ಯಾನ ಮಾಡಲಾಗಿದೆ. 'ತಥಾ ದೃಷ್ಟ್ಯುಪದೇಶಾತ್ ಅಸಂಭವಾತ್' ಎಂಬ ಸೂತ್ರದಲ್ಲಿ ಹೇಳಿದ ಹೇತುವಿಗೆ [1]ಅಪ್ರಧಾನವಾದ ಸಾಧ್ಯದಿಂದ ಹೇಗೆ ಅನ್ವಯವೋ ಹಾಗೆ ಅಧ್ಯಾಹಾರಮಾಡಿಕೊಂಡ ಹೇತುವಿಗೆ ಅಪ್ರಧಾನಸಾಧ್ಯದಿಂದ ಅನ್ವಯವಲ್ಲ, ಕಿಂತು ಪ್ರಧಾನಸಾಧ್ಯದೊಂದಿಗೇ ಅನ್ವಯವಾಗುವುದು ಎಂಬುದನ್ನು ತಿಳಿಸಲು ಭಾಷ್ಯದಲ್ಲಿ 'ವಿಷ್ಣುರೇವ ವೈಶ್ವಾನರಃ' ಎಂದು ಪುನಃ ಹೇಳಲಾಗಿದೆ. 'ವೈಶ್ವಾನರಃ ವಿಷ್ಣುರೇವ' ಎಂದು ನಿರ್ದೇಶಿಸಬೇಕಾಗಿದ್ದರೂ ಉದ್ದೇಶ್ಯವಿಧೇಯಗಳ ನಿರ್ದೇಶವು ಐಚ್ಛಿಕವಾದುದರಿಂದ 'ವಿಷ್ಣುರೇವ ವೈಶ್ವಾನರಃ' ಎಂದು ವ್ಯತ್ಯಾಸಮಾಡಲಾಗಿದೆ.

ಹಿ - ಯಾವಕಾರಣದಿಂದಾಗಿ, **ಪರೇ ಸರ್ವೇ** -ವಿಷ್ಣುಭಿನ್ನರಾದ ಎಲ್ಲರೂ, **ಅನಾತ್ತತ್ವಾತ್** - ಗುಣಗಳಿಂದ ವ್ಯಾಪ್ತರಲ್ಲದಿರುವುದರಿಂದ, ಅಥವಾ ಸರ್ವೋತ್ಕೃಷ್ಟರೆಂದು ವೈದಿಕರಿಂದ ಸ್ವೀಕೃತರಾಗದಿರುವುದರಿಂದ, **ಅನಾತ್ಮಾನಃ** - ಅನಾತ್ಮಶಬ್ದದ ಮುಖ್ಯಾರ್ಥರಾಗಿರುವರು. ಮತ್ತು ಯಾವ ಕಾರಣದಿಂದ, **ಗುಣರಾಶಿತಃ ಊನತ್ವಾತ್** - ಗುಣರಾಶಿಯಿಂದ ನ್ಯೂನತೆಯನ್ನು ಪಡೆದಿರುವರೋ ಆದ್ದರಿಂದ ಅವರು ಅಬ್ರಹ್ಮಶಬ್ದದ ಮುಖ್ಯಾರ್ಥರೂ ಆಗಿರುವರು. ಆದ್ದರಿಂದ **'ಬ್ರಹ್ಮಾತ್ಮಾ'** - ಬ್ರಹ್ಮ, ಆತ್ಮಾ ಎಂಬ ಶಬ್ದಗಳ ಮುಖ್ಯವಾಚ್ಯನು, **ವಿಷ್ಣುರೇವ** - ವಿಷ್ಣುವೇ ಎಂದು ಸಿದ್ಧನಾಗುವನು ಎಂದು ಅನಾತ್ತತ್ವಾತ್ ಎಂಬ ಪ್ರಮಾಣದ ಅರ್ಥವಾಗಿದೆ.

ಛಾಂದೋಗ್ಯದಲ್ಲಾದರೋ 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂದು ಒಟ್ಟಿಗೆ ಸೇರಿ ವಿಚಾರ ಮಾಡುತ್ತಿದ್ದ, ಪ್ರತಿಸಂವತ್ಸರದಲ್ಲೂ ಯಜ್ಞವನ್ನು ಮಾಡುತ್ತಿದ್ದ ಕಾರಣ ಮಹಾಶಾಲ ಎಂದು ಹೆಸರನ್ನು ಪಡೆದ, ಉದ್ದಾಲಕರಿಂದ ಕಳಿಸಲ್ಪಟ್ಟ ಐವರು ಮಹಾ-ಮುನಿಗಳಿಂದ ಪ್ರಶ್ನಿಸಲ್ಪಟ್ಟ ಅಶ್ವಪತಿಯೆಂಬ ರಾಜನು ಅವರನ್ನು ಕುರಿತು ವೈಶ್ವಾನರ-ವಿದ್ಯೆಯನ್ನು ಉಪದೇಶಿಸಿದನು. ನಃ- ನಮಗೆ, ಉಪಾಸ್ಯನಾದ, ಆತ್ಮಾ ಕಃ- ಭಗ-ವಂತನು ಯಾವ ಲಕ್ಷಣವುಳ್ಳವನು? ಕಿಂ ಬ್ರಹ್ಮ- ಬ್ರಹ್ಮವು ಯಾವ ಲಕ್ಷಣವುಳ್ಳದ್ದು? ಎಂದು ಕೋ ನ ಆತ್ಮಾ ಎಂಬ ವಾಕ್ಯದ ಅರ್ಥ.

(೧) ವಿಷ್ಣುಭಿನ್ನರಿಗೆ ಆತ್ಮತ್ವ - ಬ್ರಹ್ಮತ್ವಗಳು ಅಸಂಭಾವಿತವಾದದ್ದರಿಂದ ಆತ್ಮ ಮೊದಲಾದ ಶಬ್ದಗಳಿಗೆ ಅನ್ಯತ್ರ ನಿರವಕಾಶತ್ವವಿರುವುದು ಎಂದು ಅನ್ಯತ್ರ-ನಿರವಕಾಶತ್ವಸಾಧಕತ್ವೇನ 'ಅಸಂಭವಾತ್' ಎಂಬ ಪದವನ್ನು ಯೋಜಿಸುವುದು ಒಂದು ರೀತಿಯಾದರೆ, 'ಅನ್ಯತ್ರ ಆತ್ಮ-ಬ್ರಹ್ಮಾದಿಶಬ್ದಗಳಿಗೆ ಸಂಭವವಿಲ್ಲದ್ದ-ರಿಂದಲೇ ವೈಶ್ವಾನರನು ವಿಷ್ಣುವೇ ಆಗಿದ್ದಾನೆ ಎಂದು ಮತ್ತೊಂದು ಕಡೆಯ ಅನ್ವಯ. ಹೀಗೆ 'ಅಸಂಭವಾತ್' ಎಂಬ ಪದಕ್ಕೆ ಎರಡೂ ಕಡೆ ಅನ್ವಯವಿರು-ವುದು ಎಂದು ಭಾವ.

(೨) ಆತ್ಮಶಬ್ದ ಮೊದಲಾದವುಗಳಿಗೆ ವಿಷ್ಣುಭಿನ್ನರಲ್ಲಿ ಅವಕಾಶವಿಲ್ಲವೆನ್ನುವುದು ಅಪ್ರಧಾನವಾದ ಸಾಧ್ಯ. ವೈಶ್ವಾನರನು ವಿಷ್ಣುವೇ ಎನ್ನುವುದು ಪ್ರಧಾನವಾದ ಸಾಧ್ಯ. ಸೂತ್ರದಲ್ಲಿರುವ 'ಅಸಂಭವಾತ್' ಎಂಬ ಹೇತು ಪ್ರಧಾನ ಮತ್ತು ಅಪ್ರಧಾನವಾದ ಎರಡೂ ಸಾಧ್ಯಗಳನ್ನು ಸಮರ್ಥಿಸುವ ಹೇತುವಾಗಿದೆ. ಅಧ್ಯಾ-ಹಾರ ಮಾಡಿಕೊಂಡಿರುವ 'ಆರಂಭಾತ್' ಎಂಬ ಹೇತುವಾದರೋ ಪ್ರಧಾನ-ಸಾಧ್ಯದೊಂದಿಗೆ ಮಾತ್ರ ಅನ್ವಯವನ್ನು ಪಡೆದಿದೆ.

ಭಾ- 'ಚಂದ್ರಮಾ ಮನಸೋ ಜಾತಶ್ಚಕ್ಷೋಃಸೂರ್ಯೋ ಅಜಾಯತ' (ತೈ.ಆ.೩.೧೨)- ಇತ್ಯಾದಿನಾ ಯಃ ಪುರುಷಾಖ್ಯೋ ವಿಷ್ಣುರಭಿಹಿತಸ್ತದ್ವಿಧ-ಮೇವಾತ್ರ 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ' ಇತ್ಯಾದಿನಾ ಏನಂ ವೈಶ್ವಾನರಮಧೀಯತೇ। (ಛಾಂ.ಉ. ೫-೧೮-೨)

'ಚಂದ್ರಮಾ ಮನಸೋ ಜಾತಶ್ಚಕ್ಷೋಃಸೂರ್ಯೋ ಅಜಾಯತ' ಇತ್ಯಾದಿಯಾಗಿ ಯಾವ ಪುರುಷನಾಮಕನಾದ ವಿಷ್ಣುವು ಹೇಳಲ್ಪಟ್ಟಿರುವನೋ ಅದೇ ರೀತಿಯಾಗಿ 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ' ಇತ್ಯಾದಿಯಾಗಿ ಈ ವೈಶ್ವಾನರನನ್ನು ಅಧ್ಯಯನ ಮಾಡುವರು. ಆದ್ದರಿಂದಲೂ ವೈಶ್ವಾನರನು ವಿಷ್ಣುವೇ ಆಗಿದ್ದಾನೆ.

(ಭಾ.ದೀ.) ಶ್ರುತಿಸಮಾಖ್ಯಯಾ ಚ ವೈಶ್ವಾನರಸ್ಯ ವಿಷ್ಣುತ್ವಮುಪಪಾದಯಿತುಂ ಪ್ರವೃತ್ತಂ 'ಪುರುಷವಿಧಮಪ್ಯೇನಮಧೀಯತೇ' ಇತ್ಯಂಶಂ ವ್ಯಾಚಷ್ಟೇ – **ಚಂದ್ರಮಾ ಇತಿ** ॥ ಅತ್ರ 'ಚಂದ್ರಮಾಃ' ಇತಿ ವಾಕ್ಯಂ ಪ್ರತೀಕತ್ವೇನ ಗೃಹೀತಮ್ । ಉದಾಹರಣವಾಕ್ಯಂ ತು 'ಚಕ್ಷೋಃ ಸೂರ್ಯೋ ಅಜಾಯತ' ಇತಿ ಧ್ಯೇಯಮ್ । ಪ್ರಥಮಾದಿಪದೇನ 'ಶೀರ್ಷ್ಣೋ ದ್ಯೌಃ ಸಮವರ್ತತ, ಪ್ರಾಣಾದ್ ವಾಯುರಜಾಯತ ... ಪದ್ಭ್ಯಾಂ ಭೂಮಿಃ'(ತೈ.ಆ.೩-೧೨) ಇತ್ಯಾದಿಕಂ ದ್ವಿತೀಯಾದಿಪದೇನ 'ಸಂದೋಹೋ ಬಹುಲೋ ವಸ್ತಿರೇವ ರಯಿಃ ಪೃಥಿವ್ಯೇವ ಪಾದೌ' (ಛಾಂ.೫.೧೮.೨) ಇತ್ಯಾದಿಕಂ ಗೃಹ್ಯತೇ ।

ಏನಮ್ ಇತ್ಯಸ್ಯ ವ್ಯಾಖ್ಯಾನಮ್ – **ವೈಶ್ವಾನರಮಿತಿ** ॥ ತಥಾಚ – ಯಸ್ಮಾತ್ ಪುರುಷಸೂಕ್ತೇ 'ಶೀರ್ಷ್ಣೋ ದ್ಯೌಃ ಸಮವರ್ತತ, ಚಕ್ಷೋಃ ಸೂರ್ಯೋ ಅಜಾಯತ' ಇತ್ಯಾದಿನಾ ಶಬ್ದೇನ ಯಃ ಪುರುಷಾಖ್ಯೋ ವಿಷ್ಣುಃ ಯದ್ವಿಧೋ ದ್ಯುಭ್ವಾದಿಜನಕಶೀರ್ಷಾದಿಮಾನಭಿಹಿತಃ, ತದ್ವಿಧಮೇವ ದ್ಯುಭ್ವಾದಿಜನಕಶೀರ್ಷಾದಿಮತ್ತ್ವಪ್ರಕಾರೋಪೇತಮೇವ ಅತ್ರ ಛಾಂದೋಗ್ಯೇ 'ಮೂರ್ಧೈವ ಸುತೇಜಾಃ' ಇತ್ಯಾದಿನಾ ವಾಕ್ಯೇನೈನಂ ವೈಶ್ವಾನರಮಧೀಯತೇ ಛಂದೋಗಾಃ ತಸ್ಮಾತ್ ಪುರುಷಸೂಕ್ತಸಮಾಖ್ಯಯಾಽಪಿ ವೈಶ್ವಾನರೋ ವಿಷ್ಣುರೇವ ಇತಿ ಯೋಜನಾ ॥

ಶ್ರುತಿಸಮಾಖ್ಯೆಯಿಂದಲೂ ವೈಶ್ವಾನರನು ವಿಷ್ಣುವೆಂದು ಸಮರ್ಥಿಸಲು ಹೊರಟಿರುವ 'ಪುರುಷವಿಧಮಪಿ ಏನಮಧೀಯತೇ' ಎಂಬ ಸೂತ್ರಾಂಶವನ್ನು ಭಾಷ್ಯಕಾರರು

'ಚಂದ್ರಮಾ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಇಲ್ಲಿ 'ಚಂದ್ರಮಾಃ' ಎಂಬ ವಾಕ್ಯವನ್ನು ಪ್ರತೀಕವಾಗಿ ಗ್ರಹಿಸಲಾಗಿದೆ. ಉದಾಹರಣೆಯಾಗಿರುವ ವಾಕ್ಯವಾದರೋ '**ಚಕ್ಷೋಃ ಸೂರ್ಯೋ ಅಜಾಯತ**' ಎನ್ನುವುದಾಗಿದೆ ಎಂದು ತಿಳಿಯಬೇಕು. ಭಾಷ್ಯದಲ್ಲಿ ಮೊದಲನೆಯ ಆದಿಪದದಿಂದ 'ಶೀರ್ಷ್ಣೋ ದ್ಯೌಃ ಸಮವರ್ತತ ಪ್ರಾಣಾದ್ವಾಯುರಜಾಯತ ... ಪದ್ಭ್ಯಾಂ ಭೂಮಿಃ' ಇತ್ಯಾದಿವಾಕ್ಯಗಳು ಎರಡನೆಯ ಆದಿಪದದಿಂದ 'ಸಂದೋಹೋ ಬಹುಲೋ ವಸ್ತಿರೇವ ರಯಿಃ ಪೃಥಿವ್ಯೇವ ಪಾದೌ' ಇತ್ಯಾದಿವಾಕ್ಯಗಳು ಗ್ರಹಿಸಲ್ಪಡುತ್ತವೆ.

ಸೂತ್ರದಲ್ಲಿರುವ '**ಏನಮ್**' ಎಂಬ ಪದದ ವ್ಯಾಖ್ಯಾನವನ್ನು ಭಾಷ್ಯದಲ್ಲಿ '**ವೈಶ್ವಾನರಮ್**' ಎಂಬ ಪದದಿಂದ ಮಾಡಲಾಗಿದೆ. ತಥಾಚ – ಯಾವ ಕಾರಣದಿಂದಾಗಿ ಪುರುಷಸೂಕ್ತದಲ್ಲಿ '**ಶೀರ್ಷ್ಣೋ ದ್ಯೌಃ ಸಮವರ್ತತ ಚಕ್ಷೋಃ ಸೂರ್ಯೋ ಅಜಾಯತ**' ಇತ್ಯಾದಿವಾಕ್ಯಗಳಿಂದ ಯಾವ ಪುರುಷಾಖ್ಯವಿಷ್ಣುವು ಯಾವ ವಿಧವಾಗಿ ಅಂದರೆ ಲೋಕ, ಭೂಲೋಕ ಮೊದಲಾದವುಗಳಿಗೆ ಕಾರಣವಾದ (ಜನಕವಾದ) ಶಿರಸ್ಸು ಮೊದಲಾದವುಗಳನ್ನು ಉಳ್ಳವನೆಂದು ಹೇಳಲ್ಪಟ್ಟಿರುವನೋ, ತದ್ವಿಧಮೇವ - ಹಾಗೆಯೇ ದ್ಯುಭ್ವಾದಿಜನಕವಾದ ಶಿರಸ್ಸುಮೊದಲಾದವುಗಳನ್ನು ಇತ್ಯಾದಿ ಪ್ರಕಾರಗಳನ್ನು ಹೊಂದಿರುವವನನ್ನಾಗಿ ಇಲ್ಲಿ ಛಾಂದೋಗ್ಯದಲ್ಲಿ 'ಮೂರ್ಧೈವ ಸುತೇಜಾಃ' ಇತ್ಯಾದಿ ವಾಕ್ಯದಿಂದ ಏನಮ್ = ವೈಶ್ವಾನರನನ್ನು ಅಧೀಯತೇ - ಛಂದೋಗರು ಅಧ್ಯಯನ ಮಾಡುವರೋ ಆ ಕಾರಣದಿಂದ, ಪುರುಷಸೂಕ್ತಸಮಾಖ್ಯೆಯಿಂದಲೂ ವೈಶ್ವಾನರನು ವಿಷ್ಣುವೇ ಆಗಿರುವನು ಎಂದು ಯೋಜನೆ.

**ಭಾ– ಚಶಬ್ದೇನ ಸಕಲವೇದತಂತ್ರಪುರಾಣಾದಿಷು ವಿಷ್ಣುಪರತ್ವಂ ಪುರುಷಸೂಕ್ತಸ್ಯ ದರ್ಶಯತಿ ।**

ಸೂತ್ರದಲ್ಲಿ ಚಶಬ್ದದಿಂದ ಸಕಲ ವೇದ, ತಂತ್ರ, ಪುರಾಣ ಮೊದಲಾದವುಗಳಲ್ಲಿ ಪುರುಷಸೂಕ್ತವು ವಿಷ್ಣುಪರವೇ ಆಗಿರುವುದೆಂದು ಹೇಳಿರುವುದನ್ನು ಸೂತ್ರಕಾರರು ತಿಳಿಸುತ್ತಿದ್ದಾರೆ.

(ಭಾ.ದೀ.) ನನು ಪುರುಷಸೂಕ್ತಸ್ಯ ವಿಷ್ಣುಪರತ್ವೇ ಭವೇತ್ ತತ್ಸಮಾಖ್ಯಯಾ ಏತದ್ವಿದ್ಯಾಯಾ ವಿಷ್ಣುಪರತ್ವಂ, ತದೇವ ಕುತಃ? ಇತ್ಯತ ಆಹ – **ಚಶಬ್ದೇನೇತಿ** ॥ ಶ್ರುತೇರಾಧಿಕ್ಯಾತ್ ಪ್ರಥಮಂ ಪ್ರತಿಜ್ಞಾ। ಪುರುಷಸೂಕ್ತಸ್ಯ ಇತ್ಯನಂತರಂ 'ಪ್ರಸಿದ್ಧಮ್' ಇತಿ ಶೇಷಃ । 'ದರ್ಶಯತಿ' ಸೂಚಯತಿ ಸೂತ್ರಕಾರ ಇತ್ಯರ್ಥಃ । ಆತ್ಮಶಬ್ದಸ್ಮೃತಿ-ಸಮಾಖ್ಯಾಪ್ರಕರಣಸಮುಚ್ಚಯಸ್ಯೇವ ಪ್ರಕರಣಶ್ರುತಿಸಮುಚ್ಚಯಸ್ಯಾಪಿ ಆದಿಪದೇನೈವ ಸಿದ್ಧತ್ವಾತ್ ನ ತತ್ರೋಪಕ್ಷೀಣಶ್ಚಶಬ್ದ ಇತಿ ಭಾವಃ।

ಪುರುಷಸೂಕ್ತವು ವಿಷ್ಣುಪರವಾಗಿದ್ದಲ್ಲಿ ಆದರ ಸಮಾಖ್ಯೆಯಿಂದ ಈ ವೈಶ್ವಾನರ ವಿದ್ಯೆಯು ವಿಷ್ಣುಪರವಾಗಿದೆ ಎಂದಾಗಬಹುದು. ಆದರೆ ಪುರುಷಸೂಕ್ತವು ವಿಷ್ಣುಪರ-ವೆನ್ನಲು ಆಧಾರವೇನು? ಎಂಬ ಶಂಕೆಗೆ ಉತ್ತರವಾಗಿ '**ಚಶಬ್ದೇನ**' ಎಂಬ ವಾಕ್ಯವು ಹೊರಟಿದೆ. ಪ್ರಮಾಣಗಳ ಮಧ್ಯೆ ಶ್ರುತಿಗೆ ಪ್ರಾಶಸ್ತ್ಯವಿರುವುದರಿಂದ ಸಕಲವೇದ ಎಂಬುದಾಗಿ ಮೊದಲು ವೇದವನ್ನು ಹೇಳಲಾಗಿದೆ. 'ಪುರುಷಸೂಕ್ತಸ್ಯ' ಎಂಬ ಪದದ ನಂತರ 'ಪ್ರಸಿದ್ಧಮ್' ಎಂಬ ಪದವು ಶೇಷವಾಗಿದೆ. 'ದರ್ಶಯತಿ' ಎಂದರೆ ಸೂತ್ರ-ಕಾರರು ಸೂಚಿಸುತ್ತಿದ್ದಾರೆ ಎಂದು ಅರ್ಥ. ಆತ್ಮಶಬ್ದ-ಸ್ಮೃತಿಸಮಾಖ್ಯೆ ಮತ್ತು ಪ್ರಕರಣ ಇವುಗಳ ಸಮುಚ್ಚಯವು ಹೇಗೋ ಹಾಗೆ ಪ್ರಕರಣ ಮತ್ತು ಶ್ರುತಿಗಳ ಸಮುಚ್ಚಯವು ಅಪಿಪದದಿಂದಲೇ ಸಿದ್ಧವಾಗುವುದರಿಂದ ಚಶಬ್ದವು ಅದನ್ನು ಹೇಳುವುದರಲ್ಲೇ ಗತಾರ್ಥವಲ್ಲ ಎಂದು ಭಾವ.

**ಭಾ– ತಥಾ ಚ ಬ್ರಾಹ್ಮೇ –**

**'ಯಥೈವ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಮ್ ।**
**ತಥೈವ ಮೇ ಮನೋ ನಿತ್ಯಂ ಭೂಯಾದ್ವಿಷ್ಣುಪರಾಯಣಮ್' ಇತಿ ॥**

'ಹೇಗೆ ಪುರುಷಸೂಕ್ತವು ನಿತ್ಯವೂ ವಿಷ್ಣುಪರವೋ ಹಾಗೆಯೇ ನನ್ನ ಮನಸ್ಸೂ ನಿತ್ಯವೂ ವಿಷ್ಣುಪರವಾಗಿರಲಿ' ಎಂಬುದಾಗಿ ಬ್ರಾಹ್ಮ-ಪುರಾಣದಲ್ಲೂ ಪುರುಷಸೂಕ್ತದ ವಿಷ್ಣುಪರತ್ವವನ್ನು ಹೇಳಲಾಗಿದೆ.

(ಭಾ.ದೀ.) ಕಿಂ ತದ್ವೇದಾದಿ? ಇತ್ಯತಃ ಶ್ರುತೇಃ ಸಾಕ್ಷಾತ್ ಪ್ರತಿಜ್ಞಾತಾರ್ಥಾ-ಸಾಧಕತ್ವಾತ್ ಪ್ರತಿಜ್ಞಾಕ್ರಮಮತಿಕ್ರಮ್ಯ ಸಾಕ್ಷಾತ್ ಪ್ರತಿಜ್ಞಾತಾರ್ಥಸಾಧಕತ್ವಾತ್ ಆದೌ ಪುರಾಣವಾಕ್ಯಂ ಪಠತಿ – **ತಥಾಚೇತಿ** ॥ ಸೂತ್ರೇ ಪುರುಷಸೂಕ್ತಸ್ಯ ವಿಷ್ಣುಪರತ್ವಂ ಸಿದ್ಧಮಿತಿ ಯಥೋಕ್ತಂ ತಥಾ ಬ್ರಾಹ್ಮೇ ಚೋಕ್ತಮಿತ್ಯರ್ಥಃ । **ಚಃ** ಸಮುಚ್ಚಯೇ । ಏವಮ್ ಉತ್ತರತ್ರಾಪಿ 'ಉಕ್ತಮ್' ಇತಿ ಪದಾಧ್ಯಾಹಾರೇಣ ಸಪ್ತಮ್ಯಂತಪದಾ-ನಾಮ್ ಅನ್ವಯೋ ದ್ರಷ್ಟವ್ಯಃ।

**ನಿತ್ಯಂ** – ನಿಯಮೇನ, **ವಿಷ್ಣುಪರಾಯಣಂ** – ವಿಷ್ಣೌ ಮಹಾತಾತ್ಪರ್ಯವತ್ । ದ್ವಿತೀಯಸ್ಯ ನಿತ್ಯಮ್ ಇತ್ಯಸ್ಯ 'ಸದಾ' ಇತ್ಯರ್ಥಃ । 'ಇತಿ ಬ್ರಾಹ್ಮೇ' ಇತಿ ಇತಿಶಬ್ದಾ-ನ್ವಯಃ। ಸಿದ್ಧಾರ್ಥಸ್ಯೈವ ದೃಷ್ಟಾಂತತ್ವಾತ್ ಅನೇನ ಬ್ರಾಹ್ಮವಚನೇನ ವಿವಕ್ಷಿತಾರ್ಥೋ ಜ್ಞಾಯತೇ।

ಆ ವೇದಾದಿಗಳು ಯಾವವು? ಎಂಬ ಪ್ರಶ್ನೆಗೆ ಉತ್ತರವಾಗಿ, ಶ್ರುತಿಯು ಸಾಕ್ಷಾತ್ ಪ್ರತಿಜ್ಞೆ ಮಾಡಿದ ವಿಷಯಕ್ಕೆ ಸಾಧಕವಾಗದಿರುವುದರಿಂದ, ಪ್ರತಿಜ್ಞೆ ಮಾಡಿದ ಕ್ರಮವನ್ನು ಅತಿಕ್ರಮಿಸಿ ಪ್ರತಿಜ್ಞೆ ಮಾಡಿದ ವಿಷಯಕ್ಕೆ ಸಾಕ್ಷಾತ್ ಸಾಧಕವಾಗಿರುವುದರಿಂದ ಮೊದಲು ಪುರಾಣವಾಕ್ಯವನ್ನು ಭಾಷ್ಯಕಾರರು 'ತಥಾಚ' ಎಂದು ಪಠಿಸುತ್ತಿದ್ದಾರೆ. ಸೂತ್ರದಲ್ಲಿ ಪುರುಷಸೂಕ್ತವು ವಿಷ್ಣುಪರವೆಂದು ಸಿದ್ಧವಾಗಿದೆ ಎಂದು ಹೇಗೆ ಹೇಳಲಾಗಿದೆಯೋ ಹಾಗೆ ಬ್ರಾಹ್ಮ ಪುರಾಣದಲ್ಲೂ ಹೇಳಲಾಗಿದೆ ಎಂದು ಅರ್ಥ. 'ತಥಾಚ' ಎಂಬಲ್ಲಿನ ಚಶಬ್ದವು ಸಮುಚ್ಚಯವನ್ನು ಹೇಳುವುದು. ಇದೇ ರೀತಿಯಾಗಿ ಮುಂದೆಯೂ 'ಉಕ್ತಮ್' ಎಂಬ ಪದವನ್ನು ಅಧ್ಯಾಹಾರಮಾಡಿಕೊಂಡು ಸಪ್ತಮ್ಯಂತವಾದ ಪದಗಳ ಅನ್ವಯವನ್ನು ತಿಳಿಯಬೇಕು.

'ನಿತ್ಯಂ' ಅಂದರೆ ನಿಯಮೇನ, ವಿಷ್ಣುಪರಾಯಣಂ - ವಿಷ್ಣುವಿನಲ್ಲಿ ಮಹಾ-ತಾತ್ಪರ್ಯವುಳ್ಳದ್ದು. ಎರಡನೆಯ ನಿತ್ಯಪದಕ್ಕೆ ಸದಾ ಎಂದು ಅರ್ಥ. 'ಇತಿ ಬ್ರಾಹ್ಮೇ' ಎಂಬುದಾಗಿ ಇತಿಶಬ್ದವು ಅನ್ವಯವನ್ನು ಹೊಂದುವುದು. ಸಿದ್ಧವಾದ ವಿಷಯವೇ ದೃಷ್ಟಾಂತವಾಗುವುದರಿಂದ ಬ್ರಾಹ್ಮವಚನದಿಂದ ಪ್ರಸಕ್ತ ವಿವಕ್ಷಿತವಾದ ವಿಷಯವು ತಿಳಿದುಬರುವುದು.

**ಭಾ – ಚತುರ್ವೇದಶಿಖಾಯಾಂ ಚ-**

**'ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಸ್ಸಹಸ್ರಪಾತ್ ಇತ್ಯೇಷ ಹ್ಯೇವ ಅಚಿಂತ್ಯಃ ಪರಃ ಪರಮೋ ಹರಿರಾದಿರನಾದಿರನಂತೋ ಅನಂತಶೀರ್ಷೋ ಅನಂತಾಕ್ಷೋ ಅನಂತಬಾಹುರನಂತಗುಣೋಽನಂತರೂಪಃ' ಇತಿ।**

ಚತುರ್ವೇದಶಿಖೆಯಲ್ಲೂ ಕೂಡ 'ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಸ್ಸಹಸ್ರಪಾತ್ ಇತ್ಯೇಷ ಹ್ಯೇವ ಅಚಿಂತ್ಯಃ ಪರಃ ಪರಮೋ ಹರಿರಾದಿರನಾದಿರನಂತೋ ಅನಂತಶೀರ್ಷೋ ಅನಂತಾಕ್ಷೋ ಅನಂತಬಾಹುರನಂತಗುಣೋಽನಂತರೂಪಃ' ಎಂಬುದಾಗಿ ಪುರುಷಸೂಕ್ತಪ್ರತಿಪಾದ್ಯನು ವಿಷ್ಣುವೇ ಆಗಿರುವನು ಎಂದು ಹೇಳಲಾಗಿದೆ.

(ಭಾ.ದೀ.) ಪ್ರತಿಜ್ಞಾತಾಂ ಶ್ರುತಿಂ ದರ್ಶಯಿತುಂ ಪ್ರಥಮಮೇವ ತತ್ಸ್ಥಾನಮಾಹ – **ಚತುರ್ವೇದಶಿಖಾಯಾಂ ಚೇತಿ** ॥ ಅತ್ರ ಚತುರ್ವೇದಶಿಖಾಶ್ರುತಿಃ 'ಸಹಸ್ರ' ಇತ್ಯಾರಭ್ಯ 'ಸಹಸ್ರಪಾತ್' ಇತ್ಯಂತೇನ ಪುರುಷಸೂಕ್ತಮುಪನ್ಯಸ್ಯ, 'ಏಷ ಹ್ಯೇವ' ಇತ್ಯನೇನ 'ಸಹಸ್ರಶೀರ್ಷಾ ಪುರುಷಃ' ಇತ್ಯುಕ್ತೋ ಹರಿರೇವ ನಾನ್ಯ ಇತ್ಯೇತತ್ ಸೂಕ್ತಂ ವಿಷ್ಣುಪರತಯಾ ವ್ಯಾಖ್ಯಾತಿ ಇತಿ ಪ್ರಕೃತಸಂಗತಿಃ। ಸುಪ ಆಕಾರೋ ವೈದಿಕಃ।

ಏಷಃ ಕಃ? ಇತ್ಯತೋ ಯಃ 'ಪರೋ' ವಿಲಕ್ಷಣಃ ಅತ ಏವ ಅಚಿಂತ್ಯಃ - ಮನಸಾ ಪರಮಃ - ಉತ್ತಮಃ, ಆದಿಃ - ಕಾರಣಭೂತಃ, ಅನಾದಿಃ - ಉತ್ಪತ್ತಿಶೂನ್ಯಃ, ಅನಂತಃ - ನಾಶಶೂನ್ಯಃ ಸ್ವರೂಪತೋ ಅಪರಿಚ್ಛಿನ್ನೋ ವಾ ಹರಿಃ ಸ ಇತ್ಯಾಹ। ಕುತೋಽಯಂ ಪುರುಷಃ ಸಹಸ್ರಶೀರ್ಷಾ? ಹಿ ಯಸ್ಮಾತ್ ಅನಂತಶೀರ್ಷಃ । ಕುತಃ ಸಹಸ್ರಾಕ್ಷಃ? ಯಸ್ಮಾತ್ ಅನಂತಾಕ್ಷಃ । ಕುತೋಽಯಂ ಸಹಸ್ರಪಾತ್? ಯಸ್ಮಾದನಂತಬಾಹುಃ । 'ಅನಂತಪಾತ್' ಇತ್ಯಸ್ಯಾಪ್ಯುಪಲಕ್ಷಕಮೇತತ್ । ಏವಂ ಪೂರ್ವವಾಕ್ಯೇಽಪಿ । 'ಸ ಭೂಮಿಮ್' ಇತ್ಯುತ್ತರವಾಕ್ಯೇಽಪಿ ಉಪಪಾದಕಮಾಹ – **ಅನಂತಗುಣೋಽನಂತರೂಪೋಽನಂತಾಕಾರ ಇತಿ** ॥ 'ಚತುರ್ವೇದಶಿಖಾಯಾಮ್' ಇತ್ಯನ್ವಯಃ।

'ಪುರುಷಸೂಕ್ತಪ್ರತಿಪಾದ್ಯನು ವಿಷ್ಣುವೇ ಎಂಬುದಾಗಿ ಶ್ರುತಿಯಲ್ಲಿ ಹೇಳಿದೆ' ಎಂದು ಪ್ರತಿಜ್ಞೆ ಮಾಡಲಾದ ಶ್ರುತಿಯನ್ನು ತೋರಿಸಲು ಮೊದಲೇ ಆ ಶ್ರುತಿಯಿರುವ ಸ್ಥಾನವನ್ನು ಭಾಷ್ಯಕಾರರು 'ಚತುರ್ವೇದಶಿಖಾಯಾಂ ಚ' ಎಂದು ಹೇಳುತ್ತಿದ್ದಾರೆ. ಇಲ್ಲಿ ಚತುರ್ವೇದಶಿಖಾಶ್ರುತಿಯು 'ಸಹಸ್ರ' ಎಂದಾರಂಭಿಸಿ 'ಸಹಸ್ರಪಾತ್' ಎಂದು ಕೊನೆಗೊಳ್ಳುವ ಭಾಗದಿಂದ ಪುರುಷಸೂಕ್ತವನ್ನು ಉದಾಹರಿಸಿ, 'ಏಷ ಹ್ಯೇವ' ಎಂಬ ವಾಕ್ಯದಿಂದ ಸಹಸ್ರಶೀರ್ಷಾ ಪುರುಷಃ ಎಂಬುದಾಗಿ ಹೇಳಲ್ಪಟ್ಟಿರುವವನು ಹರಿಯೇ ಅನ್ಯರಲ್ಲ ಎಂದು ಈ ಸೂಕ್ತವನ್ನು ವಿಷ್ಣುಪರವಾದುದೆಂದು ವ್ಯಾಖ್ಯಾನಮಾಡುವ ಕಾರಣ ಪ್ರಕೃತವಿಷಯಕ್ಕೆ ಸಂಗತಿಯನ್ನು ಪಡೆದಿದೆ. ಸಹಸ್ರಶೀರ್ಷಾ ಎಂಬಲ್ಲಿ ಸುಪ್ ಪ್ರತ್ಯಯದ ಸ್ಥಾನದಲ್ಲಿ ಆಕಾರ ಬಂದಿರುವುದು ವೈದಿಕಪ್ರಯೋಗವಾಗಿದೆ.

ಏಷಃ ಹಿ - ಇವನೇ ಎಂದು ಹೇಳಲ್ಪಟ್ಟಿರುವವನು ಯಾರು? ಎಂಬ ಪ್ರಶ್ನೆಗೆ ಉತ್ತರವಾಗಿ ಯಾರು - ಪರಃ - ವಿಲಕ್ಷಣನಾಗಿರುವನೋ, ಆದ್ದರಿಂದಲೇ ಅಚಿಂತ್ಯಃ - ಮನಸ್ಸಿನಿಂದ ಚಿಂತಿಸಲು ಅಶಕ್ಯನೋ, ಪರಮಃ - ಉತ್ತಮನಾಗಿರುವನೋ, ಆದಿಃ - ಸರ್ವಕಾರಣನಾಗಿರುವನೋ, ಅನಾದಿಃ - ಉತ್ಪತ್ತಿಶೂನ್ಯನೋ, ಅನಂತಃ - ನಾಶ-ಶೂನ್ಯನೋ, ಅಥವಾ ಸ್ವರೂಪತಃ ಯಾವುದೇ ಪರಿಚ್ಛೇದ ಅಂದರೆ ಮಿತಿ ಇಲ್ಲದಿರು-ವವನೋ ಅಂತಹ ಹರಿಯೇ ಆಗಿರುವನು ಎಂದು ಹೇಳಿದೆ. ಈ ಪುರುಷನು ಸಹಸ್ರ-ಶಿರಸ್ಸುಗಳನ್ನು ಹೊಂದಿರುವವನೆನ್ನುವುದು ಹೇಗೆ? ಹಿ - ಯಾವ ಕಾರಣದಿಂದ ಅವನು ಅನಂತಶೀರ್ಷನಾಗಿರುವನೋ ಆದ್ದರಿಂದ. ಅವನು ಸಹಸ್ರಾಕ್ಷನಾಗಿರುವುದು ಹೇಗೆ? ಯಾವ ಕಾರಣದಿಂದ ಅವನು ಅನಂತಾಕ್ಷನೋ ಆದ್ದರಿಂದ. ಅವನು ಸಹಸ್ರ ಪಾದ-ವುಳ್ಳವನು ಹೇಗೆ ಎಂಬ ಪ್ರಶ್ನೆಗೆ ಯಾವ ಕಾರಣದಿಂದ ಅವನು ಅನಂತ ಬಾಹುವುಳ್ಳ-ವನೋ ಆದ್ದರಿಂದ ಇಲ್ಲಿ ಅನಂತಬಾಹು ಎನ್ನುವುದು ಅವನು ಅನಂತಪಾತ್ (ಪಾದ-ವುಳ್ಳವನೂ) ಆಗಿರುವನು ಎಂಬುದಕ್ಕೆ ಉಪಲಕ್ಷಕವಾಗಿದೆ. ಹೀಗೆಯೇ ಹಿಂದಿನ ವಾಕ್ಯ-ದಲ್ಲೂ ಅನಂತಾಕ್ಷನಾಗಿರುವುದು ಅವನು ಅನಂತಪಾತ್ ಎಂಬುದಕ್ಕೆ ಉಪಲಕ್ಷಕವಾ-ಗಿದೆ. 'ಸ ಭೂಮಿಮ್' ಎಂಬ ಮುಂದಿನ ವಾಕ್ಯದಲ್ಲಿ ಹೇಳಿರುವ ವಿಷಯಕ್ಕೂ ಸಮರ್ಥನೆಯನ್ನು 'ಅನಂತಗುಣಃ ಅನಂತರೂಪಃ ಅನಂತಾಕಾರಃ' ಎಂಬುದಾಗಿ

ಭಾ – ಚತುರ್ವೇದಶಿಖಾಯಾಂ ಚ-

**'ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಸ್ಸಹಸ್ರಪಾತ್ ಇತ್ಯೇಷ ಹ್ಯೇವ ಅಚಿಂತ್ಯಃ ಪರಃ ಪರಮೋ ಹರಿರಾದಿರನಾದಿರನಂತೋ ಅನಂತಶೀರ್ಷೋ ಅನಂತಾಕ್ಷೋ ಅನಂತಬಾಹುರನಂತಗುಣೋಽನಂತರೂಪಃ' ಇತಿ।**

ಚತುರ್ವೇದಶಿಖೆಯಲ್ಲೂ ಕೂಡ 'ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಸ್ಸಹಸ್ರಪಾತ್ ಇತ್ಯೇಷ ಹ್ಯೇವ ಅಚಿಂತ್ಯಃ ಪರಃ ಪರಮೋ ಹರಿರಾದಿರನಾದಿರನಂತೋ ಅನಂತಶೀರ್ಷೋ ಅನಂತಾಕ್ಷೋ ಅನಂತಬಾಹುರನಂತಗುಣೋಽನಂತರೂಪಃ' ಎಂಬುದಾಗಿ ಪುರುಷಸೂಕ್ತಪ್ರತಿಪಾದ್ಯನು ವಿಷ್ಣುವೇ ಆಗಿರುವನು ಎಂದು ಹೇಳಲಾಗಿದೆ.

(ಭಾ.ದೀ.) ಪ್ರತಿಜ್ಞಾತಾಂ ಶ್ರುತಿಂ ದರ್ಶಯಿತುಂ ಪ್ರಥಮಮೇವ ತತ್ಸ್ಥಾನಮಾಹ – **ಚತುರ್ವೇದಶಿಖಾಯಾಂ ಚೇತಿ ।।** ಅತ್ರ ಚತುರ್ವೇದಶಿಖಾಶ್ರುತಿಃ 'ಸಹಸ್ರ' ಇತ್ಯಾರಭ್ಯ 'ಸಹಸ್ರಪಾತ್' ಇತ್ಯಂತೇನ ಪುರುಷಸೂಕ್ತಮುಪನ್ಯಸ್ಯ, 'ಏಷ ಹ್ಯೇವ' ಇತ್ಯನೇನ 'ಸಹಸ್ರಶೀರ್ಷಾ ಪುರುಷಃ' ಇತ್ಯುಕ್ತೋ ಹರಿರೇವ ನಾನ್ಯ ಇತ್ಯೇತತ್ ಸೂಕ್ತಂ ವಿಷ್ಣುಪರತಯಾ ವ್ಯಾಖ್ಯಾತಿ ಇತಿ ಪ್ರಕೃತಸಂಗತಿಃ। ಸುಪ ಆಕಾರೋ ವೈದಿಕಃ।

ಏಷಃ ಕಃ? ಇತ್ಯತೋ ಯಃ 'ಪರೋ' ವಿಲಕ್ಷಣಃ ಅತ ಏವ ಅಚಿಂತ್ಯಃ – ಮನಸಾ ಪರಮಃ – ಉತ್ತಮಃ, ಆದಿಃ – ಕಾರಣಭೂತಃ, ಅನಾದಿಃ – ಉತ್ಪತ್ತಿಶೂನ್ಯಃ, ಅನಂತಃ – ನಾಶಶೂನ್ಯಃ ಸ್ವರೂಪತೋ ಅಪರಿಚ್ಛಿನ್ನೋ ವಾ ಹರಿಃ ಸ ಇತ್ಯಾಹ। ಕುತೋಽಯಂ ಪುರುಷಃ ಸಹಸ್ರಶೀರ್ಷಾ? ಹಿ ಯಸ್ಮಾತ್ ಅನಂತಶೀರ್ಷಃ । ಕುತಃ ಸಹಸ್ರಾಕ್ಷಃ? ಯಸ್ಮಾತ್ ಅನಂತಾಕ್ಷಃ । ಕುತೋಽಯಂ ಸಹಸ್ರಪಾತ್? ಯಸ್ಮಾದನಂತಬಾಹುಃ । 'ಅನಂತಪಾತ್' ಇತ್ಯಸ್ಯಾಪ್ಯುಪಲಕ್ಷಕಮೇತತ್ । ಏವಂ ಪೂರ್ವವಾಕ್ಯೇಽಪಿ । 'ಸ ಭೂಮಿಮ್' ಇತ್ಯುತ್ತರವಾಕ್ಯೇಽಪಿ ಉಪಪಾದಕಮಾಹ – **ಅನಂತಗುಣೋಽನಂತರೂಪೋಽನಂತಾಕಾರ ಇತಿ ।।** 'ಚತುರ್ವೇದಶಿಖಾಯಾಮ್' ಇತ್ಯನ್ವಯಃ।

'ಪುರುಷಸೂಕ್ತಪ್ರತಿಪಾದ್ಯನು ವಿಷ್ಣುವೇ ಎಂಬುದಾಗಿ ಶ್ರುತಿಯಲ್ಲಿ ಹೇಳಿದೆ' ಎಂದು ಪ್ರತಿಜ್ಞೆ ಮಾಡಲಾದ ಶ್ರುತಿಯನ್ನು ತೋರಿಸಲು ಮೊದಲೇ ಆ ಶ್ರುತಿಯಿರುವ ಸ್ಥಾನವನ್ನು ಭಾಷ್ಯಕಾರರು 'ಚತುರ್ವೇದಶಿಖಾಯಾಂ ಚ' ಎಂದು ಹೇಳುತ್ತಿದ್ದಾರೆ. ಇಲ್ಲಿ ಚತುರ್ವೇದಶಿಖಾಶ್ರುತಿಯು 'ಸಹಸ್ರ' ಎಂದಾರಂಭಿಸಿ 'ಸಹಸ್ರಪಾತ್' ಎಂದು ಕೊನೆಗೊಳ್ಳುವ ಭಾಗದಿಂದ ಪುರುಷಸೂಕ್ತವನ್ನು ಉದಾಹರಿಸಿ, 'ಏಷ ಹ್ಯೇವ' ಎಂಬ ವಾಕ್ಯದಿಂದ ಸಹಸ್ರಶೀರ್ಷಾ ಪುರುಷಃ ಎಂಬುದಾಗಿ ಹೇಳಲ್ಪಟ್ಟಿರುವವನು ಹರಿಯೇ ಅನ್ಯರಲ್ಲ ಎಂದು ಈ ಸೂಕ್ತವನ್ನು ವಿಷ್ಣುಪರವಾದುದೆಂದು ವ್ಯಾಖ್ಯಾನಮಾಡುವ ಕಾರಣ ಪ್ರಕೃತವಿಷಯಕ್ಕೆ ಸಂಗತಿಯನ್ನು ಪಡೆದಿದೆ. ಸಹಸ್ರಶೀರ್ಷಾ ಎಂಬಲ್ಲಿ ಸುಪ್ ಪ್ರತ್ಯಯದ ಸ್ಥಾನದಲ್ಲಿ ಆಕಾರ ಬಂದಿರುವುದು ವೈದಿಕಪ್ರಯೋಗವಾಗಿದೆ.

ಏಷಃ ಹಿ - ಇವನೇ ಎಂದು ಹೇಳಲ್ಪಟ್ಟಿರುವವನು ಯಾರು? ಎಂಬ ಪ್ರಶ್ನೆಗೆ ಉತ್ತರವಾಗಿ ಯಾರು - ಪರಃ - ವಿಲಕ್ಷಣನಾಗಿರುವನೋ, ಆದ್ದರಿಂದಲೇ ಅಚಿಂತ್ಯಃ - ಮನಸ್ಸಿನಿಂದ ಚಿಂತಿಸಲು ಅಶಕ್ಯನೋ, ಪರಮಃ - ಉತ್ತಮನಾಗಿರುವನೋ, ಆದಿಃ - ಸರ್ವಕಾರಣನಾಗಿರುವನೋ, ಅನಾದಿಃ - ಉತ್ಪತ್ತಿಶೂನ್ಯನೋ, ಅನಂತಃ - ನಾಶ-ಶೂನ್ಯನೋ, ಅಥವಾ ಸ್ವರೂಪತಃ ಯಾವುದೇ ಪರಿಚ್ಛೇದ ಅಂದರೆ ಮಿತಿ ಇಲ್ಲದಿರು-ವವನೋ ಅಂತಹ ಹರಿಯೇ ಆಗಿರುವನು ಎಂದು ಹೇಳಿದೆ. ಈ ಪುರುಷನು ಸಹಸ್ರ-ಶಿರಸ್ಸುಗಳನ್ನು ಹೊಂದಿರುವವನೆನ್ನುವುದು ಹೇಗೆ? ಹಿ - ಯಾವ ಕಾರಣದಿಂದ ಅವನು ಅನಂತಶೀರ್ಷನಾಗಿರುವನೋ ಆದ್ದರಿಂದ. ಅವನು ಸಹಸ್ರಾಕ್ಷನಾಗಿರುವುದು ಹೇಗೆ? ಯಾವ ಕಾರಣದಿಂದ ಅವನು ಅನಂತಾಕ್ಷನೋ ಆದ್ದರಿಂದ. ಅವನು ಸಹಸ್ರ ಪಾದ-ವುಳ್ಳವನು ಹೇಗೆ ಎಂಬ ಪ್ರಶ್ನೆಗೆ ಯಾವ ಕಾರಣದಿಂದ ಅವನು ಅನಂತ ಬಾಹುವುಳ್ಳ-ವನೋ ಆದ್ದರಿಂದ ಇಲ್ಲಿ ಅನಂತಬಾಹು ಎನ್ನುವುದು ಅವನು ಅನಂತಪಾತ್ (ಪಾದ-ವುಳ್ಳವನೂ) ಆಗಿರುವನು ಎಂಬುದಕ್ಕೆ ಉಪಲಕ್ಷಕವಾಗಿದೆ. ಹೀಗೆಯೇ ಹಿಂದಿನ ವಾಕ್ಯ-ದಲ್ಲೂ ಅನಂತಾಕ್ಷನಾಗಿರುವುದು ಅವನು ಅನಂತಪಾತ್ ಎಂಬುದಕ್ಕೆ ಉಪಲಕ್ಷಕವಾ-ಗಿದೆ. 'ಸ ಭೂಮಿಮ್' ಎಂಬ ಮುಂದಿನ ವಾಕ್ಯದಲ್ಲಿ ಹೇಳಿರುವ ವಿಷಯಕ್ಕೂ ಸಮರ್ಥನೆಯನ್ನು 'ಅನಂತಗುಣಃ ಅನಂತರೂಪಃ ಅನಂತಾಕಾರಃ' ಎಂಬುದಾಗಿ

ಹೇಳಲಾಗಿದೆ. 'ಇತಿ' ಎಂಬ ಪದಕ್ಕೆ 'ಚತುರ್ವೇದಶಿಖಾಯಾಮ್' ಎಂಬ ಪದ-ದೊಂದಿಗೆ ಅನ್ವಯ.

ಭಾ– ಬೃಹತ್ಸಂಹಿತಾಯಾಂ ಚ –

'ಯಥಾ ಹಿ ಪೌರುಷಂ ಸೂಕ್ತಂ ವಿಷ್ಣೋರೇವಾಭಿಧಾಯಕಮ್ ।
ನ ತಥಾ ಸರ್ವವೇದಾಶ್ಚ ವೇದಾಂಗಾನಿ ಚ ನಾರದ' ಇತ್ಯಾದಿ ॥

ಬೃಹತ್ಸಂಹಿತೆಯಲ್ಲೂ ಕೂಡ – ಹೇಗೆ ಪುರುಷಸೂಕ್ತವು ವಿಷ್ಣುವನ್ನೇ ಹೇಳುವುದೋ ಹಾಗೆ ಹೇ ನಾರದ! ಎಲ್ಲ ವೇದಗಳೂ, ವೇದಾಂಗ -ಗಳೂ ವಿಷ್ಣುವನ್ನೇ ಹೇಳಲಾರವು - ಇತ್ಯಾದಿಯಾಗಿ ಹೇಳಿದೆ.

(ಭಾ.ದೀ.) ಬ್ರಾಹ್ಮವಾಕ್ಯಸ್ಯ, ಪುರುಷಸೂಕ್ತಸ್ಯ ಲಕ್ಷಣಯಾ ವಿಷ್ಣುಪರತ್ವೇ ಅನ್ಯ-ಪರತ್ವೇಽಪಿ ವಾ ಸಾವಕಾಶತ್ವಾನ್ನ ತತ್ಪ್ರತಿಜ್ಞಾತಾರ್ಥನಿಶ್ಚಾಯಕಮ್, ಇತ್ಯತೋ ವ್ಯಾಖ್ಯಾನವ್ಯಾಖ್ಯೇಯಭಾವಾಖ್ಯದ್ವಾರಮಂತರೇಣ ಪುರುಷಸೂಕ್ತಂ ಮುಖ್ಯತೋ ವಿಷ್ಣೋರೇವಾಭಿಧಾಯಕಮ್ ಇತಿ ಸಾಕ್ಷಾತ್ ಪ್ರತಿಜ್ಞಾತಾರ್ಥಸಾಧಕಂ ಸ್ಮೃತಿವಾಕ್ಯಂ ತತ್ಸ್ಥಾನನಿರ್ದೇಶಪೂರ್ವಕಂ ಪಠತಿ – **ಬೃಹತ್ಸಂಹಿತಾಯಾಂ ಚೇತಿ** ॥ ಚಕಾರಃ ಪೂರ್ವಸಮುಚ್ಚಯಾರ್ಥಃ । 'ವೇದಾಂಗಾನಿ' ಶಿಕ್ಷಾದೀನಿ । ಬ್ರಹ್ಮವಾಕ್ಯಮೇತತ್ । ಇತ್ಯಾದಿ ಬೃಹತ್ಸಂಹಿತಾಯಾಮ್ ಉಕ್ತಮ್ - ಇತ್ಯನ್ವಯಃ । ಆದಿಪದೇನ 'ಸರ್ವತಃ ಪೌರುಷೇ ಸೂಕ್ತೇ ಗುಣಾ ವಿಷ್ಣೋರುದೀರಿತಾಃ' ಇತಿ ಬ್ರಹ್ಮತರ್ಕಾದಿಗ್ರಹಣಮ್ । 'ಸರ್ವತಃ' ಸರ್ವೇ ಗುಣಾಃ । 'ಸಾಮಾನ್ಯೇನ' ಇತಿ ಶೇಷಃ । ಸರ್ವಸ್ಮಿನ್, ಸರ್ವಸ್ಮಾತ್ ವೇದತದಂಗೇಭ್ಯೋಽತಿಶಯೇನೇತಿ ವಾ ।

ಪುರುಷಸೂಕ್ತವು ಲಕ್ಷಣಾವೃತ್ತಿಯಿಂದ ವಿಷ್ಣುಪರವಾಗಿದ್ದರೂ ಅಥವಾ ಅನ್ಯಪರ-ವಾಗಿದ್ದರೂ ಬ್ರಾಹ್ಮಪುರಾಣದ ವಾಕ್ಯವು ಸಾವಕಾಶವಾಗುವ ಕಾರಣ ಪ್ರತಿಜ್ಞೆ ಮಾಡಿದ ವಿಷಯವನ್ನು ನಿಶ್ಚಯಿಸಲು ಸಹಾಯಕವಾಗಲಾರದು ಎಂಬ ಕಾರಣದಿಂದ ವ್ಯಾಖ್ಯಾನ-ವ್ಯಾಖ್ಯೇಯಭಾವವೆಂಬ ದ್ವಾರವನ್ನು ಬಿಟ್ಟು 'ಪುರುಷಸೂಕ್ತವು ಮುಖ್ಯವಾಗಿ ವಿಷ್ಣುವನ್ನೇ

ಹೇಳುವುದು' ಎಂದು ಸಾಕ್ಷಾತ್ತಾಗಿ ಪ್ರತಿಜ್ಞೆ ಮಾಡಿದ ವಿಷಯವನ್ನು ಸಾಧಿಸುವ ಸ್ಮೃತಿ-ವಾಕ್ಯವನ್ನು ಭಾಷ್ಯಕಾರರು ಆ ವಾಕ್ಯವಿರುವ ಸ್ಥಳವನ್ನು 'ಬೃಹತ್ಸಂಹಿತಾಯಾಂ ಚ' ಎಂದು ನಿರ್ದೇಶಮಾಡಿ ಪಠಿಸುತ್ತಿದ್ದಾರೆ. ಬೃಹತ್ಸಂಹಿತಾಯಾಂ ಚ ಎಂಬಲ್ಲಿ ಚಕಾರವು ಹಿಂದಿನ ಪ್ರಮಾಣಗಳ ಸಮುಚ್ಚಯವನ್ನು ಹೇಳುವುದು. ವೇದಾಂಗಗಳು ಎಂದರೆ ಶಿಕ್ಷಾ ಮೊದಲಾದವುಗಳು. ಈ ವಾಕ್ಯವು ಬ್ರಹ್ಮದೇವರು ಹೇಳಿದ ವಾಕ್ಯವಾಗಿದೆ. ಇತ್ಯಾದಿ ಬೃಹತ್ಸಂಹಿತಾಯಾಮ್ ಉಕ್ತಮ್ – ಎಂದು ಪದಗಳ ಅನ್ವಯ. 'ಆದಿ'ಪದದಿಂದ 'ಸರ್ವತಃ ಪೌರುಷೇ ಸೂಕ್ತೇ ಗುಣಾ ವಿಷ್ಣೋರುದೀರಿತಾಃ' ಎಂಬ ಬ್ರಹ್ಮತರ್ಕ-ಮೊದಲಾದ ವಾಕ್ಯಗಳನ್ನು ಗ್ರಹಿಸಬೇಕು. ಬ್ರಹ್ಮತರ್ಕವಾಕ್ಯದಲ್ಲಿ ಸರ್ವತಃ ಎಂದರೆ ಸರ್ವಗುಣಗಳು ಎಂದು ಅರ್ಥ. ಸಾಮಾನ್ಯೇನ ಎಂಬ ಪದವು ಇಲ್ಲಿ ಶೇಷವಾಗಿದೆ. ಸಾಮಾನ್ಯಾಕಾರದಿಂದ ಎಲ್ಲ ಗುಣಗಳೂ ಹೇಳಲ್ಪಟ್ಟಿವೆ ಎಂದು ಅರ್ಥ. ಅಥವಾ ಸರ್ವತಃ ಎಂದರೆ ಸರ್ವಸ್ಮಿನ್ ಅಂದರೆ ಸಮಗ್ರಪುರುಷಸೂಕ್ತದಲ್ಲಿ ಎಂದರ್ಥ. ಅಥವಾ ಸರ್ವತಃ – ಸರ್ವಸ್ಮಾತ್ ಅಂದರೆ ವೇದ ಮತ್ತು ಆದರ ಅಂಗಗಳಿಗಿಂತ ಅತಿಶಯವಾಗಿ ಪುರುಷಸೂಕ್ತದಲ್ಲಿ ವಿಷ್ಣುವಿನ ಗುಣಗಳು ಹೇಳಲ್ಪಟ್ಟಿವೆ ಎಂದು ಅರ್ಥ.

**ಭಾ– 'ಯಸ್ಮಾದ್ಯಜ್ಜಾಯತೇ ಚಾಂಗಾಲ್ಲೋಕವೇದಾದಿಕಂ ಹರೇಃ।**
**ತನ್ನಾಮವಾಚ್ಯಮಂಗಂ ತದ್ಯಥಾ ಬ್ರಹ್ಮಾದಿಕಂ ಮುಖಮ್' ॥**
**- ಇತಿ ನಾರದೀಯವಚನಾತ್ ನ ಅಭೇದೋಕ್ತಿವಿರೋಧಃ ॥೨೬॥**

ಶ್ರೀಹರಿಯ ಯಾವ ಅಂಗದಿಂದ ಯಾವ ಲೋಕ ವೇದ ಮೊದಲಾದ -ವುಗಳು ಹುಟ್ಟಿವೆಯೋ ಅವುಗಳ ನಾಮದಿಂದಲೇ ಶ್ರೀಹರಿಯ ಆ ಅಂಗವು ವಾಚ್ಯವಾಗುವುದು. 'ಬ್ರಹ್ಮ ಮೊದಲಾದವರು ಮುಖ' ಎಂಬ ವಾಕ್ಯವು ಇಲ್ಲಿ ಉದಾಹರಣೆಯಾಗಿದೆ – ಎಂದು ನಾರದ-ಪುರಾಣ ವಚನವಿರುವುದರಿಂದ ಶ್ರೀಹರಿಯ ಅಂಗಗಳಿಗೂ ಲೋಕಾ-ದಿಗಳಿಗೂ ಅಭೇದವನ್ನು ಹೇಳಿರುವುದರ ವಿರೋಧವಿಲ್ಲ.

(ಭಾ.ದೀ.) ನನು ಪುರುಷಸೂಕ್ತೇ ದ್ಯುಭ್ವಾದಿಜನಕಶೀರ್ಷಾದಿಮತ್ತ್ವಂ ಪುರುಷಸ್ಯ

ಉಚ್ಯತೇ । ವೈಶ್ವಾನರವಿದ್ಯಾಯಾಂ ತು ವೈಶ್ವಾನರಸ್ಯ ತದಭೇದ ಉಚ್ಯತೇ । ತದುಭಯೋಃ ವಿರುದ್ಧಾರ್ಥತ್ವಾತ್ ನೇಯಂ ಸಮಾಖ್ಯಾ ಇತ್ಯತ ಆಹ – **ಯಸ್ಮಾದಿತಿ ॥** ಲೋಕಃ - ಸ್ವರ್ಗಾದಿಃ, ವೇದಃ = ಋಗಾದಿಃ। ಯದ್ಯಪಿ ನಾತ್ರ ಛಾಂದೋಗ್ಯೇ ವೇದಾ-ಭೇದ ಉಚ್ಯತೇ ಇತಿ ನ ತದ್ಗತಿರ್ವಕ್ತವ್ಯಾ। ತಥಾಪಿ ಶ್ರುತ್ಯಂತರಗತಾಭೇದವಾಕ್ಯಾರ್ಥ-ನಿರ್ಣಯಾಯ ಅಯಮಂಶಃ ಪ್ರವೃತ್ತಃ।

ಯದ್ವಾ – ವೇದಶಬ್ದೇನ 'ಉರ ಏವ ವೇದಿಃ' ಇತ್ಯುಕ್ತ್ವಾ ವೇದಿರ್ಗೃಹ್ಯತೇ । 'ತೃತೀಯೋಽತಿಶಯೇ' ಇತ್ಯುಕ್ತತ್ವಾತ್। 'ವೇದ್ಯಾದಿಕಮ್' ಇತಿ ಪಾಠಃ ಸ್ವರಸಃ। ತಥಾ ಚ ಯಸ್ಮಾದ್ ಯಸ್ಮಾದ್ ಹರೇರಂಗಾತ್ ಯದ್ಯತ್ ಲೋಕವೇದಾದಿಕಂ ಜಾಯತೇ, ಯದಾಶ್ರಿತ್ಯ ತಿಷ್ಠತಿ, ಯತ್ರ ಲೀಯತೇ ಚ ತಜ್ಜನಕಮಂಗಂ ತಸ್ಮಾತ್ 'ತನ್ನಾಮವಾಚ್ಯಂ' ತಸ್ಯ ಲೋಕಾದೇರ್ಯನ್ನಾಮ ವಾಚಕಶಬ್ದಃ ತೇನ ಮುಖ್ಯವಾಚ್ಯಂ ಭವತಿ। ಅತ ಏವ ತದಭಿನ್ನತ್ವೇನ ಪ್ರತೀಯತೇ ಚ। ನ ತಾವತಾ ತಯೋರಭೇದೋ ಮಂತವ್ಯ ಇತ್ಯರ್ಥಃ। ಅತ್ರ ದೃಷ್ಟಾಂತಮಾಹ – **ಯಥೇತಿ ॥** ಮುಖಮಿತ್ಯುಪಲಕ್ಷಣಮ್ । ತಥಾಚ ಭಗವನ್ಮುಖಾದಿಃ ಬ್ರಾಹ್ಮಣಾದಿಜಾತಿಜನಕತ್ವಾತ್ ಬ್ರಾಹ್ಮಣಾದಿನಾಮ್ನಾ ಉಚ್ಯತೇ 'ಬ್ರಾಹ್ಮಣೋಽಸ್ಯ ಮುಖಮಾಸೀತ್' (ತೈ.ಆ.೩-೧೨) ಇತ್ಯಾದೌ । ಅತ ಏವ ತದಭಿನ್ನತ್ವೇನ ಪ್ರತೀಯತೇ ಚ ಸಾಮಾನಾಧಿಕರಣ್ಯಾತ್ । ತದ್ವದತ್ರಾಪಿ ಇತ್ಯರ್ಥಃ। ನ ಹ್ಯತ್ರ ಪುರುಷೋತ್ತಮಮುಖಾದಿಭಿರಭೇದೋ ಬ್ರಾಹ್ಮಣಾದೀನಾಮುಚ್ಯತೇ, 'ಪದ್ಭ್ಯಾಂ ಶೂದ್ರೋ ಅಜಾಯತ' (ತೈ.ಆ.೩.೧೨) ಇತ್ಯುತ್ತರವಾಕ್ಯವಿರೋಧಾತ್ । 'ಇತಿ ವಚನಾತ್' ಇತ್ಯುಕ್ತತ್ವಾದ್ ವೈಶ್ವಾನರಾಂಗಾನಾಂ 'ಮೂರ್ಧೈವ' ಇತಿ ಲೋಕಾದ್ಯಭೇದೋಕ್ತಿನಿಮಿತ್ತೋ ವಿರೋಧೋ ನ - ಇತ್ಯರ್ಥಃ । ಅಭೇದಪ್ರತ್ಯಾ-ಯಕೋಕ್ತೇಃ ತಜ್ಜನ್ಯಜನಕಭಾವವಿವಕ್ಷಾಪೂರ್ವಕತ್ವಾತ್ ಇತಿ ಭಾವಃ । ಅನೇನ ಭಗವತೋ ಮೂರ್ಧಾ ಸುತೇಜಸ್ತ್ವಾದಿಗುಣಯೋಗಾತ್ ಸುತೇಜಃಶಬ್ದಿತಸ್ವರ್ಗ-ಜನಕತ್ವಾತ್ ಸುತೇಜಾ ಇತ್ಯುಚ್ಯತೇ।

ಏವಂ 'ಚಕ್ಷುರ್ವಿಶ್ವರೂಪಃ' ಸರ್ವಪ್ರಕಾಶತ್ವಕಗುಣಯೋಗಾದ್ ವಿಶ್ವರೂಪ-ಶಬ್ದಿತಸೂರ್ಯಜನಕತ್ವಾತ್ ತಚ್ಛಬ್ದೇನೋಚ್ಯತೇ । 'ಪ್ರಾಣಃ ಪೃಥಗ್ವರ್ತ್ಮಾ' (ಛಾಂ. ೫-೧೮-೨) ವಾಯುಜನಕತ್ವಾತ್ ತಚ್ಛಬ್ದಿತ ಇತಿ ಶ್ರುತ್ಯರ್ಥಃ ಸೂಚಿತಃ । ಆತ್ಮಶಬ್ದಃ ಸ್ವರೂಪಾರ್ಥೋ ಮಧ್ಯದೇಹಾರ್ಥೋ ವಾ।

**ಛಾಂದೋಗ್ಯಭಾಷ್ಯೇ** ತು – ಮೂರ್ಧಾ ವಿಷ್ಣೋಃ ಶಿರಃ ಸ್ವರ್ಗಾಧಾರಂ ದ್ಯು-ನಾಮಕಮ್, ಅತಿತೇಜಸಾ ಸುತೇಜೋನಾಮಕಂ ಚ । 'ವಿಶ್ವಾನಿ ರೂಪಾಣಿ ವಿಷಯತ್ವೇನ ಯಸ್ಯ' ಇತಿ ವಿಗ್ರಹಾಶ್ರಯೇಣ ಸರ್ವರೂಪಾತಿದರ್ಶನಾತ್ ಚಕ್ಷುಃ ವಿಶ್ವರೂಪಾಖ್ಯಮ್ । ಏವಂ ವಿಷ್ಣೋಃ ಪ್ರಾಣೋ ನೃಸಿಂಹಾಖ್ಯೋ ವಾಯ್ವಾದಿ-ಪ್ರಾಣಶಕ್ಯಂ ಯನ್ನ ಭವತಿ ತಸ್ಯ ಕರ್ತಾ ತೇನ ಪೃಥಗ್ವರ್ತ್ಮಾತ್ಮಾ ಪೃಥಗ್ವಿಲಕ್ಷಣೋ ಮಾರ್ಗೋ ಯಸ್ಯ ಸ ಚಾಸಾವಾತ್ಮಾ ಚೇತಿ, ಇತಿ ನಿಮಿತ್ತಾಂತರೇಣ ಶ್ರುತಿ-ರ್ವ್ಯಾಖ್ಯಾತಾ।

ಏವಂ ಬಹುಲರಯಿಪೃಥಿವೀಶಬ್ದಿತಾಕಾಶವಾರಿವಸುಂಧರಾದೇವತಾಜನಕತ್ವಾತ್ ಸಂದೋಹ-ವಸ್ತಿ-ಪಾದಪದೋಕ್ತಾನಿ ಮಧ್ಯದೇಹ-ಕಟಿ-ಪ್ರಪದರೂಪಾಣಿ ಭಗ-ವತೋ ವೈಶ್ವಾನರಸ್ಯ ಅಂಗಾನಿ ತತ್ತಚ್ಛಬ್ದವಾಚ್ಯಾನಿ ಇತ್ಯಪಿ ಜ್ಞಾತವ್ಯಮ್।

ಅನೇನ ಶಬ್ದಾದಿಭ್ಯಃ ಅಗ್ನ್ಯಾದಿಶ್ರುತೇಃ ಗಾರ್ಹಪತ್ಯಾದ್ಯಂಗವತ್ತ್ವಾದಿಲಿಂಗಾಚ್ಚ ಪಾಚಕತ್ವೇನಾಂತಃಪ್ರತಿಷ್ಠಾನಾಚ್ಚ ವೈಶ್ವಾನರೋ ವಿಷ್ಣುರೇವ ಇತಿ ನಿಶ್ಚಯೋ ನ ಯುಜ್ಯತ ಇತಿ ಚೇತ್ - ನ, ಅನ್ಯಶ್ರುತಿಲಿಂಗಾದೀನಾಂ ವಿಷ್ಣೌ ಸಾವಕಾಶತ್ವೇನ ಆತ್ಮಶಬ್ದಾದೇರೇವ ನಿಶ್ಚಯೋಪಪತ್ತೇಃ। ಕುತಃ ಸಾವಕಾಶತ್ವಮ್? 'ತಥಾ ದೃಷ್ಟ್ಯುಪದೇಶಾತ್' ಅಗ್ನ್ಯಾದಿ-ನಾಮಲಿಂಗಕರ್ಮವತ್ತ್ವೇನ ವಿಷ್ಣೋರುಪಾಸನೋಪದೇಶಾತ್ । ನ ಚಾತ್ಮಶಬ್ದಾ-ದೇರನ್ಯತ್ರಾಸ್ತಿ ಅವಕಾಶಃ, ಅನ್ಯತ್ರ ಆತ್ಮತ್ವಾದೇರಸಂಭವಾತ್ । ನ ಕೇವಲಮಾತ್ಮಶಬ್ದ-ಸ್ಮೃತಿಸಮಾಖ್ಯಾನಾದ್ ವೈಶ್ವಾನರೋ ವಿಷ್ಣುರೇವ ಇತಿ ನಿಶ್ಚಯಃ, ಅಪಿ ತು ಆರಂಭಾಚ್ಚ ಪ್ರಕರಣಬಲಾಚ್ಚ।

ನಚ ವೈಶ್ವಾನರವಿದ್ಯಯಾ ವಿಷ್ಣುಪ್ರಕರಣತ್ವಸಿದ್ಧಿಃ, 'ಕೋ ನ ಆತ್ಮಾ ಕಿಂ ಬ್ರಹ್ಮ' ಇತಿ ವಿಚಾರಪೂರ್ವಕಮ್ ಅಸ್ಯ ಆರಭ್ಯ ಅಧೀತತ್ವಾತ್ । ನ ಚ ಆತ್ಮತ್ವಬ್ರಹ್ಮತ್ವೋಪ-ಕ್ರಮೇಽಪಿ ಕುತಃ ಅಸ್ಯ ವಿಷ್ಣುಪರತಾ? ಆತ್ಮತ್ವಬ್ರಹ್ಮತ್ವಾದೀನಾಮ್ ಅಗ್ನ್ಯಾದೌ ಅಸಂಭವಾತ್ । ನ ಕೇವಲಂ ಸ್ಮೃತಿಸಮಾಖ್ಯಾಪ್ರಕರಣಬಲಾದ್ ವೈಶ್ವಾನರೋ ವಿಷ್ಣು-ರೇವ ಇತಿ ನಿಶ್ಚೀಯತೇ, ಕಿಂತು ಯತಃ ಪುರುಷಸೂಕ್ತೇ ಪುರುಷೋ ಯದ್ವಿಧೋ-ಽಭಿಹಿತಃ ತದ್ವಿಧಮೇವ ಏನಂ ವಿಷ್ಣುಂ 'ಮೂರ್ಧೈವ' ಇತ್ಯಾದಿನಾ ಅಧೀಯತೇ ಛಂದೋಗಾಃ ಅತಃ ಶ್ರುತಿಸಮಾಖ್ಯಾನಾದಪಿ । ಚಶಬ್ದಃ ಪುರುಷಸೂಕ್ತಸ್ಯ ವಿಷ್ಣುಪರತ್ವಂ ಬಹುಪ್ರಮಾಣಸಿದ್ಧಮಿತಿ ದ್ಯೋತಯತೀತಿ ಸೂತ್ರವೃತ್ತಿರ್ದರ್ಶಿತಾ ಭವತಿ ॥

ಪುರುಷಸೂಕ್ತದಲ್ಲಿ 'ದ್ಯು , ಭೂ' ಮೊದಲಾದ ಲೋಕಗಳಿಗೆ ಜನಕವಾದ ಶಿರಸ್ಸು ಮೊದಲಾದವುಗಳು ಪುರುಷನಾಮಕನಾದ ವಿಷ್ಣುವಿಗೆ ಇರುವುವವೆಂದು ಹೇಳಲಾಗಿದೆ. ವೈಶ್ವಾನರವಿದ್ಯೆಯಲ್ಲಾದರೋ ವೈಶ್ವಾನರನಿಗೆ ದ್ಯು ಮೊದಲಾದ ಲೋಕಗಳ ಅಭೇದ-ವನ್ನು ಹೇಳಿದೆ. ಇವೆರಡೂ ಪರಸ್ಪರವಿರುದ್ಧವಾದ ವಿಷಯವನ್ನು ಹೇಳುವುದರಿಂದ ಪುರುಷಸೂಕ್ತವು ಸಮಾಖ್ಯೆಯಾಗಲಾರದು ಎಂಬ ಶಂಕೆಗೆ ಉತ್ತರವಾಗಿ ಭಾಷ್ಯಕಾರರು 'ಯಸ್ಮಾತ್' ಎಂದು ಹೇಳುತ್ತಿದ್ದಾರೆ. ನಾರದೀಯವಚನದಲ್ಲಿ ಲೋಕವೆಂದರೆ ಸ್ವರ್ಗಾದಿಲೋಕಗಳು. ವೇದ ಎಂದರೆ ಋಗಾದಿ ವೇದಗಳು. ಯದ್ಯಪಿ, ಪ್ರಕೃತ ಛಾಂದೋಗ್ಯವಾಕ್ಯದಲ್ಲಿ ವೈಶ್ವಾನರನಿಗೆ ವೇದಗಳ ಅಭೇದವನ್ನು ಹೇಳದಿರುವುದರಿಂದ ಆ ವಿಷಯದಲ್ಲಿ ಸಮಾಧಾನವನ್ನು ಹೇಳಬೇಕಾಗಿಲ್ಲ. ಆದರೂ ಬೇರೆ ಶ್ರುತಿಗಳಲ್ಲಿ ಇರುವ ವೇದಗಳ ಅಭೇದವನ್ನು ಹೇಳುವ ವಾಕ್ಯಗಳ ಅರ್ಥನಿರ್ಣಯಕ್ಕೋಸ್ಕರವಾಗಿ ಈ ಅಂಶವೂ ನಾರದೀಯವಾಕ್ಯದಲ್ಲಿ ಪ್ರವೃತ್ತವಾಗಿದೆ.

ಅಥವಾ ವೇದಶಬ್ದದಿಂದ 'ಉರ ಏವ ವೇದಿಃ' ಎಂಬ ಶ್ರುತಿಯಲ್ಲಿ ಹೇಳಿರುವ ವೇದಿಯನ್ನು ಗ್ರಹಿಸಬೇಕು. 'ತೃತೀಯೋಽತಿಶಯೇ' ಎಂಬ ವಚನದಂತೆ ವೇದಿ ಎಂಬಲ್ಲಿರುವ ವರ್ಣಮಾಲೆಯ ತೃತೀಯವರ್ಣವಾದ ಇಕಾರವು ವೇದಗಳ ಆತಿಶಯ-ವನ್ನು ಹೇಳುವುದು. ನಾರದೀಯವಾಕ್ಯದಲ್ಲಿ ವೇದಾದಿಕಂ ಎಂಬ ಪಾಠದ ಬದಲು 'ವೇದ್ಯಾದಿಕಮ್' ಎಂಬ ಪಾಠವೇ ಸ್ವರಸವಾಗಿದೆ. ತಥಾಚ – ಯಾವ ಯಾವ

ಶ್ರೀಹರಿಯ ಅಂಗದಿಂದ ಯಾವ ಯಾವ ಲೋಕ, ವೇದ ಮೊದಲಾದವುಗಳು ಜಾಯತೇ - ಹುಟ್ಟಿವೆಯೋ ಮತ್ತು ಯಾವುದನ್ನು ಆಶ್ರಯಿಸಿಕೊಂಡು ಇರುತ್ತವೋ ಮತ್ತು ಎಲ್ಲಿ ಲಯವನ್ನು ಪಡೆಯುತ್ತವೋ ಅಂತಹ ಆ ಲೋಕಾದಿಗಳಿಗೆ ಜನಕವಾದ ಅಂಗವು ಹಾಗೆ ಜನಕವಾಗಿರುವ ಕಾರಣದಿಂದಲೇ, 'ತನ್ನಾಮವಾಚ್ಯಮ್' - ಆ ಲೋಕಾದಿಗಳಿಗೆ ಯಾವ ನಾಮ ಅಂದರೆ ವಾಚಕಶಬ್ದವಿದೆಯೋ ಅದರಿಂದ ಮುಖ್ಯ-ವಾಚ್ಯವಾಗುವುದು. ಆದ್ದರಿಂದಲೇ ಅದರಿಂದ ಅಭಿನ್ನವೆಂದು ತೋರುವುದು. ಅಷ್ಟು ಮಾತ್ರದಿಂದ ಅವುಗಳಿಗೆ ಅಭೇದವಿರುವುದೆಂದು ತಿಳಿಯತಕ್ಕದ್ದಲ್ಲ ಎಂದು ಅರ್ಥ. ಈ ವಿಷಯದಲ್ಲಿ 'ಯಥಾ' ಎಂಬುದಾಗಿ ದೃಷ್ಟಾಂತವನ್ನು ಹೇಳಲಾಗಿದೆ. ಇಲ್ಲಿ ಮುಖಮ್ ಎಂಬ ಪದವು ಉಪಲಕ್ಷಣವಾಗಿದೆ. ತಥಾಚ – ಭಗವಂತನ ಮುಖ ಮೊದಲಾದ-ವುಗಳು ಬ್ರಾಹ್ಮಣ ಮೊದಲಾದ ಜಾತಿಗೆ ಜನಕವಾದ ಕಾರಣ ಬ್ರಾಹ್ಮಣೋऽಸ್ಯ ಮುಖಮಾಸೀತ್ ಎಂಬುದಾಗಿ ಬ್ರಾಹ್ಮಣ ಮೊದಲಾದ ಶಬ್ದಗಳಿಂದಲೇ ವಾಚ್ಯ-ವಾಗಿವೆ. ಆದ್ದರಿಂದಲೇ ಸಮಾನವಿಭಕ್ತಿಯುಳ್ಳ ಪದಗಳಿಂದಾಗಿ ಅವೆರಡಕ್ಕೂ ಅಭೇದ-ವಿರುವುದೆಂದು ತೋರುವುದು. ಅದರಂತೆ ಪ್ರಕೃತ ವೈಶ್ವಾನರವಿದ್ಯೆಯಲ್ಲೂ ತಿಳಿಯ-ಬೇಕು ಎಂದು ಅರ್ಥ. ಪುರುಷಸೂಕ್ತದಲ್ಲಂತೂ ಪುರುಷೋತ್ತಮನ ಮುಖ ಮೊದಲಾದವುಗಳಿಂದ ಬ್ರಾಹ್ಮಣಾದಿಗಳಿಗೆ ಅಭೇದವನ್ನು ಸರ್ವಥಾ ಹೇಳಲಾಗಿಲ್ಲ. ಏಕೆಂದರೆ 'ಪದ್ಭ್ಯಾಂ ಶೂದ್ರೋ ಅಜಾಯತ' ಎಂಬ ಮುಂದಿನ ವಾಕ್ಯದಲ್ಲಿ ಶೂದ್ರಜಾತಿಗೂ ಅದಕ್ಕೆ ಜನಕವಾದ ಪಾದಗಳಿಗೂ ಭೇದವನ್ನೇ ಹೇಳಿದೆ. 'ಇತಿ ವಚನಾತ್' ಅಂದರೆ ಹೀಗೆ ಭಾಷ್ಯದಲ್ಲಿ ಹೇಳಿರುವುದರಿಂದ ವೈಶ್ವಾನರನ ಅಂಗಗಳಿಗೆ 'ಮೂರ್ಧೈವ' ಎಂಬುದಾಗಿ ಲೋಕಾದಿಗಳ ಅಭೇದವನ್ನು ಹೇಳಿರುವ ನಿಮಿತ್ತ ವಿರೋಧವಿಲ್ಲ ಎಂದು ಅರ್ಥ. ಏಕೆಂದರೆ, ಆ ಅಭೇದಜ್ಞಾನಕಾರಣವಾದ ವಾಕ್ಯಕ್ಕೆ ಆ ಲೋಕಾದಿಗಳಿಗೂ ಭಗವಂತನ ಅಂಗಗಳಿಗೂ ಜನ್ಯಜನಕಭಾವವನ್ನು ಹೇಳುವ ಅಭಿ-ಪ್ರಾಯವಿದೆ ಎಂದು ಭಾವ. ಇದರಿಂದ ಭಗವಂತನ ಶಿರಸ್ಸು ಸುತೇಜಸ್ತ್ವ ಮೊದಲಾದ ಗುಣಗಳನ್ನು ಹೊಂದಿರುವುದರಿಂದ ಸುತೇಜಸ್‌ಶಬ್ದವಾಚ್ಯವಾದ ಸ್ವರ್ಗಕ್ಕೆ ಜನಕವಾ-ದುದರಿಂದ ಸುತೇಜ ಎಂಬುದಾಗಿ ಹೇಳಲ್ಪಡುತ್ತದೆ ಎಂದು ಅರ್ಥ.

ಇದೇ ರೀತಿಯಾಗಿ 'ಚಕ್ಷುರ್ವಿಶ್ವರೂಪಃ' ಅಂದರೆ ಸರ್ವಪ್ರಕಾಶಕತ್ವವೆಂಬ ಗುಣದ ಸಂಬಂಧದಿಂದಾಗಿ ವಿಶ್ವರೂಪಶಬ್ದವಾಚ್ಯನಾದ ಸೂರ್ಯನಿಗೆ ಕಾರಣವಾದ-ದ್ದರಿಂದ ಆ ಶಬ್ದದಿಂದಲೇ ಭಗವಂತನ ಚಕ್ಷುಸ್ಸು ಹೇಳಲ್ಪಡುತ್ತದೆ. 'ಪ್ರಾಣಃ ಪೃಥಗ್-ವರ್ತ್ಮಾತ್ಮಾ' ವಾಯುಜನಕವಾದದ್ದರಿಂದ ಭಗವಂತನ ಪ್ರಾಣವು ಪೃಥಗ್ವರ್ತ್ಮ ಎಂಬ ಶಬ್ದವಾಚ್ಯವಾಗಿದೆ ಎಂದು ಶ್ರುತ್ಯರ್ಥವು ಸೂಚಿತವಾಗುವುದು. ಇಲ್ಲಿ ಆತ್ಮಶಬ್ದವು ಸ್ವರೂಪ ಅಥವಾ ಮಧ್ಯದೇಹ ಎಂಬ ಅರ್ಥವುಳ್ಳದ್ದು.

ಛಾಂದೋಗ್ಯಭಾಷ್ಯದಲ್ಲಾದರೋ 'ಮೂರ್ಧಾ ವಿಷ್ಣೋಃ ಶಿರಃ ಸ್ವರ್ಗಾಧಾರಂ ದ್ಯುನಾಮಕಮ್' ಅತಿತೇಜಸಾ ಸುತೇಜೋನಾಮಕಂ ಚ – ವಿಷ್ಣುವಿನ ಶಿರಸ್ಸು ಸ್ವರ್ಗಕ್ಕೆ ಆಧಾರವಾದದ್ದರಿಂದ ದ್ಯುಶಬ್ದವಾಚ್ಯವಾಗಿದೆ. ಅತಿತೇಜಸ್ಸೆಂಬ ನಿಮಿತ್ತದಿಂದ ಸುತೇಜ ಎಂಬ ನಾಮವುಳ್ಳದ್ದೂ ಆಗಿದೆ. ವಿಶ್ವಾನಿ ರೂಪಾಣಿ ವಿಷಯತ್ವೇನ ಯಸ್ಯ - ಎಲ್ಲ ರೂಪಗಳು ಯಾವುದಕ್ಕೆ ವಿಷಯವಾಗಿದೆಯೋ ಅದು ಎಂಬ ವಿಗ್ರಹವನ್ನು ಆಶ್ರಯಿಸಿ ಎಲ್ಲರೂಪಗಳ ದರ್ಶನ ನಿಮಿತ್ತದಿಂದ ಭಗವಂತನ ಚಕ್ಷುಸ್ಸು ವಿಶ್ವರೂಪ ಎಂಬ ಹೆಸರುಳ್ಳದ್ದು. ಹಾಗೆಯೇ ವಿಷ್ಣುವಿನ ನೃಸಿಂಹಾಖ್ಯವಾದ ಪ್ರಾಣವು ವಾಯು ಮೊದಲಾದ ಪ್ರಾಣಕ್ಕೆ ಮಾಡಲು ಯಾವುದು ಅಶಕ್ಯವೋ ಅದನ್ನು ಮಾಡಬಲ್ಲದು. ಆದ್ದರಿಂದ ಅದು ಪೃಥಗ್- ವಿಲಕ್ಷಣವಾದ, ವರ್ತ್ಮಾತ್ಮಾ - ಮಾರ್ಗವುಳ್ಳದ್ದು ಮತ್ತು ಆತ್ಮನು ಆಗಿರುವುದೆಂದು ನಿಮಿತ್ತಾಂತರವನ್ನು ಆಶ್ರಯಿಸಿ ಈ ಶ್ರುತಿಯು ವ್ಯಾಖ್ಯಾ-ನಿಸಲ್ಪಟ್ಟಿದೆ.

ಹಾಗೆಯೇ ಬಹುಲ-ರಯಿ-ಪೃಥಿವೀ ಶಬ್ದವಾಚ್ಯರಾದ ಆಕಾಶ-ವಾರಿ-ಪೃಥಿವೀ ದೇವತೆಗಳಿಗೆ ಜನಕವಾದದ್ದರಿಂದ ಸಂದೋಹ-ವಸ್ತಿ-ಪಾದ ಎಂಬ ಪದಗಳಿಂದ ಉಕ್ತವಾಗುವ ಭಗವಾನ್ ವೈಶ್ವಾನರನ ಮಧ್ಯದೇಹ, ಕಟಿ ಮತ್ತು ಹಿಮ್ಮಡಿ ಎಂಬ ಅಂಗಗಳು ಬಹುಲ ಮೊದಲಾದ ಆಯಾಯಾ ಶಬ್ದಗಳಿಂದ ವಾಚ್ಯವಾಗಿವೆ ಎಂದೂ ತಿಳಿಯಬೇಕು.

ಇದರಿಂದ – ಶಬ್ದಾದಿಭ್ಯಃ - ಅಗ್ನಿ ಮೊದಲಾದ ಶಬ್ದಗಳಿಂದ ಮತ್ತು ಗಾರ್ಹಪತ್ಯವೇ ಮೊದಲಾದ ಅಂಗಗಳನ್ನು ಪಡೆದಿರುವಿಕೆ ಮೊದಲಾದ ಲಿಂಗಗಳಿಂದ

ಹಾಗೂ ಪಾಚಕನಾಗಿ ಶರೀರದ ಒಳಗೆ ಸ್ಥಿತನಾಗಿರುವ ಕಾರಣದಿಂದಲೂ ವೈಶ್ವಾನರನು ವಿಷ್ಣುವೇ ಎಂಬುದಾಗಿ ನಿಶ್ಚಯಮಾಡಲು ಸಾಧ್ಯವಿಲ್ಲ ಎಂದು ಶಂಕಿಸಿದರೆ ಅದು ಸರಿಯಲ್ಲ. ಇತರ ದೇವತೆಗಳಿಗೆ ಸಂಬಂಧಪಟ್ಟ ಶ್ರುತಿ-ಲಿಂಗ ಮೊದಲಾದವುಗಳು ವಿಷ್ಣುವಿನಲ್ಲಿ ಸಾವಕಾಶವಾಗಿರುವುದರಿಂದ ಆತ್ಮಶಬ್ದ ಮೊದಲಾದವುಗಳಿಂದಲೇ ವೈಶ್ವಾನರನು ವಿಷ್ಣುವೇ ಎಂದು ನಿಶ್ಚಯಮಾಡಲು ಸಾಧ್ಯವಿದೆ. ಆ ಶ್ರುತಿ-ಲಿಂಗಾದಿಗಳು ವಿಷ್ಣುವಿನಲ್ಲಿ ಸಾವಕಾಶವಾಗಿರುವುದು ಹೇಗೆ? ಎಂಬ ಶಂಕೆಗೆ 'ತಥಾ ದೃಷ್ಟ್ಯು-ಪದೇಶಾತ್' ಎಂದು ಉತ್ತರ. ಅಗ್ನ್ಯಾದಿ ನಾಮಗಳು ಮತ್ತು ಅವುಗಳ ಲಿಂಗ ಮತ್ತು ಕ್ರಿಯೆಗಳನ್ನು ಹೊಂದಿರುವವನೆಂದು ವಿಷ್ಣುವಿನ ಉಪಾಸನೆಯನ್ನು ಇಲ್ಲಿ ಉಪದೇಶಿಸ-ಲಾಗಿದೆ ಆದ್ದರಿಂದ ಎಂದುತ್ತರ. ಆದರೆ ಆತ್ಮಶಬ್ದ ಮೊದಲಾದವುಗಳಿಗೆ ವಿಷ್ಣುವನ್ನು ಬಿಟ್ಟು ಬೇರೆಡೆಯಲ್ಲಿ ಅವಕಾಶವಿಲ್ಲ. ಏಕೆಂದರೆ, ವಿಷ್ಣುಭಿನ್ನರಲ್ಲಿ ಆತ್ಮತ್ವ ಮೊದಲಾದ ಧರ್ಮಗಳು ಇರಲು ಸಾಧ್ಯವಿಲ್ಲ. ಕೇವಲ ಆತ್ಮಶಬ್ದ ಮತ್ತು ಸ್ಮೃತಿಸಮಾಖ್ಯೆ ಇವು-ಗಳಿಂದ ವೈಶ್ವಾನರನು ವಿಷ್ಣುವೇ ಎಂದು ನಿಶ್ಚಯಿಸುವುದಿಲ್ಲ ಕಿಂತು ಉಪಕ್ರಮದಿಂದ ಹಾಗೂ ಪ್ರಕರಣದ ಬಲದಿಂದ ವೈಶ್ವಾನರನು ವಿಷ್ಣುವೇ ಎಂದು ನಿಶ್ಚಯವಾಗುವುದು.

ವೈಶ್ವಾನರವಿದ್ಯೆಯು ವಿಷ್ಣುಪ್ರಕರಣವೆಂದು ಸಿದ್ಧವಲ್ಲ ಎಂದೂ ಶಂಕಿಸತಕ್ಕದ್ದಲ್ಲ. ಏಕೆಂದರೆ, 'ಕೋ ನ ಆತ್ಮಾ, ಕಿಂ ಬ್ರಹ್ಮ?' ನಮಗೆ ಸ್ವಾಮಿ ಯಾರು? ಗುಣ-ಪೂರ್ಣನು ಯಾರು? ಎಂಬ ವಿಚಾರಪೂರ್ವಕವಾಗಿ ಈ ಪ್ರಕರಣವನ್ನು ಆರಂಭಿಸಿ ಅಧ್ಯಯನ ಮಾಡಿರುವುದರಿಂದ ಈ ವಿದ್ಯೆಯು ವಿಷ್ಣುಪ್ರಕರಣವೆಂದೇ ನಿಶ್ಚಿತವಾಗು-ವುದು. ಆತ್ಮತ್ವ, ಬ್ರಹ್ಮತ್ವ ಧರ್ಮಗಳಿಂದ ಈ ಪ್ರಕರಣದ ಉಪಕ್ರಮವಿದ್ದರೂ ಈ ಪ್ರಕರಣವು ವಿಷ್ಣುಪರವೇಕೆ ಎಂದೂ ಶಂಕಿಸತಕ್ಕದ್ದಲ್ಲ. ಏಕೆಂದರೆ, ಆತ್ಮತ್ವ ಬ್ರಹ್ಮತ್ವ ಮೊದಲಾದ ಧರ್ಮಗಳು ಅಗ್ನಿ ಮೊದಲಾದವರಲ್ಲಿ ಇರಲು ಸಾಧ್ಯವೇ ಇಲ್ಲ. ಹಾಗೆಯೇ ಕೇವಲ ಸ್ಮೃತಿಸಮಾಖ್ಯಾ ಮತ್ತು ಪ್ರಕರಣಗಳ ಬಲದಿಂದ ವೈಶ್ವಾನರನು ವಿಷ್ಣುವೇ ಎಂದು ನಿಶ್ಚಯಿಸುವುದಲ್ಲ. ಕಿಂತು ಪುರುಷಸೂಕ್ತದಲ್ಲಿ ಪುರುಷನು ಯಾವ ರೀತಿ ವರ್ಣಿತನಾಗಿರುವನೋ ಅದೇ ರೀತಿಯಾಗಿ ವಿಷ್ಣುವನ್ನು ಮೂರ್ಧೈವ ಇತ್ಯಾದಿ ವಾಕ್ಯಗಳಿಂದ ಛಂದೋಗರು ಅಧ್ಯಯನ ಮಾಡುವ ಕಾರಣದಿಂದ ಸ್ಮೃತಿಸಮಾಖ್ಯೆ ಎಂಬ ಪ್ರಮಾಣದಿಂದಲೂ ವೈಶ್ವಾನರನು ವಿಷ್ಣುವೆಂದು ಸಿದ್ಧನಾಗುವನು. ಸೂತ್ರದ

ಚಶಬ್ದವು ಪುರುಷಸೂಕ್ತಕ್ಕೆ ವಿಷ್ಣುಪರತ್ವವಿರುವುದು ಬಹುಪ್ರಮಾಣಸಿದ್ಧವೆಂದು ಸೂಚಿಸುವುದು - ಎಂದು ಸೂತ್ರವ್ಯಾಖ್ಯಾನವು ಪ್ರದರ್ಶಿತವಾಗುವುದು.

ಸೂ– ॥ ಓಂ ಅತ ಏವ ನ ದೇವತಾ ಭೂತಂ ಚ ಓಂ ॥ ೨೭ ॥

ಹಿಂದೆ ಹೇಳಿದ ಹೇತುಗಳಿಂದಲೇ ಇಲ್ಲಿ ಅಗ್ನಿದೇವತೆಯಾಗಲೀ, ಅಥವಾ ಭೂತಾಗ್ನಿಯಾಗಲೀ ಉಕ್ತವಾಗಿಲ್ಲ.

ಭಾ– ಅಗ್ನಿವೈಶ್ವಾನರಾದಿಶಬ್ದಸ್ತೇಜಸಿ ಭೂತೇ ಅಗ್ನಿದೇವತಾಯಾಂ ಚ ಪ್ರಸಿದ್ಧೋಽಪಿ ಅತಃ ಪೂರ್ವೋಕ್ತಹೇತುತ ಏವ ಅತ್ರ ನ ಸಾ ತಚ್ಚ ಅಭಿಧೀಯತೇ ॥ ೨೭ ॥

ಅಗ್ನಿ ವೈಶ್ವಾನರಾದಿಶಬ್ದಗಳು ತೇಜಸ್ಸೆಂಬ ಭೂತದಲ್ಲಿ ಹಾಗೂ ಅಗ್ನಿ-ದೇವತಾ ವಿಷಯದಲ್ಲಿ ಪ್ರಸಿದ್ಧವಾಗಿದ್ದರೂ, ಅತ ಏವ ಅಂದರೆ ಪೂರ್ವೋಕ್ತವಾದ ಹೇತುಗಳಿಂದಲೇ ಈ ಶ್ರುತಿಯಲ್ಲಿ ಆ ದೇವತೆ-ಯಾಗಲೀ ಆ ಭೂತವಾಗಲೀ ಉಕ್ತವಾಗಿಲ್ಲ.

(ಭಾ.ದೀ.) ನನು ವೈಶ್ವಾನರಶಬ್ದಸ್ಯ ದೇವತಾಭೂತಯೋಃ ಪ್ರಸಿದ್ಧತ್ವಾತ್ ಅತ್ರಾಪ್ಯಸೌ ತತ್ಪರಃ ಕಿಂ ನ ಸ್ಯಾತ್? ಇತ್ಯಾಶಂಕಾಂ ಪರಿಹರತ್ ಸೂತ್ರಮುಪನ್ಯಸ್ಯತಿ – **ಅತ ಏವೇತಿ** ॥ ಅತ್ರ ಚಶಬ್ದಸ್ಯ ಸಮುಚ್ಚಯಾರ್ಥತ್ವಂ ಯದ್ಯಪಿತಥಾಪೀತ್ಯರ್ಥತ್ವಂ ಚಾಶ್ರಿತ್ಯ ಸೂತ್ರಂ ವ್ಯಾಚಷ್ಟೇ – **ಅಗ್ನೀತಿ** ॥ ಸಮುದಾಯೈಕವಚನಮೇತತ್ । ಆದಿಶಬ್ದೇನ ಜಾತವೇದಆದಿಶಬ್ದೋ ಗೃಹ್ಯತೇ । ವಿದ್ಯಾಂತರೋಪಲಕ್ಷಣತಯಾ ಅಗ್ನಿಶಬ್ದಾದಿಶಬ್ದಯೋರ್ಗ್ರಹಣಮ್ । ನ ಚ 'ಅಗ್ನ್ಯಾದಿ' ಇತ್ಯನೇನೈವ ಉಪಲಕ್ಷಣ-ಸಂಭವಾತ್ ಕಿಂ ಶಬ್ದದ್ವಯಗ್ರಹಣೇನ? ಇತಿ ವಾಚ್ಯಮ್ । ವೈಶ್ವಾನರಶಬ್ದಸ್ಯ ಇಹ ವಿಚಾರ್ಯತ್ವೇನ, ಅತಿಪ್ರಸಿದ್ಧತ್ವಾತ್ ಅಗ್ನಿಶಬ್ದಸ್ಯ ಚ ಗ್ರಹಣೋಪಪತ್ತೇಃ । ಯದ್ವಾ – ಆದಿಶಬ್ದಸ್ಯೋಭಯತ್ರ ಅನ್ವಯೇನ ಅಗ್ನ್ಯಾದೀತಿ ಆಧಿಭೌತಿಕವಿದ್ಯಾಂತರಸ್ಯ, ವೈಶ್ವಾ-ನರಾದೀತಿ ಅಧ್ಯಾತ್ಮಿಕವಿದ್ಯಾಂತರಸ್ಯ ಉಪಲಕ್ಷಣಾರ್ಥಮ್ ಅಗ್ನ್ಯಾದಿವೈಶ್ವಾನರಾ-

ದಿಗ್ರಹಣಮ್ । 'ತೇಜಸಿ ಭೂತೇ' ಇತಿ ಸಮಾನಾಧಿಕರಣಮ್ । ಚಃ ಸಮುಚ್ಚಯೇ । 'ಪ್ರಸಿದ್ಧಃ' ಇತ್ಯನೇನ ಪೂರ್ವಪಕ್ಷೇ ಪ್ರಸಿದ್ಧತ್ವಾದಿತಿ ಯುಕ್ತಿಃ ಸೂಚಿತಾ ।

ಸೌತ್ರಮ್ ಅತಃಶಬ್ದಮನೂದ್ಯ, ವ್ಯಾಖ್ಯಾತಿ – **ಅತ ಇತಿ ॥ ಪೂರ್ವೋಕ್ತೇತಿ ॥** 'ಆತ್ಮಶಬ್ದಾದಿತಿ ಹೇತುತಃ' ಇತ್ಯರ್ಥಃ । ನ ತತ್ರ ಹೇತ್ವಂತರಂ ಗವೇಷಣೀಯಮ್ ಇತ್ಯೇವಾರ್ಥಃ । 'ಅತ್ರ' ವೈಶ್ವಾನರವಿದ್ಯಾಯಾಂ ವಿದ್ಯಾಂತರೇ ಚ । 'ಸಾ' ಅಗ್ನಿದೇವತಾ 'ತತ್' ತೇಜೋಭೂತಮ್ । ಪ್ರಸಿದ್ಧಿಪ್ರಾಧಾನ್ಯಾಭ್ಯಾಂ ನಿರ್ದೇಶವ್ಯತ್ಯಾಸಃ । ಚಶಬ್ದಃ ಸಮುಚ್ಚಯೇ । ಅಭಿಧೀಯತೇ 'ತೇನ' ಇತಿ ಶೇಷಃ । ವೈಶ್ವಾನರಾದಿಶಬ್ದೇನೇತಿ ತದರ್ಥಃ । 'ಅತ್ರ' ಇತಿ ಪಾಠಾಭಾವೇ ತದಪ್ಯಧ್ಯಾಹಾರ್ಯಮ್ ॥

ವೈಶ್ವಾನರಶಬ್ದವು ಅಗ್ನಿದೇವತೆ ಮತ್ತು ಭೂತಾಗ್ನಿಯಲ್ಲಿ ಪ್ರಸಿದ್ಧವಾಗಿರುವುದರಿಂದ ಪ್ರಕೃತ ವೈಶ್ವಾನರವಿದ್ಯೆಯು ಆ ದೇವತೆ ಮತ್ತು ಭೂತಪರವೇಕಾಗಬಾರದು? ಎಂಬ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಆಚಾರ್ಯರು 'ಅತ ಏವ' ಎಂದು ಉಪನ್ಯಾಸ ಮಾಡುತ್ತಿದ್ದಾರೆ. ಈ ಸೂತ್ರದಲ್ಲಿ ಚಶಬ್ದಕ್ಕೆ ಸಮುಚ್ಚಯವೆಂಬ ಅರ್ಥ ಹಾಗೂ ಯದ್ಯಪಿ, ತಥಾಪಿ ಎಂಬ ಅರ್ಥವೂ ಇರುವುದೆಂದು ಭಾವಿಸಿ 'ಅಗ್ನಿ' ಎಂಬ ವಾಕ್ಯದಿಂದ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅಗ್ನಿವೈಶ್ವಾನರಾದಿಶಬ್ದಃ ಎಂಬ ಪದದಲ್ಲಿ ಏಕವಚನವು ಸಮುದಾಯದ ಏಕತ್ವವನ್ನು ಹೇಳುವುದು. ಆದಿಶಬ್ದದಿಂದ ಜಾತವೇದ ಮೊದಲಾದ ಪದಗಳು ಗ್ರಹಿಸಲ್ಪಡುತ್ತವೆ. ಇತರವಿದ್ಯೆಗಳಿಗೆ ಉಪಲಕ್ಷಣವಾಗಿ ಅಗ್ನಿಶಬ್ದ ಮತ್ತು ಆದಿಶಬ್ದಗಳನ್ನು ಗ್ರಹಿಸಲಾಗಿದೆ.

ಅಗ್ನ್ಯಾದಿ ಎಂಬ ಶಬ್ದದಿಂದಲೇ ಉಪಲಕ್ಷಣಯಾ ಇತರವಿದ್ಯೆಗಳನ್ನು ಗ್ರಹಿಸುವುದು ಸಾಧ್ಯವಿರುವಾಗ ಅಗ್ನಿ, ವೈಶ್ವಾನರ ಎಂಬ ಎರಡು ಶಬ್ದಗಳ ಗ್ರಹಣವೇಕೆ? ಎಂದು ಶಂಕಿಸತಕ್ಕದ್ದಲ್ಲ. ಈ ಪ್ರಕರಣದಲ್ಲಿ ವೈಶ್ವಾನರಶಬ್ದವು ವಿಚಾರ್ಯವಾದ ಶಬ್ದವಾಗಿರುವುದರಿಂದ ಆ ಶಬ್ದವನ್ನೂ ಹಾಗೂ ಅತಿಪ್ರಸಿದ್ಧವಾಗಿರುವುದರಿಂದ ಅಗ್ನಿಶಬ್ದವನ್ನು ಇಲ್ಲಿ ಗ್ರಹಿಸಿರುವುದು ಯುಕ್ತವಾಗಿದೆ. ಅಥವಾ ಆದಿಶಬ್ದಕ್ಕೆ ಅಗ್ನಿ ವೈಶ್ವಾನರ ಎಂದು ಎರಡೂ ಕಡೆಯೂ ಅನ್ವಯ ಮಾಡುವುದರಿಂದ ಅಗ್ನ್ಯಾದಿ ಎಂಬ ಪದವು ಆದಿ-

ಭೌತಿಕವಿಷಯಕವಾದ ಇತರ ವಿದ್ಯೆಗಳಿಗೆ, ವೈಶ್ವಾನರಾದಿ ಎಂಬ ಪದವು ಆಧ್ಯಾತ್ಮಿಕ ವಿಷಯಕವಾದ ಇತರ ವಿದ್ಯೆಗಳಿಗೆ ಉಪಲಕ್ಷಣವಾಗಿದೆ ಎಂದು ಹೇಳಲು ಅಗ್ನ್ಯಾದಿ ವೈಶ್ವಾನರಾದಿ ಎಂದು ಎರಡನ್ನೂ ಗ್ರಹಿಸಲಾಗಿದೆ. ಭಾಷ್ಯದಲ್ಲಿ 'ತೇಜಸಿ ಭೂತೇ' ಎಂಬ ಪದಗಳು ಒಂದೇ ವಸ್ತುವನ್ನು ಹೇಳುವ ಶಬ್ದಗಳಾಗಿವೆ. ಚಕಾರವು ಸಮುಚ್ಚಯವನ್ನು ಹೇಳುವುದು. 'ಪ್ರಸಿದ್ಧಃ' ಎಂಬ ಪದದಿಂದ ಪೂರ್ವಪಕ್ಷದಲ್ಲಿ 'ಪ್ರಸಿದ್ಧತ್ವ'ವು ಯುಕ್ತಿಯೆಂದು ಸೂಚಿತವಾಗುವುದು.

ಭಾಷ್ಯಕಾರರು ಸೂತ್ರದ ಅತಃ ಎಂಬ ಶಬ್ದವನ್ನು 'ಅತಃ' ಎಂದು ಅನುವಾದ ಮಾಡಿ 'ಪೂರ್ವೋಕ್ತಹೇತುತಯಾ ಏವ' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. ಆತ್ಮ-ಶಬ್ದವೆಂಬ ಹೇತುವಿನಿಂದ ಎಂದು ಅರ್ಥ. ಈ ವಿಷಯದಲ್ಲಿ ಮತ್ತೊಂದು ಹೇತುವನ್ನು ಅನ್ವೇಷಿಸಬೇಕಾದದ್ದಿಲ್ಲ ಎಂದು ಏವಶಬ್ದದ ಅರ್ಥ. 'ಅತ್ರ' ಅಂದರೆ ವೈಶ್ವಾನರವಿದ್ಯೆ-ಯಲ್ಲಿ ಮತ್ತು ಇತರ ವಿದ್ಯೆಗಳಲ್ಲಿ ಎಂದು ಅರ್ಥ. ಸಾ ಅಂದರೆ ಅಗ್ನಿದೇವತೆ, ತತ್ ಅಂದರೆ ತೇಜೋಭೂತ. ಭಾಷ್ಯದಲ್ಲಿ ಮೊದಲು ತೇಜಸಿ ಭೂತೇ ಎಂದು, ಅನಂತರ ಅಗ್ನಿದೇವತಾಯಾಂ ಎಂಬುದಾಗಿ ಹೇಳಿದ್ದರೂ ಅಗ್ನಿದೇವತೆಗೆ ಇರುವ ಪ್ರಸಿದ್ಧಿ ಮತ್ತು ಪ್ರಾಧಾನ್ಯಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು 'ಸಾ ತಚ್ಚ' ಎಂಬುದಾಗಿ ಅವುಗಳ ನಿರ್ದೇಶದಲ್ಲಿ ವ್ಯತ್ಯಾಸ ಮಾಡಲಾಗಿದೆ. ತಚ್ಚ ಎಂಬಲ್ಲಿರುವ ಚಕಾರವು ಸಮುಚ್ಚಯ-ವನ್ನು ಹೇಳುವುದು.

**ಸೂ– ॥ ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ ॥ ೨೮ ॥**

ವಾಚ್ಯಾರ್ಥಜ್ಞಾನದಿಂದ ವ್ಯವಧಾನವಿರುವ ಲಕ್ಷಣಾ ಮೊದಲಾದ ಅಮುಖ್ಯವೃತ್ತಿಗಳಿಲ್ಲದೇ ಮುಖ್ಯವೃತ್ತಿಯಿಂದ ಬ್ರಹ್ಮನು ಅಗ್ನ್ಯಾದಿಶಬ್ದ ವಾಚ್ಯನಾಗಿದ್ದಾನೆ ಎಂದು ಅಂಗೀಕರಿಸಿದರೂ ಅನ್ಯತ್ರ ಶಬ್ದಗಳ ವ್ಯವ-ಹಾರ ಮಾಡುವುದರ ವಿರೋಧವಿಲ್ಲವೆಂದು ಜೈಮಿನಿಗಳು ಹೇಳುತ್ತಾರೆ.

**ಭಾ– ನಾಗ್ನ್ಯಾದಯಃ ಶಬ್ದಾ ಅಗ್ನ್ಯಾದಿವಾಚಕಾಸ್ತಥಾಪಿ ಸಾಕ್ಷಾದೇವ ಅನನ್ಯಯೋಗೇನ ಬ್ರಹ್ಮವಾಚಕೈಶ್ಶಬ್ದೈಃ ವ್ಯವಹಾರಾರ್ಥಮನ-**

**ಭಿಜ್ಞಾನಾಚ್ಚಾನ್ಯತ್ರ ವ್ಯವಹರಂತೀತ್ಯಭ್ಯುಪಗಮೇಽವಿರೋಧಂ ಜೈಮಿನಿರ್ವಕ್ತಿ।**

ಅಗ್ನಿ ಮೊದಲಾದ ಶಬ್ದಗಳು ಅಗ್ನ್ಯಾದಿ ವಾಚಕಗಳಲ್ಲ. ಆದರೂ ಸಾಕ್ಷಾದೇವ - ಅಂದರೆ ಶಕ್ಯಾರ್ಥಸಂಬಂಧ ಮೊದಲಾದವುಗಳು ಇಲ್ಲದೆ ಮುಖ್ಯವೃತ್ತಿಯಿಂದಲೇ ಬ್ರಹ್ಮವಾಚಕವಾದ ಶಬ್ದಗಳಿಂದ ತ್ಯಾಗ ಸ್ವೀಕಾರ ಮೊದಲಾದ ವ್ಯವಹಾರಕ್ಕೋಸ್ಕರವಾಗಿ ಮತ್ತು ಮುಖ್ಯಾ-ರ್ಥದ ಅಜ್ಞಾನದಿಂದಲೂ ಬೇರೆಡೆಯಲ್ಲಿ ಶಬ್ದಗಳನ್ನು ವ್ಯವಹರಿಸು-ತ್ತಾರೆ ಎಂದು ಒಪ್ಪಿದರೆ ವಿರೋಧವಿಲ್ಲವೆಂದು ಜೈಮಿನಿಗಳು ಹೇಳು-ತ್ತಾರೆ.

(ಭಾ.ದೀ.) ನನು ಲೋಕೇ ವೇದೇ ಚ ಅಗ್ನ್ಯಾದಿಪದಾನಾಮ್ ಈಶಾದನ್ಯತ್ರ ವ್ಯವಹಾರಪ್ರಸಿದ್ಧಿದರ್ಶನಾತ್ ತಸ್ಯ ಚ ಕಾರಣಾಂತರಾಭಾವಾತ್ ತದನ್ಯಥಾನುಪ-ಪತ್ತ್ಯಾ ಅನ್ಯೇಷಾಂ ವಾಚ್ಯಮಂಗೀಕಾರ್ಯಮ್ । ಅನ್ಯಥಾ ತದ್ವಿರೋಧಃ ಸ್ಯಾತ್, ಇತ್ಯಾಶಂಕಾಂ ಪರಿಹರತ್ ಸೂತ್ರಮುಪನ್ಯಸ್ಯ ವ್ಯಾಚಷ್ಟೇ – **ಸಾಕ್ಷಾದಿತಿ** ॥ ಅತ್ರ 'ತಥಾಽಪಿ' ಇತ್ಯಪಿಶಬ್ದವ್ಯಾಖ್ಯಾನಾದ್ 'ಯದ್ಯಪಿ' ಇತಿ ಲಭ್ಯತೇ । ಅಗ್ನಿಶಬ್ದಃ ಸ್ವಪರಃ । ಅಗ್ನಿಶಬ್ದ ಏವ ಆದಿರ್ಯೇಷಾಂ ತೇ ಅಗ್ನ್ಯಾದಯಃ - ಇತಿ ವಿಗ್ರಹಃ । ಅಪಿರವ-ಧಾರಣೇಽಪಿ ಇತ್ಯಾಶಯೇನ 'ಸಾಕ್ಷಾದೇವ' ಇತ್ಯುಕ್ತಮ್ । ಅರ್ಥಾಂತರವ್ಯವಧಾನೇನ ಇತ್ಯರ್ಥಃ । ಫಲಿತಾರ್ಥಮಾಹ – **ಅನನ್ಯೇತಿ** ॥ ಶಕ್ಯರೂಪಾನ್ಯಸಂಬಂಧಮಂತರೇಣ ಮುಖ್ಯವೃತ್ತ್ಯಾ ಇತ್ಯರ್ಥಃ । ಯದ್ವಾ – **ತತ್ತ್ವಪ್ರದೀಪರೀತ್ಯಾ** 'ಅನ್ಯತ್ರ ಯೋಗವೃತ್ತ್ಯ-ಭಾವೇನ ಬ್ರಹ್ಮಣಿ ಸಮ್ಯಗ್ ಯೋಗೇನ' ಇತ್ಯರ್ಥಃ । 'ಬ್ರಹ್ಮವಾಚಕೈರಪಿ' ಇತ್ಯಪಿ-ಶಬ್ದಾನ್ವಯಃ । 'ತೈರಗ್ನ್ಯಾದಿಶಬ್ದೈಃ' ಇತಿ ಶೇಷಃ । 'ವ್ಯವಹಾರಾರ್ಥಂ' ಹಾನಾದಿ-ವ್ಯವಹಾರಸಿದ್ಧ್ಯರ್ಥಮ್ । 'ಅನಭಿಜ್ಞಾನಾತ್' ಮುಖ್ಯವಾಚ್ಯಜ್ಞಾನಾಭಾವಾತ್ । ಚಶಬ್ದೋ ನ ಕೇವಲಂ ವ್ಯವಹಾರಸಿದ್ಧ್ಯರ್ಥಂ ಕಿಂತ್ವನಭಿಜ್ಞಾನಾಚ್ಚ ಇತಿ ಸಮುಚ್ಚಯೇ । 'ಅನ್ಯತ್ರ' ಅಗ್ನ್ಯಾದಿಷು ತಾನ್ ತತ್ರ ವ್ಯವಹರಂತಿ ಜ್ಞಾನಿನೋಽಜ್ಞಾನಿನಶ್ಚ ಇತಿ ಕ್ರಮೇಣ

ಶೇಷಃ । 'ಇತ್ಯಭ್ಯುಪಗಮೇ' ಇತಿ ನಿಮಿತ್ತಸಪ್ತಮೀ । ಏವಮಂಗೀಕಾರಾತ್ 'ಅವಿರೋಧಂ' ಜ್ಞಾನ್ಯಜ್ಞಾನಿವ್ಯವಹಾರವಿರೋಧಾಭಾವಂ ಜೈಮಿನಿರಾಚಾರ್ಯೋ ವಕ್ತೀತ್ಯರ್ಥಃ। 'ಯತ್ರಾನವಸರಃ' ಇತ್ಯುಕ್ತೇರ್ವಕ್ತೀತ್ಯುಕ್ತಮ್ ।

ಅನೇನ ಅಗ್ನ್ಯಾದಿಶಬ್ದಾಃ ನಾಗ್ನ್ಯಾದಿವಾಚಕಾಃ ಕಿಂತು ಬ್ರಹ್ಮವಾಚಕಾ ಏವ । ತಥಾಽಪಿ ನಾನ್ಯತ್ರ ಪ್ರಸಿದ್ಧಿವಿರೋಧಃ । ನ ವಾಽನ್ಯಥಾನುಪಪತ್ತ್ಯಾ ಅನ್ಯೇಷಾಂ ವಾಚ್ಯತ್ವಂ ಕಲ್ಪ್ಯಮ್ । ಕುತಃ? ಯತೋ ವಾಚ್ಯಾರ್ಥಧೀವ್ಯವಹಿತಂ ಲಕ್ಷಣಾದಿಕಂ ವಿನಾ ಸಾಕ್ಷಾತ್ ಮುಖ್ಯವೃತ್ತ್ಯಾಽಪಿ ಬ್ರಹ್ಮವಾಚಕಾನ್ ಅಗ್ನ್ಯಾದಿಶಬ್ದಾನ್ ಮುಖ್ಯಾರ್ಥ-ಜ್ಞಾನಿನಃ ಅಜಾಮಿಳಚರಮತನಯೇ ನಾರಾಯಣಶಬ್ದಮಿವ ವ್ಯವಹರಂತಿ ಇತ್ಯಭ್ಯುಪಗಮೇನ ಅನ್ಯತ್ರಾವಿರೋಧಂ ವ್ಯವಹಾರವಿರೋಧಾಭಾವಂ ಪ್ರಸಿದ್ಧಿವಿಲೋಪಾಭಾವಂ ವಕ್ತಿ, ಅತಃ – ಇತಿ ಸೂತ್ರಾರ್ಥ ಉಕ್ತೋ ಭವತಿ।

ಲೋಕದಲ್ಲಿ ಮತ್ತು ವೇದದಲ್ಲಿ ಅಗ್ನ್ಯಾದಿಪದಗಳಿಗೆ ಭಗವಂತನನ್ನು ಬಿಟ್ಟು ಬೇರೆ ವಿಷಯಗಳಲ್ಲಿ ವ್ಯವಹಾರ ಮತ್ತು ಪ್ರಸಿದ್ಧಿ ಇರುವುದು ಕಂಡಿರುವುದರಿಂದ, ಅದಕ್ಕೆ ಬೇರೆ ಕಾರಣವಿಲ್ಲದಿರುವುದರಿಂದ, ಆ ಶಬ್ದಗಳ ವಾಚ್ಯತ್ವವನ್ನು ಒಪ್ಪದಿದ್ದರೆ ಅನುಪಪತ್ತಿ ಇರುವುದರಿಂದಲೂ ಇತರ ವಸ್ತುಗಳಿಗೂ ಆ ಶಬ್ದವಾಚ್ಯತ್ವವನ್ನು ಅಂಗೀಕರಿಸಬೇಕು. ಇಲ್ಲದಿದ್ದರೆ ಅನ್ಯತ್ರವ್ಯವಹಾರ ಮಾಡುವುದರ ವಿರೋಧ ಬಂದೀತು ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಸಾಕ್ಷಾತ್ ಎಂದು ಪಠಿಸಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ. ಇಲ್ಲಿ ಸೂತ್ರದಲ್ಲಿರುವ ಅಪಿಶಬ್ದಕ್ಕೆ 'ತಥಾಽಪಿ' ಎಂದು ವ್ಯಾಖ್ಯಾನಮಾಡಿರುವುದರಿಂದ 'ಯದ್ಯಪಿ' ಎಂಬ ಪದವು ಲಭಿಸುವುದು. ಭಾಷ್ಯದಲ್ಲಿ ಅಗ್ನಿಶಬ್ದವು ಸ್ವಪರ ಅಂದರೆ ತನ್ನನ್ನೇ ಅಂದರೆ ಅಗ್ನಿಶಬ್ದವನ್ನೇ ಹೇಳುವ ತಾತ್ಪರ್ಯವುಳ್ಳದ್ದು. ಅಗ್ನಿಶಬ್ದವೇ ಯಾವ ಶಬ್ದಗಳಿಗೆ ಆದಿಯಾಗಿರುವುದೋ ಆ ಶಬ್ದಗಳು ಅಗ್ನ್ಯಾದಯಃ ಎಂದೆನಿಸುತ್ತವೆ. ಸೂತ್ರದಲ್ಲಿರುವ ಅಪಿಶಬ್ದವು ಅವಧಾರಣಾರ್ಥವನ್ನೂ ಹೊಂದಿರುವುದು ಎಂಬ ಆಶಯದಿಂದ ಭಾಷ್ಯದಲ್ಲಿ 'ಸಾಕ್ಷಾದೇವ' ಎಂದು ಹೇಳಿದೆ. ಮತ್ತೊಂದು ಅರ್ಥದ ವ್ಯವಧಾನವಿಲ್ಲದೇ ಎಂದು ಅರ್ಥ. ಫಲಿತಾರ್ಥವನ್ನು ಅನನ್ಯಯೋಗೇನ ಎಂಬ ಪದದಿಂದ ಹೇಳುತ್ತಿದ್ದಾರೆ. ವಾಚ್ಯಾರ್ಥವೆಂಬ ಇನ್ನೊಂದರ

ಸಂಬಂಧವಿಲ್ಲದೇ ಅಂದರೆ ಮುಖ್ಯವೃತ್ತಿಯಿಂದ ಎಂದು ಅರ್ಥ. ಅಥವಾ ತತ್ತ್ವಪ್ರದೀಪರೀತ್ಯಾ ಬೇರೆ ವಿಷಯಗಳಲ್ಲಿ ಯೋಗವೃತ್ತಿಯಿಲ್ಲದೇ ಬ್ರಹ್ಮನಲ್ಲಿ ಸಮ್ಯಗ್ ಯೋಗ ಅಂದರೆ ಅವಯವಾರ್ಥವಿರುವುದರಿಂದ ಎಂದು ಅರ್ಥ. ಅಪಿಶಬ್ದಕ್ಕೆ ಬ್ರಹ್ಮವಾಚಕೈರಪಿ ಎಂದು ಅನ್ವಯ. ಇಲ್ಲಿ 'ತೈಃ ಅಗ್ನ್ಯಾದಿಶಬ್ದೈಃ' ಎಂಬ ಪದಗಳು ಶೇಷವಾಗಿವೆ. ವ್ಯವಹಾರಾರ್ಥಂ ಎಂದರೆ ತ್ಯಾಗ ಮೊದಲಾದ ವ್ಯವಹಾರಸಿದ್ಧಿಗೋಸ್ಕರವಾಗಿ ಎಂದು ಅರ್ಥ. 'ಅನಭಿಜ್ಞಾನಾತ್' ಅಂದರೆ ಆ ಶಬ್ದದ ಮುಖ್ಯವಾಚ್ಯವಾದ ಬ್ರಹ್ಮನ ಜ್ಞಾನವಿಲ್ಲದಿರುವುದರಿಂದ ಎಂದರ್ಥ. ಅನಭಿಜ್ಞಾನಾಚ್ಚ ಎಂಬಲ್ಲಿರುವ ಚಕಾರವು ವ್ಯವಹಾರಕ್ಕೋಸ್ಕರವಷ್ಟೇ ಅಲ್ಲ ಕಿಂತು ಜ್ಞಾನವಿಲ್ಲದಿರುವುದರಿಂದಲೂ ಎಂಬುದಾಗಿ ಸಮುಚ್ಚಯವನ್ನು ಹೇಳುವುದು. ಅನ್ಯತ್ರ ಅಂದರೆ ಅಗ್ನ್ಯಾದಿಗಳ ವಿಷಯದಲ್ಲಿ ಆ ಶಬ್ದಗಳನ್ನು ಜ್ಞಾನಿಗಳು ಮತ್ತು ಅಜ್ಞಾನಿಗಳು ವ್ಯವಹರಿಸುತ್ತಾರೆ ಎಂಬುದಾಗಿ ಕ್ರಮವಾಗಿ ಶೇಷಪದಗಳನ್ನು ಸೇರಿಸಬೇಕು. 'ಇತ್ಯಭ್ಯುಪಗಮೇ' ಎಂಬಲ್ಲಿ ಸಪ್ತಮೀವಿಭಕ್ತಿಯು ನಿಮಿತ್ತ ಎಂಬ ಅರ್ಥವನ್ನು ಹೇಳುವುದು. ಹೀಗೆ ಅಂಗೀಕರಿಸುವುದರಿಂದ 'ಅವಿರೋಧಂ' ಜ್ಞಾನಿಗಳು ಮತ್ತು ಅಜ್ಞಾನಿಗಳು ಮಾಡುವ ವ್ಯವಹಾರದ ವಿರೋಧವಿಲ್ಲದಿರುವುದನ್ನು ಆಚಾರ್ಯ ಜೈಮಿನಿಗಳು ಹೇಳುವರೆಂದು ಅರ್ಥ. 'ಯತ್ರಾನವಸರಃ' ಎಂಬ ವಚನಾನುಸಾರವಾಗಿ ವಕ್ತಿ ಎಂಬ ಪದವನ್ನು ಇಲ್ಲಿ ಹೇಳಲಾಗಿದೆ.

ಇದರಿಂದ ಅಗ್ನ್ಯಾದಿಶಬ್ದಗಳು ಅಗ್ನ್ಯಾದಿಪದಾರ್ಥಗಳ ವಾಚಕಗಳಲ್ಲ. ಕಿಂತು ಬ್ರಹ್ಮವಾಚಕಗಳೇ ಆಗಿವೆ. ಆದರೂ ಆ ಶಬ್ದಗಳಿಗೆ ಅನ್ಯವಿಷಯಗಳಲ್ಲಿ ಪ್ರಸಿದ್ಧಿ ಇರುವುದರ ವಿರೋಧವಿಲ್ಲ. ಹಾಗೆಯೇ, ವಾಚ್ಯತ್ವವಿಲ್ಲದೇ ಪ್ರಸಿದ್ಧಿ ಕೂಡುವುದಿಲ್ಲವಾದ್ದರಿಂದ ಇತರ ಪದಾರ್ಥಗಳಿಗೂ ಆಯಾಯಾ ಶಬ್ದಗಳ ವಾಚ್ಯತ್ವವಿದೆ ಎಂದೂ ಕಲ್ಪಿಸತಕ್ಕದ್ದಲ್ಲ. ಏಕೆ? – ಯಾವ ಕಾರಣದಿಂದಾಗಿ ವಾಚ್ಯಾರ್ಥಜ್ಞಾನದ ತಡೆ ಇರುವ ಲಕ್ಷಣಾ ಮೊದಲಾದ ವೃತ್ತಿಗಳನ್ನು ಬಿಟ್ಟು, ಸಾಕ್ಷಾತ್ ಅಂದರೆ ಮುಖ್ಯವೃತ್ತಿಯಿಂದ ಬ್ರಹ್ಮವಾಚಕವಾದ ಅಗ್ನ್ಯಾದಿಶಬ್ದಗಳನ್ನು ಆ ಶಬ್ದಗಳ ಮುಖ್ಯಾರ್ಥವನ್ನು ತಿಳಿದಿರುವ ಜ್ಞಾನಿಗಳು, ಅಜಾಮಿಳನ ಕೊನೆಯ ಮಗನ ವಿಷಯದಲ್ಲಿ 'ನಾರಾಯಣ'ಶಬ್ದವನ್ನು ಹೇಗೋ ಹಾಗೆ ಹಾನ ಉಪಾದಾನ ಮೊದಲಾದ ವ್ಯವಹಾರದ ಸಿದ್ಧಿಗೋಸ್ಕರವಾಗಿ, ಆ

ಶಬ್ದಗಳ ಮುಖ್ಯಾರ್ಥವನ್ನು ತಿಳಿಯದ ಅಜ್ಞಾನಿಗಳಾದರೋ ಅಜ್ಞಾನದ ಕಾರಣ-ದಿಂದಲೇ ಆ ಅಗ್ನ್ಯಾದಿ ಶಬ್ದಗಳನ್ನು ಜ್ವಲಿಸುವ ಅಗ್ನ್ಯಾದಿಪದಾರ್ಥಗಳ ವಿಷಯದಲ್ಲಿ ವ್ಯವಹರಿಸುತ್ತಾರೆ ಎಂದು ಅಂಗೀಕಾರ ಮಾಡುವುದರಿಂದ ಅನ್ಯತ್ರ ಅವಿರೋಧಂ ಅಂದರೆ ಬೇರೆ ವಿಷಯದಲ್ಲಿ ವ್ಯವಹಾರವಿರೋಧವಿಲ್ಲದಿರುವುದನ್ನು ಪ್ರಸಿದ್ಧಿಯ ಲೋಪವಾಗದಿರುವುದನ್ನು ಜೈಮಿನ್ಯಾಚಾರ್ಯರು ಹೇಳುವರು- ಆದ್ದರಿಂದ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

ಭಾ– 'ವ್ಯಾಸಚಿತ್ತಸ್ಥಿತಾಕಾಶಾದವಚ್ಛಿನ್ನಾನಿ ಕಾನಿಚಿತ್ ।
ಅನ್ಯೇ ವ್ಯವಹರಂತ್ಯೇತಾನ್ಯೂರೀಕೃತ್ಯ ಗೃಹಾದಿವತ್ ॥'

ಇತಿ ಸ್ಕಾಂದವಚನಾನ್ನ ಮತಾನಾಂ ಪರಸ್ಪರವಿರೋಧಃ ॥ ೨೮ ॥

ವೇದವ್ಯಾಸರ ಚಿತ್ತದಲ್ಲಿರುವ ಜ್ಞಾನವೆಂಬ ಆಕಾಶದ ದೃಷ್ಟಿಯಿಂದ ಪರಿಮಿತವಾದ ಕೆಲವು ಮತಗಳನ್ನು ಅಂಗೀಕರಿಸಿ, ಗೃಹ ಮೊದಲಾದ ವಿಷಯಗಳಲ್ಲಿ ಹೇಗೋ ಹಾಗೆ, ವ್ಯವಹಾರ ಮಾಡುವರು – ಎಂದು ಸ್ಕಾಂದವಚನವಿರುವುದರಿಂದ ಈ ಜೈಮಿನ್ಯಾದಿ ಮತಗಳಿಗೆ ಪರಸ್ಪರ ವಿರೋಧವಿಲ್ಲ.

(ಭಾ.ದೀ.) ನನು ಜೈಮಿನ್ಯಾದಿಮತಾನಾಂ ಭಗವನ್ಮತಾವಿರೋಧಿತ್ವೇ ಜೈಮಿನ್ಯಾ-ದಿಗ್ರಹಣವೈಯರ್ಥ್ಯಾತ್ ತದ್ವಿರೋಧಿತ್ವೇ ವಾ ಕಥಂ ವಿರುದ್ಧರಾದ್ಧಾಂತೇನ ಪರಿ-ಹಾರಃ? ಇತ್ಯತ ಆಹ – **ವ್ಯಾಸೇತಿ** ॥ ವ್ಯಾಸಚಿತ್ತಸ್ಥಿತಂ ಮತಾಪರಪರ್ಯಾಯಂ ಜ್ಞಾನಾಖ್ಯಮಹಾಕಾಶಮಪೇಕ್ಷ್ಯ ಗೃಹಾದ್ಯವಚ್ಛಿನ್ನಾಕಾಶವತ್ 'ಅವಚ್ಛಿನ್ನಾನಿ' ವಿವಿಕ್ತಾನಿ ಪರಿಮಿತವಿಷಯಾಣಿ ಕಾನಿಚಿದೇತಾನಿ ಮತಾನ್ಯೂರೀಕೃತ್ಯ 'ಅನ್ಯೇ' ಕೇಚನ ಜೈಮಿನ್ಯಾದ್ಯಾಃ ವ್ಯವಹರಂತೀತ್ಯರ್ಥಃ । ಯಥೋಕ್ತಂ **ಸತ್ತರ್ಕದೀಪಾವಲ್ಯಾಮ್** – ಆಕಾಶವದ್ ವ್ಯಾಪ್ತತ್ವಾತ್ ಪ್ರಕಾಶಮಾನತ್ವಾಚ್ಚ ವ್ಯಾಸಚಿತ್ತಸ್ಥಿತಮತಾಖ್ಯಾಕಾಶಾತ್ 'ಅವಚ್ಛಿನ್ನಾನಿ' ಸ್ವಸ್ವಮತ್ಯಾ ವಿವಿಕ್ತಾನಿ ತಾನಿ ಮತಾನಿ 'ಇದಂ ಮದೀಯಮ್' 'ಇದಂ

**ಮದೀಯಮ್' ಇತ್ಯೂರೀಕೃತ್ಯ ಅನ್ಯೇ ವ್ಯವಹರಂತಿ । ಯಥಾ ಗೃಹನಗರಾದಿಭಿಃ ಆಕಾಶಪ್ರದೇಶಾನವಚ್ಛಿದ್ಯಾಯಂ ಮದೀಯಃ ಪ್ರದೇಶೋಽಯಂ ಮದೀಯಃ ಪ್ರದೇಶ ಇತಿ ಜನಾ ವ್ಯವಹರಂತೀತಿ । 'ಮತಾನಾಮ್' ಇತಿ ಬಹುವಚನಂ ವಕ್ಷ್ಯಮಾಣ-ಮತವಿವಕ್ಷಯಾ । ತಥಾ ಚ ಜೈಮಿನ್ಯಾದಿಮತಾನಾಂ ವ್ಯಾಸಮತೇನ ಪರಸ್ಪರಂ ಚಾವಿರೋಧ ಇತ್ಯರ್ಥಃ।**

ಜೈಮಿನ್ಯಾದಿ ಮತಗಳಿಗೆ ಭಗವಂತನ ಮತದ ವಿರೋಧವಿಲ್ಲದಿದ್ದ ಪಕ್ಷದಲ್ಲಿ ಜೈಮಿನಿ ಮೊದಲಾದ ಪದಗಳನ್ನು ಇಲ್ಲಿ ಗ್ರಹಿಸಿರುವುದು ವ್ಯರ್ಥ. ಆ ಮತಗಳಿಗೆ ಭಗವನ್ಮತದ ವಿರೋಧವಿದ್ದದ್ದೇ ಆದರೆ ವಿರುದ್ಧಸಿದ್ಧಾಂತದಿಂದ ಪರಿಹಾರವನ್ನು ಹೇಳುವುದಾದರೂ ಹೇಗೆ? ಎಂಬ ಶಂಕೆಯನ್ನು ಪರಿಹರಿಸಲು ಭಾಷ್ಯಕಾರರು 'ವ್ಯಾಸ' ಎಂಬ ವಚನವನ್ನು ಉದಾಹರಿಸುತ್ತಿದ್ದಾರೆ. ವೇದವ್ಯಾಸರ ಚಿತ್ತದಲ್ಲಿ ಇರುವ ಮತ ಎಂಬುದಕ್ಕೆ ಪರ್ಯಾಯಶಬ್ದವಾಚ್ಯವಾಗಿರುವ ಜ್ಞಾನವೆಂಬ ಮಹಾಕಾಶದ ದೃಷ್ಟಿಯಿಂದ ಗೃಹ ಮೊದಲಾದ ಪರಿಮಿತವಾದ ಆಕಾಶದಂತೆ ಅವಚ್ಛಿನ್ನಾನಿ - ವಿವಿಕ್ತವಾದ ಅಂದರೆ ಪರಿಮಿತವಾದ ವಿಷಯಗಳುಳ್ಳ ಈ ಕೆಲವು ಮತಗಳನ್ನು ಅಂಗೀಕರಿಸಿ 'ಅನ್ಯೇ' ಜೈಮಿನಿ ಮೊದಲಾದ ಕೆಲವರು ವ್ಯವಹರಿಸುತ್ತಾರೆ ಎಂದು ಅರ್ಥ. ಸತ್ತರ್ಕದೀಪಾವಲಿಯಲ್ಲಿ ಹೀಗೆ ಹೇಳಲಾಗಿದೆ – ಆಕಾಶದಂತೆ ವ್ಯಾಪ್ತವಾದುದರಿಂದ ಹಾಗೂ ಪ್ರಕಾಶಮಾನ-ವಾದುದರಿಂದ ವ್ಯಾಸರ ಚಿತ್ತದಲ್ಲಿರುವ ಅಭಿಪ್ರಾಯವೆಂಬ ಆಕಾಶದ ದೃಷ್ಟಿಯಿಂದ 'ಅವಚ್ಛಿನ್ನಾನಿ' ತಮ್ಮ ತಮ್ಮ ಬುದ್ಧಿಯ ದೃಷ್ಟಿಯಿಂದ ಪರಿಮಿತವಾದ ವ್ಯಾಪ್ತಿಯುಳ್ಳ ಆ ಮತಗಳನ್ನು 'ಇದು ನನ್ನ ಮತ, ಇದು ನನ್ನ ಮತ' ಎಂಬುದಾಗಿ ಅಂಗೀಕರಿಸಿ ಕೆಲವರು ವ್ಯವಹರಿಸುತ್ತಾರೆ. ಹೇಗೆ ಗೃಹ, ನಗರ ಮೊದಲಾದವುಗಳಿಂದ ಆಕಾಶಪ್ರದೇಶಗಳನ್ನು ಪರಿಮಿತಗೊಳಿಸಿ ಇದು ನನ್ನ ಪ್ರದೇಶ, ಇದು ನನ್ನ ಪ್ರದೇಶ ಎಂಬುದಾಗಿ ಜನಗಳು ವ್ಯವಹರಿಸುವರೋ ಹಾಗೆ. ಈ ಹಿಂದೆ 'ಜೈಮಿನಿಗಳ ಮತ' ಎಂಬ ಒಂದು ಮತದ ಪ್ರಸ್ತಾಪವಿದ್ದರೂ 'ಜೈಮಿನ್ಯಾದಿ ಮತಗಳ' ಎಂದು ಬಹುವಚನವನ್ನು ಮುಂದೆ ಹೇಳುವ ಮತಗಳ ದೃಷ್ಟಿಯಿಂದ ಪ್ರಯೋಗಿಸಲಾಗಿದೆ. ತಥಾಚ ಜೈಮಿನ್ಯಾದಿ ಮತಗಳಿಗೆ ವ್ಯಾಸ-ಮತದಿಂದ ಮತ್ತು ಪರಸ್ಪರವಾಗಿ ವಿರೋಧವಿಲ್ಲವೆಂದು ಅರ್ಥ.

॥ ಓಂ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ ॥ ೨೯ ॥

ಅಗ್ನ್ಯಾದಿಸೂಕ್ತಗಳಿಂದ ಬ್ರಹ್ಮನನ್ನು ಉಪಾಸನೆ ಮಾಡಿದಾಗ ಅಗ್ನ್ಯಾದಿಗಳಲ್ಲೇ ಪರಬ್ರಹ್ಮನ ಅಭಿವ್ಯಕ್ತಿಯಾಗುವ ಕಾರಣ ಅಗ್ನಿಸೂಕ್ತ ಮೊದಲಾದ ಸೂಕ್ತನಿಯಮವಿರುವುದೆಂದು ಆಶ್ಮರಥ್ಯರು ಹೇಳುವರು.

ಭಾ– ತತ್ರ ತತ್ರ ಪ್ರಸಿದ್ಧಾವಪಿ ಅಗ್ನ್ಯಾದಿಷು ಬ್ರಹ್ಮಣೋಽಭಿವ್ಯಕ್ತೇರಗ್ನ್ಯಾದಿಸೂಕ್ತನಿಯಮ ಇತ್ಯಾಶ್ಮರಥ್ಯಃ ॥ ೨೯ ॥

ಆಯಾಯಾ ಸೂಕ್ತ ಮೊದಲಾದವುಗಳಲ್ಲಿ ಬ್ರಹ್ಮನೇ ಪ್ರತಿಪಾದ್ಯನಾಗಿದ್ದರೂ ಅಗ್ನ್ಯಾದಿಗಳಲ್ಲಿ ಬ್ರಹ್ಮನ ಅಭಿವ್ಯಕ್ತಿಯಾಗುವ ಕಾರಣ ಇದು ಅಗ್ನಿ ಮೊದಲಾದವರ ಸೂಕ್ತ ಎಂಬ ಸೂಕ್ತನಿಯಮವಿರುವುದೆಂದು ಆಶ್ಮರಥ್ಯರು ಹೇಳುವರು.

(ಭಾ.ದೀ.) ನನು ಲೌಕಿಕಪ್ರಸಿದ್ಧೇಃ, ಅಜ್ಞಾನಾದಿಮೂಲತ್ವೇನ, ಅನ್ಯಥಾ ಉಪಪತ್ತಾವಪಿ ವೈದಿಕಾಗ್ನ್ಯಾದಿಸೂಕ್ತಮಂತ್ರಾದಿಪ್ರಸಿದ್ಧ್ಯನ್ಯಥಾನುಪಪತ್ತ್ಯಾ ಅಗ್ನ್ಯಾದೀನಾಂ ಸೂಕ್ತಾದಿಗತಾಗ್ನ್ಯಾದಿಶಬ್ದವಾಚ್ಯತ್ವಂ ಸ್ಯಾತ್, ತತ್ರಾಜ್ಞಾನಾದಿಮೂಲಕತ್ವಕಲ್ಪನಾಽಯೋಗೇನ ಅನ್ಯಥೋಪಪತ್ತ್ಯಭಾವಾತ್ । ನಾಪಿ ವ್ಯವಹಾರಾರ್ಥತ್ವೇನ ಅನ್ಯಥೋಪಪತ್ತಿಃ, ಅನಾದಿತ್ವಾತ್ ಇತ್ಯಾಶಂಕಾಂ ಪರಿಹರತ್ ಸೂತ್ರಂ ಪಠತಿ – **ಅಭಿವ್ಯಕ್ತೇರಿತಿ** ॥ ಅತ್ರ ಪೂರ್ವಸ್ಮಾದ್ ಅಪಿರನುವರ್ತನೀಯಃ । ತಚ್ಛಬ್ದಶ್ಚಾನುವೃತ್ತೋಽನೇಕಧಾ ವಿಪರಿಣೇತವ್ಯ ಇತ್ಯಾಶಯೇನ ತದ್ ವ್ಯಾಚಷ್ಟೇ – **ತತ್ರೇತಿ** ॥ 'ತತ್ರ ತತ್ರ' ಸೂಕ್ತಾದೌ ತಸ್ಯ ಬ್ರಹ್ಮಣ ಏವ 'ಪ್ರಸಿದ್ಧಾವಪಿ' ಪ್ರತಿಪಾದ್ಯತ್ವೇಽಪಿ ಅಗ್ನ್ಯಾದೀನಾಮಪ್ರತಿಪಾದ್ಯತ್ವೇಽಪೀತ್ಯರ್ಥಃ । 'ಅಗ್ನ್ಯಾದಿಷು' ಇತಿ ಸಾವಧಾರಣಮ್ । ಸೂತ್ರೇ 'ಅವಿರೋಧಮ್' ಇತ್ಯನುಷಕ್ತಪದತಾತ್ಪರ್ಯಮಾಹ – **ಅಗ್ನ್ಯಾದೀತಿ** ॥ ಆದಿಶಬ್ದಃ ಉಭಯತ್ರ ಯೋಜ್ಯಃ। ಯುಜ್ಯತ ಇತಿ ॥ ವಕ್ತೀತಿ ಶೇಷಃ।

ಅನೇನಾಪಿ ತತ್ತತ್ಸೂಕ್ತಾದೌ ಬ್ರಹ್ಮಣ ಏವ ಪ್ರತಿಪಾದ್ಯತ್ವೇಽಪಿ ಅಗ್ನಿವಾಯ್ವಾದೀನಾಮಪ್ರತಿಪಾದ್ಯತ್ವೇಽಪಿ 'ಅವಿರೋಧಃ' ಅಗ್ನ್ಯಾದಿಸೂಕ್ತನಿಯಮಃ ಇದಮಗ್ನಿಸೂಕ್ತಮ್ ಇದಂ ವಾಯುಸೂಕ್ತಮ್ ಇತಿ ಸೂಕ್ತನಿಯಮಃ, ಇಯಮಗ್ನಿವಿದ್ಯಾ ಇಯಂ ವಾಯುವಿದ್ಯಾ ಇತಿ ವಿದ್ಯಾನಿಯಮಶ್ಚ ಯುಜ್ಯತೇ। ಕಥಮ್? ತೈರಗ್ನ್ಯಾದಿಸೂಕ್ತಾದಿಭಿಸ್ತಸ್ಯ ಬ್ರಹ್ಮಣಸ್ತಸ್ಯಾಮ್ ಉಪಾಸ್ತೌ ಕೃತಾಯಾಂ ತತ್ರ ಅಗ್ನ್ಯಾದಿಷ್ವೇವ ತಸ್ಯ ಬ್ರಹ್ಮಣಃ 'ಅಭಿ' ಸ್ವೇಚ್ಛಯಾಽಭಿವ್ಯಕ್ತಿನಿಯಮಾತ್ ತದಭಿಪ್ರಾಯೇಣ ತತ್ಪ್ರಸಿದ್ಧೇರುಪಪತ್ತೇರಿತ್ಯೇವಂ ವೈದಿಕಾಗ್ನ್ಯಾದಿಸೂಕ್ತಾದಿಪ್ರಸಿದ್ಧ್ಯವಿರೋಧಮ್ ಆಶ್ಮರಥ್ಯಾಚಾರ್ಯೋ ವಕ್ತೀತಿ ಸೂತ್ರಾರ್ಥ ಉಕ್ತೋ ಭವತಿ।

ಲೌಕಿಕರ ಪ್ರಸಿದ್ಧಿಯು ಅಜ್ಞಾನಾದಿಮೂಲಕವೆಂದು ಹೇಳುವ ಮೂಲಕ ಆ ಪ್ರಸಿದ್ಧಿಗೆ ಉಪಪತ್ತಿಯನ್ನು ಹೇಳಬಹುದಾದರೂ ವೈದಿಕವಾದ ಅಗ್ನ್ಯಾದಿಸೂಕ್ತಗಳು ಅಗ್ನ್ಯಾದಿಮಂತ್ರಗಳು ಇತ್ಯಾದಿ ಪ್ರಸಿದ್ಧಿಯು ಬೇರೆ ರೀತಿಯಲ್ಲಿ ಉಪಪನ್ನವಾಗದಿರುವುದರಿಂದ ಅಗ್ನ್ಯಾದಿದೇವತೆಗಳಿಗೆ ಆ ಸೂಕ್ತಗಳಲ್ಲಿರುವ ಅಗ್ನ್ಯಾದಿ ಶಬ್ದವಾಚ್ಯತ್ವವು ಇರಲೇ ಬೇಕು. ಈ ವಿಷಯದಲ್ಲಿ ಅಜ್ಞಾನಾದಿಗಳು ಕಾರಣವೆಂಬ ಕಲ್ಪನೆಯನ್ನು ಮಾಡಲು ಸಾಧ್ಯವಿಲ್ಲದಿರುವುದರಿಂದ ಪ್ರಕಾರಾಂತರದಿಂದ ಇದು ಉಪಪನ್ನವಾಗಲಾರದು. ವೈದಿಕಶಬ್ದಗಳು ಅನಾದಿಕಾಲದಿಂದಿರುವುದರಿಂದ ಈ ಶಬ್ದಗಳನ್ನು ವ್ಯವಹಾರಕ್ಕೋಸ್ಕರವಾಗಿ ಅನ್ಯತ್ರ ಪ್ರಯೋಗಿಸಲಾಗಿದೆ ಎಂಬ ಕಾರಣವೂ ಸರಿಯಲ್ಲ ಎಂಬ ಆಶಂಕೆಯನ್ನು ಪರಿಹರಿಸುವ 'ಅಭಿವ್ಯಕ್ತೇಃ' ಎಂಬ ಸೂತ್ರವನ್ನು ಭಾಷ್ಯಕಾರರು ಪಠಿಸುತ್ತಿದ್ದಾರೆ. ಇಲ್ಲಿ ಹಿಂದಿನ ಸೂತ್ರದಿಂದ ಅಪಿಶಬ್ದವನ್ನು ಅನುವೃತ್ತಿಮಾಡಿಕೊಳ್ಳಬೇಕು.

ಅನುವೃತ್ತಿಯನ್ನು ಪಡೆದ ತತ್‌ಶಬ್ದವು ಅನೇಕರೀತಿಯಿಂದ ಬದಲಾವಣೆಯನ್ನು ಹೊಂದುವುದು ಎಂಬ ಅಭಿಪ್ರಾಯದಿಂದ ಆ ಪದವನ್ನು ಭಾಷ್ಯಕಾರರು 'ತತ್ರ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ತತ್ರ ತತ್ರ' ಆಯಾಯ ಸೂಕ್ತ ಮೊದಲಾದವುಗಳಲ್ಲಿ, ತಸ್ಯ – ಆ ಬ್ರಹ್ಮನಿಗೆ, ಪ್ರಸಿದ್ಧಾವಪಿ- ಪ್ರತಿಪಾದ್ಯತ್ವವಿದ್ದರೂ, ಅಗ್ನ್ಯಾದಿ ಬ್ರಹ್ಮಭಿನ್ನರಿಗೆ ಪ್ರತಿಪಾದ್ಯತ್ವವಿಲ್ಲದಿದ್ದರೂ ಎಂದು ಅರ್ಥ. ಭಾಷ್ಯದಲ್ಲಿ 'ಅಗ್ನ್ಯಾದಿಷು' ಎಂಬ ಪದವು ಅವಧಾರಣಸಹಿತವಾದುದು. ಸೂತ್ರದಲ್ಲಿ ಅವಿರೋಧಂ ಎಂಬ ಅನು-

ವೃತ್ತಿಮಾಡಿಕೊಂಡ ಪದದ ತಾತ್ಪರ್ಯವನ್ನು 'ಅಗ್ನ್ಯಾದಿ' ಎಂಬ ವಾಕ್ಯದಿಂದ ಹೇಳು-ತ್ತಿದ್ದಾರೆ. ಇಲ್ಲಿ ಆದಿಶಬ್ದವು (೧)ಎರಡೂ ಕಡೆ ಅನ್ವಯವನ್ನು ಹೊಂದುವುದು. 'ಯುಜ್ಯತೇ' ಎಂಬ ಪದದ ನಂತರ 'ವಕ್ತಿ' ಎಂಬ ಪದವು ಶೇಷವಾಗಿದೆ.

ಇದರಿಂದ 'ಅಪಿ' - ಆಯಾಯಾ ಸೂಕ್ತ ಮೊದಲಾದವುಗಳಲ್ಲಿ ಬ್ರಹ್ಮನೇ ಪ್ರತಿ-ಪಾದ್ಯನಾಗಿದ್ದರೂ, ಅಗ್ನಿ, ವಾಯು ಮೊದಲಾದವರು ಪ್ರತಿಪಾದ್ಯರಲ್ಲದಿದ್ದರೂ 'ಅವಿರೋಧಃ' ವಿರೋಧವಿಲ್ಲ. 'ಅಗ್ನ್ಯಾದಿಸೂಕ್ತನಿಯಮಃ' - ಇದು ಅಗ್ನಿಸೂಕ್ತ, ಇದು ವಾಯುಸೂಕ್ತ ಇತ್ಯಾದಿ ಸೂಕ್ತನಿಯಮ, ಹಾಗೆಯೇ ಇದು ಅಗ್ನಿವಿದ್ಯೆ, ಇದು ವಾಯುವಿದ್ಯೆ ಎಂಬ ವಿದ್ಯಾನಿಯಮವೂ ಯುಕ್ತವಾಗುವುದು. ಹೇಗೆಂದರೆ? ತೈಃ - ಆ ಅಗ್ನ್ಯಾದಿಸೂಕ್ತ ಮೊದಲಾದವುಗಳಿಂದ, ತಸ್ಯ- ಆ ಬ್ರಹ್ಮನ, ತಸ್ಯಾಂ - ಉಪಾಸನೆಯು ಮಾಡಲ್ಪಟ್ಟಾಗ, ತತ್ರ - ಅಗ್ನ್ಯಾದಿಗಳಲ್ಲೇ, ತಸ್ಯ - ಆ ಬ್ರಹ್ಮನ, ಅಭಿ- ಸ್ವೇಚ್ಛೆಯಿಂದ ಪರಮಾತ್ಮನ ಅಭಿವ್ಯಕ್ತಿಯಾಗುವುದೆಂಬ ನಿಯಮವಿರುವುದರಿಂದ ಆ ಅಭಿಪ್ರಾಯ-ದಿಂದ ಇದು ಅಗ್ನಿಸೂಕ್ತ, ಇದು ಅಗ್ನಿವಿದ್ಯೆ ಎಂಬ ಪ್ರಸಿದ್ಧಿಯು ಉಪಪನ್ನವಾಗುವುದು. ಹೀಗೆ ವೈದಿಕವಾದ ಅಗ್ನ್ಯಾದಿಸೂಕ್ತ ಮೊದಲಾದವುಗಳ ಪ್ರಸಿದ್ಧಿಯ ವಿರೋಧ-ವಿಲ್ಲದಿರುವುದನ್ನು ಆಶ್ಮರಥ್ಯಾಚಾರ್ಯರು ಹೇಳುವರು ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

(೧) 'ಅಗ್ನ್ಯಾದಿಸೂಕ್ತನಿಯಮಃ' ಎಂಬಲ್ಲಿರುವ ಆದಿಶಬ್ದವನ್ನು 'ಅಗ್ನ್ಯಾದಿ', 'ಸೂಕ್ತಾದಿ' ಎಂದು ಎರಡೂ ಕಡೆ ಅನ್ವಯಿಸಬೇಕು. ಹಾಗೆ ಅನ್ವಯಿಸಿದಾಗ 'ಇದು ಅಗ್ನಿಸೂಕ್ತ' 'ಇದು ವಾಯುಸೂಕ್ತ' ಎಂಬ ನಿಯಮ, ಹಾಗೆಯೇ 'ಇದು ಅಗ್ನಿವಿದ್ಯೆ' 'ಇದು ವಾಯುವಿದ್ಯೆ' ಎಂಬ ಅರ್ಥವು ಲಭಿಸುವುದೆಂದು ಭಾವ.

**ಸೂ– ॥ ಓಂ ಅನುಸ್ಮೃತೇರ್ಬಾದರಿಃ ಓಂ ॥ ೩೦ ॥**

ಆಯಾಯಾ ಸೂಕ್ತಾದಿಗಳ ಮೂಲಕ ಉಪಾಸನೆ ಮಾಡುವವರಿಂದ ಅಗ್ನ್ಯಾದಿಗಳಲ್ಲೇ ಬ್ರಹ್ಮನನ್ನು ಧ್ಯಾನಿಸತಕ್ಕದ್ದು ಎಂಬ ಕಾರಣದಿಂದ ಅಗ್ನಿಸೂಕ್ತ ಇತ್ಯಾದಿಗಳ ಪ್ರಸಿದ್ಧಿಯ ವಿರೋಧವಿಲ್ಲವೆಂದು ಬಾದ-ರಾಯಣರ ಪುತ್ರರಾದ ಶುಕಾಚಾರ್ಯರು ಹೇಳುತ್ತಾರೆ.

**ಭಾ– ತತ್ರ ತತ್ರೋಕ್ತಸ್ಯ ವಿಷ್ಣೋಃ ಅಗ್ನ್ಯಾದಿಷು ಅನುಸ್ಮರ್ಯಮಾಣತ್ವಾತ್ ತನ್ನಿಯಮ ಇತಿ ಬಾದರಿಃ ॥ ೩೦ ॥**

ಆಯಾಯಾ ಸೂಕ್ತಪ್ರತಿಪಾದ್ಯನಾದ ವಿಷ್ಣುವು ಅಗ್ನ್ಯಾದಿಗಳಲ್ಲಿ ಧ್ಯಾನಿಸ -ಲ್ಪಡತಕ್ಕವನಾದ್ದರಿಂದ ಅಗ್ನ್ಯಾದಿಸೂಕ್ತನಿಯಮವಿರುವುದೆಂದು ಬಾದರಿಗಳು ಹೇಳುವರು.

(ಭಾ.ದೀ.) ಪ್ರಕಾರಾಂತರೇಣ ಸೂಕ್ತಾದಿನಿಯಮಸ್ಯ ಅನ್ಯಥೋಪಪತ್ತಿಂ ಕಥಯತ್ಸೂತ್ರಮುಪನ್ಯಸ್ಯ ವ್ಯಾಚಷ್ಟೇ – **ಅನುಸ್ಮೃತೇರಿತಿ** ॥ ಅತ್ರ ಪೂರ್ವವದ-ಧ್ಯಾಹಾರಾದಿಃ । 'ತತ್ರ ತತ್ರ' - ಅಗ್ನ್ಯಾದಿವಿದ್ಯಾಸು । ಸೂತ್ರೇಽವಿರೋಧಮ್ ಇತ್ಯನುಷಕ್ತಪದತಾತ್ಪರ್ಯಮಾಹ – **ತನ್ನಿಯಮ ಇತಿ** ॥ ಅನೇನಾಪಿ ವಿಷ್ಣೋರೇವ ಅಗ್ನ್ಯಾದಿವಿದ್ಯಾಪ್ರತಿಪಾದ್ಯತ್ವೇಽಪಿ ಯತಃ ತಸ್ಯಾಗ್ನ್ಯಾದಿವಿದ್ಯಾಸು ಉಕ್ತಸ್ಯ ವಿಷ್ಣೋಃ ತೈಸ್ತತ್ತತ್ಸೂಕ್ತಾದ್ಯುಪಾಸಕೈಃ ತತ್ರಾಗ್ನ್ಯಾದಿಷ್ವೇವ 'ಅನುಸ್ಮೃತೇಃ' ಅನುಸ್ಮರ್ತವ್ಯತ್ವಾದ್ ಪ್ರತಿಪತ್ತವ್ಯತ್ವಾದ್ ಅವಿರೋಧಸ್ತನ್ನಿಯಮಃ ಅಗ್ನ್ಯಾದಿಸೂಕ್ತಾದಿವ್ಯವಸ್ಥಾ ಯುಜ್ಯತೇ । ಅತೋ ನೈತದನ್ಯಥಾನುಪಪತ್ತ್ಯಾ ಅನ್ಯೇಷಾಂ ವಾಚ್ಯತ್ವಂ ಕಲ್ಪ್ಯಮಿತಿ ಸೂಕ್ತಾದಿ-ಪ್ರಸಿದ್ಧ್ಯವಿರೋಧಂ 'ಬಾದರಿಃ' ಬಾದರಾತ್ಮಜಃ ಶುಕಾಚಾರ್ಯೋ ವಕ್ತೀತಿ ಸೂತ್ರ-ವೃತ್ತಿದರ್ಶಿತಾ ಭವತಿ ॥

ಮತ್ತೊಂದು ರೀತಿಯಿಂದ ಸೂಕ್ತಾದಿ ನಿಯಮಗಳಿಗೆ ಉಪಪತ್ತಿಯನ್ನು ಹೇಳುವ ಸೂತ್ರವನ್ನು 'ಅನುಸ್ಮೃತೇಃ' ಇತ್ಯಾದಿಯಾಗಿ ಉಪನ್ಯಾಸಮಾಡಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ. ಇಲ್ಲಿ ಹಿಂದಿನ ಸೂತ್ರದಲ್ಲಿ ಮಾಡಿದಂತೆ ಅಧ್ಯಾಹಾರ ಮೊದಲಾದವುಗಳನ್ನು ಮಾಡಬೇಕು. ಭಾಷ್ಯದಲ್ಲಿ 'ತತ್ರ ತತ್ರ' ಎಂದರೆ ಅಗ್ನ್ಯಾದಿ ವಿದ್ಯೆಗಳಲ್ಲಿ ಎಂದು ಅರ್ಥ. ಈ ಸೂತ್ರದಲ್ಲಿ ಹಿಂದಿನ ಸೂತ್ರದಿಂದ ಅನುವೃತ್ತಿ ಮಾಡಿ-ಕೊಂಡಿರುವ 'ಅವಿರೋಧಮ್' ಎಂಬ ಪದದ ತಾತ್ಪರ್ಯವನ್ನು ಭಾಷ್ಯದಲ್ಲಿ 'ತನ್ನಿಯಮಃ' ಎಂಬ ಪದದಿಂದ ಹೇಳಲಾಗಿದೆ. ಇದರಿಂದ ಅಪಿ - ವಿಷ್ಣುವೇ ಅಗ್ನ್ಯಾದಿ ವಿದ್ಯೆಗಳಲ್ಲಿ ಪ್ರತಿಪಾದ್ಯನಾಗಿದ್ದರೂ, ಯಾವ ಕಾರಣದಿಂದ, ತಸ್ಯ- ಆ ಅಗ್ನ್ಯಾದಿ

ವಿದ್ಯೆಗಳಲ್ಲಿ ಉಕ್ತನಾಗಿರುವ ವಿಷ್ಣುವು, ತೈಃ - ಆಯಾಯಾ ಸೂಕ್ತಾದಿಗಳ ಉಪಾಸಕ-ರಿಂದ, ತತ್ರ- ಆ ಅಗ್ನ್ಯಾದಿಗಳಲ್ಲೇ, ಅನುಸ್ಮೃತೇಃ - ಅನುಸರ್ತವ್ಯತ್ವಾದ್ ಅಂದರೆ ಧ್ಯಾನಿಸಲ್ಪಡಬೇಕಾದುದರಿಂದ, ಅವಿರೋಧಃ - ಅಂದರೆ ತನ್ನಿಯಮಃ ಅಂದರೆ ಅಗ್ನ್ಯಾದಿ ಸೂಕ್ತಾದಿಗಳ ವ್ಯವಸ್ಥೆಯು ಯುಕ್ತವಾಗುವುದು. ಆದ್ದರಿಂದ ಈ ಅಗ್ನ್ಯಾದಿ-ಸೂಕ್ತವ್ಯವಸ್ಥೆಯು ಬೇರೆ ರೀತಿಯಿಂದ ಉಪಪನ್ನವಾಗಲಾರದು ಎಂಬ ಕಾರಣದಿಂದ ಅಗ್ನ್ಯಾದಿಗಳು ಆಯಾಯಾ ಸೂಕ್ತಗಳಿಂದ ಮುಖ್ಯಪ್ರತಿಪಾದ್ಯರು ಎಂದು ಕಲ್ಪಿಸತಕ್ಕದ್ದಲ್ಲ ಎಂಬುದಾಗಿ ಸೂಕ್ತಾದಿಗಳ ಪ್ರಸಿದ್ಧಿಯ ವಿರೋಧವಿಲ್ಲದಿರುವುದನ್ನು ಬಾದರಿಃ ಅಂದರೆ ಬಾದರಾಯಣರ ಪುತ್ರರಾದ ಶುಕಾಚಾರ್ಯರು ಹೇಳುವರು ಎಂಬುದಾಗಿ ಈ ಸೂತ್ರದ ವ್ಯಾಖ್ಯಾನವು ಭಾಷ್ಯದಿಂದ ತಿಳಿದುಬರುವುದು.

**ಸೂ– ॥ ಓಂ ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ಓಂ ॥ ೩೧ ॥**

ಅಗ್ನ್ಯಾದಿಸೂಕ್ತಗಳಿಂದ ಉಪಾಸನೆ ಮಾಡತಕ್ಕವರಿಗೆ ಅಗ್ನ್ಯಾದಿಗಳ ಪ್ರಾಪ್ತಿಯಾಗುವುದೆಂಬ ಕಾರಣದಿಂದ ಸೂಕ್ತಾದಿಗಳ ನಿಯಮ ಎಂದು ಜೈಮಿನಿಗಳು ಹೇಳುತ್ತಾರೆ. 'ತಂ ಯಥಾ ಯಥೋಪಾಸತೇ ತಥೈವ ಭವತಿ' ಎಂಬ ಶ್ರುತಿಯು ಜೈಮಿನಿಮತವನ್ನು ಹಾಗೆಯೇ ತಿಳಿಸುತ್ತಿದೆ.

**ಭಾ– ಸಾಕ್ಷಾದಪ್ಯವಿರೋಧಂ ವದನ್ ಜೈಮಿನಿಃ ಸೂಕ್ತಾದಿನಿಯಮ-**
**ಮಗ್ನ್ಯಾದಿ ಸಂಪ್ರಾಪ್ತ್ಯಾ ಮನ್ಯತೇ ।**

ಅಗ್ನ್ಯಾದಿಶಬ್ದಗಳಿಗೆ ಮುಖ್ಯವೃತ್ತಿಯಿಂದ ಬ್ರಹ್ಮವಾಚಕತ್ವವಿದ್ದರೂ ವಿರೋಧವಿಲ್ಲ ಎಂದು ಹೇಳುವ ಜೈಮಿನಿಗಳು ಸೂಕ್ತಾದಿಗಳ ನಿಯಮವು ಅಗ್ನ್ಯಾದಿಗಳ ಪ್ರಾಪ್ತಿಯಾಗುವ ಕಾರಣದಿಂದ ಇರುವುದು ಎಂಬುದಾಗಿ ತಿಳಿಯುವರು.

(ಭಾ.ದೀ.) ರೀತ್ಯಂತರೇಣ ಸೂಕ್ತಾದಿನಿಯಮಸ್ಯ ಅನ್ಯಥೋಪಪತ್ತಿಂ ಕಥಯತ್ ಸೂತ್ರಮುಪನ್ಯಸ್ಯತಿ – **ಸಂಪತ್ತೇರಿತಿ** ॥ ಜೈಮಿನಿಮತಸ್ಯ ಪೂರ್ವಮುಪನ್ಯಸ್ತತ್ವಾತ್

**ಕಿಮರ್ಥಂ ಪುನರ್ವಚನಮಿತಿ ಮಂದಾಶಂಕಾನಿರಾಸಾಯ ಉಭಯಾನ್ವಯೀತಿಶಬ್ದ-ಪರಾಮೃಷ್ಟಪೂರ್ವೋಕ್ತಾನುವಾದೇನ ವಿಷಯಭೇದಂ ದರ್ಶಯನ್ ಸೂತ್ರಂ ವ್ಯಾಚಷ್ಟೇ – ಸಾಕ್ಷಾದಿತಿ ॥ ಅಗ್ನ್ಯಾದಿಶಬ್ದಾನಾಂ ಮುಖ್ಯತೋ ಬ್ರಹ್ಮವಾಚಕತ್ವೇಽಪಿ 'ಅವಿರೋಧಂ' ಲೌಕಿಕವ್ಯವಹಾರವಿರೋಧಾಭಾವಂ ವದನ್ ಇತ್ಯರ್ಥಃ । ಅತ್ರಾಪಿ ಅನುವೃತ್ತಸ್ಯ ಅವಿರೋಧಮ್ ಇತ್ಯಸ್ಯಾರ್ಥಮಾಹ – ಸೂಕ್ತಾದೀತಿ ॥ ನಿಯಮೋ ವ್ಯವಸ್ಥಾ। ಸಂಪ್ರಾಪ್ತ್ಯಾ ನಿಮಿತ್ತಭೂತಯಾ ಇತಿ ಶೇಷಃ।**

ಸೂಕ್ತಾದಿಗಳ ನಿಯಮವು ಪ್ರಕಾರಾಂತರದಿಂದ ಉಪಪನ್ನವಾಗುವುದೆಂದು ಮತ್ತೊಂದು ರೀತಿಯಿಂದ ಹೇಳುವ ಸೂತ್ರವನ್ನು ಭಾಷ್ಯಕಾರರು 'ಸಂಪತ್ತೇಃ' ಎಂಬುದಾಗಿ ಉಪನ್ಯಾಸ ಮಾಡುತ್ತಿದ್ದಾರೆ. ಜೈಮಿನಿಮತವನ್ನು ಹಿಂದೆಯೇ ಹೇಳಿರುವುದರಿಂದ ಪುನಃ ಅದೇ ಮತವನ್ನು ಹೇಳುವ ಆವಶ್ಯಕತೆಯೇನು? ಎಂಬ ಮಂದಮತಿಗಳ ಆಶಂಕೆಯನ್ನು ನಿರಾಕರಿಸಲು ಎರಡೂ ಕಡೆ ಅನ್ವಯ ಹೊಂದುವ ಇತಿಶಬ್ದದಿಂದ ಪರಾಮರ್ಶಿಸಲ್ಪಡುವ ಹಿಂದೆ ಹೇಳಿದ ವಿಷಯವನ್ನು ಅನುವಾದ ಮಾಡಿ ಹಿಂದೆ ಹೇಳಿದ ವಿಷಯಕ್ಕಿಂತ ಇಲ್ಲಿ ಹೇಳುವ ವಿಷಯವು ಭಿನ್ನವಾಗಿರುವುದೆಂದು ತಿಳಿಸುತ್ತಾ, ಸೂತ್ರವನ್ನು 'ಸಾಕ್ಷಾತ್' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಅಗ್ನ್ಯಾದಿ-ಶಬ್ದಗಳಿಗೆ ಮುಖ್ಯವೃತ್ತಿಯಿಂದ ಬ್ರಹ್ಮವಾಚಕತ್ವವಿದ್ದರೂ ಅವಿರೋಧವನ್ನು ಅಂದರೆ ಲೌಕಿಕವ್ಯವಹಾರವಿರೋಧವಿಲ್ಲದಿರುವುದನ್ನು ಹೇಳುವ ಜೈಮಿನಿಗಳು ಎಂದು ಅರ್ಥ. ಈ ಸೂತ್ರದಲ್ಲೂ ಅನುವೃತ್ತಿಯನ್ನು ಪಡೆಯುವ 'ಅವಿರೋಧಮ್' ಎಂಬ ಪದದ ಅರ್ಥವನ್ನು 'ಸೂಕ್ತಾದಿ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಈ ವಾಕ್ಯದಲ್ಲಿ ನಿಯಮ - ಎಂದರೆ ವ್ಯವಸ್ಥೆ ಎಂದು ಅರ್ಥ. ಸಂಪ್ರಾಪ್ತ್ಯಾ - ಎಂಬ ಪದಕ್ಕೆ ನಿಮಿತ್ತಭೂತಯಾ ಎಂಬ ಪದವು ಶೇಷವಾಗಿ ಸೇರುವುದು.

**ಭಾ– 'ತಂ ಯಥಾ ಯಥೋಪಾಸತೇ ತದೇವ ಭವತಿ' ಇತಿ ದರ್ಶಯತಿ ॥**

ಅಗ್ನ್ಯಾದಿಗಳಲ್ಲಿ ಭಗವದುಪಾಸಕರಿಗೆ ಅಗ್ನ್ಯಾದಿಪ್ರಾಪ್ತಿಯಾಗುವುದೆಂದು 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂಬ ಶ್ರುತಿಯು ತಿಳಿಸುವುದು.

(ಭಾ.ದೀ.) ನನು ಅಗ್ನ್ಯಾದಿಷು ಭಗವದುಪಾಸ್ತೌ ಅಗ್ನ್ಯಾದಿಪ್ರಾಪ್ತಿರ್ಭವತಿ ಇತ್ಯೇತತ್ ಕುತಃ? ಇತ್ಯತಃ ಸೂತ್ರಸೂಚಿತಾಂ ಶ್ರುತಿಮುದಾಹರತಿ – **ತಮ್ ಇತಿ** ॥ 'ತಂ' ಪರಮಾತ್ಮಾನಂ ಯೇನ ಯೇನ ಪ್ರಕಾರೇಣ ಉಪಾಸತೇ ಅಧಿಕಾರಿಣಃ ತೇನ ಪ್ರಕಾರೇಣ ತದೇವ ರೂಪಂ 'ಭವತಿ' ಪ್ರಾಪ್ನುವಂತಿ ಇತ್ಯರ್ಥಃ । ತತ್ತ್ವಪ್ರದೀಪೇಽಪಿ 'ಯಾದೃಶೋ ಭಾವಿತಸ್ತ್ವೀಶಃ ತಾದೃಶೋ ಜೀವ ಆಭವೇತ್' ಇತಿ ತೃತೀಯ-ತಾತ್ಪರ್ಯೋಕ್ತೇಃ 'ತದೇವ ಭವತಿ' ತಥೈವ ಭವತಿ । ಯತ್ಪ್ರಕಾರೇಣೋಪಾಸ್ತೇ ತತ್ಪ್ರಕಾರೇಣ ಭವತೀತ್ಯಯಮೇವಾರ್ಥ ಉಕ್ತಃ । **ತತ್ತ್ವಪ್ರದೀಪಕಾರಪಕ್ಷೇ** 'ಉಪಾಸತೇ' ಇತ್ಯೇಕವಚನಮ್ । ಧಾತ್ವಂತರಮೇತತ್ ।

ಅಗ್ನ್ಯಾದಿಗಳಲ್ಲಿ ಭಗವಂತನ ಉಪಾಸನೆಯನ್ನು ಮಾಡಿದಾಗ ಅಗ್ನ್ಯಾದಿಗಳ ಪ್ರಾಪ್ತಿಯಾಗುವುದೆಂಬ ವಿಷಯದಲ್ಲಿ ಪ್ರಮಾಣವೇನು? ಎಂಬ ಶಂಕೆಗೆ ಉತ್ತರವಾಗಿ ಸೂತ್ರವು ಸೂಚಿಸುವ ಶ್ರುತಿಯನ್ನು ಭಾಷ್ಯಕಾರರು '**ತಮ್**' ಎಂದು ಉದಾಹರಿಸುತ್ತಿದ್ದಾರೆ. **ತಮ್** - ಆ ಪರಮಾತ್ಮನನ್ನು ಯಾವ ಪ್ರಕಾರದಿಂದ ಉಪಾಸನೆ ಮಾಡುವರೋ ಆ ಪ್ರಕಾರದಿಂದ ಅದೇ ಭಗವದ್ರೂಪವನ್ನು ಪಡೆಯುವರು ಎಂದು ಅರ್ಥ. ತತ್ತ್ವ-ಪ್ರದೀಪದಲ್ಲೂ ಕೂಡ – 'ಯಾದೃಶೋ ಭಾವಿತಸ್ತ್ವೀಶಃ ತಾದೃಶೋ ಜೀವ ಆಭವೇತ್' - ಪರಮಾತ್ಮನು ಯಾವ ರೀತಿಯಾಗಿ ಉಪಾಸಿಸಲ್ಪಡುವನೋ ಉಪಾಸಕನಾದ ಜೀವನು ಅದೇ ರೂಪವನ್ನು ಹೊಂದುವನು ಎಂದು ಮೂರನೆಯ ಸ್ಕಂಧ ಭಾಗವತತಾತ್ಪರ್ಯ-ದಲ್ಲಿ ಹೇಳಿರುವುದರಿಂದ, ತದೇವ ಭವತಿ - ಎಂದರೆ ಹಾಗೆಯೇ ಆಗುವನು. ಯಾವ ಪ್ರಕಾರದಿಂದ ಉಪಾಸನೆ ಮಾಡುವನೋ ಆ ಪ್ರಕಾರವುಳ್ಳವನೇ ಆಗುವನು ಎಂಬು-ದಾಗಿ ಇದೇ ಅರ್ಥವನ್ನು ಹೇಳಲಾಗಿದೆ. ತತ್ವಪ್ರದೀಪಕಾರರ ಪಕ್ಷದಲ್ಲಿ 'ಉಪಾಸತೇ' ಎಂಬ ಪದವು ಏಕವಚನಾಂತವಾಗಿದ್ದು ಬೇರೆಯೇ ಧಾತುವಿನಿಂದ ನಿಷ್ಪನ್ನವಾದ ಶಬ್ದ-ವಾಗಿದೆ.

(ಭಾ.ದೀ.) ಅನೇನ ಯತಃ ಅಗ್ನ್ಯಾದಿಸೂಕ್ತಾದಿಷು ಮುಖ್ಯತಃ ಪರಬ್ರಹ್ಮಣ ಏವ ಪ್ರತಿಪಾದ್ಯತ್ವೇಽಪಿ ಅವಿರೋಧಃ, ಸೂಕ್ತಾದಿನಿಯಮೋ ಯುಜ್ಯತೇ ಅತಃ ನ ತದನ್ಯಥಾನುಪಪತ್ತ್ಯಾ ಅನ್ಯೇಷಾಂ ವಾಚ್ಯತ್ವಂ ಮಂತವ್ಯಮ್ । ಕಥಮಿದಂ ಯುಜ್ಯತೇ?

ತ್ಯೆಃ ಅಗ್ನ್ಯಾದಿಷು ಭಗವದುಪಾಸಕಾನಾಮ್ ಅಗ್ನ್ಯಾದಿಸಂಪತ್ತೇಃ ಪ್ರಾಪ್ತೇಃ। ನ ಚ ತದಸಿದ್ಧಿಃ । 'ಹಿ' ಯಸ್ಮಾತ್ ತಮಿತಿ ಪ್ರಸಿದ್ಧಾ ಶ್ರುತಿಃ 'ತಥಾ' ಅಗ್ನ್ಯಾದ್ಯಧಿಕರಣಕೋಪಾಸ್ತ್ಯಾ ಅಗ್ನ್ಯಾದಿಪ್ರಾಪ್ತಿರ್ಭವತೀತಿ 'ದರ್ಶಯತಿ' ಪ್ರತಿಪಾದಯತಿ। ಸಾಕ್ಷಾದಿತಿ ಲೌಕಿಕವ್ಯವಹಾರೇಽವಿರೋಧಂ ವದನ್ ಜೈಮಿನಿಃ ಸೂತ್ರೇಷು 'ಅವಿರೋಧಮ್' ಅನಿಯಮಾಖ್ಯವಿರೋಧಾಭಾವಂ ನಿಯಮಂ 'ಮನ್ಯತೇ' ವರ್ಣಯತಿ – ಇತಿ ಸೂತ್ರಾರ್ಥ ಉಕ್ತೋ ಭವತಿ।

ಇದರಿಂದ – ಯಾವ ಕಾರಣದಿಂದಾಗಿ ಅಗ್ನ್ಯಾದಿಸೂಕ್ತಗಳಲ್ಲಿ ಮುಖ್ಯತಃ ಪರಬ್ರಹ್ಮನೇ ಪ್ರತಿಪಾದ್ಯನಾಗಿದ್ದರೂ ಅವಿರೋಧಃ ಅಂದರೆ ಸೂತ್ರಾದಿನಿಯಮವು ಯುಕ್ತವಾಗುವುದೋ ಆ ಕಾರಣದಿಂದ ಆ ನಿಯಮವು ಪ್ರಕಾರಾಂತರದಿಂದ ಉಪಪನ್ನವಾಗಲಾರದು ಎಂಬ ಕಾರಣದಿಂದ ಇತರರಿಗೆ ಅಗ್ನ್ಯಾದಿಶಬ್ದವಾಚ್ಯತ್ವವಿದೆ ಎಂದು ತಿಳಿಯತಕ್ಕದ್ದಲ್ಲ. ಇದು ಹೇಗೆ ಯುಕ್ತವಾಗುವುದು? ಏಕೆಂದರೆ ಆ ಸೂಕ್ತಗಳಿಂದ ಅಗ್ನ್ಯಾದಿದೇವತೆಗಳಲ್ಲಿ ಭಗವಂತನನ್ನು ಉಪಾಸನೆ ಮಾಡುವವರಿಗೆ 'ಅಗ್ನ್ಯಾದಿಸಂಪತ್ತೇಃ' - ಅಗ್ನ್ಯಾದಿಗಳ ಪ್ರಾಪ್ತಿಯಾಗುವುದು ಆದ್ದರಿಂದ. ಆ ಉಪಾಸಕರಿಗೆ ಅಗ್ನ್ಯಾದಿ ಪ್ರಾಪ್ತಿಯಾಗುವುದು ಎನ್ನುವುದು ಪ್ರಮಾಣಗಳಿಂದ ಸಿದ್ಧವಲ್ಲ ಎಂದು ಹೇಳತಕ್ಕದ್ದಲ್ಲ. ಏಕೆಂದರೆ 'ಹಿ' - ಯಾವ ಕಾರಣದಿಂದಾಗಿ, 'ತಂ ಯಥಾ' ಎಂಬ ಪ್ರಸಿದ್ಧವಾದ ಶ್ರುತಿಯು, ತಥಾ- ಅಗ್ನಿ ಮೊದಲಾದ ಅಧಿಕರಣಗಳಲ್ಲಿ ಉಪಾಸನೆ ಮಾಡತಕ್ಕವರಿಗೆ ಆ ಉಪಾಸನೆಯಿಂದ ಅಗ್ನ್ಯಾದಿಪ್ರಾಪ್ತಿಯಾಗುವುದೆಂದು, ದರ್ಶಯತಿ - ಪ್ರತಿಪಾದಿಸುವುದು. 'ಸಾಕ್ಷಾತ್' ಎಂಬ ಸೂತ್ರದಲ್ಲಿ ಹೇಳಿದಂತೆ ಲೌಕಿಕವ್ಯವಹಾರವಿರೋಧವಿಲ್ಲದಿರುವುದನ್ನು ಹೇಳುವ ಜೈಮಿನಿಗಳು ಸೂತ್ರಗಳಲ್ಲಿ, ಅವಿರೋಧಂ - ಅನಿಯಮವೆಂಬ ವಿರೋಧವಿಲ್ಲದಿರುವುದನ್ನು ಅಂದರೆ ನಿಯಮವನ್ನು, ಮನ್ಯತೇ - ವರ್ಣಿಸುತ್ತಾರೆ ಎಂದು ಸೂತ್ರಾರ್ಥವನ್ನು ಹೇಳಿದಂತಾಗುವುದು.

(ಭಾ.ದೀ.) ಯದ್ಯಪಿ ಉತ್ತರಸೂತ್ರದ್ವಯೇ ಸಾಧಕವ್ಯಾಪಾರೋಕ್ತೇಃ ಅಲ್ಪಾಕ್ಷರತ್ವಾಚ್ಚ ದೃಷ್ಟೇರಿತಿ ವಾಚ್ಯಮ್, ನ ತ್ವಭಿವ್ಯಕ್ತೇರಿತಿ, ತಸ್ಯಾ ಈಶ್ವರವ್ಯಾಪಾರತ್ವಾತ್ । ತಥಾಽಪಿ ಅಭಿವ್ಯಕ್ತಿಂ ವಿನಾ ದೃಷ್ಟೇರಯೋಗಾತ್ ತದ್ಗ್ರಹಣೇನೋಭಯಲಾಭಾತ್

ಪ್ರಾಧಾನ್ಯಾತ್ ಈಶ್ವರವ್ಯಾಪಾರ ಏವೋಕ್ತಃ । ಯದ್ಯಪಿ ಅನುಸ್ಮೃತಿಶಬ್ದಿತೋಪಾಸ್ತ್ಯ-ನಂತರಮಭಿವ್ಯಕ್ತೇಃ ತದನಂತರಂ ತತ್ಸಂಪತ್ತೇಃ ಪ್ರಥಮಮನುಸ್ಮೃತೇರಿತಿ ವಕ್ತವ್ಯಮ್ । ತಥಾಽಪಿ 'ಅಭಿವ್ಯಕ್ತಿಸಂಪತ್ತ್ಯುಭಯಾನಂತರಮಪಿ ಉಪಾಸ್ತಿಃ ಕಾರ್ಯಾ' ಇತಿ ದರ್ಶ-ಯಿತುಮ್ ಅನುಸ್ಮೃತೇರ್ಮಧ್ಯೇ ನಿವೇಶಃ - ಇತಿ ದ್ರಷ್ಟವ್ಯಮ್ ।

ಯದ್ಯಪಿ ಋಗ್ಭಾಷ್ಯೇ –

'ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ ತು ।
ಅಗ್ನ್ಯಾದಿಸೂಕ್ತವಾಚ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥'

ಇತ್ಯಗ್ನ್ಯಾದ್ಯಂತರ್ಗತವಿಷ್ಣುವಾಚಕಾಗ್ನ್ಯಾದಿಶಬ್ದಯೋಗಃ ಸೂಕ್ತಸ್ಯ ವ್ಯವಸ್ಥಾಪಕ ಉಕ್ತಃ । ತಥಾ ಚ – ಅಗ್ನ್ಯಾದಿಶಬ್ದಾಸ್ತತ್ತತ್ ಸೂಕ್ತಾನಿ ಚ ಅಗ್ನ್ಯಾದಿಗತಬ್ರಹ್ಮರೂಪೇಷು ಏವ ಮುಖ್ಯಾನಿ । ಏವಂ ಬಹಿರ್ಗತರೂಪೇಷು ಚಾತೀತಾನಾಗತವರ್ತಮಾನಾ-ಗ್ನ್ಯಾದಿಷ್ವಮುಖ್ಯಾನೀತಿ ವ್ಯವಸ್ಥಾ ಸಿದ್ಧ್ಯತಿ ।

ತಥಾಽಪಿ ಇಹ ಅಭಿವ್ಯಕ್ತಿರ್ವಾ ಅಗ್ನ್ಯಾದಿಸೂಕ್ತೋಪಾಸಕೈಃ ಅಗ್ನ್ಯಾದಿಗತತ್ವೇನ ಅನುಸ್ಮರ್ತವ್ಯತ್ವಂ ವಾ ಸಂಪ್ರಾಪ್ತಿರ್ವಾ ತತ್ತತ್ಸೂಕ್ತವ್ಯವಸ್ಥಾಪಕಮಿತ್ಯನುಷ್ಠಾನ-ವಿಶೇಷೋಪಯೋಗಿತಯಾ ಸೌರಸಾವಿತ್ರವಾಮನವಿಷ್ಣ್ವಾದಿಸೂಕ್ತಾದಿವ್ಯವಸ್ಥಾರ್ಥಂ ಚ ವ್ಯವಸ್ಥಾಪಕಾಂತರಮುಕ್ತಮ್ ಇತ್ಯವಿರೋಧಃ । ಲೌಕಿಕವೈದಿಕವ್ಯವಹಾರಯೋಃ ಅಗ್ನ್ಯಾದೌ ಉಪಚರಿತತ್ವಬೀಜಂ ತು ತಯೋಸ್ತತ್ರ ಮುಖ್ಯತ್ವಾಂಗೀಕಾರೇ 'ತಥಾ ದೃಷ್ಟ್ಯುಪದೇಶಾತ್' ಇತ್ಯನೇನ ಸೂಚಿತಃ । 'ಸರ್ವನಾಮಾ' ಇತ್ಯಾದಿಶ್ರುತಿವಿರೋ-ಧಾದಿರೂಪಪ್ರಾಗುಕ್ತಾನುಪಪತ್ತಿರಿತಿ ಟೀಕಾಯಾಮೇವೋಕ್ತಮ್ ।

ಯದ್ಯಪಿ, [1]ಮುಂದಿನ ಎರಡು ಸೂತ್ರಗಳಲ್ಲಿ ಸಾಧಕರ ವ್ಯಾಪಾರವನ್ನು ಹೇಳಿರುವುದರಿಂದ ಮತ್ತು ಅಲ್ಪಾಕ್ಷರವಾಗುವುದರಿಂದ ದೃಷ್ಟೇಃ ಎಂದೇ ಹೇಳಬೇಕಾಗಿ-ದ್ದಿತು ಹೊರತು ಅಭಿವ್ಯಕ್ತೇಃ ಎಂದು ಹೇಳಬಾರದಿತ್ತು. ಏಕೆಂದರೆ, ಅಭಿವ್ಯಕ್ತಿ ಎನ್ನು-ವುದು ಈಶ್ವರನ ಕ್ರಿಯೆಯಾಗಿದೆ. ತಥಾಪಿ, ಅಭಿವ್ಯಕ್ತಿಯಾಗದೇ ಅವನ ದರ್ಶನ-

ವಾಗಲು ಸಾಧ್ಯವಿಲ್ಲದಿರುವುದರಿಂದ ಆ ಅಭಿವ್ಯಕ್ತಿಯನ್ನು ಗ್ರಹಿಸುವುದರಿಂದ ಎರಡರ ಲಾಭವೂ ಆಗುವ ಕಾರಣ ಪ್ರಾಧಾನ್ಯವಿರುವುದರಿಂದ ಈಶ್ವರವ್ಯಾಪಾರವನ್ನೇ ಮೊದಲು ಹೇಳಲಾಗಿದೆ. ಯದ್ಯಪಿ, ಅನುಸ್ಮೃತಿಶಬ್ದ ಹೇಳುವ ಉಪಾಸನೆಯ ಅನಂತರ ಅಭಿವ್ಯಕ್ತಿಯಾಗುವುದರಿಂದ ತದನಂತರದಲ್ಲಿ ಆ ಭಗವಂತನ ಪ್ರಾಪ್ತಿಯಾಗುವುದರಿಂದ ಮೊದಲೇ ಅನುಸ್ಮೃತೇಃ ಎಂದು ಹೇಳಬೇಕಾಗಿದ್ದಿತು. ಆದರೂ ಅಭಿವ್ಯಕ್ತಿ ಮತ್ತು ಸಂಪತ್ತಿ ಇವೆರಡರ ನಂತರವೂ ಉಪಾಸನೆಯನ್ನು ಮಾಡತಕ್ಕದ್ದು ಎಂದು ತೋರಿಸಲು ಅನುಸ್ಮೃತಿಯನ್ನು ಮಧ್ಯದಲ್ಲಿ ಸೇರಿಸಲಾಗಿದೆ ಎಂದು ತಿಳಿಯಬೇಕು.

ಯದ್ಯಪಿ ಋಗ್ಭಾಷ್ಯದಲ್ಲಿ –

'ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ ತು ।
ಅಗ್ನ್ಯಾದಿಸೂಕ್ತವಾಚ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥'

ವಿಷ್ಣುವಿನ ಬಾಹ್ಯರೂಪಗಳು ಹಾಗೂ ಅಗ್ನ್ಯಾದಿದೇವತೆಗಳಲ್ಲಿ ಅಂತರ್ಗತವಾದ ರೂಪಗಳು ಎಲ್ಲವೂ ಅಗ್ನ್ಯಾದಿಸೂಕ್ತಪ್ರತಿಪಾದ್ಯವಾಗಿವೆ. ಅಗ್ನ್ಯಾದಿನಾಮಭೇದವು ಸೂಕ್ತಭೇದಕ್ಕೆ ಕಾರಣವಾಗಿವೆ ಎಂದು ಅಗ್ನ್ಯಾದಿಗಳಲ್ಲಿ ಅಂತರ್ಗತನಾದ ವಿಷ್ಣುವನ್ನು ಹೇಳುವ ಅಗ್ನ್ಯಾದಿಶಬ್ದಗಳ ಸಂಬಂಧವಿರುವುದು ಸೂಕ್ತವ್ಯವಸ್ಥೆಗೆ ನಿಯಾಮಕವಾಗಿದೆ ಎಂದು ಹೇಳಲಾಗಿದೆ[೨]. ತಥಾಚ – ಅಗ್ನ್ಯಾದಿಶಬ್ದಗಳು ಮತ್ತು ಆಯಾಯಾ ಸೂಕ್ತಗಳು ಅಗ್ನ್ಯಾದಿಗಳಲ್ಲಿರುವ ಪರಮಾತ್ಮನ ರೂಪಗಳ ವಿಷಯದಲ್ಲೇ ಮುಖ್ಯವಾದವು. ಹಾಗೆಯೇ ಬಾಹ್ಯದ ರೂಪಗಳಲ್ಲೂ ಅವು ಮುಖ್ಯವಾಗಿವೆ. ಅತೀತ, ಅನಾಗತ ಮತ್ತು ವರ್ತಮಾನವಾಗಿರುವ ಅಗ್ನ್ಯಾದಿಗಳಲ್ಲಿ ಅವು ಅಮುಖ್ಯವಾದವು ಎಂಬ ವ್ಯವಸ್ಥೆಯು ಸಿದ್ಧಿಸುವುದು.

ಆದರೂ, ಇಲ್ಲಿ ಅಗ್ನ್ಯಾದಿಗಳಲ್ಲಿ ಭಗವಂತನ ಅಭಿವ್ಯಕ್ತಿಯಾಗಲೀ, ಅಗ್ನ್ಯಾದಿ ಸೂಕ್ತಗಳಿಂದ ಭಗವದುಪಾಸಕರು ಅಗ್ನ್ಯಾದಿಗತತ್ವೇನ ಭಗವಂತನು ಉಪಾಸ್ಯನಾಗಿದ್ದಾನೆ ಎಂಬುದಾಗಲೀ ಅಥವಾ ಅಗ್ನ್ಯಾದಿಗಳ ಪ್ರಾಪ್ತಿಯಾಗಲೀ ಆಯಾಯಾ ಸೂಕ್ತಗಳನ್ನು ಅಗ್ನ್ಯಾದಿಸೂಕ್ತಗಳೆಂದು ವ್ಯವಹರಿಸಲು ಕಾರಣವಾಗಿದೆ ಎಂದು ಅನುಷ್ಠಾನವಿಶೇಷಕ್ಕೆ ಉಪಯೋಗಿಯಾಗುವಂತೆ ಮತ್ತು ಸೌರಸೂಕ್ತ, ಸಾವಿತ್ರಸೂಕ್ತ, ವಾಮನಸೂಕ್ತ

ವಿಷ್ಣುಸೂಕ್ತ ಮೊದಲಾದ ಸೂಕ್ತಗಳ ವ್ಯವಸ್ಥೆ ಮಾಡುವುದಕ್ಕಾಗಿಯೂ ಇಲ್ಲಿ ಮತ್ತೊಂದು ವ್ಯವಸ್ಥಾನಿಯಾಮಕವನ್ನು ಹೇಳಲಾಗಿದೆ. ಆದ್ದರಿಂದ ಋಗ್ಭಾಷ್ಯದ ವಿರೋಧವಿಲ್ಲ[೩]. ಸೂಕ್ತಗಳನ್ನು ಕುರಿತು ಲೌಕಿಕ ಮತ್ತು ವೈದಿಕವ್ಯವಹಾರಗಳು ಅಗ್ನ್ಯಾದಿಗಳ ವಿಷಯದಲ್ಲಿ ಔಪಚಾರಿಕವಾಗಿದೆ ಎಂದು ಹೇಳಲು ಕಾರಣವು ಆ ವ್ಯವ-ಹಾರಗಳಿಗೆ ಅಗ್ನ್ಯಾದಿಗಳ ವಿಷಯದಲ್ಲಿ ಮುಖ್ಯತ್ವವನ್ನು ಹೇಳಿದ ಪಕ್ಷದಲ್ಲಿ ಸರ್ವ-ನಾಮಾ ಸರ್ವಕರ್ಮಾ ಇತ್ಯಾದಿ ಶ್ರುತಿಗಳ ವಿರೋಧ ಬರುವುದೆಂಬ ಹಿಂದೆ ಹೇಳಲಾದ ಅನುಪಪತ್ತಿಯೇ ಆಗಿದೆ ಎಂಬ ಅಂಶವು ತತ್ತ್ವಪ್ರಕಾಶಿಕೆಯಲ್ಲೇ ಹೇಳಲ್ಪಟ್ಟಿದೆ.

(೧) 'ಅನುಸ್ಮೃತೇರ್ಬಾದರಿಃ' 'ಸಂಪತ್ತೇರಿತಿ ಜೈಮಿನಿಸ್ತಥಾಹಿ ದರ್ಶಯತಿ' ಎಂಬ ಮುಂದಿನ ಎರಡು ಸೂತ್ರಗಳಲ್ಲಿ ಕ್ರಮವಾಗಿ ಅಗ್ನ್ಯಾದಿಸೂಕ್ತಗಳ ಮೂಲಕ ಭಗವದುಪಾಸನೆ ಮಾಡುವವರು ಅಗ್ನ್ಯಾದಿಗಳಲ್ಲೇ ಭಗವಂತನ ಅನುಸ್ಮರಣೆಯನ್ನು ಮಾಡತಕ್ಕದ್ದು, ಅಗ್ನ್ಯಾದ್ಯಧಿಷ್ಠಾನದಲ್ಲಿ ಭಗವದುಪಾಸನೆ ಮಾಡುವವರಿಗೆ ಅಗ್ನ್ಯಾದಿ ಪ್ರಾಪ್ತಿಯಾಗುವುದು ಎಂದು ಹೇಳಲಾಗಿದೆ. ಈ ಸೂತ್ರಗಳಲ್ಲಿ ಹೇಳಿರುವ ಅನುಸ್ಮರಣೆ ಮತ್ತು ಪ್ರಾಪ್ತಿ ಎಂಬ ಕ್ರಿಯೆಗಳು ಸಾಧಕ-ನಿಗೆ ಸಂಬಂಧಿಸಿದ ಕ್ರಿಯೆಗಳು. ಅದರಂತೆ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಎಂಬ ಸೂತ್ರದಲ್ಲೂ 'ಅಭಿವ್ಯಕ್ತೇಃ' ಎಂಬ ಪದದ ಬದಲಾಗಿ 'ದೃಷ್ಟೇಃ' ಎಂಬ ಪದವಿರಬೇಕಾಗಿದ್ದಿತು. ಆಗ, ಅಗ್ನ್ಯಾದಿಸೂಕ್ತಗಳಲ್ಲಿ ಬ್ರಹ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದರೂ, ಅಗ್ನ್ಯಾದಿಸೂಕ್ತಗಳಿಂದ ಭಗವಂತನ ಉಪಾಸನೆ ಮಾಡು-ವವರಿಗೆ ಅಗ್ನ್ಯಾದಿಗಳಲ್ಲೇ ಭಗವಂತನ ದರ್ಶನವಾಗುವುದರಿಂದ ಅಗ್ನ್ಯಾದಿ ಸೂಕ್ತನಿಯಮವು ಯುಕ್ತವಾಗಿದೆ ಎಂದು ಆಶ್ಮರಥ್ಯರ ಆಶಯ ಎಂದು ಸೂತ್ರಾರ್ಥವಾಗುವುದು. ಅನುಸ್ಮರಣಾದಿಗಳು ಹೇಗೆ ಸಾಧಕರ ಕ್ರಿಯೆಗಳೋ ಭಗವದ್ದರ್ಶನವೂ ಸಾಧಕರ ಕ್ರಿಯೆಯಾಗಿರುವುದರಿಂದ ಸೂತ್ರಗಳಿಗೆ ಏಕ-ರೂಪತೆ ಬರುವುದು. ಅಲ್ಲದೇ ಅಭಿವ್ಯಕ್ತಿಪದಕ್ಕಿಂತ ದೃಷ್ಟಿ ಎಂಬ ಪದವು ಅಲ್ಪಾ-ಕ್ಷರವಾಗಿದ್ದು, ಸೂತ್ರಲಕ್ಷಣದ ಹೊಂದಿಕೆಯೂ ಆಗುವುದೆಂದು ಶಂಕಿಸುವವನ ಅಭಿಪ್ರಾಯ.

ಆದರೆ ಭಗವಂತ ಪ್ರಸನ್ನನಾಗಿ ಅಭಿವ್ಯಕ್ತನಾಗದಿದ್ದರೆ ಅವನ ದರ್ಶನವಾಗದಿರು-ವುದರಿಂದ ಅವನ ಅಭಿವ್ಯಕ್ತಿಯು ಸಾಧಕನು ಹೊಂದುವ ದರ್ಶನಕ್ಕೆ ಪ್ರಯೋ-

ಜನವಾಗಿದ್ದು ಅಭಿವ್ಯಕ್ತಿಪದವು ಸಾಧಕನು ಪಡೆಯುವ ದರ್ಶನಕ್ಕೂ ಸೂಚಕ-ವಾಗಿದೆ. ಅಲ್ಲದೆ, ಸಾಧಕನ ಕ್ರಿಯೆಯ ದೃಷ್ಟಿಯಿಂದ ಭಗವಂತನಿಗೆ ಸಂಬಂಧಿಸಿದ ಕ್ರಿಯೆಯಾದ ಅಭಿವ್ಯಕ್ತಿಯು ಪ್ರಧಾನವಾದುದರಿಂದ ಸೂತ್ರದಲ್ಲಿ ಅಭಿವ್ಯಕ್ತಿಪದ-ವನ್ನೇ ಪ್ರಯೋಗಿಸಲಾಗಿದೆ ಎಂದು ಸಮಾಧಾನವನ್ನು ಹೇಳಲಾಗಿದೆ.

(೨) ವಿಷ್ಣುರೂಪಗಳು ದೇವತಾಂತರ್ಗತವಾದವು ಹಾಗೂ ಬಾಹ್ಯವಾದವು. ಅಂದರೆ ಅಂತರ್ಗತವಲ್ಲದ್ದು ಎಂದು ಎರಡು ವಿಧವಾಗಿವೆ. ಎರಡು ವಿಧವಾದ ರೂಪಗಳೂ ಅಗ್ನ್ಯಾದಿಶಬ್ದವಾಚ್ಯವಾಗಿವೆ. ಮೊದಲನೆಯ ಪಕ್ಷದಲ್ಲಿ ಸೂಕ್ತಪ್ರತಿ-ಪಾದ್ಯವಾದ ಭಗವದ್ರೂಪದ ನಾಮ ಹಾಗೂ ಅಧಿಷ್ಠಾನವಾದ ದೇವತೆಯ ನಾಮ ಎರಡೂ ಅಗ್ನ್ಯಾದಿಸೂಕ್ತಭೇದಕ್ಕೆ ಕಾರಣವಾಗಿವೆ. ಎರಡನೆಯ ಅಂದರೆ ಬಾಹ್ಯಭಗವದ್ರೂಪವು ಸೂಕ್ತಪ್ರತಿಪಾದ್ಯವೆಂಬ ಪಕ್ಷದಲ್ಲಿ ಆ ರೂಪದ ನಾಮವೇ ಸೂಕ್ತವನ್ನು ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿಯಾಗಿ ಭಿನ್ನನಾಮಗಳಿಂದ ಕರೆಯಲು ಕಾರಣವಾಗಿದೆ ಎಂದು ಋಗ್ಭಾಷ್ಯಶ್ಲೋಕದ ಆಶಯ.

(೩) ಅಗ್ನ್ಯಾದಿ ಅಧಿಷ್ಠಾನದಲ್ಲಿ ಭಗವಂತನ ಅಭಿವ್ಯಕ್ತಿಯಾಗುವುದೇ ಮೊದಲಾದದ್ದು ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿಯಾಗಿ ಸೂಕ್ತಭೇದಕ್ಕೆ ಕಾರಣವಾಗಿದೆ ಎಂದು ಬ್ರಹ್ಮಸೂತ್ರಗಳಲ್ಲಿ ಹೇಳಿರುವುದು ಯುಕ್ತವಲ್ಲ. ಏಕೆಂ-ದರೆ ವಿಷ್ಣುಸೂಕ್ತ, ವಾಮನಸೂಕ್ತ, ಪುರುಷಸೂಕ್ತ ಮೊದಲಾದ ಸೂಕ್ತಭೇದಕ್ಕೆ ಅಧಿಷ್ಠಾನಭೇದವು ಕಾರಣವಾಗಲಾರದು. ಆ ಸೂಕ್ತಪ್ರತಿಪಾದ್ಯನಾದ ವಿಷ್ಣುವಿನ ಅಧಿಷ್ಠಾನವನ್ನು ಆ ಸೂಕ್ತಗಳು ಹೇಳುವುದಿಲ್ಲವಷ್ಟೇ. ಹಾಗೆಯೇ ಸೌರಸೂಕ್ತ, ಸಾವಿತ್ರಸೂಕ್ತ ಇತ್ಯಾದಿ ಸೂಕ್ತಭೇದಕ್ಕೂ ಅಧಿಷ್ಠಾನಭೇದವು ಕಾರಣವಾಗ-ಲಾರದು. ಏಕೆಂದರೆ, ಈ ಸೂಕ್ತಗಳಲ್ಲಿ ಮುಖ್ಯಪ್ರತಿಪಾದ್ಯನಾದ ಭಗವಂತನ ಅಧಿಷ್ಠಾನ ಸೂರ್ಯನೊಬ್ಬನೇ ಆಗಿದ್ದಾನೆ. ಆದ್ದರಿಂದ ಋಗ್ಭಾಷ್ಯದಲ್ಲಿ ಹೇಳಿರುವ ಸೂಕ್ತಭೇದದ ನಿಮಿತ್ತವೇ ಯುಕ್ತವಾಗಿದೆ ಹೊರತು ಬ್ರಹ್ಮಸೂತ್ರಗಳಲ್ಲಿ ಹೇಳಿ-ರುವುದು ಯುಕ್ತವಾಗಲಾರದು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳಲಾಗಿದೆ.

ಸೂಕ್ತಭೇದಕ್ಕೆ ಋಗ್ಭಾಷ್ಯದಲ್ಲಿ ನೀಡಿರುವ ವಿವರಣೆ ಸರಿಯೇ. ಆದರೆ, ಬ್ರಹ್ಮಸೂತ್ರಗಳಲ್ಲಿ, ಆಗ್ನೇಯಾದಿಸೂಕ್ತಗಳಿಂದ ಭಗವದುಪಾಸನೆ ಮಾಡುವವರು ಅಗ್ನ್ಯಾದಿದೇವತಾಂತರ್ಗತತ್ವೇನ ಭಗವದುಪಾಸನೆಯನ್ನು ಅನುಷ್ಠಿಸಬೇಕು

ಎಂದು ಅನುಷ್ಠಾನವಿಶೇಷಕ್ಕೆ ಉಪಯುಕ್ತವಾಗುವಂತೆ ವ್ಯವಸ್ಥೆಯನ್ನು ಹೇಳ-ಲಾಗಿದೆ. ಸೌರ, ಸಾವಿತ್ರ ಮೊದಲಾದ ಸೂಕ್ತಗಳಲ್ಲಿ ಅಧಿಷ್ಠಾನವಾದ ಸೂರ್ಯ-ದೇವತೆ ಒಂದೇ ಆಗಿದ್ದರೂ, ವಿಷ್ಣುಸೂಕ್ತ ವಾಮನಸೂಕ್ತ ಮೊದಲಾದವುಗಳಲ್ಲಿ ಅಧಿಷ್ಠಾನದೇವತೆ ಇಲ್ಲದಿದ್ದರೂ ಆಯಾಯಾ ಸೂಕ್ತಪ್ರತಿಪಾದ್ಯವಾದ ಭಗವ-ದ್ರೂಪವಿಶೇಷದ ಉಪಾಸನೆಯನ್ನು ಅನುಷ್ಠಿಸುವುದರಿಂದ ಉಪಾಸಕನಿಗೆ ರೂಪವಿಶೇಷದ ಅಭಿವ್ಯಕ್ತಿ, ರೂಪವಿಶೇಷದ ಪ್ರಾಪ್ತಿಯಾಗುವುದೆಂದು ಅನು-ಷ್ಠಾನವಿಶೇಷೋಪಯೋಗಿಯಾದ ಸೂಕ್ತಭೇದದ ವ್ಯವಸ್ಥೆಯನ್ನು ಬ್ರಹ್ಮಸೂತ್ರ-ಗಳಲ್ಲಿ ಹೇಳಿರುವುದರಿಂದ ಋಗ್ಭಾಷ್ಯಕ್ಕೂ ಬ್ರಹ್ಮಸೂತ್ರಗಳಿಗೂ ಯಾವುದೇ ವಿರೋಧವಿಲ್ಲವೆಂದು ಭಾವ.

**ಭಾ– ನ ಹ್ಯನ್ಯೋಪಾಸಕೋऽನ್ಯಂ ಪ್ರಾಪ್ನುತ ಇತಿ ಯುಜ್ಯತ ಇತ್ಯತ ಆಹ –**

**॥ ಓಂ ಆಮನಂತಿ ಚೈನಮಸ್ಮಿನ್ ಓಂ ॥ ೩೨ ॥**

**ಏನಂ ವಿಷ್ಣುಮಸ್ಮಿನ್ನಗ್ನ್ಯಾದಾವಾಮನಂತಿ। 'ಯೋऽಗ್ನೌ ತಿಷ್ಠನ್' 'ಯ ಏಷ ಏತಸ್ಮಿನ್ನಗ್ನೌ ತೇಜೋಮಯೋऽಮೃತಮಯಃ ಪುರುಷಃ' ಇತ್ಯಾದಿನಾ ॥ ೩೨ ॥**

॥ ಇತಿ ವೈಶ್ವಾನರಾಧಿಕರಣಮ್ ॥ ೭ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಬ್ರಹ್ಮಸೂತ್ರಭಾಷ್ಯೇ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ ॥ ೧ ॥೨ ॥

ಅನ್ಯರನ್ನು ಉಪಾಸನೆ ಮಾಡಿದವನು ಮತ್ತೊಬ್ಬನನ್ನು ಹೊಂದುವನು ಎನ್ನುವುದು ಯುಕ್ತವಲ್ಲ ಎಂಬ ಶಂಕೆಗೆ ಉತ್ತರವಾಗಿ ಓಂ ಆಮನಂತಿ ಚೈನಮಸ್ಮಿನ್ ಓಂ ಎಂದು ಹೇಳಲಾಗಿದೆ. ಏನಂ - ಈ ವಿಷ್ಣುವನ್ನು ಅಸ್ಮಿನ್ - ಅಗ್ನ್ಯಾದಿಗಳಲ್ಲಿ ಇರುವವನೆಂದು 'ಯೋऽಗ್ನೌ ತಿಷ್ಠನ್' 'ಯ ಏಷ ಏತಸ್ಮಿನ್ನಗ್ನೌ ತೇಜೋಮಯೋऽಮೃತಮಯಃ ಪುರುಷಃ' ಇತ್ಯಾದಿ ವಾಕ್ಯಗಳಿಂದ ಶ್ರುತಿಗಳು ಹೇಳುತ್ತವೆ.

(ಭಾ.ದೀ.) ಯದುಕ್ತಮ್ ಅಗ್ನ್ಯಾದಿಸೂಕ್ತಾದಿಭಿಃ ಬ್ರಹ್ಮೋಪಾಸಕಸ್ಯ ಅಗ್ನ್ಯಾದಿಪ್ರಾಪ್ತಿರ್ಭವತೀತಿ ತತ್ ಶ್ರುತ್ಯುಕ್ತಮಪಿ ನ ಯುಕ್ತಮ್ । 'ಮದ್ಭಕ್ತಾ ಯಾಂತಿ ಮಾಮಪಿ' ಇತ್ಯಾದೇರನ್ಯೋಪಾಸಕಸ್ಯ ಅನ್ಯಪ್ರಾಪ್ತೇರಯೋಗಾತ್ । 'ಶ್ರುತೋಪನಿಷತ್ಕಗತ್ಯಭಿಧಾನಾತ್' ಇತ್ಯಾದೌ ತದನಭ್ಯುಪಗಮಾಚ್ಚ ಇತಿ ಭಾವೇನಾऽಶಂಕ್ಯ ತತ್ಪರಿಹಾರತಯಾ ಸೂತ್ರಮವತಾರ್ಯ ವ್ಯಾಚಷ್ಟೇ – ನ ಹೀತಿ ॥ **ಟೀಕಾಯಾಮ್** ಆಶಂಕ್ಯಾವತಾರ್ಯೇತ್ಯನ್ವಯಃ । ಶಂಕಾರೂಪಸೂತ್ರಾವತಾರಿಕಾಂ ಪ್ರದರ್ಶ್ಯ ಇತ್ಯರ್ಥಃ । 'ಹಿ' ಯಸ್ಮಾದ್ 'ಅನ್ಯೋಪಾಸಕೋऽನ್ಯಂ ಪ್ರಾಪ್ನುತೇ' ಇತ್ಯೇತತ್ ಪ್ರಮಾಣವಿರೋಧಾನ್ನ ಯುಜ್ಯತೇ ತಸ್ಮಾದ್ ಉಕ್ತಮಯುಕ್ತಮಿತ್ಯರ್ಥಃ । 'ಏನಮ್' ಇತ್ಯನುವಾದೇನ ವಿಷ್ಣುಮಿತಿ ವ್ಯಾಕೃತಮ್ । 'ಅಸ್ಮಿನ್' ಇತ್ಯಸ್ಯ ವ್ಯಾಖ್ಯಾನಮ್ 'ಅಗ್ನ್ಯಾದೌ' ಇತಿ । 'ಆಮನಂತಿ' ಪ್ರತಿಪಾದಯಂತಿ ; 'ಶ್ರುತಯಃ' ಇತಿ ಶೇಷಃ । ಚಶಬ್ದಃ ವಿಷ್ಣೂಪಾಸಕಸ್ಯ ಅಗ್ನ್ಯಾದಿಪ್ರಾಪ್ತಿರಯುಕ್ತಾ ಇತಿ ಪೂರ್ವಪಕ್ಷಿಶಂಕಾವ್ಯಾವರ್ತಕಃ । ತೇನ ಸಿದ್ಧಾಂತಿಪ್ರತಿಜ್ಞಾ, ಅಗ್ನ್ಯಾದಿಪ್ರಾಪ್ತಿಪದೇನ ತದಂತರ್ಗತಭಗವತ್ಪ್ರಾಪ್ತೇರೇವ ವಿವಕ್ಷಿತತ್ವಾತ್ ಇತಿ ಸಾಕ್ಷಾದ್ಧೇತುಶ್ಚ ಸೂಚಿತಃ।

**ತತ್ತ್ವಪ್ರದೀಪೇ** ತು – ನ ಕೇವಲಮೇಕತ್ರ ಆಮನಂತಿ ಪಠಂತಿ ವಾಜಸನೇಯಾಃ, ಕಿಂತು ಅನ್ಯತ್ರ 'ಸ ಯಶ್ಚಾಯಮಸ್ಮಿನ್' ಇತ್ಯಾದೌ, ಏವಮನ್ಯೇ ಆಮನಂತಿ 'ಯ ಏಷ ಏತಸ್ಮಿನ್' ಇತ್ಯಾದೌ, ಅನ್ಯೇ ಚಾऽಮನಂತಿ 'ಏತಸ್ಯಾಮ್' ಇತ್ಯಾದೌ, ಅನ್ಯೇ ಚ 'ತತ್ ಸೃಷ್ಟ್ವಾ, ತದೇವಾನುಪ್ರಾವಿಶತ್' ಇತ್ಯಾದೌ । ಸ್ಮರಂತಿ ಚ ಸ್ಮೃತಿಕರ್ತಾರಃ 'ಯಚ್ಚಂದ್ರಮಸಿ, ಯಚ್ಚಾಗ್ನೌ' ಇತ್ಯಾದೀನಿ । ಸಮುಚ್ಚಯಾರ್ಥಶ್ಚಶಬ್ದಃ ಇತ್ಯುಕ್ತಮ್ ।

ತಾಃ ಶ್ರುತೀಃ ದರ್ಶಯತಿ – **ಯ ಇತಿ** ॥ 'ಯೋऽಗ್ನೌ ತಿಷ್ಠನ್' ಇತ್ಯೇಕಂ ವಾಜಸನೇಯಂ ವಾಕ್ಯಮ್ । 'ಯ ಏಷಃ' ಇತ್ಯಪರಂ ಛಾಂದೋಗ್ಯವಾಕ್ಯಮ್ । ಉಭಯತ್ರ ಯಚ್ಛಬ್ದಸ್ಯ ತತ್ರತ್ಯತಚ್ಛಬ್ದೇನಾನ್ವಯಃ । 'ತೇಜೋಮಯಃ' ತೇಜೋರೂಪಃ 'ಅಮೃತಮಯಃ' ನಿತ್ಯಾತ್ಮಾ । ಆದಿಶಬ್ದೇನ 'ಏತಮಗ್ನಾವಧ್ವರ್ಯವಃ' ಇತ್ಯಾದಿಕಂ ಗೃಹ್ಯತೇ । 'ಇತ್ಯಾದಿನಾ ಆಮನಂತಿ' ಇತ್ಯನ್ವಯಃ ।

**ಅನೇನ – ನ ವಿಷ್ಣೂಪಾಸಕಸ್ಯ ಅಗ್ನ್ಯಾದಿಪ್ರಾಪ್ತಿರಯುಕ್ತಾ । ಕುತಃ? ಅಗ್ನ್ಯಾದಿ-ಪ್ರಾಪ್ತಿಪದೇನ ತದಂತರ್ಗತಭಗವತ್ಪ್ರಾಪ್ತೇರ್ವಿವಕ್ಷಿತತ್ವಾತ್ । ನ ಚ ವಿಷ್ಣೋರಗ್ನ್ಯಾ-ದ್ಯಂತರ್ಗತತ್ವಾಸಿದ್ಧಿಃ । ಯತಃ 'ಏನಂ' ವಿಷ್ಣುಂ 'ಅಸ್ಮಿನ್' ಅಗ್ನ್ಯಾದೌ ಆಮನಂತಿ ಶ್ರುತಯಃ ಅತ ಇತಿ ಸೂತ್ರಾರ್ಥ ಉಕ್ತೋ ಭವತಿ ।**

॥ ಶ್ರೀಮದ್ರಘುನಾಥತೀರ್ಥಪೂಜ್ಯಪಾದಾನಾಂ ಶಿಷ್ಯೇಣ ಶ್ರೀಮಜ್ಜಗನ್ನಾಥಯತಿನಾ ಕೃತಾಯಾಂ ಶ್ರೀಮದ್‌ಬ್ರಹ್ಮಸೂತ್ರಭಾಷ್ಯದೀಪಿಕಾಯಾಂ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ ॥

ಅಗ್ನ್ಯಾದಿಸೂಕ್ತ ಮೊದಲಾದವುಗಳಿಂದ ಬ್ರಹ್ಮನನ್ನು ಉಪಾಸನೆ ಮಾಡುವವನಿಗೆ ಅಗ್ನ್ಯಾದಿಗಳ ಪ್ರಾಪ್ತಿಯಾಗುವುದೆಂಬ ವಿಷಯವು ಶ್ರುತಿಯಲ್ಲೇ ಹೇಳಿದ್ದರೂ ಕೂಡ ಯುಕ್ತವಲ್ಲ. ಏಕೆಂದರೆ, 'ಮದ್ಭಕ್ತಾ ಯಾಂತಿ ಮಾಮಪಿ' ಇತ್ಯಾದಿವಾಕ್ಯಗಳಿಂದ ಅನ್ಯ-ರನ್ನು ಉಪಾಸನೆ ಮಾಡಿದವರಿಗೆ ಮತ್ತೊಬ್ಬರ ಪ್ರಾಪ್ತಿಯಾಗುವುದು ಸಾಧ್ಯವಿಲ್ಲ. ಅಲ್ಲದೇ '**ಶ್ರುತೋಪನಿಷತ್ಕಗತ್ಯಭಿಧಾನಾತ್**' ಇತ್ಯಾದಿ ಸೂತ್ರಗಳಲ್ಲಿ ಅದನ್ನು ಅಂಗೀಕಾರಮಾಡಲಾಗಿಲ್ಲ ಎಂಬ ಅಭಿಪ್ರಾಯದಿಂದ ಶಂಕಿಸಿ, ಅದಕ್ಕೆ ಪರಿಹಾರರೂಪ-ವಾಗಿ ಈ ಸೂತ್ರವು ಬಂದಿರುವುದೆಂದು ಅವತಾರಿಕೆಯನ್ನು ಕೊಟ್ಟು ಭಾಷ್ಯಕಾರರು 'ನಹಿ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ತತ್ವಪ್ರಕಾಶಿಕೆಯಲ್ಲಿ **ಆಶಂಕ್ಯ** ಎಂಬ ಪದಕ್ಕೆ **ಅವತಾರ್ಯ** ಎಂಬ ಪದದೊಂದಿಗೆ ಅನ್ವಯವಾಗುವುದು. ಶಂಕಾ-ರೂಪವಾದ ಸೂತ್ರದ ಅವತಾರಿಕೆಯನ್ನು ಪ್ರದರ್ಶಿಸಿ ಎಂದು ಆ ವಾಕ್ಯದ ಅರ್ಥ. ಹಿ – ಯಾವ ಕಾರಣದಿಂದ, ಅನ್ಯೋಪಾಸಕನು ಅವನಿಂದ ಭಿನ್ನನಾದವನನ್ನು ಹೊಂದುವನು ಎನ್ನುವುದು ಪ್ರಮಾಣವಿರೋಧದಿಂದಾಗಿ ಯುಕ್ತವಾಗುವುದಿಲ್ಲವೋ ಆದ್ದರಿಂದ ಉಕ್ತ-ವಾದ ವಿಷಯವು ಅಯುಕ್ತವೆಂದು ಆ ಟೀಕಾವಾಕ್ಯದ ಅರ್ಥ. ಭಾಷ್ಯದಲ್ಲಿ **ಏನಮ್** ಎಂಬ ಸೂತ್ರದ ಪದವನ್ನು ಅನುವಾದ ಮಾಡಿ **ವಿಷ್ಣುಮ್** ಎಂದು ವ್ಯಾಖ್ಯಾನ ಮಾಡಲಾಗಿದೆ. **ಅಗ್ನ್ಯಾದೌ** ಎಂಬ ಪದವು ಸೂತ್ರದ **ಅಸ್ಮಿನ್** ಎಂಬ ಪದದ ವ್ಯಾಖ್ಯಾನವಾಗಿದೆ. '**ಆಮನಂತಿ**' ಎಂದರೆ ಪ್ರತಿಪಾದಿಸುತ್ತವೆ ಎಂದು ಅರ್ಥ. **ಶ್ರುತಯಃ** ಎಂಬ ಪದಗಳು ಇಲ್ಲಿ ಶೇಷವಾಗಿವೆ. ಸೂತ್ರದಲ್ಲಿ **ಚ**ಶಬ್ದವು ವಿಷ್ಣೂ-ಪಾಸಕನಿಗೆ ಅಗ್ನ್ಯಾದಿಗಳ ಪ್ರಾಪ್ತಿಯು ಯುಕ್ತವಲ್ಲ ಎಂಬ ಪೂರ್ವಪಕ್ಷಿಯ ಶಂಕೆಯನ್ನು

ನಿರಾಕರಿಸುತ್ತದೆ. ಇದರಿಂದ ಸಿದ್ಧಾಂತಿಗಳ ಪ್ರತಿಜ್ಞೆ ಮತ್ತು ಅಗ್ನ್ಯಾದಿಪ್ರಾಪ್ತಿ ಎಂಬ ಪದದಿಂದ ಅಗ್ನ್ಯಾದ್ಯಂತರ್ಗತನಾದ ಭಗವಂತನ ಪ್ರಾಪ್ತಿಯೇ ವಿವಕ್ಷಿತವಾಗಿದೆ ಎಂಬ ಸಾಕ್ಷಾತ್ ಹೇತುವೂ ಕೂಡ ಸೂಚಿತವಾಗುವುದು.

ತತ್ತ್ವಪ್ರದೀಪದಲ್ಲಾದರೋ ವಾಜಸನೇಯಶಾಖಿಗಳು ಕೇವಲ ಒಂದು ಸ್ಥಳದಲ್ಲಿ ಮಾತ್ರ ಅಗ್ನ್ಯಾದಿಗಳಲ್ಲಿ ಭಗವಂತನ ಸ್ಥಿತಿಯನ್ನು ಪಠಿಸುವುದಿಲ್ಲ ಕಿಂತು, 'ಸ ಯಶ್ಚಾಯಮಸ್ಮಿನ್' ಇತ್ಯಾದಿ ವಾಕ್ಯಗಳಲ್ಲಿ ಬೇರೆ ಸಂದರ್ಭದಲ್ಲೂ ಹಾಗೆಯೇ ಇತರರು 'ಯ ಏಷ ಏತಸ್ಮಿನ್' ಇತ್ಯಾದಿ ವಾಕ್ಯಗಳಲ್ಲಿ ಮತ್ತು ಅನ್ಯರು 'ಏತಸ್ಯಾಮ್' ಇತ್ಯಾದಿ ವಾಕ್ಯಗಳಲ್ಲಿ ಮತ್ತೆ ಕೆಲವರು 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಇತ್ಯಾದಿ ವಾಕ್ಯಗಳಲ್ಲಿ ವಿಷ್ಣುವು ಅಗ್ನ್ಯಾದಿ ಸ್ಥಿತನೆಂದು ಪಠಿಸುವರು. ಹಾಗೆಯೇ ಸ್ಮೃತಿಕರ್ತೃಗಳು 'ಯಚ್ಚಂದ್ರಮಸಿ ಯಚ್ಚಾಗ್ನೌ' ಇತ್ಯಾದಿ ವಾಕ್ಯಗಳಿಂದ ವಿಷ್ಣುವು ಅಗ್ನ್ಯಾದಿಸ್ಥನೆಂದು ಸ್ಮರಿಸುವರು. ಸೂತ್ರದಲ್ಲಿ ಚಕಾರವು ಇವೆಲ್ಲದರ ಸಮುಚ್ಚಯವನ್ನು ಹೇಳುವುದು ಎಂದು ಹೇಳಿದೆ.

ವಿಷ್ಣುವು ಅಗ್ನ್ಯಾದಿಸ್ಥನೆಂದು ಹೇಳುವ ಶ್ರುತಿಗಳನ್ನು ಭಾಷ್ಯಕಾರರು 'ಯೋಽಗ್ನೌ' ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಿದ್ದಾರೆ.

'ಯೋಽಗ್ನೌ ತಿಷ್ಠನ್' ಎಂಬ ವಾಕ್ಯವು ಬೃಹದಾರಣ್ಯಕದ ವಾಕ್ಯವಾಗಿದೆ. 'ಯ ಏಷಃ' ಎಂಬ ಇನ್ನೊಂದು ವಾಕ್ಯವು ಛಾಂದೋಗ್ಯವಾಕ್ಯವಾಗಿದೆ. ಎರಡೂ ವಾಕ್ಯಗಳಲ್ಲಿ ಇರುವ ಯತ್‌ಶಬ್ದವು ಆ ವಾಕ್ಯಗಳಲ್ಲಿರುವ ತಚ್ಛಬ್ದದೊಂದಿಗೆ ಅನ್ವಯವನ್ನು ಪಡೆಯುವುದು. 'ತೇಜೋಮಯಃ' ಅಂದರೆ ತೇಜೋರೂಪನಾದವನು. 'ಅಮೃತಮಯಃ' ಎಂದರೆ ನಿತ್ಯಸ್ವರೂಪನು ಎಂದು ಅರ್ಥ. ಭಾಷ್ಯದಲ್ಲಿ ಇತ್ಯಾದಿನಾ ಎಂಬಲ್ಲಿರುವ ಆದಿಶಬ್ದದಿಂದ 'ಏತಮಗ್ನೌ ಅಧ್ವರ್ಯವಃ' ಇತ್ಯಾದಿ ವಾಕ್ಯಗಳು ಗೃಹೀತವಾಗುವವು. 'ಇತ್ಯಾದಿನಾ' ಎಂಬ ಭಾಷ್ಯದ ವಾಕ್ಯಕ್ಕೆ ಸೂತ್ರದ ಆಮನಂತಿ ಎಂಬ ಪದದೊಂದಿಗೆ ಅನ್ವಯ.

ಇದರಿಂದ – ವಿಷ್ಣೂಪಾಸಕನಿಗೆ ಅಗ್ನ್ಯಾದಿಗಳ ಪ್ರಾಪ್ತಿಯಾಗುವುದೆಂಬ ಮಾತು ಅಯುಕ್ತವಲ್ಲ. ಏಕೆಂದರೆ? ಅಗ್ನ್ಯಾದಿಪ್ರಾಪ್ತಿ ಎಂಬ ಪದದಿಂದ ಅಗ್ನ್ಯಾದ್ಯಂತರ್ಗತ

ಭಗವಂತನ ಪ್ರಾಪ್ತಿಯೇ ವಿವಕ್ಷಿತವಾಗಿದೆ. ವಿಷ್ಣುವು ಅಗ್ನ್ಯಾದಿಗಳ ಅಂತರ್ಗತನಾಗಿದ್ದಾನೆ ಎಂಬ ವಿಷಯವು ಪ್ರಮಾಣಸಿದ್ಧವಲ್ಲ ಎಂದು ಹೇಳತಕ್ಕದ್ದಲ್ಲ. ಏಕೆಂದರೆ? ಏನಮ್ - ಈ ವಿಷ್ಣುವನ್ನು, ಅಸ್ಮಿನ್ - ಅಗ್ನ್ಯಾದಿಗಳಲ್ಲಿ ಇರುವವನೆಂದು ಶ್ರುತಿಗಳು ಹೇಳುತ್ತವೆ ಎಂದು ಸೂತ್ರದ ಅರ್ಥವನ್ನು ಹೇಳಿದಂತಾಗುವುದು.

॥ ॥ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯರಾದ ಸರ್ವತಂತ್ರಸ್ವತಂತ್ರರಾದ
ಶ್ರೀಮದ್ರಘುನಾಥತೀರ್ಥ ಶ್ರೀಪಾದರ ಶಿಷ್ಯರಾದ ಜಗನ್ನಾಥಯತಿಗಳಿಂದ ರಚಿತವಾದ
ಶ್ರೀಮದ್ಬ್ರಹ್ಮಸೂತ್ರಭಾಷ್ಯದೀಪಿಕಾ ಗ್ರಂಥದ ಕನ್ನಡಾನುವಾದದಲ್ಲಿ ಮೊದಲನೆಯ
ಅಧ್ಯಾಯದ ಎರಡನೆಯ ಪಾದವು ಮುಗಿಯಿತು ॥

* * * * *

॥ ಶ್ರೀಮಧ್ವೇಶಾರ್ಪಣಮಸ್ತು ॥

--------

